ಮೈಸೂರು ವಿಶ್ವವಿದ್ಯಾನಿಲಯ ಕನ್ನಡಗ್ರಂಥಮಾಲೆ—೪೩

ಪ್ರಧಾನ ಸಂಪಾದಕ:

**ಪದ್ಮಭೂಷಣ ಡಾ|| ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.**

# ಸಂಸ್ಕೃತ ಕಾವ್ಯ

ಲೇಖಕ.

**ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಪಿ.ಎಚ್ ಡಿ.**




ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು

೧೯೫೮

ಮೊದಲನೆಯ ಮುದ್ರಣ : ೧೯೫೮
(೨೦೦೦ ಪ್ರತಿಗಳು)

ಪ್ರಕಾಶಕರು :
ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಅವರು



ಬೆಲೆ :
ಸಾಧಾರಣ ಪ್ರತಿ ೩-೫೦ ; ಉತ್ತಮ ಪ್ರತಿ ೪-೫೦

ಮುದ್ರಕರು : ಡಿ. ರಾಜರತ್ನಂ
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

# ಮುನ್ನುಡಿ

ಸಂಸ್ಕೃತ ಅತ್ಯಂತ ಪ್ರಾಚೀನವೂ ಮತ್ತು ಸರ್ವ ಸಮರ್ಪಕವೂ ಆಗಿರುವ ಭಾಷೆ ಎಂಬ ಅಭಿಪ್ರಾಯ 'ಅದು ದೇವಭಾಷೆ!' ಎಂಬ ಪ್ರತಿಮೆಯಲ್ಲಿ ಅಭಿವ್ಯಕ್ತಗೊಂಡಿದೆ. ತುಲನಾತ್ಮಕ ಭಾಷಾಶಾಸ್ತ್ರ ವಿಧಾನದ ನೂತನ ಪ್ರಯೋಗದಲ್ಲಿ ತೊಡಗಿರುವ ಪಾಶ್ಚಾತ್ಯ ಪಂಡಿತರೂ ಇದರ ಪ್ರಪ್ರಾಚೀನತೆಯನ್ನು ಒಪ್ಪಿಕೊಂಡು ಮಾನವಕುಲಕ್ಕೆ ಮೂಲಭೂತವಾದ ಭಾಷೆಗಳಲ್ಲಿ ಇದು ಒಂದೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ.

ಸಂಸ್ಕೃತ ವಾಙ್ಮಯದಲ್ಲಿ ವೇದಗಳೇ ಅತ್ಯಂತ ಪ್ರಾಚೀನವಾದುವು. ಇವು ಮುಖ್ಯವಾಗಿ ಪ್ರಭುಸಮ್ಮಿತಗಳು. ಆದರೆ ಅಲ್ಲಲ್ಲಿ ಕಾಂತಾಸಮ್ಮಿತಕ್ಕೂ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಉಷಸ್, ಇಂದ್ರ, ಅಗ್ನಿ, ವರುಣ-ಮೊದಲಾದ ದೇವತೆಗಳನ್ನು ಕುರಿತು ಮಾಡಿರುವ ಸ್ತೋತ್ರಗಳು ಮನೋಹರವಾದ ಭಾವಗೀತೆಗಳಾಗಿವೆ. ಸತ್ಯ ಸಾಕ್ಷಾತ್ಕಾರದಲ್ಲಿ ನಿರತವಾಗಿದ್ದ ಋಷಿ ಚೇತನ ಅದರಿಂದ ಸಂಪೂರ್ಣ ಭಿನ್ನವಲ್ಲದ ಕವಿ ಚೇತನವೂ ಆಗಿದೆ.

ವೇದಯುಗವಾದಮೇಲೆ ಬರುವುದು ಪುರಾಣಯುಗ. ಈ ಯುಗದಲ್ಲಿ ಹುಟ್ಟಿಕೊಂಡ ಸಾಹಿತ್ಯ ಅಪರಿಮಿತವಾದುದು. ಮಿತ್ರಸಮ್ಮಿತವಾದ ಈ ಕಾವ್ಯ ಕಾನನದಲ್ಲಿ ಅಮರತೆಯನ್ನು ಪಡೆದಿರುವ ಮಹಾಕಾವ್ಯರೂಪೀ ವಟವೃಕ್ಷಗಳು ರಾಮಾಯಣ, ಮಹಾಭಾರತ. ಬೃಹತ್ತು ಮಹತ್ತುಗಳಲ್ಲಿ ಇವನ್ನು ಮೀರಿಸಿದ ಕೃತಿಗಳು ಜಗತ್ತಿನಲ್ಲಿಯೇ ಅತಿ ವಿರಳ. ಭರತಖಂಡದ ಜನಜೀವನ, ಸಂಸ್ಕೃತಿ, ನಾಗರಿಕತೆಗಳಿಗೆ ಇವು ಕನ್ನಡಿಯಂತಿವೆ. ವೇದ ವಾಙ್ಮಯದಲ್ಲಿ ದುರವಗಾಹವಾಗಿರುವ ಸತ್ಯ ಧರ್ಮಗಳ ಸ್ವರೂಪ ಇವುಗಳಲ್ಲಿ ಸುಲಭಗ್ರಾಹ್ಯವಾಗಿದೆ. ಗೀರ್ವಾಣದೇವಿಯ ಈ ಎರಡು ವರದಹಸ್ತಗಳು ಸಹಸ್ರಾರು ವರ್ಷಗಳಿಂದಲೂ ನಮ್ಮ ಜನರ ಹೃದಯಕ್ಕೆ ತಂಪನ್ನೂ, ಬುದ್ಧಿಗೆ ಶಕ್ತಿಯನ್ನೂ, ಆತ್ಮಕ್ಕೆ ಸತ್ವವನ್ನೂ ನೀಡಿ ಉದ್ಧರಿಸಿವೆ. ಇವುಗಳ ಕರ್ತೃಗಳಾದ ಕವಿಋಷಿಗಳು ತಮ್ಮ ರಸತಪಸ್ಸಿನ ಪುಣ್ಯವನ್ನೆಲ್ಲಾ ಎರೆದು ಇವುಗಳನ್ನು ಪುನೀತಗೊಳಿಸಿದ್ದಾರೆ. ಬುವಿಯಲ್ಲಿ ಬೇರು ಬಿಟ್ಟು ಅಂಬರದಲ್ಲಿ ಅರಳಿರುವ

ಈ ಮಹಾಕಾವ್ಯಗಳು ಮುಂದಿನ ಕವಿಗಳೆಲ್ಲರಿಗೂ ಸ್ಫೂರ್ತಿಯನ್ನು ನೀಡುವ ಮೂಲಶಕ್ತಿಗಳಂತಿವೆ.

ಸಂಸ್ಕೃತ ಸಾಹಿತ್ಯದ ಮೂರನೆಯ ಘಟ್ಟ ಕಾವ್ಯಯುಗ. ಈ ಯುಗದ ಅಧಿಷ್ಠಾತೃ ರಾಷ್ಟ್ರಕವಿ ಕಾಳಿದಾಸ. ಈಗ ನಮಗೆ ಗೊತ್ತಿರುವಂತೆ ಅಶ್ವಘೋಷನೇ ಸಂಸ್ಕೃತ ಕವಿಗಳಲ್ಲಿ ಆದ್ಯನಾದರೂ 'ಪುರಾ ಕವೀನಾಂ ಗಣನಾ ಪ್ರಸಂಗೇ ಕನಿಷ್ಠಿಕಾಧಿಷ್ಠಿತ ಕಾಳಿದಾಸಃ' ಎಂಬ ಸೂಕ್ತಿಗೆ ಲೋಪ ಬರುವಂತಿಲ್ಲ. ಮುಗಿಲೆತ್ತರವನ್ನು ಮುಟ್ಟಿರುವ ಈತನ ಕಾವ್ಯಶಕ್ತಿ ಮೂರು ನಾಟಕಗಳನ್ನೂ ನಾಲ್ಕು ಕಾವ್ಯಗಳನ್ನೂ ಜಗತ್ತಿಗೆ ನೀಡಿ ಕೃತಕೃತ್ಯವಾಗಿದೆ. 'ಕಾಳಿದಾಸ' ಕಾವ್ಯದ ಮುನ್ನುಡಿಯಲ್ಲಿ ಈಗಾಗಲೇ ನಾನು ಹೇಳಿರುವಂತೆ 'ಸುಮಧುರ ಕಾವ್ಯಮಧುವಿನಿಂದ ಸಹೃದಯರನ್ನು ರಸತೃಪ್ತಿಪಡಿಸುವ ವಿಶೇಷಶಕ್ತಿ ಕಾಳಿದಾಸನದು. ಆತನ ಕಾವ್ಯಗಳ ಕಲ್ಪನಾವಿಲಾಸಕ್ಕೂ ನಾದ ಮಾಧುರ್ಯಕ್ಕೂ ಮೋಹಿತರಾಗದವರು ಅಪೂರ್ವ. ತನ್ನ ಹಿತಮಿತ ವಚನಗಳಿಂದಲೂ ಸುಂದರ ಉಪಮೆಗಳಿಂದಲೂ ಲೋಕಪ್ರಿಯನಾಗಿದ್ದಾನೆ, ಕವಿಕುಲಗುರುವಾಗಿದ್ದಾನೆ.' ಈತನ ಕುಮಾರಸಂಭವ, ರಘುವಂಶ ಮಹಾಕಾವ್ಯಗಳಲ್ಲಿ ಕವಿಯ ಕಾವ್ಯಯೋಗ ಆತ್ಮಸಾಧನೆಯಾಗಿಯೂ ಪರಿಣಮಿಸಿರುವುದನ್ನು ಕಾಣಬಹುದು. ಇಂತಹ ಕವಿ ಭಾರತೀಯ ಸಂಸ್ಕೃತಿ ಇರುವವರೆಗೆ, ಅಷ್ಟೇ ಏಕೆ, ಜಗತ್ತಿನ ಸಾಹಿತ್ಯ ಸಂಸ್ಕೃತಿಗಳಿರುವವರೆಗೆ, ಚಿರನೂತನವಾಗಿ ಬಾಳುವುದರಲ್ಲಿ ಸಂಶಯವಿಲ್ಲ.

ಸಂಸ್ಕೃತ ಸಾಹಿತ್ಯ ಶೈಲದ ಗೌರೀಶಂಕರನಂತಿರುವ ಕಾಳಿದಾಸನಿಗೆ ಹೊಯ್‌ಕಯ್ಯಾಗಿ ನಿಲ್ಲಬಲ್ಲ ಮತ್ತೊಬ್ಬ ಸಂಸ್ಕೃತ ಕವಿಯಿಲ್ಲ. ಖ್ಯಾತನಾಮರಾದ ಭಾರವಿ, ಭಟ್ಟಿ, ಮಾಘ, ಶ್ರೀಹರ್ಷ ಮೊದಲಾದ ಕವಿಗಳು ವಿದ್ವತ್ ಕವಿಗಳು. ಇವರ ಸಾಲಿನಲ್ಲಿಯೇ ನಿಂತಿದ್ದರೂ ತನ್ನದೇ ಆದ ವೈಶಿಷ್ಟ್ಯವುಳ್ಳವನು ಬಿಲ್ಹಣಕವಿ. ಆತನ 'ರಾಜತರಂಗಿಣಿ' ಶ್ರೇಷ್ಠವಾದ ಕಾವ್ಯಾಂಶಗಳನ್ನು ಒಳಗೊಂಡ ಒಂದು ಇತಿಹಾಸ. ಆದಿಕಾಲದಿಂದ ತನ್ನ ಕಾಲದವರೆಗೆ ಕಾಶ್ಮೀರದಲ್ಲಿ ಆಳಿದ ಪ್ರತಿಯೊಬ್ಬ ರಾಜನ ಚರಿತ್ರೆಯನ್ನೂ ಆತನು ವಿವರವಾಗಿ ನಿರೂಪಿಸಿದ್ದಾನೆ.

ಜನಪ್ರಿಯವಾಗಿರುವ ಹಲವು ಲಘುಕಾವ್ಯಗಳು ಸಂಸ್ಕೃತದಲ್ಲಿ ಕಂಡು ಬರುತ್ತವೆ. ಅವುಗಳಲ್ಲಿ ಶೃಂಗಾರತಿಲಕ, ಶೃಂಗಾರಶತಕ, ಅಮರುಶತಕ

ಮೊದಲಾದುವು ಪ್ರಣಯಜೀವನದ ಸುಂದರ ಚಿತ್ರಗಳನ್ನು ಒಳಗೊಂಡಿವೆ. ಇವುಗಳ ಸಾಲಿನಲ್ಲಿ ಬರುವ ಗೀತಗೋವಿಂದವು ಭಕ್ತಿಯ ಮಧುರಭಾವವನ್ನು ಉಕ್ಕಿಹರಿಸುತ್ತಿರುವ ರಾಗಸುಧಾರಸವಾಗಿದೆ. ಸಂಗೀತ ಅಭಿನಯಗಳಲ್ಲಿ ಇದಕ್ಕೆ ವಿಶಿಷ್ಟ ಪ್ರಾಧಾನ್ಯತೆಯಿರುವುದಷ್ಟೇ ಅಲ್ಲ, ಚೈತನ್ಯ ಸಂಪ್ರದಾಯದವರಿಗೆ ಇದು ಪವಿತ್ರಗ್ರಂಥವೂ ಆಗಿದೆ. ಇವುಗಳಲ್ಲದೆ ಅನೇಕ ವಿಡಂಬನ ಕಾವ್ಯಗಳೂ ನೀತಿ ವೈರಾಗ್ಯಶತಕಗಳೂ ತಂಡೋಪತಂಡವಾಗಿ ಹುಟ್ಟಿಕೊಂಡು ಸಂಸ್ಕೃತ ಸಾಹಿತ್ಯದ ವಿಪುಲತೆಗೂ ವೈವಿಧ್ಯಕ್ಕೂ ಶ್ರೀಮಂತಿಕೆಗೂ ಕಾರಣವಾಗಿವೆ.

ಸಂಸ್ಕೃತದಲ್ಲಿ ಪದ್ಯಕಾವ್ಯಗಳಿರುವಂತೆ ಗದ್ಯಕಾವ್ಯಗಳೂ ಬೆಳೆದುಕೊಂಡು ಬಂದಿವೆ. ಸುಬಂಧುವಿನ ವಾಸವದತ್ತ, ಬಾಣಭಟ್ಟನ ಕಾದಂಬರಿ, ದಂಡಿಯ ದಶಕುಮಾರ ಚರಿತ್ರೆ ಮೊದಲಾದುವು ಸಂಸ್ಕೃತಸಾಹಿತ್ಯಾಭ್ಯಾಸಿಗಳ ಆದರಕ್ಕೂ, ಗೌರವಕ್ಕೂ, ಪಾತ್ರವಾಗುತ್ತಾ ಬಂದಿವೆ. ಇಷ್ಟೇ ಅಲ್ಲ; ಇವುಗಳೂ ಸಂಸ್ಕೃತದ ಚಂಪೂಕಾವ್ಯಗಳೂ ಕನ್ನಡ ಸಾಹಿತ್ಯದ ಆರಂಭದೆಸೆಯಲ್ಲಿ ನಮ್ಮ ಕವಿಗಳಿಗೆ ಮಾದರಿಯಾದುವೆಂದು ತೋರುತ್ತದೆ. ಛಂದಸ್ಸಿನಲ್ಲಿ ಮಾತ್ರವೇ ಅಲ್ಲದೆ ಶೈಲಿಯಲ್ಲಿಯೂ ಈ ಸಂಸ್ಕೃತಕಾವ್ಯಗಳು ಕನ್ನಡಿಗರಿಗೆ ಮಾದರಿಯಾದವು.

ಸಂಸ್ಕೃತದಲ್ಲಿರುವ ರಾಮಾಯಣ ಮಹಾಭಾರತಗಳೂ ಕಾಳಿದಾಸಾದಿ ಮಹಾಕವಿಗಳ ಕಾವ್ಯಗಳೂ ಈಗಾಗಲೇ ಬಹುಮಟ್ಟಿಗೆ ಕನ್ನಡಕ್ಕೆ ಭಾಷಾಂತರವಾಗಿವೆ. ಇನ್ನೂ ಆಗಬೇಕಾಗಿರುವುದೂ ಸಾಕಷ್ಟಿದೆ. ಈ ಕಾರ್ಯ ಅಗತ್ಯವಾಗಿಯೂ ಮುಂದುವರಿಯಬೇಕಾಗಿದೆ. ಏಕೆಂದರೆ ಸಂಸ್ಕೃತ ಹಿಂದೂ, ಇಂದೂ ಮುಂದೂ ಎಂದೂ ಬದುಕಿ ಬಾಳಬೇಕಾದುದು ದೇಶಭಾಷೆಯಲ್ಲಿಯೇ. ಆದ್ದರಿಂದ ಸಂಸ್ಕೃತದ ಶ್ರೇಷ್ಠಕವಿಗಳೆಲ್ಲರ ಜೀವನ ಕಾಲ ಕೃತಿಗಳ ಸಮಗ್ರ ಪರಿಚಯ ಕನ್ನಡದಲ್ಲಿ ಎಲ್ಲರಿಗೂ ದೊರಕುವಂತಾಗುವುದು ಅತ್ಯಗತ್ಯ. ಈ ಕಾರ್ಯವನ್ನು ಕೈಗೊಂಡು ಬಹುಮಟ್ಟಿಗೆ ಯಶಸ್ವಿಯಾಗಿ ನಿರ್ವಹಿಸಿರುವ ಡಾ|| ಕೆ. ಕೃಷ್ಣಮೂರ್ತಿಗಳು ಅಭಿನಂದನಾರ್ಹರು. ಈಗಾಗಲೇ ಪ್ರೊ| ಎ. ಆರ್. ಕೃಷ್ಣಶಾಸ್ತ್ರಿಗಳು ಸಂಸ್ಕೃತ ನಾಟಕಗಳನ್ನು ಕುರಿತು ತಮ್ಮ ವಿದ್ವತ್ಪೂರ್ಣವಾದ ಅದ್ವಿತೀಯ ವಿಮರ್ಶಾಗ್ರಂಥದ

ಮೂಲಕ ಸಂಸ್ಕೃತ ಸಾಹಿತ್ಯದ ಒಂದು ಮುಖವನ್ನು ನಮಗೆ ಪರಿಚಯ ಮಾಡಿಕೊಟ್ಟಿದ್ದರು. ಡಾ|| ಕೃಷ್ಣಮೂರ್ತಿಗಳ ಈ 'ಸಂಸ್ಕೃತಕಾವ್ಯ' ಅದಕ್ಕೆ ಪೂರಕವಾಗಿ ಬಂದಿದೆ. ಇದರಲ್ಲಿಯು ಸಿದ್ಧಾಂತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿರುವುದು ಸಹಜವೆ. ಆದರೆ ಅವರ ವಿಚಾರ ಸರಣಿ, ವಸ್ತುಸಂಗ್ರಹ, ನಿರೂಪಣಾವಿಧಾನ—ಇವು ಅಭಿನಂದನಾರ್ಹವಾದುವು. ಡಾ|| ಕೃಷ್ಣಮೂರ್ತಿಗಳು ಸಂಸ್ಕೃತ ಭಾಷೆ ಸಾಹಿತ್ಯಗಳಲ್ಲಿ ಬಹು ಆಳವಾದ ಪಾಂಡಿತ್ಯವುಳ್ಳವರು. ಸಂಸ್ಕೃತ ಸಾಹಿತ್ಯರಾಶಿಯನ್ನೂ ಅಲಂಕಾರ ಕಾವ್ಯಮೀಮಾಂಸಾದಿ ಶಾಸ್ತ್ರಗ್ರಂಥಗಳನ್ನೂ ಕನ್ನಡಕ್ಕೆ ಪರಿವರ್ತನೆ ಮಾಡುವ ಪ್ರಯತ್ನದಲ್ಲಿ ಇವರ ಪಾಲು ಅತ್ಯಂತ ಶ್ಲಾಘನೀಯವಾಗಿದೆ. ಇವರ 'ಧ್ವನ್ಯಾಲೋಕ', 'ಕಾವ್ಯಾಲಂಕಾರ' ಮೊದಲಾದ ಗ್ರಂಥಗಳು ಅವರ ವಿದ್ವತ್ತಿಗೂ ಪ್ರತಿಭೆಗೂ ಸಾಕ್ಷಿಯಾಗಿವೆ. ಅವರ ಈ 'ಸಂಸ್ಕೃತಕಾವ್ಯ'ವನ್ನು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಒಂದು ಹೊಸ ಕುಸುಮವಾಗಿ ಸೇರಿಸಲು ನಾನು ಅತ್ಯಂತ ಹರ್ಷಿಸುತ್ತೇನೆ.

ಮೈಸೂರು,
ತಾ|| ೩೦-೯-೧೯೫೮.

**ಕೆ. ವಿ. ಪುಟ್ಟಪ್ಪ,**
ಪ್ರಧಾನ ಸಂಪಾದಕ.

# ಅರಿಕೆ

" ಕತಿ ಕವಯಃ ಕತಿ ಕೃತಯಃ ಕತಿ ಲುಪ್ತಾಃ ಕತಿ ಚರನ್ತಿ ಕತಿ ಶಿಥಿಲಾಃ... "

ಇದು ಸಂಸ್ಕೃತದ ಅಸಂಖ್ಯ ಕಾವ್ಯಗಳನ್ನು ಕುರಿತ ಐತಿಹಾಸಿಕ ಸಂದೇಹ ಸಂದೋಹಗಳ ನಿರ್ಣಯಕ್ಕೆಂದು ಬರೆದ ಸಂಶೋಧನೋಪನ್ಯಾಸವಲ್ಲ; ಪೂರ್ವದಿಂದ ಜನಜನಿತವಾಗಿ ಬಂದ ಐತಿಹ್ಯಗಳನ್ನೆಲ್ಲ ಒಂದು ಕಡೆ ಒಟ್ಟು ಮಾಡಲೆಂದು ಬರೆದ ಸಂಕಲನ ಗ್ರಂಥವೂ ಅಲ್ಲ, ಇವೆರಡಕ್ಕೂ ಸಂಬಂಧ ವಿಲ್ಲದಂತೆ ಸ್ವಾಭಿಪ್ರಾಯಪ್ರಕಟಣೆಗೆಂದು ಹೊರಟ ನಿರಂಕುಶ ಬರೆವಣಿಗೆಯೂ ಅಲ್ಲ. ಈ ನೂರು ವರ್ಷಗಳಿಂದ ಬೆಳೆದಿರುವ ಸಂಸ್ಕೃತ ಕಾವ್ಯಗಳ ಬಗೆಗೆ ನಡೆದ ಸಂಶೋಧನೆಗಳ ಸಾರವನ್ನೂ, ಅದಕ್ಕಿಂತಲೂ ಮುಂಚೆ ಸಾವಿರಾರು ವರ್ಷಗಳಿಂದ ಬಂದಿರುವ ಭಾರತೀಯ ಸಾಂಪ್ರದಾಯಿಕ ವಿಚಾರವನ್ನೂ, ಎರಡನ್ನೂ ಹಿನ್ನೆಲೆಯಲ್ಲಿಟ್ಟುಕೊಂಡು, ಸಂಸ್ಕೃತ ಶ್ರವ್ಯಕಾವ್ಯದ ಪ್ರಧಾನ ಲೇಖಕರೆಲ್ಲರ ಕವಿಪರಿಚಯವನ್ನೂ ಕೃತಿವಿವೇಚನೆಯನ್ನೂ ಒಟ್ಟಿಗೆ ಮಾಡಿಕೊಡುವುದು ಈ ಗ್ರಂಥದ ಉದ್ದೇಶ. ಕವಿಪರಿಚಯವು ಚರ್ಚಾಪನ್ನ ವಾಗದಂತೆಯೂ, ಕೃತಿವಿವೇಚನೆಯು ಅತಿ ನೀರಸವಾಗದಂತೆಯೂ, ಯಾವುದೂ ನಿರಾಧಾರವೆನಿಸದಂತೆಯೂ ಬರೆಯಲು ಯತ್ನಿಸಿದೆ. ಪ್ರತ್ಯೇಕ ಕವಿಗಳ ಗುಣಗೌರವಗಳಲ್ಲಿರುವ ತಾರತಮ್ಯವನ್ನು ದೃಷ್ಟಿಯಲ್ಲಿಟ್ಟು ಸಮೀಕ್ಷೆಯ ಪುಟಸಂಖ್ಯೆಗಳನ್ನು ನಿರ್ಧರಿಸಲಾಗಿದೆ.

ಶ್ರವ್ಯಕಾವ್ಯದ ಪ್ರತಿಯೊಂದು ಪ್ರಕಾರವನ್ನೂ ಬೇರೆ ಬೇರೆ ಅಧ್ಯಾಯ ಗಳಲ್ಲಿ ಸಮೀಕ್ಷಿಸಿರುವುದಲ್ಲದೆ ಕವಿಗಳ ವೈಶಿಷ್ಟ್ಯ, ತಾರತಮ್ಯಗಳಂತೆ ಪರಸ್ಪರ ಪ್ರಭಾವಗಳ ಪರಿಶೀಲನೆಯನ್ನೂ ಗಮನಿಸಲಾಗಿದೆ. ಮೂಲ ಕೃತಿಗಳಿಂದ ಧಾರಾಳವಾಗಿ ಲಕ್ಷ್ಯಗಳನ್ನು ಉದಾಹರಿಸಿ, ಅಗತ್ಯವಿದ್ದಲ್ಲೆಲ್ಲ ಕನ್ನಡ ಅನುವಾದಗಳನ್ನೂ ಸೇರಿಸಿದೆ. ಈ ಗ್ರಂಥದಲ್ಲಿರುವ ವಿಮರ್ಶೆಗೆ ಇವೇ ಆಲಂಬನಗಳು ಮೂಲವನ್ನು ಸ್ವತಃ ಓದದೆ ಲೇಖಕನು ಇತರರ ಉಕ್ತಿಗಳನ್ನಿಲ್ಲಿ ಎಲ್ಲಿಯೂ ಆಶ್ರಯಿಸಿಲ್ಲ. ಅಭಿಪ್ರಾಯಭೇದವಿದ್ದಕಡೆ ಪರಪ್ರತ್ಯಯಗಳನ್ನೂ ಸ್ವಾಭಿಪ್ರಾಯವನ್ನೂ ಸುವ್ಯಕ್ತವಾಗಿ, ಸಾಧಾರಣವಾಗಿ,

ನಿರ್ದೇಶಿಸಿದೆ. ನನ್ನ ಇಪ್ಪತ್ತು ವರ್ಷಗಳ ಸಂತತ ಸಂಸ್ಕೃತ ಅಧ್ಯಯನದ ಸಂಸ್ಕಾರವೇ ನನ್ನ ವಿಮರ್ಶೆಗಳಿಗೆ ಮೂಲಾಧಾರ; ಆ ಸಂಸ್ಕಾರದ ಅಭಿನ್ನ ಅಂಗ ಅನೇಕ ವಿದ್ವಜ್ಜನರ ಲೇಖನಗಳು. ಅವರೆಲ್ಲರಿಗೂ ನಾನು ಋಣಿ. ಶಕ್ಯವಿದ್ದಮಟ್ಟಿಗೂ ಇತರ ವಿದ್ವಾಂಸರ ಮಹತ್ತ್ವಪೂರ್ಣ ಕೃತಿಗಳನ್ನು ಅಡಿಟಿಪ್ಪಣಿಗಳಲ್ಲಿ ಉಲ್ಲೇಖಿಸಿದೆ. ಸಂಸ್ಕೃತ ಕಾವ್ಯದ ಉಜ್ಜ್ವಲ ಸಿದ್ಧಿಯ ಒಂದು ದಿಗ್ದರ್ಶನ ಈ ಗ್ರಂಥದಲ್ಲಿ ಆಗಿದೆಯೆಂದು ನಂಬಿದ್ದೇನೆ. ಕನ್ನಡಿಗರಿಗೆ ಸಂಸ್ಕೃತ ಕಾವ್ಯದ ವಿಷಯದಲ್ಲಿ ಪ್ರಚಲಿತವಿರುವ ಕೆಲವು ಭ್ರಮೆಗಳಾದರೂ ದೂರವಾಗಿ, ಅದರಲ್ಲಿ ಆಸಕ್ತಿ ಬೆಳೆದು, ಪೂಜ್ಯಪೂಜಾವ್ಯತಿಕ್ರಮ ತಪ್ಪಿದರೆ ಲೇಖಕನು ಕೃತಕೃತ್ಯ.

ಈ ಗುರುತರವಾದ ಗ್ರಂಥರಚನೆಗೆ ನನ್ನನ್ನು ನಿಯೋಜಿಸಿ, ನನ್ನ ಅಧ್ಯಯನಕ್ಕೊಂದು ಸಾರ್ಥಕ್ಯ ಬರುವಂತೆ ಪ್ರೋತ್ಸಾಹಿಸಿರುವ ನನ್ನ ವಿದ್ಯಾಮಾತೆ ಮೈಸೂರು ವಿಶ್ವವಿದ್ಯಾನಿಲಯಕ್ಕೆ, ವಿಶೇಷತಃ, ನನ್ನ ಕನ್ನಡ ಗುರುಗಳೂ, ಪ್ರಕಟನಾಮಂಡಲಿಯ ಅಧ್ಯಕ್ಷರೂ ಆದ ಪ್ರೊ|| ಕೆ. ವಿ. ಪುಟ್ಟಪ್ಪನವರಿಗೆ, ನಾನು ಅತ್ಯಂತ ಕೃತಜ್ಞ.

ಈ ಗ್ರಂಥರಚನೆಯನ್ನು ನಾನು ಕೈಕೊಂಡ ಗಳಿಗೆಯಿಂದಲೂ ವಿಶೇಷ ಆಸ್ಥೆಯನ್ನು ತೋರಿಸಿ, ಇದಕ್ಕೆ ಬೇಕಾದ ಸರ್ವಸೌಲಭ್ಯಗಳೂ ಒದಗುವಂತೆ ದಿ|| ಮಂಗೇಶ ರಾಮಕೃಷ್ಣ ತೇಲಂಗರ ದೊಡ್ಡ ಸಂಸ್ಕೃತ ಪುಸ್ತಕ ಭಂಡಾರವನ್ನೇ ಕಾಲೇಜಿಗೆ ಕೊಂಡುಕೊಟ್ಟುದಲ್ಲದೆ, ಇದನ್ನು ಬರೆದಂತೆ ಇದರ ಕೆಲವು ಭಾಗಗಳನ್ನು ಓದಿಸಿ ಕೇಳಿ, ಅಮೂಲ್ಯ ಸಲಹೆಗಳನ್ನಿತ್ತು, ನನ್ನನ್ನು ಪ್ರೋತ್ಸಾಹಿಸಿರುವ ನಮ್ಮ ಪ್ರಿನ್ಸಿಪಾಲರಾದ ಶ್ರೀ ಎಲ್. ಎಸ್. ಕಾಮತ, ಎಂ.ಎ., ಅವರಿಗೆ ನಾನು ಎಷ್ಟು ಧನ್ಯವಾದಗಳನ್ನರ್ಪಿಸಿದರೂ ಕಡಿಮೆಯೇ. ಈ ಪುಸ್ತಕದ ಮೊದಲ ಬರೆಹವನ್ನು ಆಮೂಲಾಗ್ರವಾಗಿ ಓದಿ ನೋಡಿ ಅನೇಕ ಉಪಯುಕ್ತ ಸಲಹೆಗಳನ್ನಿತ್ತು ಉಪಕಾರ ಮಾಡಿರುವ ನನ್ನ ವಿದ್ಯಾಗುರುಗಳಾದ ಪ್ರೊ|| ತಿ. ನಂ. ಶ್ರೀಕಂಠಯ್ಯನವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಕೆನರಾ ಕಾಲೇಜು,
ಕುಮಟ
ತಾ|| ೧೧—೪—೧೯೫೮

**ಕೆ. ಕೃಷ್ಣಮೂರ್ತಿ**

# ವಿಷಯಸೂಚಿಕೆ


| ಅಧ್ಯಾಯ | | ಪುಟ |
|---|---|---|
| I | ಪೀಠಿಕೆ .... .... | 1 |
| | **ಮಹಾಕವಿಗಳು:** | |
| II | ವಾಲ್ಮೀಕಿ: ರಾಮಾಯಣ .... .... | 35 |
| III | ವ್ಯಾಸ: ಮಹಾಭಾರತ .... ... | 96 |
| IV | ಅಶ್ವಘೋಷ .... .... | 171 |
| V | ಕಾಳಿದಾಸ .... .... | 218 |
| VI | ವಿದ್ವತ್ಕವಿಗಳು: ಭಾರವಿ, ಇತ್ಯಾದಿ .... | 261 |
| VII | **ಲಘುಕಾವ್ಯಗಳು:** ೧. ಪ್ರೇಮಗೀತೆಗಳು .... | 328 |
| | ೨. ವಿಡಂಬನಕಾವ್ಯಗಳು | 352 |
| | ೩. ನೀತಿವೈರಾಗ್ಯಶತಕಗಳು | 360 |
| | ೪. ಸ್ತೋತ್ರಕಾವ್ಯ .... | 364 |
| VIII | **ಗದ್ಯಕಾವ್ಯಗಳು:** ೧. ಕಥಾಸಾಹಿತ್ಯ .... | 369 |
| | ೨. ಗದ್ಯಕಾವ್ಯದ ಲಕ್ಷಣ .... | 376 |
| | ೩. ಸುಬಂಧು .... | 379 |
| | ೪. ಬಾಣಭಟ್ಟ .... | 388 |
| | ೫. ದಂಡಿ, ಇತ್ಯಾದಿ .... | 410 |
| IX | **ಚಂಪೂಕಾವ್ಯಗಳು:** ... .... | 418 |
| X | ಉಪಸಂಹಾರ .... .... | 430 |
| | (ಸಂಸ್ಕೃತ ಕಾವ್ಯದ ವೈಲಕ್ಷಣ್ಯಗಳು) | |

ವ್ಯಾಸಂ ವಾಲ್ಮೀಕಿಯುಮಾಂ-
ವಾಸಂ ಕವಿ ಕಾಳಿದಾಸನಾತ್ತವಿಲಾಸಂ ।
ಹಾಸಂ ದಂಡಿಯೆ ಹೃದಯೋ-
ಲ್ಲಾಸಂ ಬಾಣನೆನೆ ವಾಣಿಯಂ ಮೆಚ್ಚದರಾರ್ ॥೧॥

ಚೋರಂ ಚಿಕುರಂ ಭಾರವಿ
ವೀರರಸಂ ಕರ್ಣಪೂರನಂತೆ ಮಯೂರಂ ।
ಧಾರಾಪತಿಯಾಧಾರಂ
ಸಾರಂ ಶೃಂಗಾರಪೂರನಮರುಕನೆನಿಸಲ್ ॥೨॥

ಆಸೇತು ಹಿಮಾಚಲಮೆನ-
ಲಾಸೇವಿತ ಕಾವ್ಯದೇವತೋಪಾಸನೆಯಿಂ ।
ದೋಸರಿಸುತೆ ದೋಷಗಳಂ
ಲೇಸಂ ಕೈಕೊಂಡು ಬಾಳ್ಗೆ ಕನ್ನಡರಸಿಕರ್ ॥೩॥

# ಮೊದಲನೆಯ ಅಧ್ಯಾಯ

## ಪೀಠಿಕೆ

ದೇವೀಂ ವಾಚಮಜನಯನ್ತ ದೇವಾ
ಸ್ತಾಂ ವಿಶ್ವರೂಪಾಃ ಪಶವೋ ವದನ್ತಿ ।
ಸಾ ನೋ ಮನ್ದ್ರೇಷಮೂರ್ಜಂ ದುಹಾನಾ
ಧೇನುರ್ವಾಗಸ್ಮಾನುಪಸುಷ್ಟುತೈತು ॥

—ಋಗ್ವೇದಸಂಹಿತೆ, VIII. 89-11

### ೧. ಸಂಸ್ಕೃತದ ಉಗಮ ಮತ್ತು ವಿಕಾಸ :

ಸಂಸ್ಕೃತ ಕಾವ್ಯದ ಮೂಲವನ್ನು ಹುಡುಕುತ್ತಾ ಹೊರಟರೆ (ಕನಿಷ್ಠ ಪಕ್ಷ) ಎರಡು ಸಾವಿರ ವರ್ಷಗಳಿಗಿಂತಲೂ ಹಿಂದಿನ ರಾಮಾಯಣ ಮಹಾ ಭಾರತಗಳಿರಲಿ, ಅವಕ್ಕಿಂತಲೂ ಅಷ್ಟೇ ಹಿಂದಿನ ಅಪಾರ ವೈದಿಕ ವಾಙ್ಮಯ ರಾಶಿಯನ್ನು ಮುಟ್ಟುತ್ತೇವೆ. ಈ ಭಾಷೆಯು ಆ ವೇದಗಳ ಯುಗದಲ್ಲಿಯೇ ದೇವಭಾಷೆಯೆಂದು ಪರಿಗಣಿತವಾಗಿತ್ತೆಂದ ಮೇಲೆ ಅದರ ಪ್ರಾಚೀನತೆಯು ಎಷ್ಟೆಂಬುದನ್ನು ಕಲ್ಪಿಸಿಕೊಳ್ಳುವುದೂ ನಮಗೆ ದುಷ್ಕರವಾಗುತ್ತದೆ. ಸಂಸ್ಕೃತ ಭಾಷೆಯನ್ನು ಇತರ ಪ್ರಾಚೀನ ಭಾಷೆಗಳಾದ ಗ್ರೀಕ್, ಲ್ಯಾಟಿನ್ ಮುಂತಾದು ವುಗಳೊಡನೆ ಹೋಲಿಸಿ ತುಲನಾತ್ಮಕ ಭಾಷಾ ಶಾಸ್ತ್ರವನ್ನು ಹೊಸದಾಗಿ ಕಂಡುಹಿಡಿದಿರುವ ಪಾಶ್ಚಾತ್ಯ ವಿದ್ವಾಂಸರು ವಿಶ್ವದ ಮಾನವಕುಲಕ್ಕೇ ಮೂಲ ಭೂತವಾದ ಭಾಷೆಗಳಲ್ಲಿ ಇದೊಂದೆಂಬುದನ್ನು ಸಿದ್ಧಮಾಡಿದ್ದಾರೆ. ಋಗ್ವೇದ ಮಂತ್ರಗಳಲ್ಲಿಯೇ ಶೃಂಗಾರಾದಿರಸಗಳಿಗೂ ಮಾಧುರ್ಯಾದಿ ಕಾವ್ಯಗುಣ

ಗಳಿಗೂ ಉಪಮಾದಿ ಅಲಂಕಾರಗಳಿಗೂ ಅಲ್ಲಲ್ಲಿ ನಿದರ್ಶನಗಳು ಸಿಕ್ಕುತ್ತವೆ. ಆದರೂ ವೇದಮಂತ್ರಗಳನ್ನು ಕಾವ್ಯವೆಂದು ಕರೆಯುವ ರೂಢಿಯಿಲ್ಲ. ಏಕೆಂದರೆ ಮುಖ್ಯವಾಗಿ ಅವು ಯಾಗೋಪಯೋಗಿ ರಚನೆಗಳು, ಯಾಜ್ಞಿಕರ ಕೃತಿಗಳು. ಅಗ್ನಿ, ಸವಿತೃ, ವರುಣ, ಇಂದ್ರ, ಉಷಸ್ ಮುಂತಾದ ದೇವತಾ ಸ್ತುತಿಗಳಲ್ಲಿ ಆನುಷಂಗಿಕವಾಗಿ ಕಾವ್ಯಗುಣಗಳು ಮಿಂಚಿದರೂ ಅವನ್ನು ಪವಿತ್ರ ಶ್ರುತಿಗಳೆಂದು ಪರಿಗಣಿಸಿ ಗೌರವಿಸುವುದೇ ವಾಡಿಕೆ. ಅವು ಅಪೌರುಷೇಯವೆನ್ನುವ ಸಂಪ್ರದಾಯವೂ ಮಂತ್ರಗಳ ಪ್ರಾಚೀನತೆಯನ್ನು ನಿರ್ದೇಶಿಸುವಂತೆ ಪಾವಿತ್ರ್ಯವನ್ನೂ ಪ್ರತಿಪಾದಿಸುತ್ತವೆ. ಮಂತ್ರಋಷಿಗಳೆಲ್ಲರೂ 'ಸಾಕ್ಷಾತ್ಕೃತ ಧರ್ಮ'ರೆಂದೂ, ಅವರ ಮಾತುಗಳು ತ್ರಿಕಾಲಾಬಾಧಿತ ಸತ್ಯವೆಂದೂ ತಿಳಿಯುವುದೇ ಭಾರತೀಯರ ಆಸ್ತಿಕ್ಯದ ಅಡಿಗಲ್ಲಾಗಿದೆಯೆನ್ನಬಹುದು.[1]

ಎಷ್ಟೋ ಸಾವಿರ ವರ್ಷಗಳಕಾಲ ಒಂದು ಕಡೆಗೆ ಶಾಖೋಪಶಾಖೆಯಾದ 'ಬ್ರಾಹ್ಮಣ'ಗಳ 'ಕರ್ಮಕಾಂಡವೂ' ಮತ್ತೊಂದು ಕಡೆ ಉಪನಿಷತ್ತುಗಳ 'ಜ್ಞಾನಕಾಂಡ'ವೂ ಬೆಳೆದುಬಂದುದರ ಪರಿಣಾಮವಾಗಿ ಆ ಭಾಷೆಗೆ ದೇವಭಾಷೆಯೆಂಬ ಗೌರವವೂ ಪ್ರತಿಷ್ಠೆಯೂ ಬಂದುವು. ಗಾತ್ರದಲ್ಲಷ್ಟೆ ಅಲ್ಲ, ಗುಣದಲ್ಲಿಯೂ ಉಪನಿಷತ್ತುಗಳ ಸಾಹಿತ್ಯಕ್ಕೆ ವಿಶ್ವದಲ್ಲಿಯೇ ಒಂದು ಮಹತ್ವದ ಸ್ಥಾನವಿದೆ. ಬ್ರಾಹ್ಮಣಗಳು ಯಜ್ಞವಿಧಿಗಳನ್ನು ಕೂಲಂಕಷವಾಗಿ ಚರ್ಚಿಸಿದರೆ ಉಪನಿಷತ್ತುಗಳು ಅಧ್ಯಾತ್ಮರಹಸ್ಯಗಳನ್ನು ಕಾವ್ಯಮಯವಾಗಿಯೂ, ಎಷ್ಟೋಸಲ ಛಂದೋಬದ್ಧವಾಗಿಯೂ ವಿವರಿಸುತ್ತವೆ. ಆದರೆ ಭಾಷೆಯ ದೃಷ್ಟಿಯಿಂದ ಇವೆಲ್ಲವೂ ವೈದಿಕವಾಙ್ಮಯದಲ್ಲೇ ಅಂತರ್ಗತವಾಗುತ್ತವೆ, ವ್ಯಾಕರಣಕಾರರು ಮುಂದೆ ಮಾಡಿಕೊಂಡ ನಿಯಮಗಳಿಗೆ ಒಳಗಾಗುವುದಿಲ್ಲ.[2]

---

1. 'ಸಾಕ್ಷಾತ್ಕೃತಧರ್ಮಾಣ ಋಷಯೋ ಬಭೂವುಃ; ತೇಽವರೇಭ್ಯೋಽಸಾಕ್ಷಾತ್ಕೃತ ಧರ್ಮೇಭ್ಯ ಉಪದೇಶೇನ ಮಂತ್ರಾನ್ ಸಂಪ್ರಾದುಃ'
ಯಾಸ್ಕನ ನಿರುಕ್ತ I. XX. 1.

2. 'ಅಪೌರುಷೇಯಂ ಶ್ರುತಿಃ; ಸಾ ಚ ಮಂತ್ರಬ್ರಾಹ್ಮಣೇ. ವಿವೃತ ಕ್ರಿಯಾತಂತ್ರಾ ಮಂತ್ರಾಃ ಮಂತ್ರಾಣಾಂ ಸ್ತುತಿನಿಂದಾ .. ವಿನಿಯೋಗಗ್ರಂಥೋ ಬ್ರಾಹ್ಮಣಂ'— ಕಾವ್ಯಮೀಮಾಂಸೆ, ಪು. 2.

ವೇದಗಳ ಪಠನಪಾಠನದಲ್ಲಿ ನಿರತರಾಗಿದ್ದ ದ್ವಿಜರೇ ದೈನಂದಿನ ವ್ಯವಹಾರದಲ್ಲಿ ಉಪಯೋಗಿಸುತ್ತಿದ್ದ ಭಾಷೆಯ ರೂಪವು ಪ್ರಾಚೀನ ಮಂತ್ರಗಳ ಭಾಷಾರೂಪಕ್ಕಿಂತ ಬೇರೆಯಾಗಿದ್ದಿರಬೇಕು. ವೇದಮಂತ್ರಗಳ ಪರಿಚಯ ಕಡಿಮೆಯಾದ ಜನಗಳ ನುಡಿ ಈ ಸಾವಿರಾರು ವರ್ಷಗಳಲ್ಲಿ ಮತ್ತೂ ಹೇರಳವಾದ ರೂಪಾಂತರಗಳನ್ನು ಪಡೆದಿದ್ದಿರಬೇಕು. ಭಾಷೆಯು ಒಂದೇ ಆದರೂ ಪ್ರಾಂತಭೇದಗಳಿಂದ ಹಾಗೂ ಜನರ ಸಂಸ್ಕಾರಭೇದಗಳಿಂದ ಅದರ ಉಪಯೋಗದಲ್ಲಿ ಅಂತರಗಳು ಬರುವುದು ಸ್ವಾಭಾವಿಕವೇ ಆಗಿದೆ. ಸಾಮಾನ್ಯ ಜನರು ಅಥವಾ ಪ್ರಾಕೃತರು ಆಡುತ್ತಿದ್ದ ಭಾಷೆಯನ್ನೂ 'ಪ್ರಾಕೃತ' ವೆಂದೇ ಕರೆಯುವ ರೂಢಿಬಂದಿತು. ಅತ್ತ ಋಷಿಗಳ ವೇದವಾಙ್ಮಯ, ಇತ್ತ ಸಾಮಾನ್ಯರ ಪ್ರಾಕೃತಭಾಷೆ, ಇವೆರಡಕ್ಕೂ ನಡುವೆ ಶಿಷ್ಟಜನರು ಅಥವಾ ಸುಸಂಸ್ಕೃತರು ಆಡುತ್ತಿದ್ದ ಭಾಷೆಯೇ ಸಂಸ್ಕೃತ. ಇವೆಲ್ಲವೂ ಭಾರತದಲ್ಲಿ ಏಕಕಾಲದಲ್ಲಿಯೇ ಪ್ರಚಲಿತವಾಗಿದ್ದುವು. ಧಾರ್ಮಿಕ ಸಾಹಿತ್ಯವು ಪುರಾತನ ವೈದಿಕ ಭಾಷೆಯಲ್ಲಿ ಮೈವೆತ್ತಂತೆ ಲೌಕಿಕ ಸಾಹಿತ್ಯವು ಸಂಸ್ಕೃತ ಪ್ರಾಕೃತಗಳೆರಡರಲ್ಲೂ ಮೂಡಿಬಂದುದು ಸಹಜವಾಗಿದೆ. ಸಂಸ್ಕೃತ, ಪ್ರಾಕೃತಗಳಲ್ಲಿ ಪೂರ್ವ ಯಾವುದು ಅಪರ ಯಾವುದು ಎಂಬ ಪ್ರಶ್ನೆಯನ್ನು ಸುಲಭವಾಗಿ ಉತ್ತರಿಸುವಂತಿಲ್ಲ. ವ್ಯಾಕರಣ ನಿಯಮಗಳಿಂದ ಬದ್ಧವಾಗುವ ಮೊದಲೇ ಏಕಕಾಲದಲ್ಲಿ ಎರಡೂ ಅಸ್ತಿತ್ವದಲ್ಲಿದ್ದು ವಿಕಾಸಗೊಳ್ಳುತ್ತಿದ್ದುವು. ಎಲ್ಲರಿಗೂ ಎರಡೂ ಅರ್ಥವಾಗುತ್ತಿದ್ದುವು. ಅತ್ಯಂತ ಪ್ರಾಚೀನ ನಾಟಕಗಳಲ್ಲಿಯೂ ಈ ಅಂಶವು ಸ್ಪಷ್ಟವಾಗಿ ಕಾಣಬರುತ್ತದೆ ಉಚ್ಚವರ್ಗದ ಜನರು ಸಂಸ್ಕೃತವನ್ನು ಬಳಸಿದರೆ ಹೆಂಗಸರೂ ಶೂದ್ರಾದಿಗಳೂ ಬೇರೆ ಬೇರೆ ಪ್ರಾಕೃತಗಳನ್ನಾಡುತ್ತಾರೆ. ಎಲ್ಲರಿಗೂ ಎರಡೂ ತಿಳಿಯುತ್ತವೆ. ಜನರ ಬಾಯಲ್ಲಿನ ಉಚ್ಚಾರವಿಕಾರಗಳೇ ಭಾಷೆಯ ವಿಕಾಸಕ್ಕೆ ಕಾರಣವೆಂಬ ನಿಯಮವನ್ನೊಪ್ಪಿದರೆ ಸಂಸ್ಕೃತವೇ ಮೊದಲು, ಪ್ರಾಕೃತಗಳು ಸಂಸ್ಕೃತ ಜನ್ಯವೆನ್ನಬಹುದು. ಅದರ ಬದಲು ಭಾಷೆಯ ಅನಿಯತ ರೂಪಗಳನ್ನು ತಡೆಯಲು ವ್ಯಾಕರಣ ನಿಯಮಗಳನ್ನು ರಚಿಸುವ ಕಾರಣ, ಶುದ್ಧೀಕರಣ ಅಥವಾ ಸಂಸ್ಕಾರಕಾರ್ಯಕ್ಕೆ ಅಶುದ್ಧ ರೂಪಗಳೇ ಸಾಮಗ್ರಿಯೆಂಬ ದೃಷ್ಟಿಯನ್ನಿಟ್ಟುಕೊಂಡರೆ ಪ್ರಾಕೃತವೇ ಮೊದಲು, ಸಂಸ್ಕೃತ ಅನಂತರ ಎನ್ನಬಹುದು. ಎರಡು-

ಮತಗಳಿಗೂ ಆಧಾರವಿದೆ.[3] 'ವ್ಯಾಕರಣ' ಅಥವಾ 'ಸಂಸ್ಕರಣ' ಎಂದರೆ ಭಾಷೆಯ ಪ್ರತಿಯೊಂದು ಶಬ್ದವನ್ನೂ ಪ್ರಕೃತಿ–ಪ್ರತ್ಯಯಗಳ ವಿವೇಚನೆಯಿಂದ ವಿವರಿಸುವುದು, ಮತ್ತು ಸಾಧು ಪ್ರಯೋಗಗಳನ್ನು ನಿರ್ಣಯಿಸುವುದು. ಮೊದಲನೆಯ ಕೆಲಸವನ್ನು ವೇದದ ಒಂದೊಂದು ಶಾಖೆಗೂ ಇರುತ್ತಿದ್ದ ಪ್ರಾತಿಶಾಖ್ಯಗಳು ಮಾಡಿದರೂ ಅವು ಜನರ ಆಡುನುಡಿಗಳ ಸಾಧುತ್ವನಿರ್ಣಯಕ್ಕೆ ಹೋಗಲಿಲ್ಲ. ಈ ಕಾರ್ಯವನ್ನು ಸಮಗ್ರವಾಗಿಮಾಡಿ ಶಿಷ್ಟಜನರ ಆಡುನುಡಿಯಾಗಿದ್ದ 'ಭಾಷೆ'ಯನ್ನು 'ಸಂಸ್ಕೃತ'ವೆನಿಸಿದ ಕೀರ್ತಿ ಪಾಣಿನಿಯದು. ಸೀತೆಯನ್ನು ಕಂಡ ಹನುಮಂತನು 'ದ್ವಿಜರಂತೆ 'ಸಂಸ್ಕೃತ' ವಾಣಿಯನ್ನು ಬಳಸಿದರೆ ವಾನರನಾದ ನನ್ನಲ್ಲಿ ಈಕೆಗೆ ಸಂಶಯ ಬಂದೀತು' ಎಂದುಕೊಂಡನೆಂದು ರಾಮಾಯಣದಲ್ಲಿಯೇ ಉಲ್ಲೇಖವಿದೆ.[4] ಮುಂದೆ ದಂಡಿಯು

---

3. ಹೋಲಿಸಿರಿ—

(i) 'ಸಂಸ್ಕೃತಂ ನಾಮ ದೈವೀ ವಾಕ್ ಅನ್ವಾಖ್ಯಾತಾ ಮಹರ್ಷಿಭಿಃ ।
ತದ್ಭವಸ್ತತ್ಸಮೋ ದೇಶೀತ್ಯನೇಕಃ ಪ್ರಾಕೃತಕ್ರಮಃ ॥'
—ದಂಡಿಯ ಕಾವ್ಯಾದರ್ಶ, I 33.

(ii) 'ಪ್ರಾಕೃತಸ್ಯ ತು ಸರ್ವಮೇವ ಸಂಸ್ಕೃತಂ ಯೋನಿಃ'
—ಪ್ರಾಕೃತಸಂಜೀವಿನಿ.

(iii) 'ಪ್ರಕೃತಿಃ ಸಂಸ್ಕೃತಂ; ತತ್ರ ಭವಂ ಪ್ರಾಕೃತಮುಚ್ಯತೇ'
—ಪ್ರಾಕೃತ ಸರ್ವಸ್ವ.

(iv) 'ಪ್ರಕೃತಿಃ ಸಂಸ್ಕೃತಂ ತತ್ರ ಭವಂ ತದಾಗತಂ ವಾ ಪ್ರಾಕೃತಮ್'
—ಹೇಮಚಂದ್ರನ ಪ್ರಾಕೃತವ್ಯಾಕರಣ.

(v) 'ಸಕಲ ಜಗಜ್ಜನ್ತೂನಾಂ ವ್ಯಾಕರಣಾದಿಭಿರನಾಹಿತಸಂಸ್ಕಾರಃ ಸಹಜೋ ವಚನವ್ಯಾಪಾರಃ ಪ್ರಕೃತಿಃ, ತತ್ರ ಭವಂ ಸೈವ ವಾ ಪ್ರಾಕೃತಮ್'
—ನಮಿಸಾಧುವಿನ ರುದ್ರಟಾಲಂಕಾರಟೀಕೆ.

(vi) 'ಬಾಲಸ್ತ್ರೀಮಂದಮೂರ್ಖಾಣಾಂ ನೃಣಾಂ ಚಾರಿತ್ರ್ಯಕಾಂಕ್ಷಿಣಾಂ ।
ಅನುಗ್ರಹಾರ್ಥಂ ತತ್ತ್ವಜ್ಞೈಃ ಸಿದ್ಧಾಂತಃ ಪ್ರಾಕೃತಃ ಕೃತಃ ॥'
—ಹೇಮಚಂದ್ರನ ಕಾವ್ಯಾನುಶಾಸನಟೀಕೆಯಲ್ಲಿ ಉದಾಹೃತ.

4. ಸುಂದರಕಾಂಡ, ಸರ್ಗ ೩೦, ಶ್ಲೋಕ ೧೭–೧೮

ಸ್ಪಷ್ಟವಾಗಿ ದೇವವಾಣಿಗೇ ಸಂಸ್ಕೃತವೆಂದು ಹೆಸರೆಂಬುದನ್ನು ತಿಳಿಸುವುದಲ್ಲದೆ ತಜ್ಜನ್ಯವಾದ ಪ್ರಾಕೃತದ ಪರಿಗಳು ಅನೇಕವೆಂದು ಹೇಳುತ್ತಾನೆ.

ಯಾವ ಶಿಷ್ಟಭಾಷೆಗೆ ಪಾಣಿನಿಯು (ಸುಮಾರು) ಕ್ರಿ. ಪೂ. ೪ ನೆಯ ಶತಮಾನದ ಹೊತ್ತಿಗೆ ಸಮಗ್ರ ವ್ಯಾಕರಣವನ್ನು ರಚಿಸಿದನೋ ಅದರಲ್ಲಿ ಲೌಕಿಕ ಸಾಹಿತ್ಯದ ವ್ಯವಸಾಯವು ಎಷ್ಟು ನಡೆದಿತ್ತೆಂದು ನಿರ್ಣಯಿಸುವುದು ಇಂದು ಕಷ್ಟವಾಗಿದೆ. ಏಕೆಂದರೆ ಅವನು ಆಡುನುಡಿಯ ಪ್ರಯೋಗಗಳನ್ನು ಕುರಿತು ಸಂಕ್ಷಿಪ್ತ ಸೂತ್ರಗಳನ್ನು ಬರೆದನೇ ಹೊರತು ಲೌಕಿಕ ಕವಿ ಪ್ರಯೋಗಗಳ ಗೋಜಿಗೆ ಹೋಗಲಿಲ್ಲ. ರಾಮಾಯಣ ಮಹಾಭಾರತಗಳ ಮೂಲ ಸಾಮಗ್ರಿಗಳಾದ ಆಖ್ಯಾನಗಳೂ ವೀರಗಾಥೆಗಳೂ ಅವನಿಗಿಂತ ಹಿಂದೆಯೇ ಇದ್ದಿರಬೇಕು; ಅವುಗಳಲ್ಲಿ 'ಅಪಾಣಿನೀಯ'ವಾಗುವ ಪ್ರಯೋಗಗಳನ್ನು ಬೇಕಾದಂತೆ ಕಾಣಬಹುದು. ಇವುಗಳಲ್ಲದೆ ವೇದಾಧ್ಯಯನಕ್ಕೆ ಸಹಕಾರಿಗಳಾಗಿದ್ದ ಶಿಕ್ಷಾದಿ ವೇದಾಂಗಗಳಲ್ಲೂ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಆನ್ವೀಕ್ಷಿಕೀ, (ತರ್ಕ), ನಾಟ್ಯಶಾಸ್ತ್ರ, ಮುಂತಾದ ಶಾಖೆಗಳಲ್ಲೂ ಪ್ರಥಮ ಕೃತಿಗಳು ಆಗಲೇ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದಿರಬಹುದೆಂದು ತೋರುತ್ತದೆ. ಆದರೆ ಇವೆಲ್ಲವೂ ಇಂದು ಬಹುಮಟ್ಟಿಗೆ ಲುಪ್ತವಾಗಿವೆ. 'ಭಿಕ್ಷುಸೂತ್ರ'ಗಳೂ 'ನಟಸೂತ್ರ'ಗಳೂ ಇದ್ದುವೆಂದು ಪಾಣಿನಿಯು ಬಾಯಿಬಿಟ್ಟು ಹೇಳುವುದಲ್ಲದೆ 'ಭಾರತ'ವನ್ನೂ ನಿರ್ದೇಶಿಸುತ್ತಾನೆ.[5] ಪಾಣಿನಿಯೇ 'ಜಾಂಬವತೀವಿಜಯ' ಎಂಬ ಕಾವ್ಯವೊಂದನ್ನು ಬರೆದನೆಂಬ ಪ್ರತೀತಿಯುಂಟು. ಹಾಗೆಯೇ 'ವಾರರುಚಕಾವ್ಯ' 'ಉಭಯಾಭಿಸಾರಿಕಾಭಾಣ'ಗಳನ್ನು ವಾರ್ತಿಕಕಾರನಾದ ವರರುಚಿ ( = ಕಾತ್ಯಾಯನ) ಬರೆದನೆಂದು ಹೇಳುವುದುಂಟು. ಇವನು ತನ್ನ ಕಾಲದಹೊತ್ತಿಗೆ (ಸು. ಕ್ರಿ. ಪೂ. ೩ ನೆಯ ಶತಮಾನ) ಶಿಷ್ಟಭಾಷೆಯಲ್ಲಿ ಬಂದೊದಗಿದ ಬೆಳವಣಿಗೆ ಅಥವಾ ಬದಲಾವಣೆಗಳನ್ನು ಗಮನಿಸಿ ಪಾಣಿನಿಯ ಸೂತ್ರಗಳಿಗೆ ತಿದ್ದುಪಡಿಗಳನ್ನು ಸೂಚಿಸಿದ್ದಾನೆ. ಇದರಿಂದಲೂ ಸಂಸ್ಕೃತ ಭಾಷೆಯು ಬೆಳೆಯುತ್ತ ಜೀವಂತ

---

5. ಅಷ್ಟಾಧ್ಯಾಯೀ ಸೂತ್ರ, iv. iii. 110-111 ಮತ್ತು vi. ii. 38. ಸಂಸ್ಕೃತವು ಆಡುನುಡಿಯಾಗಿತ್ತೇ ಇಲ್ಲವೆ ಎಂಬ ಪ್ರಶ್ನೆಯ ಚರ್ಚೆಗೆ J. R. A. S 1906 ನ್ನು ನೋಡಿ.

ವಾಗಿದ್ದ ಭಾಷೆಯಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಇವನು ಕೂಡ ಪಾಣಿನಿಯ ಸೂತ್ರಶೈಲಿಯನ್ನೇ ಅನುಸರಿಸುವುದರಿಂದ ಕಾವ್ಯಕ್ಷೇತ್ರದ ಕಲ್ಪನೆ ಬರುವಂತಿಲ್ಲ. ಆದರೆ ಸುಮಾರು ಕ್ರಿ. ಪೂ. ೭ನೆಯ ಶತಮಾನದಲ್ಲಿ ಸೂತ್ರ ವಾರ್ತಿಕಗಳ ಮೇಲೆ ಅಭೂತಪೂರ್ವವಾದ ವಿಸ್ತೃತ 'ಮಹಾಭಾಷ್ಯ'ವನ್ನು ಬರೆದ ಪತಂಜಲಿಯು ಪ್ರಾಸಂಗಿಕವಾಗಿ ಲೌಕಿಕ ಸಂಸ್ಕೃತ ಕಾವ್ಯದಿಂದ ನುಡಿಮುತ್ತುಗಳನ್ನು ಉದಾಹರಿಸುತ್ತಾನೆ.

**'ಸಾ ಹಿ ತಸ್ಯ ಧನಕ್ರೀತಾ ಪ್ರಾಣೇಭ್ಯೋಽಪಿ ಗರೀಯಸೀ'**
**' ವರತನು ಸಂಪ್ರವದನ್ತಿ ಕುಕ್ಕುಟಾಃ'**
**'ಯಸ್ಮಿನ್ ದಶ ಸಹಸ್ರಾಣಿ ಪುತ್ರೇ ಜಾತೇ ಗವಾಂ ದದೌ।**
**ಬ್ರಾಹ್ಮಣೇಭ್ಯಃ ಪ್ರಿಯಾಖ್ಯೇಭ್ಯಃ ಸೋಽಯಮುಂಛೇನ ಜೀವತಿ'॥**

ಇವುಗಳ ಮೇಲಿಂದ ಸಂಸ್ಕೃತದಲ್ಲಿ ಲೌಕಿಕ ಕಾವ್ಯಗಳು ವಿವಿಧ ವೃತ್ತಗಳಲ್ಲಿ ರಚಿತವಾಗುತ್ತಿದ್ದುದು, ವ್ಯಕ್ತವಾಗುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರ. (ಸು. ಕ್ರಿ. ಪೂ. ೪ನೆಯ ಶತಮಾನ) ಮನುಸ್ಮೃತಿ, ನಾಟ್ಯಶಾಸ್ತ್ರ ಮುಂತಾದ ಪ್ರಾಚೀನ ಗ್ರಂಥಗಳೂ ಈ ಅಂಶವನ್ನೇ ಪುಷ್ಟೀಕರಿಸುತ್ತವೆ. ಪ್ರಾಚೀನವಾದ ಪಿಂಗಲನ ಛಂದಶ್ಶಾಸ್ತ್ರವೂ ಇದನ್ನೇ ತೋರಿಸುತ್ತದೆ. ವೃತ್ತಗಳಿಗಿಟ್ಟ 'ಮಂಜುಭಾಷಿಣಿ', 'ವಸಂತತಿಲಕಾ', 'ಮಾಲಿನೀ', 'ಶಿಖರಿಣೀ', 'ಸ್ರಗ್ಧರಾ' ಮುಂತಾದ ಮುದ್ದು ಹೆಸರುಗಳೇ ಅಂದಿನವರ ಕಾವ್ಯಾಭಿರುಚಿಯ ಹಾಗು ಸೌಂದರ್ಯ ದೃಷ್ಟಿಯ ದ್ಯೋತಕಗಳಾಗಿವೆ.

ಪಾಣಿನಿ, ವರರುಚಿ, ಪತಂಜಲಿ, ಈ ಮುನಿತ್ರಯದ ಪ್ರಯತ್ನದ ಪರಿಣಾಮವಾಗಿ ಶಿಷ್ಟಭಾಷೆಗೊಂದು ಸಾರ್ವಕಾಲಿಕವಾದ ನಿಯತತ್ವವುಂಟಾಯಿತು. ಕಾಲ ಪ್ರವಾಹವನ್ನು ತಡೆಗಟ್ಟಲು ಅವರು ಕಟ್ಟಿದ ಕಟ್ಟೆಯು ಎಷ್ಟು ಗಟ್ಟಿಯಾಗಿದೆಯೆನ್ನಲು ಈಗಾಗಲೇ ಉರುಳಿರುವ ಎರಡೂವರೆ ಸಾವಿರ ವರ್ಷಗಳೇ ಸಾಕ್ಷಿ. ಆಸೇತು ಹಿಮಾಚಲ ಪರ್ಯಂತವೂ ಸಂಸ್ಕೃತವು ಒಂದೇ ಆಯಿತು, ಲಕ್ಷಾಂತರ ಕವಿಗಳ, ಪಂಡಿತರ, ತತ್ವಜ್ಞಾನಿಗಳ ಆಶ್ರಯವಾಯಿತು. ಇಂದೂ ಸಂಸ್ಕೃತವನ್ನು ಆಡುನುಡಿಯಂತೆ ಬಳಸಬಲ್ಲ ವಿದ್ವಾಂಸರು

ನಮ್ಮ ನಾಡಿನಲ್ಲಿರುವಾಗ ಇದನ್ನು 'ಮೃತಭಾಷೆ' ಎಂದು ಕುಂದಿಡುವುದು ಸರಿಯಲ್ಲ ಸಂಸ್ಕೃತ ಕಾವ್ಯದ ಇತಿಹಾಸವೆಂದರೆ ಭಾರತದ ಸಂಸ್ಕೃತಿಯ ಇತಿಹಾಸವೇ ಸರಿ. ಕಲೆ, ವಿಜ್ಞಾನ, ಧರ್ಮ, ನೀತಿ, ತತ್ತ್ವಜ್ಞಾನ, ಮುಂತಾದ ಸಂಸ್ಕೃತಿಯ ಸರ್ವಾಂಗಗಳಲ್ಲಿಯೂ, ಜಾತಿಭೇದವಿಲ್ಲದೆ ಸರ್ವರ ಅಭಿಪ್ರಾಯಗಳ ಅಭಿವ್ಯಕ್ತಿಗೂ ಸಂಸ್ಕೃತ ಭಾಷೆಯು ಸುಂದರ ಸಾಧನವಾಗಿ ನಿಂತಿದೆ. ಅದಕ್ಕೆ ರಾಷ್ಟ್ರಭಾಷೆಯೆಂಬ ಗೌರವವು ಈ ಭಾರತದಲ್ಲೆಲ್ಲ ಈ ಎರಡು ಸಾವಿರ ವರ್ಷಗಳಿಂದಲೂ ಸಂದೇ ಇದೆ. ಅದನ್ನು ಪೂಜಿಸದ ರಾಜನಿಲ್ಲ, ಅದನ್ನು ತಿರಸ್ಕರಿಸಿದ ವಿಧರ್ಮಿಯೂ ಇಲ್ಲ. ಅದನ್ನು ಆದರಿಸದ ಕವಿಯಿಲ್ಲ; ಅದನ್ನು ಆಶ್ರಯಿಸದ ಪಂಡಿತನೂ ಇಲ್ಲ ಅದು ಕ್ರಮವಾಗಿ ಪ್ರಾಕೃತ, ಅಪಭ್ರಂಶ, ಆಧುನಿಕ ಆರ್ಯಭಾಷೆಗಳು, ಎಲ್ಲವುಗಳ ಮಾತೆಯಷ್ಟೇ ಅಲ್ಲ, ಮಾರ್ಗದರ್ಶಿನಿಯೂ ಆಗಿದೆ. ಸಂಸ್ಕೃತ ಜನ್ಯವಲ್ಲದ ಭಾಷೆಗಳಲ್ಲೂ ಅದರ ಪ್ರಭಾವಮುದ್ರೆ ಅಚ್ಚಳಿಯದಂತೆ ಬಿದ್ದಿದೆ ಸಂಸ್ಕೃತದ ಪರಿಚಯವು ಭಾರತದ ಅಂತಸ್ಸತ್ತ್ವವನ್ನರಿಯಬಯಸುವವರಿಗೆ ಅವಶ್ಯವೆಂದೂ ಇಂದಿನ ಭಾಷೆಗಳ ಅಭಿವೃದ್ಧಿಗೆ ಅನಿವಾರ್ಯವೆಂದೂ ಹೇಳಿ ತೋರಿಸಬೇಕಾಗಿಲ್ಲ. ಭಾರತವರ್ಷವಿರಲಿ, ದೂರದ ಸಾಗರೋತ್ತರ ಪ್ರದೇಶಗಳಾದ ಜಾವಾ, ಸುಮಾತ್ರಾ, ಬಲಿ, ಹಿಂದೂಚೀಣ, ಬರ್ಮಾ, ಸಿಂಹಳ, ಮಧ್ಯ ಏಷಿಯಾಗಳಲ್ಲಿಯೂ ಸಂಸ್ಕೃತದ ಪ್ರಭಾವವನ್ನು ಇಂದಿಗೂ ನೋಡಬಹುದಾಗಿದೆ.

ಸಂಸ್ಕೃತವೂ ಪ್ರಾಕೃತವೂ ಆಡುನುಡಿಗಳಾಗಿದ್ದಾಗ ಕ್ರಿಸ್ತಪೂರ್ವದ ರಾಜರು ತಮ್ಮ ತಮ್ಮ ಅಭಿರುಚಿಗನುಸಾರವಾಗಿ ಯಾವರೀತಿ ಪುರಸ್ಕಾರವೀಯುತ್ತಿದ್ದರೆಂಬುದನ್ನು ತೋರಿಸುವ ಕೆಲವು ಆಖ್ಯಾಯಿಕೆಗಳು ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ಬರುತ್ತವೆ. ಮಗಧ ರಾಜನಾದ ಶಿಶುನಾಗನು ಉಚ್ಚಾರಣೆಗೆ ಕಷ್ಟವಾದ ಟ, ಠ, ಢ, ಣ, ಶ, ಷ, ಸ, ಕ್ಷ, ಈ ಅಕ್ಷರಗಳಿಲ್ಲದ ಮಾತುಗಳನ್ನು ಮಾತ್ರ ಆಡುವಂತೆ ತನ್ನ ಅಂತಃಪುರದಲ್ಲಿ ಕಟ್ಟುಮಾಡಿದ್ದನಂತೆ. ಹಾಗೆಯೇ ಶೂರಸೇನ ರಾಜನಾದ ಕುವಿಂದನು ಪರುಷಾಕ್ಷರಗಳೂ ಸಂಯುಕ್ತಾಕ್ಷರಗಳೂ ಅಂತಃಪುರದಲ್ಲಿ ಪ್ರಯುಕ್ತವಾಗಕೂಡದೆಂದು ವಿಧಿಸಿದ್ದನಂತೆ. ಉಜ್ಜಯಿನಿಯ ಅರಸನಾದ ಸಾಹಸಾಂಕನು ಅಂತಃಪುರದಲ್ಲಿ ಸಂಸ್ಕೃತವನ್ನು ಮಾತ್ರ ಆಡಲು ಅನುಮತಿಯಿತ್ತಿದ್ದನಂತೆ. ಅದೇರೀತಿ ಕುಂತಲೇಶ್ವರನಾದ ಸಾತವಾಹನನ ಅಂತಃಪುರದಲ್ಲಿ ಕೇವಲ ಪ್ರಾಕೃತಭಾಷೆಗೆ

ಮಾತ್ರ ಆಸ್ಪದವಿದ್ದಿತಂತೆ.[6] ಇದನ್ನೇ ಸೂಚಿಸುವ ಒಂದು ಶ್ಲೋಕವು ಭೋಜನಸರಸ್ವತೀ ಕಂಠಾಭರಣದಲ್ಲಿಯೂ[7] ದೊರೆಯುತ್ತದೆ —

**ಕೇಽಭೂವನ್ನಾಢ್ಯರಾಜಸ್ಯ ರಾಜ್ಯೇ ಪ್ರಾಕೃತಭಾಷಿಣಃ ।**
**ಕಾಲೇ ಶ್ರೀ ಸಾಹಸಾಂಕಸ್ಯ ಕೇ ನ ಸಂಸ್ಕೃತವಾದಿನಃ ॥**

## ೨. ಸಂಸ್ಕೃತ ಕಾವ್ಯದ ಸೆಲೆ-ನೆಲೆಗಳು :-

ಕ್ರಿಸ್ತಶಕಕ್ಕೂ ಪೂರ್ವದಲ್ಲಿಯೇ ಸಂಸ್ಕೃತ ಭಾಷೆಯು ಕಾವ್ಯ ಶಾಸ್ತ್ರಗಳೆರಡರಲ್ಲೂ ಸಮೃದ್ಧವಾಗಿತ್ತೆನ್ನುವುದು ಸ್ಪಷ್ಟವಾಗಿದೆ. ಕಾವ್ಯದಲ್ಲಿ ಒಂದು ಕಡೆ ವಾಲ್ಮೀಕಿ ಮತ್ತು ವ್ಯಾಸರ ಪುರಾತನ ಮಹಾಕಾವ್ಯಗಳೂ, (Epic)[8] ಇನ್ನೊಂದು ಕಡೆ ಚಮತ್ಕಾರ ಪೂರ್ಣವಾದ ಪರಿಷ್ಕೃತ ಕಾವ್ಯ ನಾಟಕಾದಿಗಳೂ ಆಗಲೇ ಅಸ್ತಿತ್ವದಲ್ಲಿದ್ದುವು. ಮೊದಲನೆಯ ಜಾತಿಗೆ ಪ್ರೇರಣೆಬಂದುದು ಋಷಿಗಳ ದರ್ಶನದಿಂದ, ಎರಡನೆಯದಕ್ಕೆ ಸೌಂದರ್ಯೋಪಾಸನೆಯಿಂದ. ರಾಮಾಯಣ ಮಹಾಭಾರತಗಳು ವಿಸ್ತಾರದಲ್ಲಿ ಮತ್ತು ಮಹತ್ವದಲ್ಲಿ, ಗಗನ

---

6 ಕಾವ್ಯಮೀಮಾಂಸೆ, ಪು ೨೦

7. II. 15.

8. ಪುರಾಣ, ಇತಿಹಾಸಗಳನ್ನೂ ಈ ಜಾತಿಯಲ್ಲೇ ಸೇರಿಸಬಹುದು. ಪುರಾಣದಲ್ಲಿ ನೀತಿಬೋಧಕ ಕಾಲ್ಪನಿಕ ಕಥೆಗಳು ಹೆಚ್ಚು; ಇತಿಹಾಸಗಳಲ್ಲಿ ಮೂಲಸೂತ್ರವು ಐತಿಹಾಸಿಕ, ಇಷ್ಟೇ ವ್ಯತ್ಯಾಸ. ಆದರೆ ಎಲ್ಲವೂ ಹೆಚ್ಚುಕಡಿಮೆ ಭೂಗೋಲ, ವಿಜ್ಞಾನ, ಆಚಾರ, ವ್ಯವಹಾರ ಮುಂತಾದುವನ್ನೆಲ್ಲ ಒಳಗೊಳ್ಳುವ ಪ್ರಾಚೀನಕಾಲದ ವಿಶ್ವಕೋಶಗಳೆನ್ನಬಹುದು. ಅಲ್ಲಲ್ಲಿ ಕಾವ್ಯಗುಣಗಳು ಮಿನುಗಿದರೂ ಅವುಗಳಲ್ಲೇ ತಾತ್ಪರ್ಯವಿದೆಯೆನ್ನಬರುವಂತಿಲ್ಲ ಪುರಾಣದ ಲಕ್ಷಣ —

'ಸರ್ಗಃ ಪ್ರತಿಸಂಹಾರಃ ಕಲ್ಪೋ ಮನ್ವನ್ತರಾಣಿ ವಂಶವಿಧಿಃ ।
ಜಗತೋ ಯತ್ರ ನಿಬದ್ಧಂ ತದ್ವಿಜ್ಞೇಯಂ ಪುರಾಣಮಿತಿ ॥'

(ಕಾವ್ಯಮೀಮಾಂಸೆ ಪುಟ 3 ರಲ್ಲಿ ಉದಾಹೃತ)

ಇತಿಹಾಸವು ಎರಡು ಬಗೆ— ೧. ಪರಿಕ್ರಿಯಾ; ೨ ಪುರಾಕಲ್ಪ —

'ಪರಿಕ್ರಿಯಾ ಪುರಾಕಲ್ಪ ಇತಿಹಾಸಗತಿರ್ದ್ವಿಧಾ ।
ಸ್ಯಾದೇಕನಾಯಕಾ ಪೂರ್ವಾ ದ್ವಿತೀಯಾ ಬಹುನಾಯಕಾ ॥' (ಅಲ್ಲಿಯೇ)

ಅಥವಾ ಸಾಗರದಂತೆ ನಿರುಪಮವಾದುವು. ' ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ' ಎಂಬಂತೆ ಅವಕ್ಕೆ ಅವೇ ಹೋಲಿಕೆ. ಅವುಗಳಲ್ಲಿ ಶೈಲಿ ಸರಳ, ವಕ್ರತೆ ವಿರಳ. ವಿಷಯದ ಮಹತ್ವದಿಂದ, ನಿರೂಪಣೆಯ ಭವ್ಯತೆ ಯಿಂದ, ಮಾನವ ಜೀವನದ ಸರ್ವತೋಮುಖ ದರ್ಶನದಿಂದ ಅವುಗಳ ಮೇಲ್ಮೆಯನ್ನು ಮುಂದಿನ ಕಾವ್ಯಕಾರರೆಲ್ಲರೂ ಮುಕ್ತಕಂಠದಿಂದ ಒಪ್ಪುತ್ತಾರೆ. ಆ ಅಪಾರ ಸಾಗರದ ಒಂದೊಂದು ಬಿಂದುವನ್ನೇ ಆರಿಸಿಕೊಂಡು ಮುಂದಿ ನವರು ತಮ್ಮ ಕಾವ್ಯಕೌಶಲವನ್ನು ತೋರಿಸಲು ಹವಣಿಸುತ್ತಾರೆ. ಪುರಾತನ ಅಥವಾ ಆರ್ಷ ಮಹಾಕಾವ್ಯಗಳಿಗೂ ಮುಂದೆ ಕಾಳಿದಾಸಾದಿಗಳು ರಚಿಸಿದ ಪರಿಷ್ಕೃತ ಮಹಾಕಾವ್ಯಗಳಿಗೂ ಮುಖ್ಯವಾಗಿ ಎರಡು ಭೇದಗಳನ್ನು ಗಮ ನಿಸಬೇಕು. ಒಂದು ವ್ಯಾಪ್ತಿಯಲ್ಲಿ, ಇನ್ನೊಂದು ಕಲಾತಂತ್ರದಲ್ಲಿ. ಮುಂದಿನ ಸಂಸ್ಕೃತ ಕಾವ್ಯಗಳ ವ್ಯಾಪ್ತಿ ಆರ್ಷಕಾವ್ಯಗಳಂತೆ ಅಮಿತವಲ್ಲ, ಪರಿಮಿತ. ಹೀಗೆ ವ್ಯಾಪ್ತಿಯಲ್ಲಿ ಸಂಕೋಚವಾದಂತೆ ಕಲಾದೃಷ್ಟಿಯಲ್ಲಿ ವಿಸ್ತಾರವೂ ಒದಗಿತು. ಒಂದೊಂದು ಶಬ್ದವನ್ನೂ ಅರ್ಥವನ್ನೂ ಸುಂದರತರವಾಗಿ ಮಾಡ ಬೇಕೆಂಬ ದೃಷ್ಟಿಯು ಕವಿಗಳಲ್ಲಿ ಬೆಳೆಯಲು ರಾಜಸಭೆಗಳೂ ಅಲ್ಲಿ ನಡೆಯು ತ್ತಿದ್ದ ಕವಿತ್ವ ಸ್ಪರ್ಧೆಗಳೂ ಬಹಳಮಟ್ಟಿಗೆ ಕಾರಣವಾಗಿರಬೇಕು. ಪ್ರಶಾಂತ ತಪೋವನಗಳಲ್ಲಿ ವಿರಾಮದಿಂದ ಬರೆಯುತ್ತಿದ್ದ ಋಷಿಗಳ ದೃಷ್ಟಿಗೂ ರಾಜ ಮಂದಿರಗಳ ವಿಲಾಸಗೋಷ್ಠಿಗಳಲ್ಲಿ ಚಿತ್ತಾಕರ್ಷಕವಾಗುವಂತೆ ಬರೆಯುವ ಕವಿಗಳ ದೃಷ್ಟಿಗೂ ಸಹಜವಾಗಿಯೇ ವ್ಯತ್ಯಾಸ ಬಂದಿತು. ಹೀಗೆ ರಾಜಾ ಸ್ಥಾನಗಳ ನೂತನ ಕಾವ್ಯ ಸಂಪ್ರದಾಯವೇ ಪ್ರಾರಂಭವಾಯಿತೆಂದೂ ಹೇಳ ಬಹುದು. ಆದರೆ ಎಲ್ಲಕ್ಕಿಂತ ಮುಖ್ಯವಾಗಿ ಜನಜೀವನದಲ್ಲುಂಟಾದ ಪರಿ ವರ್ತನದ ಪ್ರಭಾವವೇ ಸಂಸ್ಕೃತ ಪರಿಷ್ಕೃತ ಕಾವ್ಯಗಳಲ್ಲಿ ಕಾಣುವುದೆಂದು ಹೇಳುವುದು ಯುಕ್ತ. ಆರ್ಯರ ತಪೋವನದ ಸಂಸ್ಕೃತಿಯ ಕುಸುಮಗಳೇ ಆರ್ಷಕಾವ್ಯಗಳಾದರೆ, ವಿಲಾಸಕೇಂದ್ರಗಳಾಗಿದ್ದ ನಗರಗಳ ಬಹುಮುಖ ಜೀವನದ ಪ್ರತಿಬಿಂಬಗಳೇ ಸಂಸ್ಕೃತ ಕಾವ್ಯದ ಬೇರೆ ಬೇರೆ ಪ್ರಕಾರಗಳು. ಧರ್ಮವೇ ಮುಖ್ಯ ಪುರುಷಾರ್ಥವೆಂಬುದು ಆದರ್ಶಪ್ರಾಯವಾಗಿ ಉಳಿದು, ಕಾಮ, ಅರ್ಥಗಳಲ್ಲಿ ನಿತ್ಯಾಸಕ್ತರಾದ ಜನರು ಮನೋವಿನೋದಕ್ಕಾಗಿ ಆಶ್ರ ಯಿಸುತ್ತಿದ್ದ ಕಲೆಯೇ ಕಾವ್ಯಕಲೆಯೆಂದು ಧಾರ್ಮಿಕರು ಹೇಳುವಂತಹ ಪ್ರಸಂಗವೂ ಆರಂಭಕಾಲದಲ್ಲಿ ಬಂದಂತೆ ಕಾಣುತ್ತದೆ. ನಿಷ್ಠುರ ವೈದಿಕ

ಮಾರ್ಗಾನುಯಾಯಿಗಳು "ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂದು ಕಾವ್ಯವನ್ನೆಲ್ಲ ನಿಷೇಧಮಾಡುತ್ತಿದ್ದರೆಂಬುದನ್ನು ಕಾವ್ಯಲಕ್ಷಣಕಾರರೇ ತಿಳಿಸಿದ್ದಾರೆ.[9] ಹೀಗೆ ಆರಂಭದಲ್ಲಿ ಅನೀತಿ ಪ್ರಚೋದಕವೆಂಬ ಅಪಪ್ರಥೆ ಬಂದರೂ ಸ್ವಲ್ಪ ಕಾಲದಲ್ಲಿಯೇ ಅದು ದೂರವಾಗುವಂತೆ ಮಹಾಕವಿಗಳು ನೋಡಿಕೊಂಡರು. ಕಾವ್ಯವು ಕಾಮಪ್ರಚೋದನೆಗೆ ಮಾತ್ರ ಮೀಸಲಲ್ಲವೆಂದೂ, ಕಾಮದಂತೆ ಧರ್ಮ, ಅರ್ಥ, ಮೋಕ್ಷ, ಎಲ್ಲ ಪುರುಷಾರ್ಥಗಳಿಗೂ ಅದರಲ್ಲಿ ಯೋಗ್ಯಸ್ಥಾನವುಂಟೆಂದೂ ತೋರಿಸುವ ಕೃತಿರತ್ನಗಳನ್ನು ಬರೆದರು. ರಸವೆಂದರೆ ಶೃಂಗಾರವೊಂದೇ ಎಂಬ ತತ್ವವನ್ನು ತಿರಸ್ಕರಿಸಿ ನವರಸಗಳಿಗೂ ಕಾವ್ಯದಲ್ಲಿ ಎಡೆಯಿತ್ತರು. ಇದಿಷ್ಟೂ ಕಾವ್ಯಾರ್ಥದಲ್ಲಿ ಒದಗಿದ ಬದಲಾವಣೆಗಳು. ಹಾಗೆಯೇ ಕಾವ್ಯಮಾರ್ಗ ಅಥವಾ ಶೈಲಿಯಲ್ಲಿಯೂ ಮನಸ್ಸನ್ನು ತಟ್ಟನೆ ಸೆಳೆಯುವ ಅಲಂಕಾರಗಳ ಪ್ರಯೋಗವು ಕಾಲಾನುಕಾಲಕ್ಕೆ ಹೆಚ್ಚುತ್ತ ಹೋಗಿ ವಿಶ್ವವನ್ನೇ ಬೆರಗುಗೊಳಿಸುವಂತಹ ಕಾವ್ಯಗಳು ಹುಟ್ಟಿದವು. ಆದರೆ ಸ್ಫೂರ್ತಿಯ ಸಲೆಗಳು ಒಣಗಿ ಕೇವಲ ಕೃತ್ರಿಮ ಶಬ್ದಾಡಂಬರಕ್ಕೆ ಬೆಲೆ ಬರುವ ಇಳಿಗಾಲವೂ ಒಂದು ಬಂದಿತು. ಪ್ರತಿಭೆಯ ದಿಕ್ಸೂಚನೆಗಾಗಿದ್ದ ಅಲಂಕಾರಗಳು ಪಾಂಡಿತ್ಯದ ಕಸರತ್ತಿನ ಸಲಕರಣೆಗಳಾದಾಗ, ಕಾವ್ಯದ ಮುಖ್ಯಗುಣವಾದ ಭಾವಾಭಿವ್ಯಕ್ತಿಯೇ ಮರೆಯಾಗುತ್ತ ಬಂದಿತು. ಇದು ಸಂಕ್ಷಿಪ್ತವಾಗಿ ಸಂಸ್ಕೃತ ಕಾವ್ಯವಾಹಿನಿಯ ಸಿಂಹಾವಲೋಕನ. ಮುಂದಿನ ಅಧ್ಯಾಯಗಳಲ್ಲಿ ವಿಶೇಷಗಳನ್ನು ನಿರ್ದೇಶಿಸಲಾಗುತ್ತದೆ.

ಸಂಸ್ಕೃತ ಸಾಹಿತ್ಯವು ಕೇವಲ ಒಂದು ಪಂಗಡದವರಾದ ಬ್ರಾಹ್ಮಣರ ಆಸ್ತಿಯೆಂಬ ಅಭಿಪ್ರಾಯವನ್ನು ಕೆಲವರು ವ್ಯಕ್ತಪಡಿಸುವುದುಂಟು. ಇದು ಸರ್ವಥಾ ತಪ್ಪು ಕಲ್ಪನೆ. ಹಿಂದೆ ವೇದಾಧಿಕಾರ ದ್ವಿಜರಿಗೆ ಮಾತ್ರವೇ ಇದ್ದುದು ನಿಜ. ಆದರೆ 'ವೇದಾಭ್ಯಾಸ ಜಡ' ರಿಗೂ ಕಾವ್ಯ ಸಂವರ್ಧನೆಗೂ ಬಹಳ ದೂರ. ಪ್ರಾಕೃತ ಸಾಹಿತ್ಯದ ಬಹುಭಾಗವೆಲ್ಲ ಜನಪದ ಸಾಹಿತ್ಯ. ಅದರ ಪ್ರಚೋದನೆಯಿಂದ ಸಂಸ್ಕೃತದಲ್ಲೂ ಲೌಕಿಕ ಸಾಹಿತ್ಯವು ತಲೆದೋರಿದಂತೆ ಕಾಣುತ್ತದೆ. ಬೌದ್ಧ, ಜೈನ ಮುಂತಾದ ಧರ್ಮಗಳನ್ನೊಪ್ಪಿದವರು

9. ವಿದ್ಯಾಧರನ 'ಏಕಾವಲೀ' I ; ಮತ್ತು ಮಲ್ಲಿನಾಥನ 'ತರಲಾ' ಟೀಕೆ.

ಕೂಡ ಸಂಸ್ಕೃತದಲ್ಲೇ ತಮ್ಮ ಅಮರ ಕೃತಿಗಳನ್ನು ಬರೆದುದು ಹಾಗಿರಲಿ, ಶಕ, ಹೂಣ, ಮುಂತಾದ ಮ್ಲೇಚ್ಛರು ಕೂಡ ಸಂಸ್ಕೃತದಲ್ಲಿ ಬರೆದ ಶಾಸನಗಳ ಹಾಗು ಗ್ರಂಥಗಳ ಉದಾಹರಣೆಗಳು ಸಿಕ್ಕುತ್ತವೆ. ಸಂಸ್ಕೃತದ ಕವಿಗಳ ಮಾಲೆಯಲ್ಲಿ ಮಾತಂಗ (=ಹರಿಜನ) ಕುವಿಂದ (=ನೆಯ್ಗೆಯವ) ಹಸ್ತಿಪಕ (=ಮಾವಟಿಗ) ಮುಂತಾದವರಿಗೂ ಸ್ಥಾನವುಂಟು, ಶೀಲಾ, ವಿಜ್ಜಿಕಾ, ಮುಂತಾದ ಸ್ತ್ರೀಯರಿಗೂ ಎಡೆಯುಂಟು. ವೇದದ ಅನುಯಾಯಿಗಳಂತೆ ವೇದನಿಂದಕರಾದ ಚಾರ್ವಾಕರಿಗೂ ಅವಕಾಶವುಂಟು. ಪ್ರಾಚೀನ ಕಾಲದಿಂದಲೂ ಒಪ್ಪುತ್ತ ಬಂದಿರುವ ಚತುಷ್ಷಷ್ಟಿ ಅಥವಾ ಅರವತ್ತು ನಾಲ್ಕು ಕಲೆಗಳಲ್ಲಿ[10] ಕಾವ್ಯ, ಗೀತ, ವಾದ್ಯ, ನೃತ್ಯ, ಚಿತ್ರ, ಅಲಂಕಾರ, ಮುಂತಾದುವುಗಳಂತೆ ದ್ಯೂತ, ಹಸ್ತಲಾಘವ, ಜಲಕ್ರೀಡೆ ಮುಂತಾದುವುಗಳೂ ಸೇರುತ್ತವೆ. ಇವೆಲ್ಲಕ್ಕೂ ಸಂಸ್ಕೃತ ಕಾವ್ಯದಲ್ಲಿ ಸಮಾನ ಸ್ಥಾನವುಂಟು. ಇವು ಪಕ್ಷಪಂಗಡಗಳಲ್ಲಿ ಪಕ್ಷಪಾತವನ್ನು ತೋರುವ ಪ್ರಸಕ್ತಿಯೇ ಬರುವುದಿಲ್ಲ, ಮಾನವಕುಲಕ್ಕೇ ಸಾಧಾರಣವಾದ ಮನೋವೃತ್ತಿಗಳನ್ನು ಅವಲಂಬಿಸಿರುವುದರಿಂದ.

**೩. ಸಂಸ್ಕೃತ ಕಾವ್ಯದ ಗೊತ್ತು-ಗುರಿಗಳು** :-ಕಾವ್ಯದ ಬಗೆಗೆ ಪ್ರಾಚೀನ ಲಾಕ್ಷಣಿಕರು ಆಳವಾಗಿ ವಿಮರ್ಶೆಮಾಡಿ ಸಿದ್ಧಾಂತಿಸಿರುವ ಅಂಶಗಳನ್ನು ಈಗ ಗಮನಿಸಬಹುದು —

1. ಮಾನವನ ಜೀವನವು ಸಾರ್ಥಕವಾಗುವಂತೆ ಯೋಗ್ಯ **ಉಪದೇಶವನ್ನು** ಕೊಡುವುದೇ ವೇದ, ಶಾಸ್ತ್ರ, ಪುರಾಣ, ಇತಿಹಾಸ, ಕಾವ್ಯ, ಮುಂತಾದ ಎಲ್ಲವುಗಳಿಗೂ ಪರಮಲಕ್ಷ್ಯ. ಉಪದೇಶ ಮಾಡುವ ಮಾರ್ಗಗಳು ಮಾತ್ರ ಬೇರೆ ಬೇರೆ. ವೇದಶಾಸ್ತ್ರಗಳು ರಾಜಾಜ್ಞೆಗೆ ಸದೃಶವಾದ ಕಟ್ಟಳೆಗಳನ್ನು ವಿಧಿಸಿ ಈ ಕೆಲಸವನ್ನು ಸಾಧಿಸುತ್ತವೆ ಪುರಾಣ ಇತಿಹಾಸಗಳು ಕಥೆಯ ದೃಷ್ಟಾಂತಗಳನ್ನು ಕೊಟ್ಟು ಇದು ಕೃತ್ಯ ಇದು ಅಕೃತ್ಯವೆಂಬುದನ್ನು ಸ್ನೇಹಿತರಂತೆ ತೋರಿಸಿಕೊಡುತ್ತವೆ. ಆದರೆ ಕಾವ್ಯವು ಇದೇ ಕೆಲಸವನ್ನೇ ಹೊಲಬು ತಿಳಿಯದಂತೆ ಗೂಢವಾಗಿ ಮಾಡುತ್ತದೆ. ತನ್ನ ಹಾವ

---

10. ವಾತ್ಸ್ಯಾಯನನ ಕಾಮಸೂತ್ರದಲ್ಲಿ ಇವುಗಳ ಪಟ್ಟಿ ದೊರೆಯುತ್ತದೆ. ಇವುಗಳ ಬಗ್ಗೆ ವಿಶೇಷ ಕುತೂಹಲವುಳ್ಳವರು ಡಾ|| ಎ. ವೆಂಕಟಸುಬ್ಬಯ್ಯನವರ Kalas ಎಂಬ ಪ್ರಬಂಧವನ್ನು ನೋಡಿ.

ಭಾವಗಳಿಂದಲೂ ಸಮಯೋಚಿತ ಚತುರೋಕ್ತಿಗಳಿಂದಲೂ ಕಾಂತೆಯು ಗಂಡನ ಮನಸ್ಸನ್ನು ಬೇಕಾದಕಡೆಗೆ ತಿರುಗಿಸಿಕೊಳ್ಳುವಂತೆ ಕಾವ್ಯವೂ ಕೂಡ ಸರಸ ರಮಣೀಯವಾದ ಶಬ್ದಾರ್ಥಗಳಿಂದ ಮಾನವನನ್ನು ಪರವಶನನ್ನಾಗಿ ಮಾಡಿ ಪರಿಣಾಮದಲ್ಲಿ ನೀತಿಬೋಧೆಯಾಗುವಂತೆ ನೋಡಿಕೊಳ್ಳುತ್ತದೆ. ಆದುದರಿಂದಲೇ ಕಾವ್ಯಕ್ಕೆ " ಕಾಂತಾಸಮ್ಮಿತ " ವೆಂದು ಹೆಸರು. [11] ಈ ದೃಷ್ಟಿಯಿಂದ, ಉತ್ತಮ ಧ್ಯೇಯದ ಅಂತರಗಂಗೆಯಿಲ್ಲದ ರಚನೆಯಾಗಲಿ, ಕುಮಾರ್ಗದ ಕಡೆಗೆಳೆಯುವ ಕೃತಿಯಾಗಲಿ ಕಾವ್ಯವೆಂಬ ಪ್ರತಿಷ್ಠೆಗೆ ಪಾತ್ರವಾಗಲಾರದೆಂಬುದು ಸ್ವತಸ್ಸಿದ್ಧವಾಗುತ್ತದೆ ಅಷ್ಟೇ ಅಲ್ಲ, ಪುರಾಣಾದಿಗಳಂತೆ ನೇರವಾಗಿ ಉಪದೇಶ ಮಾಡಿದರೂ ' ಕಾವ್ಯ ' ವಾಗುವುದಿಲ್ಲವೆನ್ನುವುದೂ ಸ್ಫುಟವಾಗುತ್ತದೆ. ಸಂಸ್ಕೃತ ಕಾವ್ಯವು ಆದರ್ಶವಾದಿ ನಿಜ, ಅದು ಕಲಾಮಯವೆಂಬುದೂ ಅಷ್ಟೇ ನಿಜ.

॥ ಕಾವ್ಯದ ಮುಖ್ಯ ವೈಶಿಷ್ಟ್ಯವೆಂದರೆ ಅದರ ಸರಸ ರಮಣೀಯತೆ, ಉಳಿದೆಲ್ಲ ಅಂಶಗಳೂ ಅದಕ್ಕೆ ಗೌಣ. ಕವೀಶ್ವರರೆಲ್ಲರೂ ರಸಸಿದ್ಧರು[12], ಅಲಂಕಾರ ಪ್ರಪಂಚ ಪ್ರವೀಣರು. ಶಬ್ದಗಳಲ್ಲಿ ಸೌಂದರ್ಯವು ಎಷ್ಟೆಷ್ಟು ರೀತಿಯಿಂದ ಬರಬಹುದೆಂಬುದನ್ನು ಸಾವಿರಾರು ರೀತಿ ಪ್ರಯೋಗ ಮಾಡಿ ನೋಡಿ ಯಮಕ, ಅನುಪ್ರಾಸ ಮುಂತಾದ ಅಲಂಕಾರಗಳನ್ನು ಕವಿಗಳು ಕ್ರಿಸ್ತಶಕದ ವೇಳೆಗೇ ಕಂಡುಕೊಂಡಿದ್ದರು. ಹಾಗೆಯೇ ಅರ್ಥಪುಷ್ಟಿಗೆ ಸಾಧಕಗಳಾದ ರೂಪಕ, ಉಪಮಾ ಮುಂತಾದ ಅರ್ಥಾಲಂಕಾರಗಳನ್ನೂ ಬಗೆ ಬಗೆಯಿಂದ ಪ್ರಯೋಗಿಸುತ್ತಿದ್ದರು. ಚಮತ್ಕಾರವನ್ನು ಹೆಚ್ಚಿಸುವ ಶ್ಲೇಷ, ವಿರೋಧಾಭಾಸ, ಅತಿಶಯೋಕ್ತಿ, ಉತ್ಪ್ರೇಕ್ಷೆ, ಮುಂತಾದುವುಗಳಲ್ಲೂ ಸಿದ್ಧಹಸ್ತರಾಗಿದ್ದರು. ಕವಿಯ ಪ್ರತಿಭೆಗೆ ಅವನ ಅಲಂಕಾರ ಪ್ರಯೋಗ ಕೌಶಲವೇ ಒರೆಗಲ್ಲು ಎಂಬ ಸಿದ್ಧಾಂತವನ್ನು ಕ್ರಿ. ಶ. ೬-೭ ನೆಯಶತಮಾನದ ಲಾಕ್ಷಣಿಕರೂ ಹೇಳುತ್ತಾರೆ. ಇಷ್ಟು ಹೊತ್ತಿಗೆ ಕಾಳಿದಾಸನಂತಹ ಮಹಾಕವಿಗಳೇ

---

11. ಈ ಮಾತನ್ನು ಅಭಿನವಗುಪ್ತ, ಕುಂತಕ, ಮಮ್ಮಟ, ವಿಶ್ವನಾಥ, ವಿದ್ಯಾಧರ ಮುಂತಾದವರೆಲ್ಲರೂ ಹೇಳಿದ್ದಾರೆ

12. ಹೋಲಿಸಿರಿ—' ಜಯನ್ತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ ।'
—ಭರ್ತೃಹರಿ.

ಬರೆದು ಮುಗಿದಾಗಿತ್ತು. ಆದ್ದರಿಂದ ಸಂಸ್ಕೃತ ಕಾವ್ಯಕಲೆಯ ಮರ್ಮವನ್ನ ರಿಯಬೇಕಾದರೆ ಸಂಸ್ಕೃತ ಲಕ್ಷಣಗ್ರಂಥಗಳನ್ನು ಅಧ್ಯಯನ ಮಾಡುವುದು ಅಗತ್ಯವಾಗುತ್ತದೆ ಸಂಸ್ಕೃತ ಕಾವ್ಯದಲ್ಲಿ ಕಥಾವಸ್ತುವಿಗೆ ಬೆಲೆ ಕಡಿಮೆ, ವರ್ಣನಾನೈಪುಣ್ಯಕ್ಕೆ ಮಹತ್ವ ಹೆಚ್ಚು. ಪದರಚನೆಯಲ್ಲಿಯೂ ಸಮಾಸಗಳ ಬಿಗಿ, ಶಬ್ದಗಳ ಸಂಗೀತದ ಕಡೆಗೆ ಲಕ್ಷ್ಯವಿಟ್ಟು ಸೌಂದರ್ಯವನ್ನು ತಂದರೆ ಓಜೋಗುಣವೂ, ಮೃದು ಬಂಧದಿಂದಲೇ ಮನೋಹರವಾಗಿ ಬರೆದರೆ ಮಾಧುರ್ಯ ಗುಣವೂ, ಓದುತ್ತಿರುವಾಗಲೇ ತಟ್ಟನೆ ಮನಸ್ಸನ್ನು ಸೆಳೆಯುವ ಲಾಲಿತ್ಯ ಉಕ್ಕುತ್ತಿದ್ದರ ಪ್ರಸಾದ ಗುಣವೂ ಸಂಪನ್ನವಾಗುವುವೆಂದು ಲಾಕ್ಷಣಿಕರು ನಿರ್ಣಯಿಸಿದ್ದಾರೆ ಈ ಗುಣಗಳುಳ್ಳ ಕಾವ್ಯರೀತಿಗಳಲ್ಲಿ ಓಜಸ್ವಿನಿಯಾದುದು 'ಗೌಡೀರೀತಿ' ಯೆಂದೂ, ಮಾಧುರ್ಯಮಯವಾದುದು 'ವೈದರ್ಭೀರೀತಿ' ಯೆಂದೂ ದೇಶವಾಚಕಪದಗಳಿಂದ ನಿರ್ದೇಶಿಸಿದ್ದಾರೆ. ಇವು ರೂಢನಾಮಗಳಾಗುವುದಕ್ಕೂ ಪೂರ್ವದಲ್ಲಿ ಎಷ್ಟೋ ಮೊದಲು ಅನ್ವರ್ಥಕವಾದ ಅಂಕಿತನಾಮವಾಗಿದ್ದುವೆಂದು ಒಪ್ಪಬೇಕು. ವಿಶಾಲವಾದ ಭರತಖಂಡದಲ್ಲಿ ಒಂದೊಂದು ಪ್ರಾಂತದ ಕವಿಗಳು ಒಂದೊಂದು ಪ್ರಯೋಗ ಮಾಡಿ ನೋಡಿದರೂ ಕಡೆಗೆ ಸರ್ವಜನರಿಗೂ ಮೆಚ್ಚಿಗೆಯಾದ ರೀತಿಗಳು ಮಾತ್ರ ದೇಶದಾದ್ಯಂತ ಪ್ರಚಾರದಲ್ಲಿ ಬಂದುವೆಂಬುದು ಇದರಿಂದ ಗೊತ್ತಾಗುತ್ತದೆ. **ಕಾವ್ಯವು ರಸಮಯವಾಗಿರಬೇಕೆಂಬ** ಒಂದೇ ಮಾತಿನಿಂದಲೇ ಪ್ರಾಚೀನರು ಅದರ ಸಾರವನ್ನು ಎತ್ತಿ ತೋರಿಸಿದ್ದಾರೆನ್ನಬಹುದು. ಮಾನವನ ಅನುಭವಸಾರದ ಸುಂದರ ಅಭಿವ್ಯಕ್ತಿಯೇ ಕಾವ್ಯ. ಲೋಕಾನುಭವದಲ್ಲಿ ತಾತ್ಕಾಲಿಕವಾದ ಭಾವತರಂಗಗಳಿಗೆಡೆಯಿರುವಂತೆಯೇ ಒಂದು ಸಮಗ್ರ ಜೀವನ ತತ್ವದ ದರ್ಶನಕ್ಕೂ ಮಹತ್ವವಿದೆ ಒಬ್ಬೊಬ್ಬ ವ್ಯಕ್ತಿಯ ಜೀವನದಲ್ಲೂ ಲಕ್ಷೋಪಲಕ್ಷ ಅನುಭವಗಳು ಬರುತ್ತವೆ, ಇವುಗಳಲ್ಲಿ ಮುಖ್ಯವಾದುವು ಸರ್ವಜನಸಾಧಾರಣವಾಗಿರುವುದೇ ರಸತತ್ವದ ಅಸ್ತಿವಾರ. ಪ್ರಣಯ, ಉತ್ಸಾಹ, ಶೋಕ ಮುಂತಾದುವುಗಳಿಗೆ ಆಲಂಬನವಾಗಿ ವ್ಯಕ್ತಿಗಳೂ ಉದ್ದೀಪಕವಾಗಿ ಸನ್ನಿವೇಶಗಳೂ ಬಂದೊಡನೆ ಅವು ಎಲ್ಲರಲ್ಲೂ ಒಂದೇ ಬಗೆಯಾಗಿ ಹೊರಹೊಮ್ಮುತ್ತವೆ. ಜೀವನದ ಸುಖ ದುಃಖಗಳಿಗೆಲ್ಲ, ಕೃತಿ ವಿಕೃತಿಗಳಿಗೆಲ್ಲ, ಸ್ಥಿತಿಗತಿಗಳಿಗೆಲ್ಲ ಈ ಚಿತ್ತವೃತ್ತಿಗಳೇ ಕಾರಣ. ಆದ್ದರಿಂದ ಕಾವ್ಯದಲ್ಲಿ ವರ್ಣನೆಗೆ ಯೋಗ್ಯವಾದ ವಸ್ತುಗಳೆಂದರೆ ಮಾನವನ

ಮನೋವೃತ್ತಿಗಳು, ಅವುಗಳ ಆವಿರ್ಭಾವ, ವಿಸ್ತಾರ, ಪರ್ಯವಸಾನಗಳು. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ ಕಾವ್ಯದ ವಸ್ತುವೆಲ್ಲ ಮಾನವ, ಪ್ರಕೃತಿ ಇವರ ಪರಸ್ಪರ ಸಂಪರ್ಕ, ಸಂಘರ್ಷ, ಇಷ್ಟರಲ್ಲೇ ಮುಗಿಯುವು ದೆನ್ನಬಹುದು. ಆಪಾತತಃ ಅನನ್ವಿತವಾಗಿ ತೋರುವ ಮನುಷ್ಯ ವ್ಯಾಪಾರ ಗಳಲ್ಲೆಲ್ಲ ಒಂದು ಸಮನ್ವಯವನ್ನು ಕಾಣುವ ಕಣ್ಣುಳ್ಳವನೇ ತತ್ವಜ್ಞ ನಾದರೂ ಆಗಬಹುದು, ಕವಿಯಾದರೂ ಆಗಬಹುದು. ತತ್ವಜ್ಞಾನಿಯು ಸತ್ಯವನ್ನು ಬಿಡಿಸಿ ಬಿಡಿಸಿ ಬುದ್ಧಿಗೋಚರವಾಗುವಂತೆ ಮಾಡುತ್ತಾನೆ ಅದೇ ಸತ್ಯವನ್ನೇ ಸಮಗ್ರ ರೂಪದಲ್ಲಿ ಸಂದರ್ಶಿಸುವ ಕವಿಯು ಸಮಷ್ಟಿ ರೂಪದಿಂದ ಅದು ಹೃದಯವೇದ್ಯವಾಗುವಂತೆ ಮಾಡುತ್ತಾನೆ. ಈ ಪ್ರತಿಭೆ ಯೆಂಬ ಮೂರನೆಯ ಕಣ್ಣಿಲ್ಲದವನು[13] ಕವಿಯಲ್ಲ, ಕವಿನಾಮಧಾರಿ. ಆದ್ದರಿಂದ ಮನುಷ್ಯನ ಜೀವನದ ಹಾಸುಹೊಕ್ಕಾಗಿ ನಿಂತಿರುವ ನವರಸಗಳಲ್ಲಿ, ಒಂದೊಂದನ್ನು ವರ್ಣಿಸುವುದಕ್ಕೂ ನೂರು ನೂರು ಪದ್ಯಗಳನ್ನು ಎಷ್ಟೇ ಚೆನ್ನಾಗಿ ಬರೆದರೂ ಒಬ್ಬನು ಮಹಾಕವಿಯಾಗಿಬಿಡುವುದಿಲ್ಲ ಪ್ರತಿಕ್ಷಣ ದಲ್ಲೂ ಒಂದರೊಡನೆ ಒಂದು ಸಮ್ಮಿಶ್ರವಾಗುತ್ತಿರುವುದೇ ಇವುಗಳ ಸ್ವಭಾವ ವಾದುದರಿಂದ ಯಾವುದು ಯಾವಾಗ ಮುಖ್ಯ, ಯಾವುದು ಗೌಣವೆಂಬುದರ ಪರಾಮರ್ಶವೂ ಅವನಿಗಿರಬೇಕಾಗುತ್ತದೆ. ಇದನ್ನೇ ಲಾಕ್ಷಣಿಕರು 'ಔಚಿತ್ಯ'ವೆನ್ನುವುದು.[14] ಈ ಔಚಿತ್ಯ ದೃಷ್ಟಿಯಿಂದ ಪ್ರತಿಯೊಂದು ಮಹಾ ಕಾವ್ಯದಲ್ಲೂ ಪ್ರಧಾನ ರಸವು ಒಂದೇ ಆಗಿಯೂ, ಉಳಿದ ರಸಗಳು ಗೌಣ ವಾಗಿಯೂ ಬರುತ್ತವೆ ಈ ಪ್ರಧಾನರಸದ ಮೂಲಕವೇ ಕವಿಯ ಜೀವನ ಮೀಮಾಂಸೆಯು ಅಭಿವ್ಯಕ್ತವಾಗಬೇಕಾದರ ಕಥೆಯ ಆರಿಕೆ, ಪಾತ್ರ ಸ್ವಭಾವಗಳ ನಿರೂಪಣೆ, ಸನ್ನಿವೇಶಗಳ ರಚನೆ, ಕಾವ್ಯಮಾರ್ಗದ ಅನುಸರಣೆ, ಅಲಂಕಾರಗಳ ಯೋಜನೆ, ಇತ್ಯಾದಿ ಎಲ್ಲ ಅಂಶಗಳಲ್ಲಿಯೂ ಕವಿಯ ರಸದೃಷ್ಟಿಯು ಪ್ರೇರಕವಾಗುತ್ತದೆ ಆದ್ದರಿಂದ ರಸವೇ ಕಾವ್ಯದ ಆತ್ಮ,

---

13. 'ಸಾ ಹಿ ಚಕ್ಷುರ್ಭಗವತಃ ತೃತೀಯಮಿತಿ ಗೀಯತೇ ।
ಯೇನ ಸಾಕ್ಷಾತ್ಕರೋತ್ಯೇಷ ಭಾವಾಂಸ್ತ್ರೈಕಾಲ್ಯವರ್ತಿನಃ ॥'

—ವ್ಯಕ್ತಿವಿವೇಕ, ಪು. 390.

14. 'ಔಚಿತ್ಯಂ ರಸಸಿದ್ಧಸ್ಯ ಸ್ಥಿರಂ ಕಾವ್ಯಸ್ಯ ಜೀವಿತಮ್' —ಕ್ಷೇಮೇಂದ್ರ.

ಅದರ ಭಂಗವೇ ಕಾವ್ಯದ ಪರಮದೋಷ. ಹೀಗೆ ರಸೈಕ ಚಕ್ಷುವಾದ ಕವಿಗೆ ಪೂರ್ವದ ಕಥಾವೃತ್ತಾಂತಗಳನ್ನು ಇತಿಹಾಸಕಾರನಂತೆ ಚಾಚೂ ತಪ್ಪದೆ ಅನುಸರಿಸಬೇಕಾದ ಪ್ರಮೇಯವೂ ಇಲ್ಲ; ಅವನ ಸೃಷ್ಟಿಕಾರ್ಯದಲ್ಲಿ ಅವನೇ ಬ್ರಹ್ಮ.[15] ಅಥವಾ ಬ್ರಹ್ಮನಿಗಿಂತಲೂ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯವೇ ಅವನದೆಂದರೂ ಸಲ್ಲುತ್ತದೆ.[16] ಈ ಕಲ್ಪನಾಸ್ವಾತಂತ್ರ್ಯಕ್ಕೆ ಬಾಹ್ಯ ನಿಯಂತ್ರಣ ಗಳಿಲ್ಲವೆಂದು ಮಾತ್ರ ಅರ್ಥವೇ ಹೊರತು ರಸೌಚಿತ್ಯದ ನಿಯಂತ್ರಣ ತಪ್ಪುವು ದೆಂದಲ್ಲ. ಅದು ತಪ್ಪಿದರೆ ಅವನು ಕವಿಯೇ ಅಲ್ಲ. ಸಂಸ್ಕೃತ ಕಾವ್ಯದ ಇತಿಹಾಸ ದಲ್ಲಿ ಕವಿಗಳು ಪ್ರಸಿದ್ಧ ಕಥೆಗಳನ್ನು ಮಾರ್ಪಡಿಸಿಕೊಂಡು ರಸಮಯವಾಗಿ ಸಿರುವ ಉದಾಹರಣೆಗಳಿಗೆ ಲೆಕ್ಕವಿಲ್ಲ. ಈ ದೃಷ್ಟಿಯಿಂದ ನೋಡಿದರೆ ರಸವೇ ನಿಜವಾದ ಕಾವ್ಯಾರ್ಥ. ಉಳಿದುವೆಲ್ಲ ಅದಕ್ಕೆ ಪೋಷಕಗಳು ಮಾತ್ರ. ರಸಪ್ರತಿಪಾದನೆಗೆ ಶಬ್ದಸೌಂದರ್ಯ, ಅರ್ಥಚಾರುತ್ವ, ರೀತಿವಿನ್ಯಾಸ, ಗುಣಬಾಹುಲ್ಯ, ಅಲಂಕಾರೌಚಿತ್ಯ ಎಲ್ಲವೂ ಸಹಕರಿಸುತ್ತವಾದರೂ ರಸವು ಕೋಶದಲ್ಲಿ ಸೂಚಿತವಾಗುವ ವಾಚ್ಯಾರ್ಥದಂತೆ ಬುದ್ಧಿಗಮ್ಯವಾದ ನಿರ್ದಿಷ್ಟ ಅಂಶವಲ್ಲ, ಅದು ಸಹೃದಯನ ಅನುಭವಕ್ಕೆ ಮಾತ್ರ ಗೋಚರವಾಗುವ, ಅಮಿತವಾದ ಆನಂದಾಂಶ. ಶಬ್ದಗಳು, ಅರ್ಥಗಳು, ಗುಣ, ರೀತಿ, ಅಲಂಕಾರ ಗಳು, ಎಲ್ಲವೂ ಅದರ ದಿಕ್ಕನ್ನು ಮಾತ್ರ ಸೂಚಿಸಬಲ್ಲವು, ಪರ್ಯಾಯವಾಗಿ ಅದರ ಪುಷ್ಟಿಗೆ ಸಹಾಯ ಮಾಡಬಲ್ಲವು. ಆದರ ನೇರವಾಗಿ ಎಂದೂ ಬೋಧಿಸ ಲಾರವು. ನಾವು ಬಳಸುವ ಭಾಷೆಯಲ್ಲಿಯೂ ಅನೇಕ ಅಕ್ಷರ ಘಟಿತವಾದ ಪದಗಳೆಲ್ಲಕ್ಕೂ ಎರಡೆರಡು ರೂಪಗಳಿವೆ. 'ಹಸು' ಎಂದುಚ್ಚರಿಸುವಾಗ 'ಹ' 'ಸು' ಈ ಎರಡು ಅಕ್ಷರಗಳ ಬಾಹ್ಯ ಧ್ವನಿರೂಪವೊಂದಿದೆ. ಇದನ್ನು ಧ್ವನಿ ಮುದ್ರಕ ಯಂತ್ರಗಳೂ ಗ್ರಹಿಸಬಲ್ಲವು.ಆದರೆ ಅದನ್ನು ಕೇಳುವ ನಮ್ಮ ಮನಸ್ಸಿನಲ್ಲಿ ಬರುವ ಪ್ರಾಣಿಯ ಕಲ್ಪನೆಯು ಯಂತ್ರಕ್ಕೆ ಬರಲಾರದು, ಇದು ಅದರ ಅರ್ಥರೂಪ. ಬೇರೆ ಧ್ವನಿವರ್ಧಕ ಯಂತ್ರಗಳಿಂದ ಅದರ ಶಬ್ದರೂಪ

---

15. 'ಅಪಾರೇ ಕಾವ್ಯಸಂಸಾರೇ ಕವಿರೇವ ಪ್ರಜಾಪತಿಃ ।
ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ ॥'
—ಆನಂದವರ್ಧನ.

16. ಕಾವ್ಯಪ್ರಕಾಶದ ಮಂಗಲಶ್ಲೋಕವನ್ನು ನೋಡಿ.

ವನ್ನು ಚಿಕ್ಕದುಮಾಡಬಹುದು ಇಲ್ಲವೆ ದೊಡ್ಡದು ಮಾಡಬಹುದು. ಆದರೆ ಆದರ ಅರ್ಥರೂಪದಲ್ಲಿ ಯಾವ ಹೆಚ್ಚುಕಡಿಮೆಗಳೂ ಆಗುವುದಿಲ್ಲ. ವ್ಯಾಕರಣ ತತ್ವದ ಸೂಕ್ಷ್ಮವಿವೇಚನೆ ಮಾಡಿದ ಭರ್ತೃಹರಿಯು ತನ್ನ **ವಾಕ್ಯಪದೀಯ**ವೆಂಬ ಗ್ರಂಥದಲ್ಲಿ ಪ್ರತಿಯೊಂದು ಪದದ ಅಥವಾ ವಾಕ್ಯದ ಅಖಂಡ ಅರ್ಥರೂಪಕ್ಕೆ ಸ್ಫೋಟವೆಂದೂ ಪರಿಣಾಮಶೀಲವಾದ ಶಬ್ದರೂಪಕ್ಕೆ ಧ್ವನಿಯೆಂದೂ ಹೇಳಿ ಧ್ವನಿಯು ಸ್ಫೋಟಕ್ಕೆ 'ವಾಚಕ' ವಲ್ಲ ವ್ಯಂಜಕ ಮಾತ್ರ ಎಂದು ನಿರ್ಣಯಿಸಿದ್ದಾನೆ ಅದನ್ನೇ ಇನ್ನೊಂದು ಹೆಜ್ಜೆ ಮುಂದುವರಿಸಿ ಕಾವ್ಯಕ್ಕೆ ಅನ್ವಯಿಸಿದರೆ ಕಾವ್ಯದ ಬಾಹ್ಯರೂಪವಾದ ಸುಂದರ ಶಬ್ದಾರ್ಥಗಳು ಅಖಂಡ ರೂಪದ ರಸಾದಿಗಳಿಗೆ ವ್ಯಂಜಕ ಮಾತ್ರವೇ ಎಂಬ ತತ್ವವು ಸಿದ್ಧಿಸುತ್ತದೆ ಇದೇ ಕಾವ್ಯಮೀಮಾಂಸೆಯಲ್ಲಿ ಪರಮ ಪ್ರಸಿದ್ಧವಾದ ಧ್ವನಿ ಸಿದ್ಧಾಂತ ಎಂದರೆ ಕಾವ್ಯದಲ್ಲಿ ರಸೈಕ ನಿರತವಾದ ಶಬ್ದ ವ್ಯಾಪಾರವು (=ವ್ಯಂಜನಾವ್ಯಾಪಾರ) ಶಾಸ್ತ್ರದಲ್ಲಿ ಪ್ರಸಿದ್ಧಾರ್ಥ ನಿರತವಾದ ಶಬ್ದವ್ಯಾಪಾರಕ್ಕಿಂತ (=ಅಭಿಧಾ, ಲಕ್ಷಣೆಗಳಿಗಿಂತ) ಭಿನ್ನವೆಂದೂ ಹೇಳಿದಂತಾಗುತ್ತದೆ. ಈ ದೃಷ್ಟಿಯಿಂದ ವೇದಾದಿಗಳನ್ನು ಶಬ್ದಪ್ರಧಾನವೆಂದೂ, ಇತಿಹಾಸ ಪುರಾಣಾದಿಗಳನ್ನು ಅರ್ಥಪ್ರಧಾನವೆಂದೂ, ಕಾವ್ಯವನ್ನು ಶಬ್ದಾರ್ಥೋಭಯಸಿಷ್ಟ ವ್ಯಾಪಾರ ಪ್ರಧಾನವೆಂದೂ ಸಿದ್ಧಾಂತಿಸಬಹುದು.[17] ಇದನ್ನೇ ಪ್ರಕಾರಾಂತರದಿಂದ ಹೇಳಿದರೆ ವಕ್ರೋಕ್ತಿ ಅಥವಾ ಅತಿಶಯೋಕ್ತಿಯೇ ಕಾವ್ಯದ ಜೀವಾಳವೆಂಬ ಸಿದ್ಧಾಂತ ಬರುತ್ತದೆ. ಹೇಗೆ ಸಂಸ್ಕೃತದ ಕಾವ್ಯಲಕ್ಷಣಕಾರರ ಮತಗಳೆಲ್ಲವೂ ಕಾವ್ಯದ ವಿವಿಧಾಂಶಗಳನ್ನು ಬೇರೆ ಬೇರೆ ಮಾತುಗಳಿಂದ ವಿವರಿಸುತ್ತವೆನ್ನಬಹುದು. ಈ ಮತಗಳನ್ನೆಲ್ಲ ಸುಲಭವಾಗಿ ಗ್ರಹಿಸುವಂತೆ ಪ್ರಾಚೀನರೇ ಒಂದು ಸುಂದರವಾದ ರೂಪಕಮಾಲೆಯನ್ನು ರಚಿಸಿದ್ದಾರೆ.— ಕಾವ್ಯಪುರುಷ ಅಥವಾ ಸಾಹಿತ್ಯವಧುವಿಗೆ ಶಬ್ದಾರ್ಥಗಳೇ ಶರೀರ, ಪ್ರಸನ್ನತೆ, ಮಾಧುರ್ಯ, ಓಜಸ್ಸುಗಳೇ ಗುಣಗಳು, ರೀತಿಗಳೇ ಅಂಗಾಂಗ ಸೌಷ್ಠವ

---

17 'ಶಬ್ದಪ್ರಾಧಾನ್ಯಮಾಶ್ರಿತ್ಯ ತತ್ರ ಶಾಸ್ತ್ರಂ ಪೃಥಗ್ವಿದುಃ ।
ಅರ್ಥೇ ತತ್ವೇನ ಯುಕ್ತೇ ತು ವದನ್ತ್ಯಾಖ್ಯಾನಮೇತಯೋಃ ।
ದ್ವಯೋರ್ಗುಣತ್ವೇ ವ್ಯಾಪಾರಪ್ರಾಧಾನ್ಯೇ ಕಾವ್ಯಗೀರ್ಭವೇತ್ ॥'

—ಭಟ್ಟನಾಯಕ.

ಗಳು ; ರಸವೇ ಆತ್ಮ, ಧ್ವನಿಯೇ ಲಾವಣ್ಯ ; ವಕ್ರೋಕ್ತಿಯೇ ವಿಲಾಸ ; ಅಲಂಕಾರಗಳೇ ಒಡವೆಗಳು. ಈ ರೂಪಕ ಪರಂಪರೆಯಲ್ಲಿ ಇದು ಹೆಚ್ಚು, ಇದು ಕಡಿಮೆಯೆಂಬ ವಿವಕ್ಷೆಗಿಂತ ಎಲ್ಲವೂ ಆದರಣೀಯವೆಂಬ ತಾತ್ಪರ್ಯವೇ ಪ್ರಧಾನ. ಎಲ್ಲವೂ ಮಿಳಿತವಾಗಿದ್ದಾಗ ಮಾತ್ರ ಆದರ್ಶ ವ್ಯಕ್ತಿಯಾಗುವಂತೆ, ಎಲ್ಲ ಕಾವ್ಯ ಧರ್ಮಗಳೂ ಕೂಡಿದಾಗಲೇ ಆದರ್ಶ ಕಾವ್ಯವು ಸಿದ್ಧವಾಗುತ್ತದೆ.

iii **ಕವಿಯಲ್ಲಿರಬೇಕಾದ ಗುಣಗಳು:**— ಅಪೂರ್ವ ವಸ್ತುಗಳನ್ನು ನಿರ್ಮಿಸಬಲ್ಲ ಪ್ರತಿಭೆ ಅಥವಾ ಶಕ್ತಿ ಎಲ್ಲಕ್ಕೂ ಮೊದಲು ಕವಿಯಲ್ಲಿರಬೇಕಾದ ನೈಸರ್ಗಿಕ ಗುಣ. ಆದರೆ ಅದಷ್ಟೇ ಸಾಲದು. ಲೋಕದಲ್ಲಿ ಎಷ್ಟು ಬಗೆಯ ಕಲೆಗಳು, ಶಾಸ್ತ್ರಗಳು, ವಿದ್ಯೆಗಳು ಇವೆಯೋ ಅಷ್ಟರಲ್ಲಿಯೂ ಕವಿಗೆ ಪ್ರವೇಶವಿರಬೇಕು, ಲೋಕ ವ್ಯವಹಾರವನ್ನು ನೋಡಿ ನೋಡಿ ಅನುಭವವನ್ನೂ ಆತನು ಬೆಳೆಸಿಕೊಳ್ಳಬೇಕು. ಹೀಗೆ ಲೋಕಾನುಭವ ಮತ್ತು ವಿದ್ಯಾರ್ಜನೆಗಳಿಂದ ಬರುವ ಸಂಸ್ಕಾರಕ್ಕೆ ವ್ಯುತ್ಪತ್ತಿಯೆಂದು ಹೆಸರು. ಕವಿಯ ಕಲಾವಸ್ತುವೆಂದರೆ ಶಬ್ದಾರ್ಥಗಳೇ ಆದ ಕಾರಣ ವ್ಯಾಕರಣ, ಕೋಶ, ಛಂದಶ್ಶಾಸ್ತ್ರಗಳಲ್ಲಿ ವಿಶೇಷ ಪಾಂಡಿತ್ಯ ಅಗತ್ಯವಾಗುತ್ತದೆ. ಪ್ರತಿಭೆ, ವ್ಯುತ್ಪತ್ತಿಗಳ ಜತೆಗೆ ಪೂರ್ವದ ಮಹಾ ಕವಿಗಳ ಸಂಪ್ರದಾಯದ ಪರಿಚಯವೂ, ಕಾವ್ಯಕಲೆಯಲ್ಲಿ ಆಳವಾದ ಅಭ್ಯಾಸವೂ ಸೇರಿದರೆ ಕವಿಯ ಕರ್ಮವು ಯಶಸ್ವಿಯಾಗುತ್ತದೆ. ಇವುಗಳಲ್ಲಿ ಒಂದಿಲ್ಲದಿದ್ದರೂ ಶೋಭಿಸುವುದಿಲ್ಲ. ಪ್ರತಿಭೆಯಿಲ್ಲದವನ ಕೃತಿಯು ಹಾಸ್ಯಾಸ್ಪದವಾಗುತ್ತದೆ. ವ್ಯುತ್ಪತ್ತಿಯಿಲ್ಲದವನ ಕೃತಿಯು ತಿರಸ್ಕಾರಯೋಗ್ಯವಾಗುತ್ತದೆ. ಅಭ್ಯಾಸವಿಲ್ಲದವನ ಕೃತಿಯು ಹರುಕುಮುರುಕಾಗಿ ಕಾಣುತ್ತದೆ. ಇವೆಲ್ಲವೂ ಒಬ್ಬೊಬ್ಬ ಕವಿಯಲ್ಲಿಯೂ ಒಂದೊಂದು ಪ್ರಮಾಣದಲ್ಲಿ ಕೂಡಿಕೊಳ್ಳುವುದರಿಂದ ಕವಿತಾರಾಜ್ಯದಲ್ಲಿ ವೈಶಿಷ್ಟ್ಯಕ್ಕೆಂದೂ ಕುಂದು ಬರುವುದಿಲ್ಲ.

iv ಕವಿಯ ಅಭ್ಯಾಸದ ಮುಖ್ಯ ಅಂಗವು **'ಕವಿಸಮಯ'** ಗಳನ್ನು ಕುರಿತದ್ದು. ಕಾವ್ಯಸತ್ಯದ ಸ್ವರೂಪವೇ ಬೇರೆ, ಶಾಸ್ತ್ರಸತ್ಯದ ಸ್ವರೂಪವೇ ಬೇರೆ. ಜೀವನವನ್ನು ಯಥಾವತ್ತಾಗಿ ತಿಳಿದು ಯಥಾವತ್ತಾಗಿಯೇ ಕಾವ್ಯದಲ್ಲಿ ಅಭಿವ್ಯಕ್ತ ಮಾಡಿದರೆ ಕಾವ್ಯಸತ್ಯವನ್ನು ಸಾಧಿಸಿದಂತಾಗುವು

ದಿಲ್ಲ. ಏಕೆಂದರೆ ಸೌಂದರ್ಯವೇ ಕಾವ್ಯಸತ್ಯದ ಮುಖ್ಯ ಅಂಶ. ಕಲ್ಪನಾ ಸತ್ಯಕ್ಕೆ ಲೋಕಸಿಷ್ಠ ಸತ್ಯಕ್ಕಿಂತ 'ಹೆಚ್ಚಿನ ಬೆಲೆ. ಯಾವುದು ತರ್ಕ ದೃಷ್ಟಿಯಿಂದ ಅಸತ್ಯವೋ ಅದೇ ಕವಿ ದೃಷ್ಟಿಯಿಂದ ಕಲ್ಪನಾಸತ್ಯವಾಗ ಬಹುದು. ಅತಿಶಯೋಕ್ತಿಗಳೆಲ್ಲವೂ ಲೋಕಸ್ಥಿತಿಗೆ ದೂರವೇ ಆದರೂ ಕಾವ್ಯದಲ್ಲಿ ನಿರುಪಮ ಚಮತ್ಕಾರವನ್ನು ತರಬಲ್ಲವು. ಇಂತಹ ಅಲಂಕಾರ ಗಳಲ್ಲೆಲ್ಲ 'ಅಸತ್ಯ–ಸೌಂದರ್ಯ' ವುಂಟೆಂದರೂ ಅವು 'ಕವಿಸಮಯ' ಗಳಲ್ಲ, ಏಕೆಂದರೆ ಉಕ್ತಿಪ್ರಕಾರದಲ್ಲಿ ಲೋಕವೈಪರೀತ್ಯವುಂಟೇ ಹೊರತು ವರ್ಣಿತವಸ್ತುವಿನಲ್ಲಲ್ಲ ವರ್ಣಿತ ವಿಷಯಗಳು ಲೋಕಸಿದ್ಧವೂ ಶಾಸ್ತ್ರಸಂಗ ತವೂ ಆಗಿರಬೇಕೆಂಬ ಸಾಮಾನ್ಯ ನಿಯಮಕ್ಕೆ ಲಾಕ್ಷಣಿಕರು ಒಪ್ಪಿಕೊಂಡಿ ರುವ ಅಪವಾದಗಳಿಗೆ ಮಾತ್ರ 'ಕವಿಸಮಯ' ಗಳೆಂದು ಹೆಸರು, ಹೀಗೆ ಒಪ್ಪಿ ಕೊಳ್ಳಲು ಹಿಂದಿನ ಕವಿಗಳ ಪ್ರಯೋಗವೇ ಕಾರಣ. ಈ ಅಪವಾದಗಳು ಏಕೆ ಅಗತ್ಯವಾಗುವುವೆಂಬುದನ್ನು ಈಗ ನೋಡೋಣ —

೧. ಚಂದ್ರ, ರಮಣಿ, ಮುಂತಾದ ನಿಸರ್ಗ ರಮಣೀಯ ವಸ್ತುಗಳು ಕವಿಯ ವರ್ಣನೆಗೆ ಸಹಜವಾಗಿಯೇ ಹೊಂದಿಕೊಳ್ಳುತ್ತವೆ. ಆದರೆ ಕೀರ್ತಿ, ಕೋಪ ಮುಂತಾದ ಅಮೂರ್ತ ಭಾವನೆಗಳು ಹಾಗೆ ಹೊಂದಿಕೊಳ್ಳುವುದಿಲ್ಲ. ಇವನ್ನು ವರ್ಣಿಸುವಾಗ ಕವಿಗಳು ಮೂರ್ತರೂಪವನ್ನು ಕೊಟ್ಟು ಅವುಗಳ ಗುಣಕ್ರಿಯೆಗಳನ್ನು ವಿವರಿಸುವ ರೂಢಿ ಹಿಂದಿನಿಂದಲೂ ಬಂದಿದೆ. ಕೀರ್ತಿ ಯನ್ನು ಪ್ರಭೆಯೆಂದೂ ಅದರ ಬಣ್ಣ ಬಿಳುಪೆಂದೂ ಪ್ರಾಚೀನ ಕವಿಗಳು ಹೇಳುತ್ತ ಬಂದಿದ್ದಾರೆ. ಇದು ಕವಿಗಳ ಸಂಕೇತ ಅಥವಾ ಸಮಯ. ಹಾಗೆಯೆ ಕೋಪವು ಜಲವೆಂದೂ ಅದರ ಬಣ್ಣ ಕೆಂಪೆಂದೂ ವರ್ಣಿಸುವುದು ಕವಿ ಸಮಯ. ಕತ್ತಲೆಯು ಸೂಜಿಯಿಂದ ಚುಚ್ಚುವಂತೆ ದಟ್ಟವಾಗಿದೆಯೆನ್ನು ವುದೂ ಕವಿಸಮಯವೇ.

೨. ಸದಸದ್ವಿವೇಕ, ವಿರಹಿಗಳ ಶೃಂಗಾರ ಮುಂತಾದ ಕಾವ್ಯವಸ್ತು ಗಳಿಗೆ ತಕ್ಕ ಉಪಮೆಗಳು ಬ್ರಹ್ಮಸೃಷ್ಟಿಯಲ್ಲಿಲ್ಲವೆನಿಸಿದ ಕವಿಗಳು ಕಾವ್ಯಜಗತ್ತಿ ನಲ್ಲಿ ಕೆಲವೊಂದು ಉಪಮೆಗಳನ್ನು ಜನರ ನಂಬಿಕೆಗಳ ಆಧಾರದಮೇಲೆ ಸೃಷ್ಟಿಸಿಕೊಂಡರು. ಉದಾಹರಣೆಗೆ ಹಾಲು ನೀರುಗಳನ್ನು ಬೇರ್ಪಡಿಸುವ ಶಕ್ತಿ ಹಂಸಕ್ಕಿದೆಯೆಂಬ ಮಾತನ್ನೂ ಚಕ್ರವಾಕ ಪಕ್ಷಿಗಳು ಹಗಲೆಲ್ಲಾ ಜೋಡಿ

ಯಾಗಿಯೇ ಇದ್ದರೂ ಕತ್ತಲಾದೊಡನೆ ಅಗಲಿ ವಿರಹತಾಪದಿಂದ ರಾತ್ರಿಯೆಲ್ಲಾ ಗೋಳಿಡುವುವೆಂಬ ಪ್ರಥೆಯನ್ನೂ ಹೇಳಬಹುದು.

೩. ಪ್ರಕೃತಿ ವರ್ಣನೆಗೆ ಹೆಚ್ಚಿನ ಸೌಂದರ್ಯ ತರುವ ಕವಿಸಮಯದ ಮೂರನೆಯ ಪ್ರಕಾರವೂ ಒಂದಿದೆ. ಜಲಾಶಯ, ಬೆಟ್ಟ, ಮುಂತಾದುವನ್ನು ಸ್ವಭಾವೋಕ್ತಿಗಳಿಂದ ಬಣ್ಣಿಸುವುದರ ಜತೆಗೆ ವಾಸ್ತವದ ಎಲ್ಲೆಯನ್ನು ದಾಟಿ ಕವಿಗಳು ನದಿಗಳಲ್ಲೆಲ್ಲ ಹಂಸ, ಕಮಲ, ಕನ್ನೈದಿಲೆ ಮುಂತಾದುವನ್ನೂ ಬೆಟ್ಟಗಳಲ್ಲೆಲ್ಲ ಬಗೆಬಗೆಯ ರತ್ನಗಳನ್ನೂ, ಆನೆಯ ಕುಂಭಸ್ಥಳ, ಹಾವಿನಹೆಡೆ, ಸಮುದ್ರ ಮುಂತಾದೆಡೆಗಳಲ್ಲಿ ಮುತ್ತು ರತ್ನಗಳನ್ನೂ ವರ್ಣಿಸುವ ವಾಡಿಕೆಯಿದೆ.

೪. ವರ್ಣನಾ ಸೌಕರ್ಯಕ್ಕಾಗಿ ಕವಿಗಳು ಶ್ರೀಗಂಧದ ಮರವು ಮಲಯಾಚಲವೊಂದರಲ್ಲೇ ಉಂಟೆಂದೂ, ಶುಕ್ಲಪಕ್ಷದ ರಾತ್ರಿಗಳಲ್ಲೆಲ್ಲ ಬೆಳುದಿಂಗಳೊಂದೇ ಇರುವುವೆಂದೂ, ಕನ್ನೈದಿಲೆಗಳು ರಾತ್ರಿ ಮಾತ್ರ ಅರಳುವುವೆಂದೂ ಕೆಲವೊಂದು ಸಂಕೇತಗಳನ್ನು ಮಾಡಿಕೊಂಡಿದ್ದಾರೆ. ಕೋಗಿಲೆ ವಸಂತದಲ್ಲಿ ಮಾತ್ರ ಕೂಗುತ್ತದೆ, ಮುತ್ತು ತಾಮ್ರಪರ್ಣಿಯಲ್ಲಿ ಮಾತ್ರ ದೊರೆಯುತ್ತವೆ, ಶಂಖಗಳು ಸಮುದ್ರದಲ್ಲಿ ಮಾತ್ರ ಉಂಟು ಮುಂತಾದ ನಿಯಮಗಳೂ, ಈ ಜಾತಿಗೇ ಸೇರುತ್ತವೆ.

ಈ ಎಲ್ಲ ಬಗೆಯ ಕವಿಸಮಯಗಳಿಗೂ ಕವಿಕಲ್ಪನೆಯು ಕಾವಿನಲ್ಲಿ ಸಾರ್ಥಕ್ಯ ಬರುತ್ತದೆ. ಅವುಗಳು ನೂರಾರು ಅಲಂಕಾರಗಳಿಗೆ ಆಶ್ರಯಗಳಾಗುತ್ತವೆ. ಆ ಅಲಂಕಾರಗಳ ಚಲುವು ಮಾಯವಾದರೆ ಕವಿಸಮಯಗಳು ಮನಸ್ಸಿಗೆ ಆನಂದದ ಬದಲು ಬೇಸರವನ್ನೇ ತರುತ್ತವೆ. ರಾಜಶೇಖರನು ಹೇಳುವಂತೆ– ' ಪೂರ್ವದ ವಿದ್ವಾಂಸರು ಸಹಸ್ರ ಶಾಖವಾದ ವೇದವೇದಾಂಗವನ್ನೋದಿ, ಶಾಸ್ತ್ರಗಳನ್ನು ತಿಳಿದು, ದೇಶಾಂತರಗಳನ್ನು ಸಂಚರಿಸಿ ತಮಗೆ ಕಂಡುಬಂದುದನ್ನೇ ಬರೆದಿದ್ದಾರೆ. ಅವು ಇಂದು ಬೇರೆಯಾಗಿದ್ದರೂ ಪೂರ್ವದಂತೆಯೇ ಅವುಗಳನ್ನು ಕವಿಗಳು ಬರೆದಾಗ ಕವಿಸಮಯವೆನಿಸುತ್ತದೆ. ಪೂರ್ವಕವಿಪ್ರಯೋಗಗಳಲ್ಲಿರುವ ಸಾರ್ಥಕ್ಯವು ಪರಾನುಕರಣ ನಿರತರಲ್ಲಿ ಕಾಣುವುದಿಲ್ಲ. " ಕವಿಯ ಕಲ್ಪನಾವಿಲಾಸಕ್ಕೆ ಕವಿಸಮಯಗಳ ಪರಿಚಯವೂ ಅಗತ್ಯವೆಂಬುದು ಹಿಂದಿನವರ ಸಿದ್ಧಾಂತ. ಹೊಸ ಕವಿಸಮಯಗಳನ್ನು ಸೃಷ್ಟಿಸುವ ಸ್ವಾತಂತ್ರ್ಯವನ್ನು ಕವಿಗೆ ಲಾಕ್ಷಣಿಕರೇನೂ ಕೊಟ್ಟಿಲ್ಲ.

೮ **ಕಾವ್ಯದೋಷಗಳು:** ಕಾವ್ಯದಲ್ಲಿ ಗುಣಾಲಂಕಾರಾದಿಗಳ ಚಲುವನ್ನು ಚಿಂತಿಸುವುದಕ್ಕೂ ಪೂರ್ವದಲ್ಲಿ ದೋಷರಾಹಿತ್ಯವನ್ನು ಕವಿ ನೋಡಿಕೊಳ್ಳುವುದು ಅಗತ್ಯ. ವ್ಯಾಕರಣದಲ್ಲಿ ಅಪಶಬ್ದಗಳು ದೋಷ ಹೇಗೋ ಹಾಗೆಯೇ ಕಾವ್ಯದಲ್ಲಿ ಕ್ಲಿಷ್ಟಾಕ್ಷರದ ಪದಗಳೂ, ಅಪಾರ್ಥಕ ದುರರ್ಥಕ ಪ್ರಯೋಗಗಳೂ, ಅಬದ್ಧ ಛಂದಸ್ಸುಗಳೂ ದೋಷವೆನಿಸುತ್ತವೆ. ಔಚಿತ್ಯಜ್ಞಾನವಿಲ್ಲದವನಲ್ಲಿ ನೀರಸತ್ವ ದೋಷವು ಹಬ್ಬಿಕೊಳ್ಳುತ್ತದೆ. ವ್ಯುತ್ಪತ್ತಿ ಕಡಿಮೆಯಾಗಿದ್ದರೆ ಬರಬಹುದಾದ ದೋಷಗಳಿಗೆ ಲೆಕ್ಕವಿಲ್ಲ. ಲೋಕವಿರುದ್ಧ, ಆಗಮವಿರುದ್ಧ ವರ್ಣನೆಗಳಂತೆ ಕಲ್ಪನಾವಿರುದ್ಧ ವರ್ಣನೆಗಳೂ ದೋಷದ ಜಾತಿಗೆ ಸೇರುತ್ತವೆ. ಕೀರ್ತಿಗಾಗಿ ಬರೆಯುವ ಕವಿಗೆ ದೋಷಗಳಿಂದ ಬರುವ ಅಪಕೀರ್ತಿ ಮರಣಕ್ಕಿಂತ ಹೆಚ್ಚಿನ ದುಃಖವನ್ನು ತರುತ್ತದೆ[18]

೪ **ಕಾವ್ಯಪ್ರಕಾರಗಳು :**—ಮೇಲೆ ನಾವು ನೋಡಿದ ಕಾವ್ಯಧರ್ಮಗಳಿರುವ ರಚನೆಯೆಲ್ಲವೂ ಗದ್ಯವಾಗಲಿ, ಪದ್ಯವಾಗಲಿ, ಗದ್ಯಪದ್ಯಗಳ ಮಿಶ್ರವಾಗಲಿ, ಕಾವ್ಯವೆಂಬ ಪದವಿಗೆ ಯೋಗ್ಯವಾಗುತ್ತದೆ. ವರ್ಣಿತವಸ್ತುವನ್ನು ವಿಭಾಜಕ ಧರ್ಮವೆಂದು ಬಗೆದರೆ ಪುರಾಣೇತಿಹಾಸಗಳಲ್ಲಿ ಬರುವ ಕಥೆಗಳುಳ್ಳವು, ಕಲ್ಪಿತ ಕಥೆಗಳುಳ್ಳವು, ಕಲಾಶ್ರಯಗಳು, ಮತ್ತು ಶಾಸ್ತ್ರಾಶ್ರಯಗಳೆಂಬ ನಾಲ್ಕು ಬಗೆಗಳನ್ನು ಭಾಮಹನು ಸೂಚಿಸಿದ್ದಾನೆ.[19] ಆದರೆ ಕಾವ್ಯ ಸಮೀಕ್ಷೆಯಲ್ಲಿ ವಿಷಯಕ್ಕಿಂತ ನಿರೂಪಣ ಮಾರ್ಗಕ್ಕೆ ಹೆಚ್ಚಿನ ಮಹತ್ವವಿರುವುದರಿಂದ ಆ ದೃಷ್ಟಿಯಲ್ಲಿ ಅವನು ಸೂಚಿಸುವ ಐದು ಬಗೆಗಳು[20]ಗಮನಾರ್ಹ. ೧. ಅನೇಕ ಸರ್ಗಗಳ ಮಹಾಕಾವ್ಯ ೨. ಅಭಿನಯಕ್ಕಾಗಿ ಬರೆದ ನಾಟಕ ೩. ಆಖ್ಯಾಯಿಕೆ ೪. ಕಥೆ ೫. ಮುಕ್ತಕ. ದಂಡಿಯು ಮುಕ್ತಕಗಳನ್ನು ಮಹಾಕಾವ್ಯದ ಅಂಶಗಳೆಂದು ಕೈಬಿಡುತ್ತಾನೆ. ಕಥೆ ಆಖ್ಯಾಯಿಕೆಗಳಿಗೆ ಹೆಚ್ಚು ವೈಲಕ್ಷಣ್ಯವೂ ಇಲ್ಲವೆನ್ನುತ್ತಾನೆ. ನಾಟಕದಲ್ಲಿ ಅಭಿನೇಯಾಂಶಗಳು ಹೆಚ್ಚಾಗಿರುವುದರಿಂದ ಕಾವ್ಯಲಕ್ಷಣಕಾರರು ಅದರ ವಿವರಣೆಗೂ ಹೋಗುವುದಿಲ್ಲ.

---

18 ' ನಾಕವಿತ್ವಮಧರ್ಮಾಯ ವ್ಯಾಧಯೇ ದಂಡನಾಯ ವಾ।
ಕುಕವಿತ್ವಂ ಪುನಃ ಸಾಕ್ಷಾನ್ಮೃತಿಮಾಹುರ್ಮನೀಷಿಣಃ ॥ '

—ಭಾಮಹ I. ೧೨.

19. ನೋಡಿ—ಕನ್ನಡ ಕಾವ್ಯಾಲಂಕಾರ, I, ೧೭.

20 ಅದೇ I, ೧೮.

ಆದ್ದರಿಂದ ಕಾವ್ಯದ ಉತ್ತಮೋತ್ತಮ ಪ್ರಕಾರವೆಂದರೆ ಸರ್ಗಬಂಧ ಅಥವಾ ಮಹಾಕಾವ್ಯವೊಂದೇ ನಿಲ್ಲುತ್ತದೆ. ಇದನ್ನು ಭಾಮಹ ದಂಡಿಗಳು ವಿವರವಾಗಿ ಪ್ರಸ್ತಾಪಿಸಿದ್ದಾರೆ. ಮುಂದಿನವರೆಲ್ಲರೂ ಈ ಲಕ್ಷಣಗಳನ್ನು ಅಂಗೀಕರಿಸಿದ್ದಾರೆ. ಭಾಮಹನು ಹೇಳುವ ಲಕ್ಷಣಗಳಿವು:—

" ಅನೇಕ ಸರ್ಗಗಳು ಕೂಡಿ ಆದುದಕ್ಕೆ ಮಹಾಕಾವ್ಯವೆಂದು ಹೆಸರು. ಅದು ಮಹಾಪುರುಷರನ್ನು ಕುರಿತಿರುವುದಲ್ಲದೆ ಪರಿಮಾಣದಲ್ಲಿಯೂ ಮಹತ್ತಾಗಿರುವುದು. ಅದರ ಶಬ್ದಗಳಲ್ಲಿ ಗ್ರಾಮ್ಯತೆಯಿರುವುದಿಲ್ಲ, ಅರ್ಥದಲ್ಲಿ ಗೌರವವಿರುತ್ತದೆ. ಅಲಂಕಾರಗಳಿಂದ ಭೂಷಿತವಾಗಿರುವುದಲ್ಲದೆ ಉತ್ತಮವಾದ ವಸ್ತುವನ್ನಾಶ್ರಯಿಸಿರುತ್ತದೆ ಮಂತ್ರಾಲೋಚನೆ, ದೂತರು, ಪ್ರಯಾಣ, ಯುದ್ಧ, ನಾಯಕಾಭ್ಯುದಯಗಳಿಂದಲೂ ಪಂಚಸಂಧಿಗಳಿಂದಲೂ ಸಮನ್ವಿತವಾಗಿರುತ್ತದೆ. ಕಷ್ಟಪಟ್ಟು ಅರ್ಥಮಾಡುವಂತಿರುವುದಿಲ್ಲ, ಸಮೃದ್ಧವಾಗಿರುತ್ತದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಪ್ರತಿಪಾದಿಸುತ್ತಿದ್ದರೂ, ವಿಶೇಷವಾಗಿ ಐಹಿಕವಾದ ಅರ್ಥದ ಉಪದೇಶಕ್ಕೆ ಪ್ರಾಧಾನ್ಯವಿರುತ್ತದೆ. ಲೋಕಸ್ವಭಾವವನ್ನು ಚಿತ್ರಿಸುವುದಲ್ಲದೆ ಬೇರೆ ಬೇರೆ ರಸಗಳೆಲ್ಲವನ್ನೂ ಒಳಗೊಂಡಿರುತ್ತದೆ. "[21]

ಮಹಾಕಾವ್ಯದ ಮಹತ್ತು ಮೊದಲು ಉದಾತ್ತವಿಷಯದಲ್ಲಿ, ಆಮೇಲೆ ಪ್ರಮಾಣದಲ್ಲಿ. ಕಥೆಯ ದೃಷ್ಟಿಗಿಂತ ವರ್ಣನೆಯ ದೃಷ್ಟಿ ಪ್ರಧಾನ. ಪಾಂಡಿತ್ಯ ಪ್ರದರ್ಶನಕ್ಕಿಂತ ರಸಾಭಿವ್ಯಕ್ತಿಯೇ ಗುರಿ ಶಬ್ದಾಡಂಬರಕ್ಕಿಂತ ಅರ್ಥಗೌರವಕ್ಕೆ ಬೆಲೆ. ಲೋಕಸ್ವಭಾವಚಿತ್ರಣ, ಜೀವನತತ್ವನಿರ್ದೇಶ, ಇವೇ ಅದರ ಸಾರ. ಶೈಲಿಯು ಸರಲವಾಗಿದ್ದರೂ ಗ್ರಾಮ್ಯತೆಗೆ ಇಳಿಯದೆ ಗಂಭೀರವಾಗಿರಬೇಕು. ಇದಕ್ಕಿಂತ ಹೆಚ್ಚಿನ ಲಕ್ಷಣವನ್ನೂ ಇಂದಿನ ನಾವು ಕೂಡ ಹೇಳುವುದು ಸಾಧ್ಯವಿಲ್ಲವೆಂದು ತೋರುತ್ತದೆ. ದಂಡಿಯೂ ಇದನ್ನೇ ಬೇರೆ ಮಾತುಗಳಲ್ಲಿ ಹೇಳಿ ವರ್ಣನೆಗೆ ಯೋಗ್ಯವಾದ ವಿಷಯಗಳೆಂದು ಮತ್ತೂ ಕೆಲವನ್ನು ಸೂಚಿಸುತ್ತಾನೆ:— ನಗರ, ಸಮುದ್ರ, ಬೆಟ್ಟ, ಋತು, ಚಂದ್ರೋದಯ, ಸೂರ್ಯೋದಯ, ವನವಿಹಾರ, ಜಲಕ್ರೀಡೆ, ಮಧುಪಾನ, ರತೋತ್ಸವ, ವಿಯೋಗ, ವಿವಾಹ, ಪುತ್ರೋತ್ಸವ, ಇವೇ ಆ ಹದಿಮೂರು. ಭಾಮಹನ

21. ಕನ್ನಡ ಕಾವ್ಯಾಲಂಕಾರ, ಪು ೧೦.

ಐದೂ ಇವೂ ಕೂಡಿ ಪ್ರಸಿದ್ಧವಾದ ಅಷ್ಟಾದಶವರ್ಣನಾ ವಸ್ತುಗಳೆನಿಸುತ್ತವೆ. ಆದರೆ ಇವೆಲ್ಲ ವರ್ಣನೆಗಳೂ ಇದ್ದೇತೀರಬೇಕೆಂದು ಎಲ್ಲಿಯೂ ಯಾರೂ ವಿಧಿಸಿಲ್ಲ. ಅದಕ್ಕೆ ಪ್ರತಿಯಾಗಿ ಇವುಗಳಲ್ಲಿ ಕೆಲವು ಕಡಿಮೆಯಾಗಿದ್ದರೂ ಕಾವ್ಯಕ್ಕೆ ದೋಷವಿಲ್ಲ–ವರ್ಣಿತವಾದವುಗಳ ಚಮತ್ಕಾರವೇ ವಿಮರ್ಶಕರನ್ನು ಮೆಚ್ಚಿಸುವಂತಿದ್ದರೆ, ಎಂದು ಸ್ಪಷ್ಟವಾಗಿ ಹೇಳಿದ್ದಾನೆ.[22] ಇಂದಿನ ಕೆಲವರು ಅಲಂಕಾರಾತ್ಮವಾದಿಗಳೆಂದು ಹೇಳುವ ಭಾಮಹ ದಂಡಿಗಳಿಬ್ಬರೂ ಮಹಾಕಾವ್ಯದಲ್ಲಿ ರಸಗಳೆಲ್ಲ ಇರಲೇಬೇಕೆಂದು ಕಡ್ಡಾಯವಾಗಿ ವಿಧಿಸುವ ಅಂಶವು ಗಮನಾರ್ಹ. ನೀರಸವಸ್ತುವಿಗೆ ಗುಣಾಲಂಕಾರಗಳು ಶೋಭಾವಹವಾಗುವುವೆಂದೂ ಯಾರೂ ಎಂದೂ ಹೇಳಿಲ್ಲ. ಇದೇ ಮಾತನ್ನೇ ರುದ್ರಟನು ಮತ್ತೂ ಸ್ಪಷ್ಟವಾಗಿ ಬರೆದಿದ್ದಾನೆ:—

> **ತತ್ರ ಮಹಾನ್ತೋ ಯೇಷು ಚ**
> **ವಿತತೇಷ್ವಭಿಧೀಯತೇ ಚತುರ್ವರ್ಗಃ ।**
> **ಸರ್ವೇ ರಸಾಃ ಕ್ರಿಯನ್ತೇ**
> **ಕಾವ್ಯಸ್ಥಾನಾನಿ ಸರ್ವಾಣಿ ॥**

[ವ್ಯಾಪ್ತಿಯಲ್ಲಿ ದೊಡ್ಡವು, ಧರ್ಮಾದಿ ಚತುರ್ವರ್ಗಗಳನ್ನೂ ಬೋಧಿಸತಕ್ಕವು, ಮತ್ತು ಎಲ್ಲ ರಸಗಳೂ ತುಂಬಿದ ಕಾವ್ಯಸ್ಥಾನಗಳುಳ್ಳವು–ಇವೇ ಮಹಾಕಾವ್ಯಗಳು]

ಕವಿಯ ಪ್ರತಿಭೆಯ ಪರಿಮಿತತ್ವದಿಂದಲೋ ಇಲ್ಲವೇ ವಿಷಯದ ಪರಿಮಿತಿಗಳಿಂದಲೊ, ಒಂದು ರಚನೆಯು ಒಂದೇ ಪುರುಷಾರ್ಥವನ್ನು ಬೋಧಿಸಬಹುದು, ಅನೇಕ ರಸಗಳು ಬಂದರೂ ಅಸಮಗ್ರವಾಗಿ ಬರಬಹುದು; ಅಥವಾ ಸಮಗ್ರವಾಗಿ ಒಂದೇ ರಸ ಬರಬಹುದು. ಇಂತಹ ಸನ್ನಿವೇಶದಲ್ಲಿ ಕಾವ್ಯವನ್ನು **ಲಘುಕಾವ್ಯ**ವೆಂದು ಪರಿಗಣಿಸಬೇಕೇ ಹೊರತು ಮಹಾಕಾವ್ಯವೆಂದಲ್ಲ:—

> **ತೇ ಲಘುವೋ ವಿಜ್ಞೇಯಾ**
> **ಯೇಷ್ವನ್ಯತಮೋ ಭವೇಚ್ಚತುರ್ವರ್ಗಾತ್ ।**

---

22. ಕನ್ನಡ ಕಾವ್ಯಾದರ್ಶ I, ೨೦. ಕನ್ನಡ ಕಾವ್ಯಾಲಂಕಾರ, ಪು. ೧೪೪-೧೪೫.

ಅಸಮಗ್ರಾನೇಕರಸಾ
ಯೇ ಚ ಸಮಗ್ರೈಕರಸಯುಕ್ತಾಃ ||

ನಾವಿಂದು ಪ್ರಣಯಗೀತೆ, ವಿಡಂಬನಕಾವ್ಯ, ವಿಲಾಪಕಾವ್ಯ, ಲಾವಣಿ, ಹಾಡುಗಳೆನ್ನುವ ಭಾವಗೀತೆಗಳೆಲ್ಲವೂ ಸಂಸ್ಕೃತದ ಲಘುಕಾವ್ಯದಲ್ಲಿ ಸೇರುತ್ತವೆ. ಇವುಗಳ ವ್ಯಾಪ್ತಿ ಸಣ್ಣದಾದರೂ ಸ್ವಾರಸ್ಯ ದೊಡ್ಡದು. ಅದನ್ನು ಸೂಚಿಸುವದಕ್ಕಾಗಿಯೇ ಸುಂದರ ಲಘುಪದ್ಯಗಳನ್ನು 'ಮುಕ್ತಕ' (=ಆಣಿ ಮುತ್ತು) ಗಳೆಂದು ಹಿಂದಿನವರು ಕರೆದಿದ್ದಾರೆ. ಯಾವುದೋ ಒಂದು ಭಾವದ ಒಂದು ಲಹರಿಯ ಸುಂದರ ಶಬ್ದ ಚಿತ್ರವೇ ಮುಕ್ತಕ. ಮಹಾಕಾವ್ಯದಲ್ಲೂ ಮುಕ್ತಕಗಳುಬರಬಹುದು, ಆದರೆ ಭಾವಗೀತೆಗಳಲ್ಲಿ ಅವುಗಳದೇ ಸಾಮ್ರಾಜ್ಯ. ಎಷ್ಟೇ ಉತ್ತಮವಾದ ಲಘುಕಾವ್ಯವನ್ನು ಬರೆದರೂ ಕವಿಯು ಒಳ್ಳೆಯ ಕವಿಯೆನಿಸಿಕೊಳ್ಳಬಹುದೇ ಹೊರತು 'ಮಹಾಕವಿ'ಯೆನಿಸಿಕೊಳ್ಳಲಾರ. ಲಘುಕಾವ್ಯದಿಂದ ತಾತ್ಕಾಲಿಕ ಪ್ರೀತಿ ಕೀರ್ತಿಗಳು ಬರಬಹುದು, ಸಾರ್ವಕಾಲಿಕವಾದ ಪ್ರಚಾರವೂ ಸಿಕ್ಕಬಹುದು. ಆದರೆ ಮಹಾಕಾವ್ಯದಿಂದ ಬರುವ ಮಹೋನ್ನತಿ ದೊರೆಯಲಾರದು. ಅದರಿಂದಲೇ ಮಹಾಕವಿಯಾಗಬೇಕೆಂಬುದೇ ಸಂಸ್ಕೃತ ಕವಿಗಳೆಲ್ಲರ ಹೆಬ್ಬಯಕೆ. ಬರಿಯ ಲಘುಕಾವ್ಯಗಳನ್ನು ಬರೆದರೆ ಅವರಿಗೆ ತೃಪ್ತಿಯಿಲ್ಲ. ಇದೇ ಸಾಹಿತ್ಯ ತತ್ವವೇ ಮುಖ್ಯಾಂಶಗಳಲ್ಲಿ ಗ್ರೀಕ್ ಮತ್ತು ರೋಮನ್ ಜನರಿಗೂ ಪ್ರಿಯವಾಗಿತ್ತೆನ್ನುವುದನ್ನು ಜೆ. ಇ. ಸ್ಪಿಂಗಾರ್ನ್ ಅವರ ಕೆಳಗಿನ ವಾಕ್ಯಗಳು ಸ್ಥಿರಪಡಿಸುತ್ತವೆ :—

> *"The Greeks conceived of literature not as an inevitable expression of creative power, but as a reasoned "imitation" or re-shaping of the materials of life. For Aristotle poetry is the result of man's imitative instinct, and differs from history and science in that it deals with the probable or possible rather than with the real. The Romans conceived of literature as a noble art, intended (through under the guise of pleasure) to inspire men with high ideals of life"*

CREATIVE CRITICISM, P.P. 13-14.

ಕ್ರಿ. ಶ. ಹದಿನೇಳನೆಯ ಶತಮಾನದವರೆಗೆ ಯೂರೋಪ್ ಖಂಡದಲ್ಲೆಲ್ಲ ಈ ತತ್ವವೇ ಪ್ರತಿಷ್ಠಿತವಾಗಿತ್ತೆಂದೂ, ಕಡೆಕಡೆಗೆ ವಿಮರ್ಶಕರು 'ಕಲ್ಪನೆ' (imagination) 'ರಸಾಭಿನಿವೇಶ' (sentiment), 'ಅಭಿರುಚಿ' (taste) ಮುಂತಾದುವಕ್ಕೆ ಪ್ರವೇಶವನ್ನಿತ್ತರೆಂದೂ ಅದೇ ಲೇಖಕರು ಬರೆದಿದ್ದಾರೆ. ಆದರೆ ಈ ಭಾವನೆಗಳೆಲ್ಲವೂ ಸಂಸ್ಕೃತದಲ್ಲಿ ಮೊದಲಿನಿಂದಲೂ ಇದ್ದುವು.

ಮೇಲೆ ಹೇಳಿದ ಕಾವ್ಯ ತತ್ವವು ಕೇವಲ ಲಕ್ಷಣಕಾರರ ಗ್ರಂಥಗಳಲ್ಲಿ ಮಾತ್ರ ಇದ್ದ ವಿಷಯವಲ್ಲ, ಪ್ರಾಚೀನ ಕವಿಗಳಿಗೂ ಸಮ್ಮತವಾಗಿದ್ದಿತೆಂದು ತೋರಿಸಲು ಕನ್ನಡ ಕವಿರಾಜಮಾರ್ಗಕಾರನ ಸಮಕಾಲೀನನೂ (ಕ್ರಿ. ಶ. ೯ ನೆಯ ಶತಮಾನ) ಜೈನ ಕಾವ್ಯ ಸಂಪ್ರದಾಯ ಸಂಸ್ಥಾಪಕನೂ, ಸ್ವಯಂ ಮಹಾಕವಿಯೂ ಆದ ಜಿನಸೇನನ ಕೆಲವು ಸೂಕ್ತಿಗಳನ್ನು ಅವನು ಸಂಸ್ಕೃತ ಆದಿಪುರಾಣದಿಂದ ಕೆಳಗೆ ಉದಾಹರಿಸಿದೆ

**ಕವೇರ್ಭಾವೋಽಥವಾ ಕರ್ಮ ಕಾವ್ಯಂ ತಜ್ಞೈರ್ನಿರುಚ್ಯತೇ।**
**ತತ್ ಪ್ರತೀತಾರ್ಥಮಗ್ರಾಮ್ಯಂ ಸಾಲಂಕಾರ ಮನಾಕುಲಮ್॥**

**ಕೇಚಿದರ್ಥಸ್ಯ ಸೌಂದರ್ಯಮಪರೇ ಪದಸೌಷ್ಠವಮ್।**
**ವಾಚಾಮಲಂಕ್ರಿಯಾಂ ಪ್ರಾಹುಃ ತದ್ ದ್ವಯಂ ನೋ ಮತಂ ಮತಮ್॥**

**ಸಾಲಂಕಾರ ಮುಪಾರೂಢರಸಮುದ್ಭೂತ ಸೌಷ್ಠವಮ್।**
**ಅನುಚ್ಛಿಷ್ಟಂ ಸತಾಂ ಕಾವ್ಯಂ ಸರಸ್ವತ್ಯಾ ಮುಖಾಯತೇ॥**

**ಅಸ್ಪಷ್ಟ ಬಂಧ ಲಾಲಿತ್ಯಂ ಅಪೇತಂ ರಸವತ್ತಯಾ।**
**ನ ತತ್ ಕಾವ್ಯಮಿತಿ ಗ್ರಾಮ್ಯಂ ಕೇವಲಂ ಕಟು ಕರ್ಣಯೋಃ॥**

**ಸುಶ್ಲಿಷ್ಟಪದವಿನ್ಯಾಸಂ ಪ್ರಬಂಧಂ ರಚಯನ್ತಿಯೇ।**
**ಶ್ರಾವ್ಯಬಂಧಂ ಪ್ರಸನ್ನಾರ್ಥಂ ತೇ ಮಹಾಕವಯೋ ಮತಾಃ॥**

**ಮಹಾಪುರಾಣಸಂಬಂಧಿ ಮಹಾನಾಯಕಗೋಚರಮ್।**
**ತ್ರಿವರ್ಗಫಲಸಂದರ್ಭಂ ಮಹಾಕಾವ್ಯಂ ತದಿಷ್ಯತೇ॥**

**ನಿಸ್ತನನ್ ಕತಿಚಿಚ್ಛ್ಲೋಕಾನ್ ಸರ್ವೋಽಪಿ ಕುರುತೇ ಕವಿಃ।**
**ಪೂರ್ವಾಪರಾರ್ಥ ಘಟನೈಃ ಪ್ರಬಂಧೋ ದುಷ್ಕರೋ ಮತಃ॥**

ಶಬ್ದರಾಶಿರಪರ್ಯನ್ತಃ ಸ್ವಾಧೀನೋಽರ್ಥಃ ಸ್ಫುಟಾ ರಸಾಃ ।
ಸುಲಭಾಶ್ಚ ಪ್ರತಿಚ್ಛನ್ದಾಃ ಕವಿತ್ವೇ ಕಾ ದರಿದ್ರತಾ ॥
ಪ್ರಯಾನ್ಮಹತಿ ವಾಙ್ಮಾರ್ಗೇ ಖಿನ್ನೋಽರ್ಥಗಹನಾಟನೈಃ ।
ಮಹಾಕವಿತರುಚ್ಛಾಯಾಂ ವಿಶ್ರಮಾಯಾಶ್ರಯೇತ್ ಕವಿಃ ॥
ಪ್ರಜ್ಞಾಮೂಲೋ ಗುಣೋದಗ್ರಸ್ಕಂಧೋ ವಾಕ್ಪಲ್ಲ
ವೋಜ್ಜ್ವಲಃ ।
ಮಹಾಕವಿತರುರ್ಧತ್ತೇ ಯಶಃಕುಸುಮ ಮಂಜರೀಂ ॥
I 94-103.

[ಕವಿಯ ಭಾವ ಅಥವಾ ಕೃತಿಯೇ 'ಕಾವ್ಯ', ಇದೇ ಅದರ ನಿರ್ವಚನ. ಅದು ಸ್ಫುಟಾರ್ಥಕರವೂ, ಅಗ್ರಾಮ್ಯವೂ, ಸಾಲಂಕಾರವೂ, ಅನಾಕುಲವೂ ಆಗಿರಬೇಕು. ಕೆಲವರು ಅರ್ಥಸೌಂದರ್ಯವನ್ನೂ ಮತ್ತೆ ಕೆಲವರು ಪದ ಸೌಷ್ಠವವನ್ನೂ ಅಲಂಕಾರವೆಂದಿದ್ದಾರೆ. ನಮಗೆ ಎರಡೂ ಇಷ್ಟವೇ. ಸಾಲಂಕಾರವೂ, ಆರೂಢರಸವೂ, ಉತ್ಪನ್ನ ಸೌಷ್ಠವವೂ, ಅಪೂರ್ವವೂ ಆದ ಸತ್ಕಾವ್ಯವು ಸರಸ್ವತಿಯ ಮುಖವೇ ಸರಿ. ಬಂಧಲಾಲಿತ್ಯವಿಲ್ಲದೆ, ರಸತ್ತ್ವವೂ ತಪ್ಪಿದ ರಚನೆಯು ಕಾವ್ಯವಲ್ಲ, ಕಿವಿಗಳನ್ನಿರಿಯುವ ಗ್ರಾಮ್ಯಾಲಾಪವೇ ಅದು. ಯಾರು ಸುಶ್ಲಿಷ್ಟ ಪದವಿನ್ಯಾಸವುಳ್ಳುದೂ, ಸುಶ್ರಾವ್ಯವೂ, ಪ್ರಸನ್ನವೂ ಆದ ಪ್ರಬಂಧವನ್ನು ರಚಿಸುವರೋ ಅವರೇ ಮಹಾಕವಿಗಳು. ಆ ಮಹಾ ಕಾವ್ಯವು ಮಹಾಪುರಾಣದ ವಸ್ತುವನ್ನುಳ್ಳುದೂ ಮಹಾನಾಯಕರನ್ನು ಕುರಿತುದೂ ಧರ್ಮಾರ್ಥಕಾಮಬೋಧಕವೂ ಆಗಿರಬೇಕು. ಒಂದೆರಡು ಶ್ಲೋಕಗಳನ್ನು ಹೆಣೆದು ಸುಲಭವಾಗಿ ಯಾರು ಬೇಕಾದರೂ ಕವಿಯೆನಿಸಿ ಕೊಳ್ಳಬಹುದು, ಆದರೆ ಪೂರ್ವಾಪರ ಸಾಮಂಜಸ್ಯವುಳ್ಳ ಮಹಾಕಾವ್ಯವನ್ನು ಬರೆಯುವುದು ದುಷ್ಕರ. ಶಬ್ದರಾಶಿಯೋ ಅನಂತ, ಅರ್ಥ ಸ್ವಾಧೀನ, ರಸ ಗಳು ಸ್ಫುಟ ಮತ್ತು ಛಂದಸ್ಸುಗಳು ಸುಲಭ—ಎಂದಮೇಲೆ ಕವಿತ್ವಕ್ಕೆಲ್ಲಿಯ ಬಡತನ? ಮಹಾಕಾವ್ಯದ ಮಾರ್ಗದಲ್ಲಿ ಪಯಣಗೈಯುವ ಕವಿಯು ಗಹ ನಾರ್ಥಗಳಿಗೆ ಅಲೆದು ದಣಿವಾದಾಗ ಮಹಾಕವಿಗಳೆಂಬ ಮರಗಳ ನೆರಳಿನಲ್ಲಿ ವಿಶ್ರಮಿಸಿಕೊಳ್ಳಬೇಕು. ಈ ಮಹಾಕವಿತರುವಿಗೆ ಪ್ರತಿಭೆ ಬೇರು, ಗುಣಗಳೇ ಉನ್ನತ ಕಾಂಡ, ವಾಕ್ಕೇ ಚೆಂದಳಿರು. ಯಶಸ್ಸೇ ಅದು ಬಿಡುವ ಕುಸುಮ ಮಂಜರಿ!]

**೫. ಕಾವ್ಯದಲ್ಲಿ ಛಂದಸ್ಸಿನ ಸ್ಥಾನ :**–ಛಂದೋಬದ್ಧವಲ್ಲದ ಗದ್ಯ ವನ್ನೂ ವರ್ಣನಾವೈಪುಲ್ಯವಿರುವುದಾದರೆ ಕಾವ್ಯವೆಂದು ಸಂಸ್ಕೃತದಲ್ಲಿ ಕರೆಯು ವರೆಂದು ಆಗಲೇ ನೋಡಿದೆವು. ಛಂದೋಮಯವಾದುದೆಲ್ಲವೂ ಪದ್ಯ ಕಾವ್ಯ ವೆಂಬ ಭ್ರಾಂತಿ ಅವರಿಗೆ ಎಂದೂ ಇರಲಿಲ್ಲ. ಸಂಸ್ಕೃತದಲ್ಲಿ ಧರ್ಮ, ನೀತಿ, ಅರ್ಥ, ಜ್ಯೋತಿಷ, ಕೋಶ, ವ್ಯಾಕರಣ ಮುಂತಾದ ಎಷ್ಟೋ ಶಾಸ್ತ್ರಗ್ರಂಥಗಳು ಛಂದೋಬದ್ಧವಾಗಿವೆ, ಪುರಾಣಗಳಂತೂ ಸರಿಯೇ ಸರಿ. ಮೇಲೆ ಸೂಚಿಸಿದ ಕಾವ್ಯ ಧರ್ಮಗಳಿದ್ದಲ್ಲದೆ ಯಾವ ರಚನೆಯೂ ಕಾವ್ಯವೆನಿಸಲಾರದೆಂಬುದೇ ಸಿದ್ಧಾಂತ. ಛಂದಸ್ಸಿಗೆ ಅತಿಯಾದ ಪ್ರಾಶಸ್ತ್ಯವಿಲ್ಲ.

**ಗತೋಽಸ್ತಮರ್ಕಃ ಭಾತೀಂದುಃ ಯಾಂತಿ ವಾಸಾಯ ಪಕ್ಷಿಣಃ**

ಎಂಬ ಶ್ಲೋಕಾರ್ಧವನ್ನು ಯಾರಾದರೂ ಕಾವ್ಯವೆಂದಾರೇ ಎಂದು ಭಾಮಹನು ನಮ್ಮನ್ನೇ ಪ್ರಶ್ನಿಸಿದ್ದಾನೆ.[23] ಅದರಲ್ಲಿ ಮನಸ್ಸಿಗೆ ಅಚ್ಚುಮೆಚ್ಚಾಗಬಲ್ಲ ಅಂಶವೇ ಇಲ್ಲವೆಂದ ಮೇಲೆ ಅದು ಕಾವ್ಯವೇ ಅಲ್ಲವೇ ಎಂಬ ಪ್ರಶ್ನೆಯೇ ಏಳು ವುದಿಲ್ಲ. ಈ ಪ್ರಶ್ನೆಯನ್ನು ಮುಂದೆ ಎತ್ತುವ ಮಹಿಮಭಟ್ಟನು ಶಬ್ದಾಲಂಕಾರ ಗಳಿಗೆ ಕಾವ್ಯದಲ್ಲಿ ಯಾವ ಸ್ಥಾನವೋ ಛಂದಸ್ಸಿಗೂ ಅದೇ ಸ್ಥಾನವೆಂದು ನಿಸ್ಸಂದಿಗ್ಧವಾಗಿ ಬರೆಯುತ್ತಾನೆ.[24] ಕಾವ್ಯದ ಶತ್ರುವೆಂದರೆ ಗ್ರಾಮ್ಯ ನುಡಿಗಳೇ. ಕಾವ್ಯವೇ ಅಲ್ಲದ್ದನ್ನು ಪದ್ಯವೇ ಅಲ್ಲವೇ ಎಂದು ಕೇಳುವ ಪ್ರಶ್ನೆ ಹಾಸ್ಯಾಸ್ಪದ.[25]

---

23. ಕನ್ನಡ ಕಾವ್ಯಾಲಂಕಾರ, II, ೮೭.
24. ವ್ಯಕ್ತಿವಿವೇಕ, II.
25. ಹೋಲಿಸಿ—

> I put my hat upon my head
> And walked into the strand ;
> And there I met another man,
> Whose hat was in his hand.

These lines are not bad because they are unpoetic ; but because they are empty of all sense and feeling ; it is an idle attempt to prove that an ape is not a Newton, when it is evident that he is not a man.

S. T. Coleridge—Biographia Literaria, Chap. xviii.

**೬. ಸಂಸ್ಕೃತ ಕಾವ್ಯದ ಅಭ್ಯಾಸಪರಂಪರೆ :**—ಸಂಸ್ಕೃತ ಸಾಹಿತ್ಯದ ಇತಿಹಾಸವನ್ನೋದುವವರಿಗೆ ಒಂದು ವಿಶಿಷ್ಟ ಸಂಗತಿ ಲಕ್ಷ್ಯವನ್ನೆಳೆಯುತ್ತದೆ:—ಕಾವ್ಯವಿಮರ್ಶೆಯೆಂಬ ರಚನೆಯೇ ಸಾವಿರಾರು ವರ್ಷಗಳ ಕಾಲ ಕಾಣಬರುವುದಿಲ್ಲ. ದೇಶದಲ್ಲಿ ವಿದ್ಯೆಯೆಂದರೆ ಸಂಸ್ಕೃತವೇ ಆಗಿದ್ದ ಕಾಲದಲ್ಲಿ ಸುಶಿಕ್ಷಿತರಾದವರೆಲ್ಲರೂ ಸಂಸ್ಕೃತಜ್ಞರಾಗಿದ್ದುದರಲ್ಲಿ ಸಂಶಯವಿಲ್ಲ. ಆದರೆ ಸಾಹಿತ್ಯದ ಆಸ್ವಾದನೆಯು ಸ್ವಯಂವೇದ್ಯವೆಂಬ ಭಾವನೆಯೇ ಪ್ರಬಲವಾಗಿದ್ದುದರಿಂದ ಎರವಲಾಗಿ ಎರಡನೆಯವರ ಮಾತುಗಳನ್ನು ಸ್ವೀಕರಿಸುವ ಪದ್ಧತಿಯನ್ನು ಅವರು ಮೆಚ್ಚುತ್ತಿರಲಿಲ್ಲವೆಂದು ಊಹಿಸಬಹುದಾಗಿದೆ. ಸಾಹಿತ್ಯದ ಹಣ್ಣನ್ನು ಸವಿಯಲು ಪರಪ್ರತ್ಯಯಗಳ ಪ್ರಯೋಜನ ಅಲ್ಪ, ಸ್ವಾನುಭವವೇ ಪರಮಾರ್ಥವೆಂದು ಅವರು ನಂಬಿದ್ದಿರಬಹುದು. ಆದರೆ ಸುಸಂಸ್ಕೃತ ಸಹೃದಯರ ರಸವತ್ತಾದ ಕಾವ್ಯವಿಮರ್ಶೆಗಳು ಕವಿಗಳ ಕೃತಿಗಳಷ್ಟೇ ಇತರರಿಗೆ ಆಸ್ವಾದ್ಯವಾಗುವುದನ್ನು ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಕಂಡಿರುವ ನಮಗೆ ಇದರ ಅಭಾವವು ಸ್ವಲ್ಪಮಟ್ಟಿಗೆ ಮನಸ್ಸನ್ನು ನೋಯಿಸುತ್ತದೆ. ಒಂದು ಕಡೆ ಲಾಕ್ಷಣಿಕರು ಕವಿಗಳಂತೆ ರಸಿಕರಿಗೂ ಮಾರ್ಗದರ್ಶನ ಮಾಡುತ್ತಾರೆ, ಇನ್ನೊಂದು ಕಡೆ ವ್ಯಾಖ್ಯಾನಕಾರರು ಬಾಲಕರಿಗೂ ಮೂಲ ಕೃತಿಯು ಅರ್ಥವಾಗುವಂತೆ ಪ್ರತಿ ಪದಾರ್ಥಗಳನ್ನು ಬರೆಯುತ್ತಾರೆ.[26] ಆದರೆ ನಾವಿಂದು ಯಾವುದನ್ನು ಕಾವ್ಯವಿಮರ್ಶೆಯೆನ್ನುವ ರೂಢಿಯುಂಟೋ ಆ ಜಾತಿಯ ಬರೆವಣಿಗೆ ಸಂಸ್ಕೃತ ಕಾವ್ಯಜಗತ್ತಿನಲ್ಲಿ ಅತ್ಯಲ್ಪ. ಅಲ್ಲಲ್ಲಿ ಕೆಲವು ಕವಿಗಳು ಪೂರ್ವಕವಿಗಳನ್ನು ಸ್ತುತಿಸುವ ಒಂದೆರಡು ಸುಭಾಷಿತಗಳು ಸಿಕ್ಕುತ್ತವೆ. ಪೂರ್ವದ ರಸಿಕರ ವಿಮರ್ಶೆಗಳನ್ನು ತಿಳಿಯಬೇಕೆನ್ನುವ ನಮಗೆ ಇವೇ ಶರಣು.

ಆದರೆ ಕಳೆದ ಒಂದು ಶತಮಾನದಿಂದಲೂ ಸಂಸ್ಕೃತ ಕಾವ್ಯದ ಅಭ್ಯಾಸವು ಪಾಶ್ಚಾತ್ಯ ವಿದ್ವಾಂಸರ ನೇತೃತ್ವದಲ್ಲಿ ಸಾಗಿದುದರ ಪರಿಣಾಮವಾಗಿ ಈ ಕೊರತೆಯು ಸ್ವಲ್ಪಮಟ್ಟಿಗೆ ನಿವಾರಣೆಯಾಗಿದೆಯನ್ನಬಹುದು.

---

26. ಈ ವಿಷಯದ ವಿಸ್ತೃತ ವಿವರಣೆಗೆ ಇದೇ ಲೇಖಕನ 'ಪ್ರಾಚೀನರ ಸಾಹಿತ್ಯಾಭ್ಯಾಸ ಪದ್ಧತಿ,' (ಪ್ರಬುದ್ಧಕರ್ಣಾಟಕ, ರಜತಮಹೋತ್ಸವ ಸಂಚಿಕೆ) ಎಂಬ ಲೇಖನವನ್ನು ನೋಡಿ.

ಸಂಸ್ಕೃತ ಕಾವ್ಯರತ್ನಗಳಲ್ಲಿ ನೂರಾರು ಆಗಲೇ ಜರ್ಮನ್, ಫ್ರೆಂಚ್, ಇಂಗ್ಲಿಷ್ ಮುಂತಾದ ಭಾಷೆಗಳಿಗೆ ಪರಿವರ್ತಿತವಾಗಿರುವುದಷ್ಟೇ ಅಲ್ಲ, ಅವುಗಳ ಗುಣದೋಷ ವಿವೇಚನೆಯೂ ನಡೆದಿದೆ. ಇಂದಿನ ಸಂಸ್ಕೃತ ವಿದ್ಯಾರ್ಥಿಗಳಿಗೆ ಇವುಗಳಿಂದಲೂ ಎಷ್ಟೋ ಸಹಾಯವೊದಗುತ್ತದೆ. ಆದರೆ ಪಾಶ್ಚಾತ್ಯರ ಅಭಿರುಚಿಯು ಎಲ್ಲ ಸಮಯಗಳಲ್ಲಿಯೂ ನಮ್ಮ ಕಾವ್ಯಪರಂಪರೆಗೆ ಯೋಗ್ಯ ಸಹಾನುಭೂತಿಯನ್ನು ತೋರಿಸುವುದೆಂದು ಪ್ರತಿಜ್ಞೆಮಾಡುವುದು ಕಷ್ಟ. ಒಬ್ಬ ಗಯ್ಟೆ, ಒಬ್ಬ ರೈಡರ್, ಒಬ್ಬ ವಿಲ್ಸನ್, ಹೀಗೆ ಅಲ್ಲೊಬ್ಬರು ಇಲ್ಲೊಬ್ಬರು ಉತ್ಸಾಹಾತಿಶಯವನ್ನು ಸಂಸ್ಕೃತ ಕಾವ್ಯಗಳ ವಿಮರ್ಶೆಯಲ್ಲಿ ತೋರಿಸಿದರೂ, ಸಾಮಾನ್ಯವಾಗಿ ಸಂಸ್ಕೃತ ಕಾವ್ಯಗಳನ್ನು ಇತಿಹಾಸ ದೃಷ್ಟಿಯಿಂದ ವಿಮರ್ಶಿಸುವ ಕೀತ್ ಮೊದಲಾದ ಇತಿಹಾಸ ಪಂಡಿತರ ಟೀಕೆಗಳು ಎಷ್ಟೋ ವೇಳೆ ಸತ್ಯದೂರವಾಗಿರುತ್ತವೆ. ಗಿಳಿಪಾಠದಂತೆ ಒಬ್ಬರ ಕಟುವಿಮರ್ಶೆಗೆ ಇನ್ನೊಬ್ಬರು ದನಿಗೂಡಿಸುವುದೂ ಒಂದು ಅಂಧಪರಂಪರೆ ಯಾಗಬಹುದು. ಆಕ್ಸ್‌ಫರ್ಡಿನಲ್ಲಿ ಮಹಾಪ್ರಾಧ್ಯಾಪಕರಾದ ಕೀತ್ ರಂತಹವರೇ

**“ ಅನಾಹೂತಪ್ರವಿಷ್ಟಸ್ಯ ದೃಷ್ಟಸ್ಯ ಕ್ರುದ್ಧಚಕ್ಷುಷಾ ।**
**ಸ್ವಯಮೇವೋಪವಿಷ್ಟಸ್ಯ ವರಂ ಮೃತ್ಯುರ್ನ ಭೋಜನಮ್ ”॥**

ಎಂಬ ಶ್ಲೋಕಕ್ಕೆ—

> ‘ Better death than feeding an uninvited guest who calmly sits down, though you glare angrily at him ’
>
> (History of Sanskrit Literature, p 235)

ಎಂದು ಭಾಷಾಂತರ ಮಾಡಿದ್ದಾರೆ. ಭಾರತದಲ್ಲೇ ಹುಟ್ಟಿ ಬೆಳೆದಿರುವ ಸಂಸ್ಕೃತ ವಿದ್ಯಾರ್ಥಿಗಳು ಕೂಡ ‘ ಭೋಜನ ’ವೆಂದರೆ ಇಲ್ಲಿ ಊಟ ಮಾಡುವುದೆಂದರ್ಥ ಮಾಡುವರೇ ಹೊರತು ಊಟ ಮಾಡಿಸುವುದೆಂದು ಅರ್ಥಮಾಡಲಾರರು. ಇದು ಪಾಶ್ಚಾತ್ಯ ಪಂಡಿತರ ಸಂಸ್ಕಾರಲೋಪಕ್ಕೆ ಒಂದು ಉದಾಹರಣೆ. ಹಾಗೆಯೇ ಕೀತ್ ಅವರು ರಾಮನ ತಂದೆಯ ಹೆಸರು ದಶರಥನೆನ್ನುವ ಬದಲು ದಿಲೀಪನೆಂದು ಒಂದಲ್ಲ, ಮೂರು ಸಲ ಬರೆದಿದ್ದಾರೆ. (ಪು. 95) ಹೀಗಿರುವುದರಿಂದ ಅವರ ವಿಮರ್ಶೆಗಳನ್ನೆಲ್ಲ ವೇದವಾಕ್ಯವೆಂದು

ಪರಿಗಣಿಸುವ ಕಾರಣವಿಲ್ಲ. ಅವರ ಗುಣಗಳನ್ನು—ಅವಕ್ಕೇನೂ ಕಡಿಮೆ ಯಿಲ್ಲ—ಗ್ರಹಿಸಿ ಜತೆಗೆ ಅಚ್ಚ ಭಾರತೀಯರಾದ ಬಂಕಿಂಚಂದ್ರ, ರಬೀಂದ್ರ ನಾಥ ಟಾಗೋರ, ಶ್ರೀ ಅರವಿಂದರು ಮುಂತಾದ ಮಹಾಪುರುಷರ ಸರಸ ವಿಮರ್ಶೆಗಳನ್ನೂ ಪರಿಶೀಲಿಸಿದರೆ ಸಂಸ್ಕೃತ ಕಾವ್ಯವಿಮರ್ಶೆಯ ದೃಷ್ಟಿಯು ಸಾರಗ್ರಾಹಿಯೂ ನಿರ್ದುಷ್ಟವೂ ಆದೀತೆಂದು ತೋರುತ್ತದೆ.

ಇದೇ ಸಂದರ್ಭದಲ್ಲಿ ಪಾಶ್ಚಾತ್ಯರಿಂದಾಗಿರುವ ಮತ್ತೊಂದು ಉಪಕಾರ ವನ್ನೂ ನೆನೆಯಬೇಕು. ಅದೆಂದರೆ ಸಾಹಿತ್ಯಾಭ್ಯಾಸದಲ್ಲಿ ಐತಿಹಾಸಿಕ ದೃಷ್ಟಿ. ಜೀವನಚರಿತ್ರೆಗಾಗಲಿ, ದೇಶದ ಇತಿಹಾಸಕ್ಕಾಗಲಿ ನಮ್ಮ ಜನರು ಹೆಚ್ಚು ಲಕ್ಷ್ಯವಿತ್ತಂತೆ ಕಾಣುವುದಿಲ್ಲ. ಚರಿತೆ, ಇತಿಹಾಸವೆಂಬ ಹೆಸರುಗಳಿಂದ ಬರೆದರೂ ಪೂರ್ವದವರು ಕಲ್ಪಿತಾಂಶಗಳಿಗೇ ಹೆಚ್ಚಿನ ಸ್ಥಾನ ಕೊಡುತ್ತಿದ್ದರು. ಇದರಿಂದ ಸಾಹಿತ್ಯದಲ್ಲಿ ಯಾರ ಕಾಲ ಯಾವುದು, ಯಾರಮೇಲೆ ಪ್ರಭಾವ ಎಷ್ಟರಮಟ್ಟಿಗೆ ಆಯಿತು, ನೂತನ ಸಂಪ್ರದಾಯ ಸ್ಥಾಪಕರು ಯಾರು, ಒಂದೂ ತಿಳಿಯುವುದು ಕಷ್ಟವಾಗಿ ಕಾವ್ಯದ ಆರಂಭ, ವಿಕಾಸ, ವಿಸ್ತಾರ, ಅವನತಿಗಳ ಸ್ಪಷ್ಟಕಲ್ಪನೆ ಆಗುವಂತೆಯೇ ಇರಲಿಲ್ಲ. ಪ್ರಚಲಿತವಿದ್ದ ಕೆಲ ವೊಂದು ದಂತಕಥೆಗಳು ಸತ್ಯದ ವಿವರಣೆಗಿಂತ ವಿಪರ್ಯಾಸವನ್ನೇ ಮಾಡು ವಂತಿದ್ದುವು. ಇವುಗಳನ್ನೆಲ್ಲ ನಿಷ್ಪಕ್ಷಪಾತವಾಗಿ, ಒಮ್ಮೊಮ್ಮೆ ನಿಷ್ಠುರ ವಾಗಿಯೂ, ನಿರೀಕ್ಷಿಸಿ, ಶಾಸನ, ತಾಮ್ರಪಟಗಳು, ಸಕಲ ಗ್ರಂಥಗಳಲ್ಲಿ ಬರುವ ನಾಮೋಲ್ಲೇಖಗಳು ಮುಂತಾದವುಗಳ ಆಧಾರದ ಮೇಲಿಂದ ಸ್ಥೂಲವಾಗಿ ಯಾದರೂ ಒಂದು ಕಾಲಮಾನದ ಚಿತ್ರ ದೊರೆಯುವಂತೆ ಮಾಡಿರುವ ಉಪಕಾರ ಅವಿಸ್ಮರಣೀಯ. ಸಂಶೋಧನೆಗಳು ಮುಗಿದಿವೆಯೆಂದರ್ಥವಲ್ಲ, ಇದುವರೆಗೆ ಕಾಳಿದಾಸನೊಬ್ಬನ ವಿಷಯದಲ್ಲಿಯೇ ಸಾವಿರಾರು ಪುಟಗಳು ತುಂಬುವಷ್ಟು ಊಹಾಪೋಹಗಳೂ ತರ್ಕವಿತರ್ಕಗಳೂ ವಾದವಿವಾದಗಳೂ ಸಂಶೋಧಕರಲ್ಲಿ ಸಾಗಿವೆ. ನಿರ್ಣಯವಿನ್ನೂ ಆಗಿಲ್ಲ. ಸಂಸ್ಕೃತ ಕಾವ್ಯದ ಪರಿಚಯಕ್ಕಾಗಿ ಹೊರಟ ಪ್ರಸ್ತುತ ಗ್ರಂಥದಲ್ಲಿ ವಿದ್ವಾಂಸರ ನಿರ್ಣಯಗಳನ್ನೂ ಅದಕ್ಕೆ ಸಾಧಕವಾದ ಅಂಶಗಳನ್ನೂ ಸಂಕ್ಷಿಪ್ತವಾಗಿ ತೋರಿಸಿದೆಯೇ ಹೊರತು ಚರ್ಚಾಸ್ಪದವಾದ ವಿವರಗಳನ್ನೆಲ್ಲ ಕಲೆಹಾಕುವ ಕೆಲಸವನ್ನು ಮಾಡಿಲ್ಲ. ಗಂಥ್ರಗಳಲ್ಲಿ ಪ್ರಕ್ಷಿಪ್ತ ಯಾವುದು, ಮೂಲ ಯಾವುದು, ಏಕೆ, ಮುಂತಾದ

ವಿಷಯಗಳಲ್ಲಿಯೂ, ಕಾವ್ಯಪಾಠಗಳನ್ನು ಅನೇಕ ಹಸ್ತಪ್ರತಿಗಳನ್ನು ನೋಡಿ ನಿರ್ಣಯಿಸಿರುವ ವಿಷಯಗಳಲ್ಲಿಯೂ ಇಂದಿನ ಸಂಶೋಧಕರ ನಿರ್ಣಯಗಳನ್ನು ಸಾಮಾನ್ಯವಾಗಿ ಅಂಗೀಕರಿಸಲಾಗಿದೆ.

**೭. ಉಪಸಂಹಾರ:**— ಒಂದುನೂರು ವರ್ಷಗಳ ಹಿಂದೆ ತನ್ನ ಕಾವ್ಯಗಳಿಗೆ ಪೀಠಿಕೆಯನ್ನು ಬರೆಯುತ್ತಾ ಆಂಗ್ಲಕವಿಯಾದ ಮ್ಯಾಥ್ಯೂ ಆರ್ನಾಲ್ಡ್‌ನು ಪುರಾತನ ಕಾವ್ಯಮಾರ್ಗದ ಉತ್ತಮ ಪ್ರಶಸ್ತಿಯೊಂದನ್ನು ರಚಿಸಿ ಅದನ್ನು ಈ ಮಾತುಗಳಿಂದ ಮುಗಿಸುತ್ತಾನೆ:—

> "Again, with respect to the study of the classical writers of antiquity it has been said that we should emulate rather than imitate them I make no objection. all I say is, let us study them. They can help to cure us of what is, it seems to me, the great vice of our intellect, manifesting itself in our incredible vagaries in literature, in art, in religion, in morals, namely, that it is **fantastic,** and wants **sanity**. Sanity that is the great virtue of the ancient literature, the want of that is the great defect of the modern, in spite of all its variety and power It is impossible to read carefully the great ancients without losing something of our caprice and eccentricity; And to emulate them we must at least read them.
>
> **Preface to 'Poems,'** 1854.

'ಪ್ರಾಚೀನ ಲೇಖಕರ ಅಧ್ಯಯನವನ್ನು ಕುರಿತು ಇನ್ನೊಂದು ಮಾತು: ಅವರನ್ನು ನಾವು ಮೀರಿಸುವುದು ಯೋಗ್ಯವೇ ಹೊರತು ಅನುಕರಿಸುವುದಲ್ಲವೆಂದು ಹೇಳಲಾಗಿದೆ. ನನ್ನದೇನೂ ಆಕ್ಷೇಪಣೆಯಿಲ್ಲ. ಅವರನ್ನು 'ಓದೋಣ' ಎಂದಿಷ್ಟೇ ನಾನು ಹೇಳುವುದು. ನಮ್ಮ ಸಾಹಿತ್ಯ, ಕಲೆ, ಧರ್ಮ, ನೀತಿ ಎಲ್ಲದರಲ್ಲೂ ಪ್ರಕಟವಾಗುತ್ತಿರುವ ನಮ್ಮ ಊಹಾತೀತ ವಿಪರ್ಯಾಸಗಳಿಗೆ

ಮೂಲವೆಂದು ನನಗೆ ತೋರುವ ನಮ್ಮ ಪ್ರಜ್ಞೆಯ ದೊಡ್ಡ ದುರ್ವ್ಯಾಪಾರವನ್ನು, ಎಂದರೆ **ವಿವೇಕ** ಶೂನ್ಯವಾದ **ಅತಿಪ್ರಸಂಗ** ವನ್ನು ಗುಣಮಾಡಲು ಅವು ನೆರವಾಗಬಹುದು. ವಿವೇಕ-ಅದೇ ಪ್ರಾಚೀನ ಸಾಹಿತ್ಯದ ದೊಡ್ಡ ಗುಣ, ಅದರ ಅಭಾವವೇ ನೂತನ ಸಾಹಿತ್ಯದ ದೊಡ್ಡ ದೋಷ, ವೈವಿಧ್ಯ ಸಾಮರ್ಥ್ಯಗಳಿದ್ದರೂ ಸಹ. ಹಿರಿಯ ಪ್ರಾಚೀನರನ್ನು ಎಚ್ಚರಿಕೆಯಿಂದ ಓದಿ ನಮ್ಮ ಅಯಂತ್ರಿತ ಮತ್ತು ಮನಸ್ವೀ ಮನೋಧರ್ಮಗಳಲ್ಲಿ ಕೊಂಚವನ್ನಾದರೂ ಕಳೆದುಕೊಳ್ಳದೆ ಇರುವುದು ಅಶಕ್ಯ. ಅಲ್ಲದೆ ಅವರನ್ನು ಮೀರಿಸಬೇಕಾದರೆ ಅವರದನ್ನು ಓದುವಷ್ಟನ್ನಾದರೂ ಮಾಡಬೇಕು.' ಇಂದು ಸಂಸ್ಕೃತ ಮಹಾಕವಿಗಳ ವಿಷಯದಲ್ಲಿಯೂ ಇದಕ್ಕಿಂತ ಹೆಚ್ಚು ಸಮಂಜಸವಾದ ಮಾತುಗಳನ್ನು ಹೇಳುವುದು ಸಾಧ್ಯವಿಲ್ಲ. ಸಾವಿರಾರು ವರ್ಷಗಳು ಬೆಳೆದಿರುವ ಸಂಸ್ಕೃತ ಕಾವ್ಯಕ್ಷೇತ್ರದಲ್ಲಿ ಗ್ರಂಥ ರಚನೆ ಮಾಡಿರುವವರ ಸಂಖ್ಯೆ ಎಷ್ಟೋ ಲಕ್ಷಾಂತರವಾಗಬಹುದು. ಆದರೆ ಅವರಲ್ಲಿ ಎಲ್ಲೋ ಎಂಟು ಹತ್ತು ಜನರನ್ನು ಮಾತ್ರ ನಾವು ಮಹಾಕವಿಗಳೆಂದು ಈಗಲೂ ಗೌರವಿಸುತ್ತೇವೆ[27] ಅವರನ್ನು ಓದಿ ಲಾಭ ಪಡೆಯದಿದ್ದರೆ ನಷ್ಟ ನಮ್ಮದೇ. ಒಂದು ಪುಸ್ತಕವು ಇಂದು ಇಪ್ಪತ್ತನೆಯ ಪುನರ್ಮುದ್ರಣವನ್ನೋ, ಮೂವತ್ತನೆಯ ಪುನರ್ಮುದ್ರಣವನ್ನೋ ಕಂಡರೆ ಅದು ಅತ್ಯಂತ ಜನಪ್ರಿಯವಾದುದೆಂದು ಕೊಳ್ಳುತ್ತೇವೆ. ಹಾಗೆಯೇ ವಾಲ್ಮೀಕಿಯ ಕಾವ್ಯದ ಜನಪ್ರಚಾರವನ್ನು ಲೆಕ್ಕಮಾಡಿದರೆ ೨೦ ಕೋಟಿ ಅಥವಾ ೩೦ ಕೋಟಿಯವರೆಗೂ ಏರಬಹುದು. ಅದರ ಮಹತ್ವಕ್ಕೆ ಇದಕ್ಕಿಂತ ಹೆಚ್ಚಿನ ಪ್ರಮಾಣಪತ್ರ ಬೇಕೆ? ಪಾಶ್ಚಾತ್ಯರು ಚಿರಂತನ ಕಾವ್ಯಗಳ ಸಾರ್ವಕಾಲಿಕತೆಯನ್ನು ಸೂಚಿಸಲು Classic ಎಂಬ ಶಬ್ದವನ್ನು ಬಳಸುತ್ತಾರೆ ಮಹಾಕೃತಿ, ಅಮರಕೃತಿ, ಸನಾತನಕೃತಿ, ಮುಂತಾಗಿ ಅದರ ಅರ್ಥ. ವ್ಯಾಪ್ತಿ ವಿಶಾಲವಾಗಿದೆ. ಯಾವುದು ಅನುಕರಣಕ್ಕೆ ಅಸಾಧ್ಯವಾಗಿ, ನಿತ್ಯನೂತನವಾದ ಪ್ರತಿಭಾವಿಲಾಸವಾಗಿ, ಇತರರ ಪ್ರತಿಭೆಗೂ ಪ್ರಬೋಧಕ

---

27. ಈ ಮಾತನ್ನು ಆನಂದವರ್ಧನನೇ ಹೇಳಿಬಿಟ್ಟಿದ್ದಾನೆ—

'ಅಸ್ಮಿನ್ ಅತಿವಿಚಿತ್ರಕವಿಪರಂಪರಾವಾಹಿನಿ ಸಂಸಾರೇ ಕಾಲಿದಾಸಪ್ರಭೃತಯೋದ್ವಿತ್ರಾಃ ಪಂಚಷಾ ವಾ ಮಹಾಕವಯೋ ಗಣ್ಯಂತೇ?

(ಧ್ವನ್ಯಾಲೋಕ, I, ೬)

ವಾಗುವುದೋ ಅದೇ Classic ಎಂಬುದಾಗಿ ಇಂದಿನ ಪ್ರಸಿದ್ಧ ಆಂಗ್ಲ ಕವಿಗಳೂ ವಿಮರ್ಶಕರೂ ಆದ ಟಿ. ಎಸ್. ಎಲಿಯಟ್ ಅವರು ಸೂಚಿಸಿದ್ದಾರೆ.[28] ಈ ಅರ್ಥದಲ್ಲಿ ಸಂಸ್ಕೃತ ಕಾವ್ಯರತ್ನಗಳೂ 'ಕ್ಲಾಸಿಕ್' ಗಳೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅವುಗಳ ಕಾವ್ಯವಸ್ತು ನಿತ್ಯ ಚಂಚಲವಾದ ಅಂಶಗಳನ್ನು ಕುರಿತಿರದೆ ಮಾನವಜೀವನದ ಶಾಶ್ವತ ಪ್ರವೃತ್ತಿಗಳನ್ನು ಕೇಂದ್ರೀಕರಿಸುವುದ ರಿಂದ ಅವುಗಳ ರಮಣೀಯತೆಗೆ ಕಾಲವೇನೂ ಕುಂದನ್ನು ತರಲಾರದು. ಆದರೆ ಅಗತ್ಯವಾಗಿ ಇಂದು ಬೇಕಾಗಿರುವುದು ಬೆಲೆ ಕೊಡಬೇಕಾದ್ದಕ್ಕೆ ಬೆಲೆ ಕೊಡುವಂತಹ ಜನ; ರಸಿಕರಾದ ವಿಮರ್ಶಕರು. ಕಾವ್ಯ ಬರೆದೊಡನೆ ಕವಿಯ ಕೆಲಸ ತೀರಿತು. ನೀರು ತಾವರೆಯನ್ನರಳಿಸುತ್ತದೆ; ಅಲ್ಲಿಗೆ ನೀರಿನ ಕೆಲಸ ವಾಯಿತು. ಅದರ ಚೆಲುವನ್ನು ಕಾಣಬೇಕಾದರೆ ರವಿಕಿರಣವೂ ಬೇಕು.

**ಖ್ಯಾತಿಂ ಗಮಯತಿ ಸುಜನೋ**
**ಸುಖವಿರ್ವಿದಧಾತಿ ಕೇವಲಂ ಕಾವ್ಯಮ್ ।**
**ಪುಷ್ಣಾತಿ ಕಮಲಮಂಭೋ**
**ಲಕ್ಷ್ಮ್ಯಾ ತು ರವಿರ್ನಿಯೋಜಯತಿ ॥**[29]

ಸಂಸ್ಕೃತ ಮಹಾಕಾವ್ಯದ ಮಾರ್ಗವೇ ಕನ್ನಡ ಕವೀಶ್ವರರಿಗೂ ಮೇಲ್ಪಂಕ್ತಿಯಾಗಿತ್ತು. ಕನ್ನಡ ಸಾಹಿತ್ಯವನ್ನು ವಿಸ್ತರಿಸಿದ ಜೈನ, ವೀರಶೈವ, ಬ್ರಾಹ್ಮಣ ಕವಿಶ್ರೇಷ್ಠರೆಲ್ಲರೂ ಈ ಸಂಪ್ರದಾಯವನ್ನು ಮುಕ್ತಕಂಠದಿಂದ ಹೊಗಳಿರುವುದಲ್ಲದೆ, ಅನುಸರಿಸಿಯೂ ಇದ್ದಾರೆ. ಒಂದೆರಡು ಪದ್ಯಗಳನ್ನು ಉದಾಹರಿಸಿ ಈ ಅಧ್ಯಾಯವನ್ನು ಮುಗಿಸುತ್ತೇವೆ.—

---

28. What is a classic?

29. ಇದನ್ನೇ ಆನಂದವರ್ಧನನೂ ಸುಂದರವಾಗಿ ಹೇಳಿದ್ದಾನೆ.—

(ತಾಲಾ ಜಾಅನ್ತಿ ಗುಣಾ ಜಾಲಾ ದೇ ಸಹಿಅಏಹಿ ಘೇಪ್ಪನ್ತಿ।
ರಇಕಿರಣಾನುಗ್ಗಹಿಆಇ ಹೋನ್ತಿ ಕಮಲಾಇ ಕಮಲಾಇ ॥)
ಸಹೃದಯರು ಕೊಂಡಾಗ ಗುಣವು ಗುಣವೆನಿಸುವುದು;
ರವಿಕಿರಣ ದಯೆಗೈಯೆ ಕಮಲ ಕಮಲವಹುದು.

—ಕನ್ನಡ ಧ್ವನ್ಯಾಲೋಕ, ಪು. ೨೭.

ವಿಧೃತಾಲಂಕಾರದಿಂದಂ ನವಯುವತಿಯವೋಲ್ ಲಕ್ಷಣ
ಸ್ಫೂರ್ತಿಯಿಂದಂ
ವಿಧುಜೃಂಭದ್ಬಿಂಬದಂತುಜ್ಜ್ವಳರಸಮಯದಿಂದಂ ಮನೋ
ಜ್ಞೋಕ್ಷುವಂತು- ।
ದ್ಬುಧತತ್ಯಾನಂದದಿಂದಂ ತ್ರಿದಶಕುಜದವೋಲ್ ಧಾತ್ರಿಯೊಳ್
ಶೋಭಿಕುಂ ಸ
ನ್ಮಧುರಂಬೆತ್ತಿರ್ಪ ಕಾವ್ಯಂ ಸುಜನನಿಕರಸೇವ್ಯಂ ವಿಭಾವ್ಯಂ
ಸುನವ್ಯಂ ॥[30]

ವ್ಯಾಕರಣಪರಿಣತನಲಂಕಾರಪರಿಚಿತನ
ನೇಕರಸನಿಪುಣನಭಿಧಾನಪ್ರವೀಣನೆ-
ಲ್ಲಾ ಕಲಾಕುಶಲನೆನಿಪಾತಂ ಕವೀಶನವನಿದಿ
ರೊಳೇನುಮನರಿಯದಾ ।
ಕಾಕುದುರ್ಬೋಧಕಂ ಕವಿಯೆನಿಸಿಕೊಂಡೊಡೆ ಮ-
ಹಾಕವಿಗೆ ಕುಂದೆ? ಜಲಶಯನ ವಿಷ್ಣು ಹರಿಯೆನೆ
ಭೇಕನುಂ ನೀರೊಳಗೆ ಹರಿಯೆನಿಸಿಕೊಂಡೊಡದ
ಕೊಂದನೇ ಚಕ್ರಧರನು ॥[31]

ನವರಸಮುಂ ನಿಮಿರ್ಚುವ ಬೆಡಂಗನಮರ್ಚುವ ದೋಷಮುಂ
ಕಳ-
ಚುವ ಗುಣಮುಂ ಕಬಿಲ್ಚುವಮರ್ದಿಂಪನೊಡರ್ಚುವ
ಬಂಧಮುಂ ತೊಡ- ।
ರ್ಚುವ ಕಿವಿವೊಕ್ಕಲರ್ಚುವೆಳೆಗುಣ್ಪನೊಡರ್ಚುವ ಕಾವ್ಯ
ಸತ್ಕಳಾ-
ರ್ಣವಮನ್ಯಗಲಕ್ಷ್ಮಲಕ್ಷಣವಚೋವಧುವಂ ಬುಧರೊಲ್ದು
ವರ್ಣಿಕುಂ ॥[32]

---

30 ಉದ್ಭಟಕಾವ್ಯ, I, ೩೧.

31 ರಾಘವಾಂಕನ ಸೋಮನಾಥಚರಿತೆ, ಪ್ರಾಸ್ತಾವಿಕ ಪದ್ಯಗಳು.

32 ಗುಣವರ್ಮನ ಪುಷ್ಪದಂತಪುರಾಣ.

" ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ ।
ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ
ಭಯಮ್ ॥ "

ಮೆರೆವರ್ ರಸಸಿದ್ಧರ್ ಭಾ
ಸುರಕೃತಿಗಳ್ ಸತ್ಕವೀಂದ್ರರೆಂದುಂ ಧರೆಯೊಳ್ ।
ಜರೆಮರಣಂಗಳ್ ಪೊರ್ದಲ್
ನೆರೆಯವು ನೋಣವರ ಜಸದ ನಿರ್ಮಲತನುವಂ ॥



# ಅಧ್ಯಾಯ ೨



## ವಾಲ್ಮೀಕಿ ರಾಮಾಯಣ

**ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಮ್ ।**
**ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಮ್ ॥**

**ಕವಿತಾಶಾಖೆಯ ತುದಿಯೊಳ್**
**ಅವಿರತಮೆನೆ ' ರಾಮ ' ' ರಾಮ ' ಎಂದಿಂಗೊರಲಿಂ ।**
**ಸವಿಯಕ್ಕರಮಂ ಬಿಡದುಲಿ-**
**ಯುವ ವಾಲ್ಮೀಕಿಕೋಕಿಲಕ್ಕೆರಗುವೆನಾಂ ॥**

ಸಂಸ್ಕೃತ ಕಾವ್ಯನದಿಗೆ ಶ್ರೀಮದ್ರಾಮಾಯಣವೇ ಮೂಲ. ಅದನ್ನು ಆದಿಕಾವ್ಯವೆಂದು ಕಾಳಿದಾಸ, ಭವಭೂತಿ, ಮುರಾರಿ ಮುಂತಾದ ಮಹಾ ಕವಿಗಳೇ ಉದ್ಗರಿಸಿದ್ದಾರೆ.

**ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ ।**
**ಪುನಾತು ಭುವನಂ ಪುಣ್ಯಾ ರಾಮಾಯಣಮಹಾನದೀ ॥**

ಎಂದು ಹೇಳಿರುವಂತೆ ರಾಮಾಯಣವೇ ಒಂದು ಮಹಾನದಿ, ವಾಲ್ಮೀಕಿಗಿರಿಯಿಂದ ಪ್ರಭವಿಸಿ, ಸಾವಿರಾರು ಕವಿಗಳ ಪ್ರತಿಭೆಗೆ ಸ್ಫೂರ್ತಿದಾಯಿನಿಯಾಗಿ ಅನಂತಕಾಲದಿಂದಲೂ ಭಾರತ ಭೂಮಿಯನ್ನು ಪಾವನಗೊಳಿಸುತ್ತಿರುವ ಪುಣ್ಯಗಂಗೆ. ಉತ್ತಮ ಆದರ್ಶಗಳನ್ನು, ಉಜ್ವಲ ಧರ್ಮವನ್ನು, ಸುಂದರ ಜೀವನದ ಸ್ವರೂಪವನ್ನು ಅದರಂತೆ ಸುಂದರವಾಗಿ, ಸ್ಫುಟವಾಗಿ, ಹೃದಯ ಸ್ಪರ್ಶಿಯಾಗಿ ತೋರಿಸಿಕೊಡುವ ಮತ್ತೊಂದು ಕಾವ್ಯ ಭಾರತದಲ್ಲೇಕೆ, ವಿಶ್ವದಲ್ಲೇ ಇಲ್ಲವೆನ್ನಬಹುದು. ಅನೇಕಾನೇಕ ಶತಮಾನಗಳಿಂದ ಭಾರತದ ಕೋಟ್ಯಾಂತರ ಜನಗಳ ಜೀವನದ ಬೆಳಕಾಗಿ, ಆಚಾರದ ಆಲಂಬನವಾಗಿ ಅತ್ಯಂತ ಪೂಜ್ಯವಸ್ತುವಾಗಿ, ನಿಂತಿರುವ ರಾಮಾಯಣವನ್ನು ವಿಮರ್ಶೆ ಮಾಡುವ ಕೆಲಸ ದೋಣಿಯಲ್ಲಿ ಸಾಗರವನ್ನು ದಾಟುವಂತೆ, ಕುರುಡು ದೀಪದಿಂದ ಅರಮನೆಯ ಅಂದವನ್ನು ತೋರಿಸಹೊರಟಂತೆ. ಒಂದು ಕಡೆ ಅದು

ಮಹರ್ಷಿಯ ದಿವ್ಯದರ್ಶನದ ನಿರ್ಮಲ ಸರೋವರವಾದ ಮಹಾಕಾವ್ಯ, ಆದಿ ಕಾವ್ಯ. ಇನ್ನೊಂದು ಕಡೆ ಮುಂದಿನ ಮಹಾಕವಿಗಳಿಗೆಲ್ಲ ಮಾರ್ಗದರ್ಶಿಯಾದ ಮೂಲಕಾವ್ಯ, ಮತ್ತೊಂದುಕಡೆ ಅದು ಪೂರ್ವದ ಇತಿಹಾಸ ಮತ್ತು ವೇದ ಶಾಸ್ತ್ರಗಳ ಸಾರ, ಪೂರ್ವದ ಆಚಾರ ವ್ಯವಹಾರಗಳ ಮಣಿಮುಕುರ. ಎಲ್ಲಕ್ಕಿಂತ ಹೆಚ್ಚಾಗಿ ಭಾರತೀಯ ಜೀವನದ ಜೀವವಾಗಿ, ಕಾಲಕಾಲಕ್ಕೆ ರೂಪಾಂತರ ಗಳನ್ನು ಪಡೆಯುತ್ತ 'ಶತಕೋಟಿ ಪ್ರವಿಸ್ತರ'ವಾಗಿ ಬೆಳೆದ ಅಪೂರ್ವ ಗ್ರಂಥ. ಇವೆಲ್ಲವನ್ನೂ ಏಕಕಾಲದಲ್ಲಿ ಮನಸ್ಸಿನಲ್ಲಿಟ್ಟು, ರಾಮಾಯಣದ ಬಹುಮುಖ ವಾದ ಮಹತ್ವವನ್ನ ಳೆಯುವುದು ವಿಮರ್ಶಕನ ಕರ್ತವ್ಯ. ಮಹಾಕವಿಯ ದಿವ್ಯ ಪ್ರತಿಭೆ, ಸಾಹಿತ್ಯಚರಿತ್ರೆಯ ಸೂಕ್ಷ್ಮಪರಿಚಯ, ಶಾಸ್ತ್ರಕಾರನ ಖಚಿತ ಬುದ್ಧಿ ವಿದ್ವಾಂಸನ ನಿಶಿತಪ್ರಜ್ಞೆ, ಇವೆಲ್ಲವೂ ಏಕಕಾಲದಲ್ಲಿ ವಿಮರ್ಶಕನಲ್ಲಿ ಕೂಡು ವುದು ಎಷ್ಟು ಅಪೇಕ್ಷಣೀಯವೋ ಅಷ್ಟೇ ಅಸಂಭವ. ಮುಂದಿನ ಸಂಸ್ಕೃತ ಕಾವ್ಯದ ಸ್ವರೂಪ ಜ್ಞಾನಕ್ಕೆ ರಾಮಾಯಣದ ಪರಿಚಯವು ಅನಿವಾರ್ಯ ವಾದುದರಿಂದ ಅದರ ಗಮನೀಯ ಅಂಶಗಳನ್ನು ಸೂಚಿಸುವ ಒಂದು ಸಣ್ಣ ಯತ್ನವನ್ನು ಮಾತ್ರ ಈ ಅಧ್ಯಾಯದಲ್ಲಿ ಮಾಡಿದೆ. ರಾಮಾಯಣದ ಪಾರಾ ಯಣದ ಆನಂದದಲ್ಲಿ ಆಯುಷ್ಯವನ್ನೇ ಕಳೆದಿರುವ ಲಕ್ಷಾಂತರ ಜನರಿಗೆ ನಮ್ಮಲ್ಲಿ ಕೊರತೆಯಿಲ್ಲ. ಶ್ರೀರಾಮನನ್ನು ಭಕ್ತಿಯಿಂದ ಪೂಜಿಸದ ಭಾರತೀಯ ನಿಲ್ಲ. ಆದರೆ 'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎನ್ನುವ ಸ್ಥಿತಿ ಒದಗಿದಾಗ ಭಕ್ತಿಶ್ರದ್ಧೆಗಳನ್ನು ಬದಿಗಿಟ್ಟು ಪೂರ್ವೋತ್ತರ ವಿಚಾರ ಮಾಡುವ ಕೆಲಸ ವಿದ್ವಾಂಸನ ಪಾಲಿಗೆ ಬರುತ್ತದೆ. ತನ್ನ ಸಂಶೋಧನೆಗಳಿಂದ ಭಕ್ತನ ಭಕ್ತಿ ಕುಂದಬಹುದೋ ಹೆಚ್ಚಬಹುದೋ, ಅದು ಅವನಿಗೆ ಅಪಕೃತ. ಆದರೆ ಮೂಢ ಭಕ್ತಿಗಿಂತ ಜ್ಞಾನಪೂರ್ವವಾದ ಭಕ್ತಿ ಉಪಾದೇಯತರ ವೆಂಬುದು ಅವನ ಕಲ್ಪನೆ. ಈ ವಿದ್ವದ್ದೃಷ್ಟಿಯಿಂದ ಮುಖ್ಯವಾಗಿ ಜರ್ಮನ್ ವಿದ್ವಾಂಸರು ಕಳೆದ ನೂರುವರ್ಷಗಳ ಅವಧಿಯಲ್ಲಿ ಎಷ್ಟೋ ಅಭ್ಯಾಸ ನಡೆ ಸಿದ್ದಾರೆ. ಶ್ರುತಿಗಳು ವಿಭಿನ್ನವೆಂದು ತರ್ಕವನ್ನಾಶ್ರಯಿಸಿದರೆ, ಅದು ಮತ್ತೂ ಅಪ್ರತಿಷ್ಠವಾಗುವುದೆಂದು ಶಂಕರಾಚಾರ್ಯರು ಹೇಳಿದಂತೆ ಇಂದಿನ ಸಂಶೋಧನೆ ಗಳ ಅವಸ್ಥೆಯೂ ಆಗಿದೆ. ಒಬ್ಬ ಮಹಾಮತಿಯು 'ಸಾಧಾರ'ವಾಗಿ ಹೇಳಿ ದ್ದನ್ನು ಇನ್ನೊಬ್ಬ ಮಹಾಮತಿಯು 'ಸಾಧಾರ'ವಾಗಿಯೇ ಖಂಡಿಸುವುದು

ಈ ಸಂಶೋಧನೆಗಳ ನಿತ್ಯಚಿತ್ರವಾಗಿದೆ. ಈ ಅಧ್ಯಾಯದಲ್ಲಿ ಸಂಗ್ರಹವಾಗಿ ಸಂಶೋಧನೆಗಳ ಫಲವನ್ನು ಸೂಚಿಸಿ ಅನಂತರ ಕಾವ್ಯವಿಮರ್ಶೆಗೆ ಸಾಗಿವೆ

"ಆದಿಕಾವ್ಯ" ಈ ಹೆಸರಿನ ಸಾರ್ಥಕ್ಯವನ್ನು ವಿವರಿಸುವ ಒಂದು ಕಥೆ ಶ್ರೀಮದ್ರಾಮಾಯಣದಲ್ಲಿಯೇ ಬಾಲಕಾಂಡದಲ್ಲಿ ಬರುತ್ತದೆ. ಅಶ್ವಘೋಷ ಕಾಳಿದಾಸ, ಭವಭೂತಿಗಳಂಥ ಮಹಾ ಕವಿಗಳೂ ಆನಂದವರ್ದನ, ರಾಜ ಶೇಖರರಂಥ ಮಹಾ ವಿಮರ್ಶಕರೂ ಈ ಕಥೆಯ ಪ್ರಾಮಾಣ್ಯವನ್ನಂಗೀಕರಿಸಿ ದ್ದಾರೆ. ಕಾವ್ಯೋತ್ಪತ್ತಿಯ ರಹಸ್ಯವನ್ನು ಸಾಂಕೇತಿಕವಾಗಿ ಸೂಚಿಸುವುದರಿಂದ ಆ ಕಥೆಗೆ ಹೆಚ್ಚಿನ ಮಹತ್ವವಿದೆ. ಕಥೆಯಿದು :--

ಒಂದು ಮಧ್ಯಾಹ್ನ ಮಹರ್ಷಿ ವಾಲ್ಮೀಕಿ ಶಿಷ್ಯನಾದ ಭಾರದ್ವಾಜ ನೊಡನೆ ಎಂದಿನಂತೆ ಸ್ನಾನಕ್ಕಾಗಿ ಹೊರಟಿದ್ದಾನೆ ತಮಸಾನದಿಯ ಸ್ನಾನ ಘಟ್ಟ ಇನ್ನೂ ಸಿಕ್ಕಿಲ್ಲ, ಆದರೆ ಬಿಸಿಲಿನ ಬೇಗೆ ಅತಿಯಾಗಿ ಋಷಿ ಸಮೀಪದ ನದಿಗೆ ಅಲ್ಲಿಯೇ ಇಳಿಯಲು ಹೊರಡುತ್ತಾನೆ, ನೀರು ಅಷ್ಟು ತಿಳಿಯಾಗಿಯೂ ರಮಣೀಯವಾಗಿಯೂ ಇತ್ತಂತೆ, ಸತ್ಪುರುಷನ ಮನಸ್ಸಿನ ಹಾಗೆ.--

**ರಮಣೀಯಂ ಪ್ರಸನ್ನಾಂಬು ಸನ್ಮನುಷ್ಯಮನೋ ಯಥಾ**

(I. ii. 2).

ಕಲಶ, ನಾರುಮಡಿಗಳನ್ನು ಶಿಷ್ಯನ ಕೈಯಿಂದ ತೆಗೆದುಕೊಂಡಿದ್ದಾನೆ. ಇಳಿಯು ತ್ತಿರುವಾಗ ಸುತ್ತಲೂ ಒಂದುಸಲ ವನವನ್ನು ನೋಡುತ್ತಾನೆ ಪಕ್ಕದಲ್ಲಿಯೇ ಕ್ರೌಂಚಪಕ್ಷಿಗಳ ಮಿಥುನವೊಂದು ಕೂಡಿ ನಲಿಯುತ್ತಿದೆ, ಇಂಪಾಗಿ ಉಲಿಯು ತ್ತಿದೆ. ನೋಡು ನೋಡುತ್ತಿರುವಂತೆಯೇ ಜೋಡಿಹಕ್ಕಿಗಳಲ್ಲಿ ಒಂದನ್ನು 'ಪಾಪನಿಶ್ಚಯ'ನೂ 'ವೈರನಿಲಯ'ನೂ ಆದ ನಿಷಾದನು ಕೊಂದು ಕೆಡಹು ತ್ತಾನೆ. ರಕ್ತದಲ್ಲಿ ಮೈ ನೆನೆದು ಹೊರಳಾಡಿ ಸಾಯುತ್ತಿರುವ ಅದನ್ನು ಕಂಡ ಹೆಣ್ಣು ಹಕ್ಕಿ ಕರುಳು ಕರಗುವಂತೆ ಕೂಗಿಡುತ್ತದೆ. ಸಾಯುತ್ತಿರುವ ಹಕ್ಕಿ ಯನ್ನು ನೋಡಿ ಧರ್ಮಾತ್ಮನಾದ ಋಷಿಯಲ್ಲಿ ಮರುಕ ಮೂಡುತ್ತದೆ, ತಾನಾಗಿಯೇ ಒಂದು ಶ್ಲೋಕ ಬಾಯಿಂದ ಹೊರಬೀಳುತ್ತದೆ: —

**'ಮಾ ನಿಷಾದ ಪ್ರತಿಷ್ಠಾಂ ತ್ವಮಾಗಮಃ ಶಾಶ್ವತೀಃಸಮಾಃ ।**
**ಯತ್ಕ್ರೌಂಚ ಮಿಥುನಾದೇಕಮವಧೀಃ ಕಾಮಮೋ**
**ಹಿತಮ್ ॥'** (I. ii. 12)

**ಬೇಡನೆ, ಪೆರ್ಮೆಯು ಪಡೆಯು**
**ಲ್ಕೇಡೆಂದುಂ ಸರ್ವಕಾಲಮಿಂತೀ ತೆರದಿಂ ।**
**ನೋಡಲ್ ಕೊಂದಯ್ ಬೇಟಮು**
**ನಾಡುತೆ ಮೈಮರೆದ ಕೊಂಚೆಜೋಡಿಯೊಳೊಂದಂ ॥**

ಇದೇನು ನಾನು ಹೇಳಿದ್ದು! ಹಕ್ಕಿಯ ಶೋಕದಿಂದ ಏನೋ ಹೇಳಿಬಿಟ್ಟೆ! ಎಂದು ಸ್ವಲ್ಪ ಹೊತ್ತು ತನ್ನ ನುಡಿಗೆ ತಾನೇ ವಿಸ್ಮಯಪಡುತ್ತಾನೆ. ಆ ನುಡಿ ಅಷ್ಟು ಅಸಾಧಾರಣವಾಗಿತ್ತು :—

**‘ ಪಾದಬದ್ಧೋಽಕ್ಷರಸಮಃ ತಂತ್ರೀಲಯಸಮನ್ವಿತಃ ।**
**ಶೋಕಾರ್ತಸ್ಯ ಪ್ರವೃತ್ತೋ ಮೇ ಶ್ಲೋಕೋ ಭವತು ನಾನ್ಯಥಾ ॥’** (I. ii 15)

ಶಿಷ್ಯನಿಗೆ ಹೇಳುತ್ತಾನೆ-- ‘ ಪಾದಬದ್ಧವಾಗಿದೆ , ಅಕ್ಷರಗಳು ಸಮವಾಗಿವೆ , ತಂತ್ರಿಯ ಲಯಕ್ಕೆ ಕೂಡುತ್ತದೆ ಶೋಕಾರ್ತನಾದ ನನ್ನ ಬಾಯಿಂದ ಬಂದು ದನ್ನು ಶ್ಲೋಕವೆಂದೇ ಕರೆಯೋಣ, ಬೇರೆ ಯೋಚನೆಯೇ ಬೇಡ. ’ ಅನಂತರ ಸ್ನಾನಾದಿ ನಿತ್ಯವಿಧಿಗಳನ್ನು ಮುಗಿಸಿಕೊಂಡು ಋಷಿ ಆಶ್ರಮಕ್ಕೆ ಬರುವಾಗಲೂ ಅವನಿಗೆ ಅದೇ ಯೋಚನೆ. ಶಿಷ್ಯ ಹಿಂದೆ ಹಿಂದೆ ಕಲಶ ಹಿಡಿದು ಬರುತ್ತಿದ್ದಾನೆ. ಆಶ್ರಮ ಸಿಕ್ಕಿತು. ಅಲ್ಲಿಯೂ ವಾಲ್ಮೀಕಿಗೆ ಇದೇ ಧ್ಯಾನ. ಅಷ್ಟರಲ್ಲಿ ಬ್ರಹ್ಮನೇ ಅಲ್ಲಿಗೆ ಬರುತ್ತಾನೆ ಅವನಿಗೆ ಆಸನವನ್ನೇನೋ ಕೊಟ್ಟ, ಆದರೂ ಮನಸ್ಸಿನ ಗುಂಗು ತಪ್ಪಿಲ್ಲ ‘ ನಿಷ್ಕಾರಣವಾಗಿ ಅಂಥ ಸವಿದನಿಯ ಕ್ರೌಂಚವನ್ನು ಕೊಲ್ಲಬಹುದೇ ’, ಎಂಬ ಆಲೋಚನೆ ಬರುವುದರ ಜತೆಗೆ ಮತ್ತೆ ಶ್ಲೋಕವೂ ನೆನಪಾಗುತ್ತದೆ; ಶೋಕವೂ ಮತ್ತೆ ಉಕ್ಕುತ್ತದೆ. ಬ್ರಹ್ಮನು ಅವನ ಸಂಶಯವನ್ನು ನಿವಾರಣೆ ಮಾಡಿ ಹೇಳುತ್ತಾನೆ-“ ನನ್ನ ಪ್ರೇರಣೆ ಯಿಂದಲೇ ನಿನ್ನ ಬಾಯಲ್ಲಿ ಹೀಗೆ ಬಂದಿತು. ನೀನು ರಚಿಸಿರುವುದು ಶ್ಲೋಕವೇ ಎಂದು ಖ್ಯಾತವಾಗಲಿ ; ಸಂಶಯ ಬೇಡ ”--

**“ ಶ್ಲೋಕ ಏವಾಸ್ತ್ವಯಂ ಬದ್ಧೋ ನಾತ್ರ ಕಾರ್ಯಾ ವಿಚಾರಣಾ ।**
**ಮಚ್ಛಂದಾದೇವ ತೇ ಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ ॥ ”**
(I. ii. 28 )

ಧರ್ಮಾತ್ಮನೂ, ಧೀಮಂತನೂ, ಧೀರನೂ ಆದ ರಾಮನ ಚರಿತ್ರೆಯನ್ನು ನಾರದ ತಿಳಿಸಿದ್ದಾನೆ. ಅದನ್ನು ಈ ಛಂದಸ್ಸಿನಲ್ಲಿಯೇ ರಚಿಸು. ನಿನಗೆ ರಾಮ ಲಕ್ಷ್ಮಣ, ಸೀತೆ, ರಾಕ್ಷಸರು ಎಲ್ಲರ ವೃತ್ತಾಂತವೂ ಕಣ್ಣಿಗೆ ಕಟ್ಟಿದಂತೆ ಗೋಚರಿಸಲಿ. ಬೆಟ್ಟಗಳೂ ನದಿಗಳೂ ಭೂಮಿಯಮೇಲೆ ಇರುವತನಕ ಪುಣ್ಯಕರವೂ ಶ್ಲೋಕಬದ್ಧವೂ ಮನೋಹರವೂ ಆದ ನಿನ್ನ ರಾಮಾಯಣ ಕೃತಿಯು ಪ್ರಚಾರಗೊಳ್ಳಲಿ

**'ಯಾವತ್ ಸ್ಥಾಸ್ಯನ್ತಿ ಗಿರಯಃ ಸರಿತಶ್ಚ ಮಹೀತಲೇ ।**
**ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ' ॥**

(I. ii. 33-4)

ಎಂದು ವರವಿತ್ತು ಅಂತರ್ಧಾನ ಹೊಂದುವನು.

ಈ ಕಥೆಯನ್ನು ರಾಮಾಯಣದ ಭಕ್ತರು ಸೇರಿಸಿರುವಂತೆ ಕಾಣುವುದು ಸಹಜ ಅದು ಹೇಗೆಯೇ ಇರಲಿ. ಇದರಲ್ಲಿ ಸೂಚ್ಯವಾಗಿರುವ ಅಂಶ ಮಾತ್ರ ಪ್ರಾಚೀನ ಹಾಗೂ ಗಮನಾರ್ಹವಾಗಿದೆ ವಾಲ್ಮೀಕಿಗಳಿಗಿಂತ ಮುಂಚೆ ಪಾದಬದ್ಧವೂ, ಅಕ್ಷರಸಮವೂ, ತಂತ್ರೀಲಯ ಸಮನ್ವಿತವೂ, ಆದ ಶ್ಲೋಕ ವಿರಲಿಲ್ಲ ವೇದಮಂತ್ರಗಳಲ್ಲಿಯೇ ಅನುಷ್ಟುಭ್ ಛಂದಸ್ಸಿರುವುದು ನಿಜ, ಆದರೆ ಅದು ಲೌಕಿಕ ವಿಷಯಗಳ ವರ್ಣನೆಗೆ ಉಪಯುಕ್ತವಾಗಿರಲಿಲ್ಲ ಪ್ರಸಿದ್ಧವಾದ 'ಪಂಚಮಂ ಲಘು ಸರ್ವತ್ರ'[1] ಮುಂತಾದ ಶ್ಲೋಕಲಕ್ಷಣ ಗಳೆಲ್ಲವನ್ನೂ ಒಳಗೊಂಡಿರಲಿಲ್ಲ. ರಾಮಾಯಣಕ್ಕೆ ಪೂರ್ವದಲ್ಲಿಯೂ ನಳ ದಮಯಂತಿ ಮುಂತಾದ ಉಪಾಖ್ಯಾನಗಳ ಪೂರ್ವರೂಪಗಳಿದ್ದು ಅವುಗಳಲ್ಲಿ ಈ ಛಂದಸ್ಸು ಇದ್ದಿರಬಹುದಾದರೂ, ರಾಮಾಯಣದ ವ್ಯಾಪ್ತಿಯ ಮಹಾ ಕಾವ್ಯವೊಂದು ಈ ಛಂದಸ್ಸಿನಲ್ಲಿ ಹಿಂದೆ ರಚಿತವಾಗಿರಲಿಲ್ಲ. ಇಷ್ಟನ್ನು ಯಾರೂ ಒಪ್ಪಬಹುದಾಗಿದೆ. ಇದಕ್ಕಿಂತ ಹೆಚ್ಚಾಗಿ, ಕವಿಗೆ ಸ್ಫೂರ್ತಿಬರುವುದು ಜೀವನ ದಿಂದ ಮತ್ತು ಕಾವ್ಯದ ಭಾಷೆ ಸಾಂಕೇತಿಕ ಎಂಬ ಎರಡು ಕಾವ್ಯತತ್ವಗಳನ್ನು ಈ ಕಥೆಯು ಬಹಳ ಸುಂದರವಾಗಿ ಚಿತ್ರಿಸುತ್ತದೆ. ಬ್ರಹ್ಮನ ವರವು ಕವಿ ಕಲ್ಪನೆಯ ಅಪ್ರತಿಹತ ಪ್ರಸರಣದ ಒಂದು ವ್ಯಾಖ್ಯೆ ಮಾತ್ರ. ಕಲ್ಪನಾಸತ್ಯವು

---

1. **ಶ್ಲೋಕೇ ಷಷ್ಠಂ ಗುರು ಜ್ಞೇಯಂ ಸರ್ವತ್ರ ಲಘು ಪಂಚಮಮ್ ।**
**ದ್ವಿಚತುಃಪಾದಯೋರ್ಹ್ರಸ್ವಂ ಸಪ್ತಮಂ ದೀರ್ಘಮನ್ಯಯೋಃ ॥**

ಜೀವನದ ಸತ್ಯದಿಂದ ಪ್ರಚೋದಿತವಾದರೂ ಸೌಂದರ್ಯ ಸಮ್ಮಿಶ್ರಣದಿಂದ ರೂಪಾಂತರ ಪಡೆದು ಸಾರ್ವಕಾಲಿಕತೆಯನ್ನು ಪಡೆಯುವ ಅಂಶವು ಇಲ್ಲಿ ಹೃದಯಂಗಮವಾಗಿ ಸೂಚಿತವಾಗಿದೆ. ಇದನ್ನೇ ಆನಂದವರ್ಧನಾಚಾರ್ಯರು ಸ್ಥಾಯಿಭಾವವಾದ ಶೋಕವು ಕರುಣರಸರೂಪವಾಗಿ ಪರಿಣತವಾಗುವುದೆಂಬ ಪಾರಿಭಾಷಿಕ ಶಬ್ದಗಳಿಂದ ಸಿದ್ಧಾಂತಿಸುತ್ತಾರೆ.[2]

ರಾಮಾಯಣದ ರಚನೆಗೆ ಮೂಲವೆನಿಸುವ 'ಮಾನಿಷಾದ'ಎಂಬ ಶ್ಲೋಕವು ಛಂದಸ್ಸಿನ ದೃಷ್ಟಿಯಿಂದ ನಿರ್ದುಷ್ಟವಾದರೂ, ಅರ್ಥ ದೃಷ್ಟಿಯಿಂದ ಅಪೂರ್ವ ಮಹತ್ವಯುತವೆಂದು ಭಾಸವಾಗುವುದಿಲ್ಲ. ಆದರೆ ಗೋವಿಂದರಾಜ ಮುಂತಾದ ವ್ಯಾಖ್ಯಾನಕಾರರು 'ಮಾ'ಎಂದರೆ ಲಕ್ಷ್ಮಿ, 'ಮಾನಿಷಾದ' ಎಂದರೆ ಲಕ್ಷ್ಮೀನಿವಾಸನಾದ ಮಹಾವಿಷ್ಣು ಎಂದು ಮುಂತಾಗಿ ಅರ್ಥಸ್ವಾರಸ್ಯಗಳನ್ನು ಬಗೆಬಗೆಯಾಗಿ ತೋರಿಸಿ ರಾಮಾಯಣಕ್ಕೆ ಮಂಗಳ ಶ್ಲೋಕವೆನಿಸುವ ಮಹೌಚಿತ್ಯವು ಅದರಲ್ಲುಂಟೆಂದು ಸಾಧಿಸುತ್ತಾರೆ. ಇದು ವ್ಯಾಖ್ಯಾಕಾರರ ಬುದ್ಧಿ ಕೌಶಲವೇ ಹೊರತು ವಸ್ತುಸ್ಥಿತಿಯಲ್ಲ. ವಸ್ತುತಃ 'ತಿಲಕ ವ್ಯಾಖ್ಯೆಯಲ್ಲಿ[3] ಸೂಚಿಸಿರುವಂತೆ ಇಡೀ ರಾಮಾಯಣದ ಕಥಾವಸ್ತುವೇ ಆ ಶ್ಲೋಕಾರ್ಥದಿಂದ ಸೂಚಿತವಾಗುತ್ತಿದೆಯೆನ್ನಬಹುದು. ರಾಮಾಯಣವನ್ನೋದಿದವರಿಗೆ ಜೋಡಿಹಕ್ಕಿಗಳೆಂದೊಡನೆ ಒಬ್ಬರನ್ನೊಬ್ಬರು ಅಗಲಿರಲಾರದ ಎರಡು ಜೀವಗಳು–ರಾಮ ಮತ್ತು ಸೀತೆ—ನೆನಪಿಗೆ ಬರುತ್ತಾರೆ. ಅವರನ್ನು ಅಗಲಿಸುವ ಕ್ರೂರ ನಿಷಾದ ರಾವಣ. ಈ ಕರುಣಮಯವಾದ ಕಥಾಸೂತ್ರವು ಪ್ರತಿಯೊಂದು ಸಂಸಾರದಲ್ಲಿಯೂ ಬರುವ ಜೀವನಸತ್ಯ. ಅದರ ಸಂಕೇತವಾದ ಕವಿಭಾಷೆಯೆಂದು ನೆನೆದರೆ ಶ್ಲೋಕದಲ್ಲಿ ಔಚಿತ್ಯವನ್ನು ಕಾಣಬಹುದು.

**ರಾಮಾಯಣದ ರೂಪಾಂತರಗಳು[4] :**—ರಾಮಾಯಣದ ಪ್ರಚಾರವು ದೇಶದಾದ್ಯಂತ ಇದ್ದುದರಿಂದ, ಬಾಯಿಂದ ಬಾಯಿಗೆ ಹೋಗುವಾಗ

---

2. ನೋಡಿ—ಇದೇ ಲೇಖಕನ ಕನ್ನಡ ಧ್ವನ್ಯಾಲೋಕ, ಪು. ೮-೯

3. ನಿರ್ಣಯಸಾಗರ ಮುದ್ರಣ, ಮುಂಬಯಿ.

4. ಈ ಭಾಗವನ್ನು ಬರೆಯುವುದರಲ್ಲಿ ಡಾ॥ ಬುಲ್ಕೆ ಅವರ 'ರಾಮಕಥಾ' (ಹಿಂದಿ) ಎಂಬ ಗ್ರಂಥದಿಂದ ಹೆಚ್ಚಿನ ಸಹಾಯವಾಗಿದೆ. (ಅಲಹಾಬಾದ್ ವಿಶ್ವವಿದ್ಯಾಲಯ, ೧೯೫೦)

ಮೂಲಪಾಠದಲ್ಲಿ ಎಷ್ಟೆಷ್ಟೋ ವ್ಯತ್ಯಾಸಗಳು ಈ ಎರಡೂವರೆ ಸಹಸ್ರ ವರ್ಷಗಳ ಕಾಲಾವಧಿಯಲ್ಲಿ ಬಂದೊದಗುವುದು ಸಹಜವಾಗಿಯೇ ಇದೆ. 'ಸಂಧ್ಯಾವಂದನೆ ಸಾವಿರಪಾಠ'ವೆಂಬಂತೆ ರಾಮಾಯಣದ ಸ್ಥಿತಿಯೂ ಆಗಿದೆ. 'ಉತ್ತರಕಾಂಡ' (ಸರ್ಗ ೯೩)ದಲ್ಲಿ ಹೇಳಿರುವಂತೆ ರಾಮಾಯಣವನ್ನು ಋಷಿವಾಟ, ಬ್ರಾಹ್ಮಣಗೃಹ, ರಸ್ತೆ, ರಾಜಮಾರ್ಗ ಅರಮನೆ,ಗಳಲ್ಲೆಲ್ಲ ಹಾಡುತ್ತಿದ್ದರು.

**ಕೃತ್ಸ್ನಂ ರಾಮಾಯಣಂ ಕಾವ್ಯಂ ಗಾಯತಾಂ ಪರಮಾಮುದಾ**
**ಋಷಿವಾಟೇಷು ಪುಣ್ಯೇಷು ಬ್ರಾಹ್ಮಣಾವಸಥೇಷು ಚ ।**
**ರಥ್ಯಾಸು ರಾಜಮಾರ್ಗೇಷು ಪಾರ್ಥಿವಾನಾಂ ಗೃಹೇಷು ಚ ॥**

ಇದುವರೆಗೆ ಸಿಕ್ಕಿರುವ ರಾಮಾಯಣದ ಹಸ್ತಪ್ರತಿಗಳನ್ನೆಲ್ಲ ಪರಿಶೀಲಿಸಿ ಸಂಸ್ಕೃತ ವಿದ್ವಾಂಸರು ಮುಖ್ಯವಾಗಿ ಮೂರು ಪಾಠಕ್ರಮಗಳನ್ನು ನಿರ್ದೇಶಿಸಿದ್ದಾರೆ ೧ ದಾಕ್ಷಿಣಾತ್ಯ, ೨ ಗೌಡೀಯ, ೩. ಪಶ್ಚಿಮೋತ್ತರೀಯ.

ದಾಕ್ಷಿಣಾತ್ಯಪಾಠವೇ ಕನ್ನಡಿಗರಿಗೆ ಚಿರಪರಿಚಿತ. ಇದು ಬೊಂಬಾಯಿ[5] ಮದ್ರಾಸುಗಳಲ್ಲಿ[6] ಮುದ್ರಿತವಾಗಿದೆ ಗೌಡೀಯ ಪಾಠವು ಕಲ್ಕತ್ತಾ ಸಂಸ್ಕೃತ ಗ್ರಂಥಮಾಲೆಯಲ್ಲಿಯೂ ಪ್ಯಾರಿಸ್ ನಗರದಲ್ಲಿಯೂ[7] ಅಚ್ಚಾಗಿದೆ. ಪಶ್ಚಿಮೋತ್ತರೀಯ ಪಾಠವನ್ನು ಲಾಹೋರಿನ ದಯಾನಂದ ಮಹಾವಿದ್ಯಾಲಯದವರು ಪ್ರಕಟಿಸಿದ್ದಾರೆ.[8] ಇವು ಮೂರನ್ನೂ ಹೋಲಿಸಿದರೆ ಉತ್ತರಕಾಂಡದಲ್ಲಿ ವ್ಯತ್ಯಾಸಗಳು ಬಹಳ ಕಡಿಮೆ, ಉಳಿದಕಾಂಡಗಳಲ್ಲಿ ಹೆಚ್ಚು. ಗೌಡೀಯ ಮತ್ತು ಪಶ್ಚಿಮೋತ್ತರೀಯ ಪಾಠಗಳು ಹೆಚ್ಚು ನಿಕಟ, ದಾಕ್ಷಿಣಾತ್ಯ ಪಾಠದ ಅನೇಕ ಆರ್ಷಪ್ರಯೋಗಗಳನ್ನು ತಿದ್ದಿ ಬರೆದಂತೆ ತೋರುತ್ತದೆ. ಆದ್ದರಿಂದ ಮೂರೂ ಪಾಠಗಳಲ್ಲಿ ಯಾವಶ್ಲೋಕಗಳುಂಟೋ ಅವೇ ಪ್ರಾಚೀನವೆಂದರೂ, ಆ ಶ್ಲೋಕಗಳಲ್ಲಿ ದಾಕ್ಷಿಣಾತ್ಯಪಾಠವೇ ಮೂಲಪಾಠವೆಂದು ವಿದ್ವಾಂಸರೂ ಪರಿಗಣಿಸುತ್ತಾರೆ. ವಾಲ್ಮೀಕಿರಾಮಾಯಣದ ಪಾಠವು ಆರಂಭದಲ್ಲಿ ದಾಕ್ಷಿ

---

5. ನಿರ್ಣಯಸಾಗರ ಮುದ್ರಣ, ದ್ವಿತೀಯ ಸಂಸ್ಕರಣ, ೧೯೦೨.
6. ಮದ್ರಾಸ್ ಲಾ ಜರ್ನಲ್ ಪ್ರೆಸ್, ೧೯೪೦. ಇತ್ಯಾದಿ.
7. Gorresio ಅವರಿಂದ ಮುದ್ರಿತ ೧೮೪೩-೧೮೬೭.
8. 1923 f.

ಣಾತ್ಯ, ಉದೀಚ್ಯ ಎರಡೇ ರೂಪವಾಗಿತ್ತೆಂದೂ, ಕಡೆಕಡೆಗೆ ಉದೀಚ್ಯಪಾಠ ದಲ್ಲಿ ಗೌಡೀಯ ಮತ್ತು ಪಶ್ಚಿಮೋತ್ತರೀಯಗಳೆಂಬ ಭೇದದ್ವಯಗಳಾದು ವೇದೂ ಭಾವಿಸುತ್ತಾರೆ.[9]

**ದಾಕ್ಷಿಣಾತ್ಯಪಾಠದಲ್ಲಿ ಇಲ್ಲದ ಕೇವಲ ಉದೀಚ್ಯ (= ಗೌಡೀಯ ಮತ್ತು ಪಶ್ಚಿಮೋತ್ತರೀಯ) ಪಾಠದಲ್ಲಿ ಕಾಣುವ ಅಂಶಗಳು :** -

1. ಮೂರನೆಯ ಅನುಕ್ರಮಣಿಕೆ (ದಾಕ್ಷಿಣಾತ್ಯಪಾಠದಲ್ಲಿ ಎರಡೇ ಇವೆ)

2. ಭರತ ಶತ್ರುಘ್ನರ ಯಾತ್ರೆ ಮತ್ತು ರಾಜಗೃಹದಲ್ಲಿ ವಾಸ (ಗೌ. I 97. 80 ಮತ್ತು ಪ. II. i 2)

3. ಕೈಕೇಯಿಗೆ ಬ್ರಾಹ್ಮಣನು ಕೊಡುವ ಶಾಪ (ಗೌ. II viii. 33 ಇತ್ಯಾದಿ ಮತ್ತು ಪ. II. xi. 37 ಇತ್ಯಾದಿ)

4. ಸೀತೆಯು ಜನಕ ಮತ್ತು ಮೇನಕೆಯರ ಮಾನಸಪುತ್ರಿಯೆಂಬ ಕಥೆ (ಗೌ. III. iv; ಪ. III. ii)

5. ಸಂಪಾತಿಯು ತನ್ನ ಮಗನಾದ ಸುಪಾರ್ಶ್ವನನ್ನು ಕರೆಯುವುದು (ಗೌ. IV. 62, ಪ. IV. 55)

6. ಕೇಸರಿಯು ಧವಲವೆಂಬ ದಿಗ್ಗಜವನ್ನು ಸಂಹಾರ ಮಾಡುವುದು ಮತ್ತು ಹನುಮಂತನ ಜನ್ಮ (ಗೌ. V. 3, ಪ. IV. 52)

7. ರಾವಣನಿಗೆ ಬುದ್ಧಿ ಹೇಳಬೇಕೆಂದು ನಿಕಷೆಯು ವಿಭೀಷಣನನ್ನು ಒತ್ತಾಯ ಮಾಡುವುದು (ಗೌ V 76, ಪ V 75)

8. ದಶರಥ ಮತ್ತು ಸಾಗರಗಳ ಮೈತ್ರಿ (ಗೌ. V 94, 21-22, ಪ V. 96. 46–62)

---

9. 1. C. Bulcke: The Three Recensions of the Rāmāyana, Journal of Oriental Research, Madras, Vol. XVII., p. 1 ff.

2. H. Jocobi · Das Rāmāyana., Bonu. 1893.

9. ಕುಂಭಕರ್ಣನು ರಾವಣನಿಗೆ 'ವಿಷ್ಣುವು ಅವತಾರಮಾಡಿ ರಾವಣ ಸಂಹಾರಮಾಡುತ್ತಾನೆಂದು ನಾರದನು ನನಗೆ ಹೇಳಿದ್ದನು' ಎನ್ನುವುದು (ಗೌ VI. 40. 41; ಪ. VI. 41. 42)

10. ಹನುಮಂತ-ಕಾಲನೇಮಿಗಳ ವೃತ್ತಾಂತ, ಹನುಮಂತನಿಗೂ ಗಂಧರ್ವರಿಗೂ ಯುದ್ಧ (ಗೌ VI. 82-3, ಪ, VI. 81)
ಈ ಹೆಚ್ಚಿನ ಕಥೆಗಳು ಕ್ರಿ. ಶ. ೧ನೆಯ ಶತಮಾನದ ವೇಳೆಗೇ ಉದೀಚ್ಯಪಾಠ ದಲ್ಲಿ ಬಂದಿದ್ದಿರಬಹುದೆಂದು ಸಿಲ್ವನ್ ಲೆವಿಯವರು ಅಭಿಪ್ರಾಯಪಡುತ್ತಾರೆ.[10] ಕ್ರಿ. ಶ. ೫ನೆಯ ಶತಮಾನದಹೊತ್ತಿಗೆ ಉದೀಚ್ಯಪಾಠವು ಎರಡು ಕವಲಾಗಿತ್ತು.

**ಗೌಡೀಯ ಪಾಠದಲ್ಲಿ ಮಾತ್ರ ಬರುವ ಅಂಶಗಳು :—** ವಿಭೀಷಣನು ರಾವಣನಿಂದ ಬೇರೆಯಾದ ಮೇಲೆ ಮೊದಲು ಕೈಲಾಸದಲ್ಲಿ ಸೋದರನಾದ ವೈಶ್ರವಣನನ್ನು ಭೆಟ್ಟಿಯಾಗಿ ಕಡೆಗೆ ರಾಮನ ಶರಣು ಹೋಗುತ್ತಾನೆ. (ಗೌ. V 89)

2. ಸಂಜೀವನವನ್ನು ಹುಡುಕುತ್ತ ಹೊರಟ ಹನುಮಂತನು ದಾರಿಯಲ್ಲಿ ಭರತನನ್ನು ಸಂದರ್ಶಿಸುತ್ತಾನೆ. (ಗೌ VI 82-96)

3 ಸೀತಾಪಹರಣಕ್ಕೆ ಪೂರ್ವದಲ್ಲಿ ಜಟಾಯು ರಾಮನನ್ನು ಕಂಡು ಬಂಧುಗಳನ್ನು ನೋಡಲು ಹೋಗುತ್ತಾನೆ. (ಗೌ. III. 23-3)

**ಕೇವಲ ಪಶ್ಚಿಮೋತ್ತರೀಯ ಪಾಠದಲ್ಲಿ ಬರುವ ಅಂಶಗಳು :—**

1. ಕೈಕೇಯಿಯ ಪೂರ್ವಕಥೆ ಬ್ರಾಹ್ಮಣನಿಂದ ವರದಾನ (ಪ. II. 11-42)

2. ಹನುಮಂತನ ಪ್ರಶಂಸ. (ಪ. IV. 59)

3 ರಾಮ ಲಕ್ಷ್ಮಣರಿಗೆ ಸಮುದ್ರನು ಕವಚ ಹಾಗು ಶಸ್ತ್ರಗಳನ್ನು ಕೊಡುವುದು. (ಪ. V. 99)

4. ನಾಗಪಾಶದ ಸಂದರ್ಭದಲ್ಲಿ ನಾರದರು ಬಂದು ರಾಮನಿಗೆ 'ನೀನು ವಿಷ್ಣುವೇ' ಎಂದು ನೆನಪುಮಾಡಿಕೊಡುವುದು. (ಪ. VI. 27)

---

10. S. Levi : Journale Asiatique, 1918.

5. ರಾವಣನ ಯಜ್ಞ ಭಂಗಕ್ಕಾಗಿ ಅಂಗದನು ಮಂಡೋದರಿಯನ್ನು ಕೇಶವನ್ನೆಳೆದುಕೊಂಡು ತರುವುದು. (ಪ. VI. 82)

**ಕೇವಲ ದಾಕ್ಷಿಣಾತ್ಯ ಪಾಠದಲ್ಲಿ ಬರುವ ಅಂಶಗಳು :—**

1 ರಾಮಾದಿಗಳ ಜನ್ಮತಿಥಿ, ನಕ್ಷತ್ರ, ಇತ್ಯಾದಿ (ದಾ. I xii 2)

2. ಬಾಲಕಾಂಡದಲ್ಲಿ ಅನೇಕ ಪೌರಾಣಿಕ ಕಥೆಗಳು:—ಕಶ್ಯಪನ ತಪಸ್ಸು, ಅದರ ಪರಿಣಾಮವಾಗಿ ಹರಿಯು ವಾಮನಾವತಾರದಲ್ಲಿ ಪುತ್ರನಾಗುವುದು. (xix. 10-17), ಜಹ್ನು ಋಷಿಯು ಗಂಗೆಯನ್ನು ಕುಡಿಯುವುದು (43. 34-41), ವಿಷ್ಣುವಿನ ಮೋಹಿನೀ ಅವತಾರ (45. 40-43); ವಿಷ್ಣುವಿನ ಕೂರ್ಮಾವತಾರ (45. 27-32), ಇಂದ್ರನು ಬ್ರಾಹ್ಮಣನ ರೂಪಿನಲ್ಲಿ ವಿಶ್ವಾಮಿತ್ರನಿಂದ ಅನ್ನಯಾಚನೆ ಮಾಡುವುದು (65. 3-10), ಸಗರನ ಜನ್ಮವೃತ್ತಾಂತ (70. 22-37).

3. ಕೈಕೇಯಿಯ ತಾಯಿಯನ್ನು ಪರಿತ್ಯಾಗ ಮಾಡಿದ ಪ್ರಸಂಗ (II 35)

4. ಸೀತೆಯು ಯಮುನೆಯನ್ನು ಪ್ರಾರ್ಥಿಸುವುದು (II. 55. 13-21)

5. ರಾಮ, ಲಕ್ಷ್ಮಣ, ಸೀತೆಯರು ವಾಲ್ಮೀಕಿಯನ್ನು ಚಿತ್ರಕೂಟದಲ್ಲಿ ಸಂದರ್ಶಿಸುವುದು (II 56. 16-17).

6 ಅಕಂಪನನು ರಾವಣನಿಗೆ ಜನಸ್ಥಾನದ ವಿಷಯಗಳನ್ನು ಅರುಹುವುದು ಮತ್ತು ರಾವಣನು ಮಾರೀಚನಲ್ಲಿಗೆ ಬರುವುದು (III. 31).

7. ಅಯೋಮುಖಿಯೆಂಬ ರಾಕ್ಷಸಿಯ ವೃತ್ತಾಂತ (III. 69. 11-12)

8. ಸುಗ್ರೀವನು ಲಕ್ಷ್ಮಣನ ಕೋಪವನ್ನಿಳಿಸಲು ತಾರೆಯನ್ನು ಕಳಿಸುವುದು. (IV 33. 25-62).

9. ಹನುಮಂತನಿಗೂ ಲಂಕೆಯ ಅಭಿಮಾನಿದೇವತೆಗೂ ಯುದ್ಧ (V. 3. 20-51)

10. ಸುಗ್ರೀವ-ರಾವಣರ ಯುದ್ಧ (VI. 50, VI. 41. 1-10)

11. ಅಗಸ್ತ್ಯನು ರಾಮನಿಗೆ ಆದಿತ್ಯ ಹೃದಯವನ್ನು ಉಪದೇಶಿಸುವುದು. (VI. 105)

12. ಸೀತೆಯು ತಾರೆ ಮುಂತಾದ ವಾನರಪತ್ನಿಯರನ್ನು ಅಯೋಧ್ಯೆಗೆ ಕರೆದುಕೊಂಡು ಹೋಗುವಂತೆ ಪ್ರಾರ್ಥಿಸುವುದು(VI. 123. 23-32).

**ಮೂಲರಾಮಾಯಣದ ಸ್ವರೂಪ ಮತ್ತು ಪ್ರಕ್ಷೇಪಗಳು :—**

1. **ಉತ್ತರಕಾಂಡವು** ವಾಲ್ಮೀಕಿ ರಚಿತವಲ್ಲವೆಂಬ ಸಂದೇಹವನ್ನು ಭವಭೂತಿಯೇ ಮುಂತಾದ ಪ್ರಾಚೀನಕವಿಗಳೂ 'ತಿಲಕ' ಮುಂತಾದ ವ್ಯಾಖ್ಯಾನಗಳೂ ವ್ಯಕ್ತಪಡಿಸಿವೆ

2 ಮೇಲಿನ ಮೂರು ಪಾಠಾಂತರಗಳ ತುಲನೆಯಿಂದ, ಉತ್ತರ ಕಾಂಡವಲ್ಲಿ ವ್ಯತ್ಯಾಸಗಳಿಲ್ಲದಿರುವುದಕ್ಕೆ ಅದು ಪ್ರಕ್ಷಿಪ್ತವಾಗಿರುವುದೇ ಕಾರಣ ವೆಂದು ತೋರುತ್ತದೆ.

3. ಯುದ್ಧಕಾಂಡದ ಕಡಗೇ ಫಲಶ್ರುತಿಯು ಬರುವುದು ಅಲ್ಲಿಗೆ ಕಾವ್ಯ ಮುಗಿಯುವುದನ್ನು ಸೂಚಿಸುತ್ತದೆ. (VI. 128-117)[11]

4. ಬಾಲಕಾಂಡದಲ್ಲಿ ಬರುವ ಒಂದು ಅನುಕ್ರಮಣಿಕೆಯಲ್ಲಿ ಕೇವಲ ಅಯೋಧ್ಯಾಕಾಂಡದಿಂದ ಯುದ್ಧಕಾಂಡಗಳವರೆಗಿನ ಕಥೆ ಮಾತ್ರ ನಿರ್ದಿಷ್ಟ ವಾಗಿವೆ. ಉತ್ತರ ಮತ್ತು ಬಾಲಕಾಂಡಗಳ ವಿಷಯವನ್ನು ಅನಂತರ ಸೂಚಿಸಲು ಎರಡನೆ ಅನುಕ್ರಮಣಿಕೆಯನ್ನು ಯಾರೋ ಸೇರಿಸಿದಂತಿದೆ ಅದರಲ್ಲೂ "ಸಪ್ತಕಾಂಡಾನಿ" ಎನ್ನುವ ಬದಲು 'ಷಟ್ ಕಾಂಡಾನಿ ತಥೋತ್ತರಮ್' ಎಂದಿರುವುದು ಅರ್ಥಗರ್ಭಿತವಾಗಿದೆ. (I. 4)

5. ಅಲ್ಲಿಯೇ ರಾಮಾಯಣದ ಶ್ಲೋಕಸಂಖ್ಯೆ 24000 ಎಂದಿದೆ. ಆರು ಕಾಂಡಗಳಲ್ಲಿಯೇ ಈ ಸಂಖ್ಯೆ ಸಿಕ್ಕುತ್ತದೆ.

6. ಉತ್ತರಕಾಂಡದ ಶೈಲಿಗೂ ಉಳಿದ ಕಾಂಡಗಳ ಶೈಲಿಗೂ ಮಹದಂತರವಿದೆ. ಇಲ್ಲಿಯ ಕಥೆಗಳಾದ ಸೀತಾಪರಿತ್ಯಾಗ, ಶತ್ರುಘ್ನಚರಿತೆ, ಶಂಬೂಕವಧೆ, ರಾಮಾಶ್ವಮೇಧ, ಸೀತೆಯ ಅಂತರ್ಧಾನ, ಮುಂತಾದುವುಗಳಿಗೂ ಪೂರ್ವದ ಕಥೆಗೂ ಸಂಬಂಧ ಕಡಿಮೆ.

7. ರಾಮನು ಅವತಾರಪುರುಷನೆಂಬ ವಿಷಯ ಇಲ್ಲಿ ಹೆಚ್ಚಾಗಿ ಬರುತ್ತದೆ.

---

11. ಇಲ್ಲಿ 'ರಾಮಾಯಣಮಿದಂ ಕೃತ್ಸ್ನಂ' ಎಂದಿದೆ.

8. ಸೀತೆಯು ಪೂರ್ವಜನ್ಮದಲ್ಲಿ ವೇದವತಿಯಾಗಿದ್ದಳೆಂಬ ಅಂಶ ಉತ್ತರಕಾಂಡದಲ್ಲಿ ಮಾತ್ರ ಬರುತ್ತದೆ.

9. ಮಹಾಭಾರತದಲ್ಲಿ ಬರುವ ರಾಮೋಪಾಖ್ಯಾನದಲ್ಲಿ ಉತ್ತರ ಕಾಂಡದ ಕಥೆಯೇ ಇಲ್ಲ.

10. ಸೇತುಬಂಧ, ಭಟ್ಟಿಕಾವ್ಯ, ಜಾನಕೀಹರಣ, ರಾಮಚರಿತ, ಅಭಿಷೇಕ ನಾಟಕ, ಅನರ್ಘರಾಘವ, ಬಾಲರಾಮಾಯಣ, ತಮಿಳಿನ ಕಂಬ ರಾಮಾಯಣ ಮುಂತಾದ ಗ್ರಂಥಗಳಲ್ಲೆಲ್ಲ ಕಥೆ ರಾಮನ ಪಟ್ಟಾಭಿಷೇಕದಲ್ಲಿ ಮುಗಿಯುತ್ತದೆ.

ಮೇಲಿನ ಕಾರಣಗಳಿಂದ ಉತ್ತರಕಾಂಡವು ಮೂಲ ರಾಮಾಯಣ ದಲ್ಲಿರಲಿಲ್ಲವೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಒಂದೊಂದೇ ಪಾಠಗಳಲ್ಲಿರುವ ಕಥಾಂಶಗಳೂ ಮೂಲ ರಾಮಾಯಣದಲ್ಲಿದ್ದಿರಲಾರವೆಂಬುದು ಸ್ವತಸ್ಸಿದ್ಧ ವಾಗಿಯೇ ಇದೆ.

ಇದರಂತೆಯೇ ಹೆಚ್ಚು ಪ್ರಕ್ಷೇಪಗಳು ಸೇರಿರುವ ಇನ್ನೊಂದು ಕಾಂಡ ವೆಂದರೆ ಬಾಲಕಾಂಡ :--

1. ರಾಮಾಯಣದ ಮೊದಲ ಅನುಕ್ರಮಣಿಕೆಯಲ್ಲಿ (ಸರ್ಗ ೧) ಬಾಲಕಾಂಡದ ಕಥೆಯೇ ಇಲ್ಲ.

2. ಬಾಲಕಾಂಡದ ಶೈಲಿಗೂ ಉತ್ತರಕಾಂಡದ ಶೈಲಿಗೂ ಹೆಚ್ಚು ಹೋಲಿಕೆಗಳಿವೆ. ಸಗರನ ಕಥೆ, ಸಮುದ್ರಮಂಥನ, ವಿಶ್ವಾಮಿತ್ರನ ವೃತ್ತಾಂತ ಮುಂತಾದುವು ಮುಖ್ಯಕಥಾಭಾಗದೊಡನೆ ನೇರವಾಗಿ ಸಂಬಂಧ ಹೊಂದಿಲ್ಲ. ಪೌರಾಣಿಕ ಶೈಲಿಯಲ್ಲಿ ರಚಿತವಾಗಿವೆ.[12] ರಾಮಾಯಣದ ಮೂಲ ಭಾಗಗಳಲ್ಲಿ ಇಂತಹ ಕಥೆಗಳಿಲ್ಲ.

3. ಇಲ್ಲಿ ರಾಮನ ವಿಷಯವಾಗಿ ಹೇಳಿದ ಅಂಶಗಳು ಮುಂದಿನ ಕಾಂಡಗಳಲ್ಲಿ ಸಮರ್ಥಿತವಾಗಿಲ್ಲ, ಅಷ್ಟೇ ಅಲ್ಲ, ಕೆಲವೊಮ್ಮೆ ಬಾಧಿತ ವಾಗಿವೆ. ಉದಾಹರಣೆಗೆ ಬಾಲಕಾಂಡದಲ್ಲಿ ಲಕ್ಷ್ಮಣನಿಗೂ ಊರ್ಮಿಳೆಗೂ ಮದುವೆಯಾಯಿತೆಂದು ಹೇಳಿದೆ. ಅರಣ್ಯಕಾಂಡದಲ್ಲಿ ಶೂರ್ಪನಖಿಯೊಡನೆ

---

12. Lesny, V : Ueber das Purana-artige Gepraege des Bālakānda—ZDMG. Vol XXVII. pp 497-500.

ಶ್ರೀ ರಾಮನು ಲಕ್ಷ್ಮಣನಿಗಿನ್ನೂ ಮದುವೆಯಾಗಿಲ್ಲವೆನ್ನುತ್ತಾನೆ. (III. 18-3). ಅಯೋಧ್ಯಾಕಾಂಡದಲ್ಲಿ ಭರತನು ಬಾಲ್ಯದಲ್ಲಿಯೇ ಸೋದರ ಮಾವನ ಮನೆಗೆ ಹೋಗಿ ಅಲ್ಲೇ ದಶರಥನ ಮರಣಕಾಲದವರೆಗೂ ಇದ್ದನೆಂದಿದೆ (II 8-28). ಬಾಲಕಾಂಡದಲ್ಲಿ ಭರತನೂ ಮಿಥಿಲೆಯಲ್ಲಿ ಬಂದು ಲಗ್ನವಾಗುವ ವರ್ಣನೆಯಿದೆ. ಲಗ್ನವಾದ ಮೇಲೆ ಮತ್ತೆ ಅವನು ಮಾವನ ಮನೆಗೆ ಹೋದನೆಂದೂ ಎಷ್ಟೋ ಋತುಗಳನ್ನು ಕಳೆದನೆಂದೂ ಇದೆ. (I. 77-25) ಆದರೆ ಅಯೋಧ್ಯಾಕಾಂಡದಲ್ಲಿ ರಾಮನನ್ನು 'ಬಾಲಕ' ನೆಂದು ಕರೆದಿದೆ.

4. ಈ ಕಾರಣಗಳಿಂದ ಬಾಲಕಾಂಡವೂ ಉತ್ತರಕಾಂಡದಂತೆ ಪ್ರಕ್ಷೇಪ ಭೂಯಿಷ್ಠವೆಂದೇ ವಿದ್ವಾಂಸರು ನಿರ್ಣಯಿಸುತ್ತಾರೆ. ಅಷ್ಟೇ ಅಲ್ಲ ಬಾಲಕಾಂಡದ ಪ್ರಕ್ಷೇಪವು ಒಂದೇ ಕಾಲದಲ್ಲೂ ನಡೆಯದೆ ಅನೇಕ ವೇಳೆ ನಡೆದಿದೆಯೆಂದೂ ಊಹಿಸುತ್ತಾರೆ. ಪೀಠಿಕೆ (1-4), ಅಯೋಧ್ಯೆಯ ವರ್ಣನೆ (5-7), ಅಶ್ವಮೇಧಯಾಗದ ವರ್ಣನೆ (8, 13, 14) ರಾಮನ ಜನ್ಮ ಮತ್ತು ಬಾಲ್ಯ (18.31), ವಿವಾಹ (66-73), ಅಯೋಧ್ಯೆಗೆ ಪುನರಾಗಮನ (77) ಇಷ್ಟು ಸರ್ಗಗಳು ಅದರ ಪೂರ್ವರೂಪವೆಂದೂ ಉಳಿದ ಕಥಾನಕಗಳೆಲ್ಲವೂ ಅನಂತರ ಕಾಲದುವೆಂದೂ ತಿಳಿಯುತ್ತಾರೆ.

ಇದಲ್ಲದೆ ರಾಮಾಯಣದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಪ್ರಕ್ಷೇಪಗಳಿಗೆ ಅನಂತರಕಾಲದ ಅವತಾರವಾದವೇ ಕಾರಣವೆಂದು ವಿದ್ವಾಂಸರ ಮತ.[13] ಎಲ್ಲಕ್ಕೂ ಮುಂಚೆ ಬ್ರಹ್ಮನು-ವಿಷ್ಣುವಲ್ಲ-ಮತ್ಸ್ಯ, ಕೂರ್ಮ, ವರಾಹ ಈ ಅವತಾರಗಳನ್ನು ತಾಳಿದನೆಂಬ ಕಲ್ಪನೆಯಿದ್ದಿತು. (ಶತಪಥಬ್ರಾಹ್ಮಣ I. viii. i. ೧, VII v. i. ೫, XIV i 2. ೧೧, ತೈತ್ತಿರೀಯ ಬ್ರಾಹ್ಮಣ, I. i. 3. ೫, ಕಾಠಕಸಂಹಿತಾ, VIII. ii ). ರಾಮಾಯಣದ ಅಯೋಧ್ಯಾಕಾಂಡದಲ್ಲಿಯೂ (110)

---

13. cf. (1) H. Jacobi, op. cit. p. 65, 139.
(2) E. W. Hopkins; Epic Mythology, p. 211.
(3) P. V. Kane, History of Dharmaśāstra, Vol II. pt. II. p 317 f:

**ತತಃ ಸಮಭವದ್ ಬ್ರಹ್ಮಾ ಸ್ವಯಂಭೂರ್ದೈವತೈಃ ಸಹ।**
**ಸ ವರಾಹಸ್ತತೋ ಭೂತ್ವಾ ಪ್ರೋಜ್ಜಹಾರ ವಸುಂಧರಾ ॥**

ಎಂದಿದೆ. ಇವೆಲ್ಲವೂ ವಿಷ್ಣುವಿನ ಅವತಾರವೆಂದು ತಿಳಿಯಲಾರಂಭಿಸಿದ್ದು ಕೃಷ್ಣ-ವಾಸುದೇವ-ವಿಷ್ಣುಗಳ ಐಕ್ಯವನ್ನು ಕಲ್ಪಿಸಿದ ಉತ್ತರಕಾಲದಲ್ಲಿ, ಆದ್ದರಿಂದ ಕ್ರಿ. ಪೂ ೧ ನೆಯ ಶತಮಾನದ ಸುಮಾರಿಗೆ ಕೃಷ್ಣನನ್ನು ಅವತಾರವೆಂದಂತೆ ರಾಮಾವತಾರದ ಕಲ್ಪನೆಯೂ ಹರಡಿರಬೇಕೆಂದೂ ತತ್ಪರಿಣಾಮವಾಗಿ ರಾಮಾಯಣದ ಉದ್ದಕ್ಕೂ ಅನೇಕ ಪ್ರಕ್ಷೇಪಗಳುಂಟಾಗಿವೆಯೆಂದೂ ತಿಳಿಯಬಹುದಾಗಿದೆ ಬುದ್ಧನನ್ನು ಅವತಾರವೆಂದು ಮೊದಲು ಹೇಳಿರುವುದು ಸುಮಾರು ಕ್ರಿ ಶ ೮೦೦ ರ (?) ಭಾಗವತದಲ್ಲಿ ಮಾತ್ರ

ಈ ದೃಷ್ಟಿಯಿಂದ ಅವತಾರದ ವರ್ಣನೆ ಬರುವ ಬಾಲಕಾಂಡದ ಪುತ್ರಕಾಮೇಷ್ಟಿ ವರ್ಣನೆ (ಸರ್ಗ 15, 18), ಪರಶುರಾಮನು ರಾಮನನ್ನು ವಿಷ್ಣುವೆನ್ನುವುದು (76, 17-19) ಎರಡೂ ಬಾಲಕಾಂಡದಲ್ಲಿ ಬಂದ ಪ್ರಕ್ಷಿಪ್ತಗಳು. ಉಳಿದ ಸರ್ಗಗಳಲ್ಲಿ ಈ ಪ್ರಸ್ತಾಪವಿಲ್ಲ ರಾಮನನ್ನು ಮೊದಲ ಸರ್ಗದಲ್ಲಿ 'ವಿಷ್ಣುನಾ ಸದೃಶೋ ವೀರ್ಯೇ' ಎಂದಿದೆಯೇ ಹೊರತು ವಿಷ್ಣುವಿನ ಅವತಾರವೆಂದಿಲ್ಲ, ಕಡೆಯ ಸರ್ಗದಲ್ಲಿ 'ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಪ್ರಯಾಸ್ಯತಿ' ಎಂದಿದೆಯೇ ಹೊರತು ವೈಕುಂಠಕ್ಕೆ ಹೋಗುವನೆಂದಿಲ್ಲ. ಹೀಗೆ ರಾಮಾವತಾರದ ಕಲ್ಪನೆಯು ಪ್ರಕ್ಷಿಪ್ತ ಬಾಲಕಾಂಡದಲ್ಲಿಯೇ ಪುನಃ ಪ್ರಕ್ಷಿಪ್ತವೆಂದು ಆದ ಮೇಲೆ ಉಳಿದ ಮೂಲಕಾಂಡಗಳಲ್ಲಿ ಪ್ರಕ್ಷಿಪ್ತವೆಂದು ಮತ್ತೆ ಹೇಳಬೇಕಾಗಿಲ್ಲ. ಅಯೋಧ್ಯಾಕಾಂಡದ ಆದಿಯ 35 ಶ್ಲೋಕಗಳು ಪ್ರಕ್ಷಿಪ್ತ. ಇಡಿಯ ಕಾಂಡದಲ್ಲಿ ಅಲ್ಲಿ ಮಾತ್ರ ರಾಮನು ವಿಷ್ಣುವೆಂದಿದೆ (1. 7). ಅರಣ್ಯಕಾಂಡದಲ್ಲಿ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ಒಂದೇ ಕಡೆ (74·128) ರಾಮನನ್ನು 'ದೇವವರ' ನೆಂದಿದೆ ಕಿಷ್ಕಿಂಧಾಕಾಂಡದಲ್ಲೆಲ್ಲೂ ಅವತಾರದ ಕಲ್ಪನೆಯೇ ಇಲ್ಲ. ಸುಂದರ ಕಾಂಡದಲ್ಲಿಯೂ ಒಂದೇ ಕಡೆ ದಾಕ್ಷಿಣಾತ್ಯಪಾಠದಲ್ಲಿ ಮಾತ್ರ (51. 39-45) ಹನುಮಂತನು ರಾಮನನ್ನು 'ವಿಷ್ಣುತುಲ್ಯಪರಾಕ್ರಮ, ಸರ್ವಲೋಕೇಶ್ವರ, ಲೋಕತ್ರಯನಾಥ' ಎನ್ನುತ್ತಾನೆ. ಯುದ್ಧಕಾಂಡದಲ್ಲಿ ಈ ವಿಧವಾದ ಪ್ರಕ್ಷಿಪ್ತಗಳು ಹೆಚ್ಚಾಗಿವೆ. 59 ನೇ ಸರ್ಗ, ಮಂಡೋದರೀವಿಲಾಪದ ಅಂಶ

ಗಳು, (iii) ದೇವತಾಪ್ರಶಂಸೆ, ಫಲಶ್ರುತಿ ಮುಂತಾದುವು ಈ ಜಾತಿಗೆ ಸೇರುತ್ತವೆ. ಎಷ್ಟೋವೇಳೆ ಅವತಾರ ಪ್ರಸಕ್ತಿ ಒಂದು ಪಾಠದಲ್ಲಿದ್ದರೆ ಮತ್ತೊಂದರಲ್ಲಿರುವುದಿಲ್ಲ.

ಇವಲ್ಲದೆ ಪುನರುಕ್ತಿರೂಪವಾದ ಪ್ರಕ್ಷೇಪಗಳೂ ಉಂಟು–III–31, 35 (ರಾವಣನು ಮಾರೀಚನಲ್ಲಿಗೆ ಬರುವುದು), ಅನೇಕ ಋಷ್ಯಾಶ್ರಮಗಳ ವರ್ಣನೆ, ಇತ್ಯಾದಿಗಳು.

ರಾಮಾಯಣದ ಮೂಲಭಾಗಗಳಲ್ಲಿ ಅದ್ಭುತ ಅಥವಾ ಅತಿಮಾನುಷ ಘಟನೆಗಳು ಬಹಳ ಅಲ್ಪವಾದ ಕಾರಣ, ಸುವರ್ಣಮೃಗ, ಪುಷ್ಪಕವಿಮಾನ, ಲಂಕಾದಹನ, ಮತ್ತೆ ಸಂಜೀವನ ಪರ್ವತದ ಆನಯನ, ಅಗ್ನಿಪರೀಕ್ಷೆ ಮುಂತಾದುವನ್ನೂ ಪ್ರಕ್ಷೇಪಗಳೆಂದು ತಿಳಿಯುವುದುಂಟು.

ಕರುಣರಸದ ಪುನರುಕ್ತಿಗಳಾದ III, 60, 62, 63, ಹನುಮಂತ–ಸೀತೆಯರ ಸಂವಾದ(V 58-68) ಮುಂತಾದುವೂ ಪ್ರಕ್ಷಿಪ್ತಗಳೆನಿಸುತ್ತವೆ.

ಮುಂದಿನ ಅಲಂಕಾರ ಚಮತ್ಕಾರ ಹೆಚ್ಚಾಗಿ ಕಾಣುವ ಗಂಗಾವರ್ಣನೆ (II. 50) ವರ್ಷಋತುವರ್ಣನೆ (IV. 28), ಶರದೃತುವರ್ಣನೆ (IV. 30) ಗಳು ಕಡೆಗೆ ಸೇರಿದವಿರಬಹುದೆಂಬ ಸಂಶಯಕ್ಕೆ ಆಸ್ಪದ ಕೊಡುತ್ತವೆ.

ಉಪದೇಶಪರವಾದ II. 100, ಜಾಬಾಲಿಯ ಚಾರ್ವಾಕಮತ (II 108), ದಿಗ್ವರ್ಣನೆ (IV. 40-43)ಗಳೂ ಹಾಗೆಯೇ.

ರಾಮನನ್ನು ಆದರ್ಶಪುರುಷನೆಂದು ತೋರಿಸುವುದಕ್ಕಾಗಿ ವಾಲಿವಧೆಯು ನ್ಯಾಯಸಂಗತವೆಂದು ಸಿದ್ಧಮಾಡುವ ಹೊಸ ಪ್ರಯತ್ನ IV. 17–18ರಲ್ಲಿ ಕಾಣುತ್ತದೆ.

ಬರೋಡೆಯ ವಿಶ್ವವಿದ್ಯಾಲಯದವರು ರಾಮಾಯಣದ ಮೂಲ ಪಾಠಗಳನ್ನೂ ಪಾಠಾಂತರಗಳನ್ನೂ ಪರಿಶೀಲಿಸಿ ಪರಿಶುದ್ಧ ಸಂಸ್ಕರಣವನ್ನು ಈಗ ಸಿದ್ಧಮಾಡುತ್ತಿದ್ದಾರೆ. ಅದು ಬಂದಮೇಲೆ ಮೂಲ ರಾಮಾಯಣದ ಅಭಾವವೆಂಬ ದೊಡ್ಡ ಕೊರತೆ ತಪ್ಪಿದಂತಾಗುತ್ತದೆ.

**ರಾಮಾಯಣದ ರಚನಾಕಾಲ:**—ಮೇಲಿನ ಸಂಗತಿಗಳಿಂದ ವಾಲ್ಮೀಕಿಗಳು ರಚಿಸಿದ ಆದಿ ರಾಮಾಯಣದ ಕಾಲವೇ ಬೇರೆ, ಪ್ರಕ್ಷೇಪ ಸಹಿತವಾದ ಇಂದಿನ ಪ್ರಚಲಿತ ರಾಮಾಯಣದ ಕಾಲವೇ ಬೇರೆ ಎಂಬುದು

ಸ್ಪಷ್ಟವಾಗಿದೆ. ಕಾಳಿದಾಸ, ಮಹಾಭಾರತದ ಕೆಲವು ಸರ್ಗಗಳ ವೇಳೆ
ಇಂದಿನ ಪ್ರಚಲಿತ ರೂಪವು ಪ್ರಸಿದ್ಧವಾಗಿರುವುದು ಕಾಣುತ್ತದೆ. ಆದ್ದರಿಂ
ಪ್ರಕ್ಷೇಪಸಹಿತ ರಾಮಾಯಣವು ಕೂಡ ಕ್ರಿ. ಶ. ಒಂದೆರಡನೆಯ ಶತಮಾ
ಗಳಿಗಿಂತ ಅರ್ವಾಚೀನವಲ್ಲವೆಂದಾಯಿತು.[14] ಇಷ್ಟೆಲ್ಲ ಪ್ರಕ್ಷೇಪಗಳು ಸೇ
ಬೇಕಾದರೆ ನಾಲ್ಕೈದು ನೂರು ವರ್ಷಗಳು ಕಳೆದಿರಬಹುದೆಂದು ಊಹಿಸಿದ
ಮೂಲ ರಾಮಾಯಣವು ಕನಿಷ್ಟಪಕ್ಷ ಕ್ರಿ. ಪೂ. ೪ ಅಥವಾ ೫ನೆಯ ಶತಮ
ನದ ವೇಳೆಗೇ ರಚಿತವಾಗಿದ್ದಿರಬೇಕೆಂದು ಸಿದ್ಧವಾಗುತ್ತದೆ. ಈ ವಿಷಯದ
ಹೆಚ್ಚಿನ ಸಂಶೋಧನೆ ಮಾಡಿರುವ ಡಾ|| ಯಾಕೊಬಿಯವರೂ ಮೆಕ್ಡಾನಲ
ಅವರೂ ಕ್ರಿ. ಪೂ. ೬-೮ನೇ ಶತಮಾನಗಳ ಕಾಲಾವಧಿಯನ್ನು ಸೂಚಿಸ
ತ್ತಾರೆ.[15] ಬೌದ್ಧಧರ್ಮಕ್ಕಿಂತ ಪೂರ್ವದಲ್ಲಿ ಆದಿ ರಾಮಾಯಣ ಹುಟ್ಟಿತೆಂದ
ಅವರ ಸಿದ್ಧಾಂತ. ಕೀತ್‌ರವರ ಪ್ರಕಾರ ಕ್ರಿ. ಪೂ. ೪ನೆಯ ಶತಮಾನ;
ವಿಂಟರ್‌ನಿಟ್ಸ್ ಅವರ ಅಭಿಪ್ರಾಯದಲ್ಲಿ ಕ್ರಿ. ಪೂ. ೩ನೆ ಶತಮಾನ.[17] ಪ್ರಚಲಿ
ಮಹಾಭಾರತಕ್ಕಿಂತ ಆದಿರಾಮಾಯಣವು ಪೂರ್ವದಲ್ಲಿತ್ತೆಂಬುದು ನಿವಿ
ವಾದ. ಆದರೆ ಮಹಾಭಾರತದ ಮೂಲರೂಪವು ಆದಿರಾಮಾಯಣಕ್ಕಿಂತಲ
ಪ್ರಾಚೀನವಿದ್ದರೂ ಇರಬಹುದು. ಏಕೆಂದರೆ ರಾಮಾಯಣದ ಕಥಾವೃತ್ತಾ
ತವು ವೈದಿಕಸಾಹಿತ್ಯ, ಪಾಣಿನಿಸೂತ್ರ ಮುಂತಾದ ಪ್ರಾಚೀನ ಸ್ಥಲಗಳ
ಬರುವುದಿಲ್ಲ, ಭಾರತದ ಮೂಲಕಥೆಯು ಬರುತ್ತದೆ. ರಾಮಾಯಣದ ಕಥಾ
ನಾಯಕರ ಸ್ವಭಾವವು ಮಹಾಭಾರತದ ಮುಖ್ಯವೀರರ ಸ್ವಭಾವಕ್ಕಿಂ
ನಯ, ಮತ್ತು ಸುಸಂಸ್ಕೃತವಾಗಿರುವುದೂ ಇದನ್ನೇ ಸೂಚಿಸುತ್ತದೆಂದ
ಪಾಶ್ಚಾತ್ಯರ ಅಭಿಪ್ರಾಯ. ಆದರೆ ನಮ್ಮ ಸಂಪ್ರದಾಯದ ಪ್ರಕಾ
ರಾಮಾಯಣವು ತ್ರೇತಾಯುಗದ ಕಥೆ, ಮಾನವರೊಡನೆ ವಾನರರೂ
ರಾಕ್ಷಸರೂ ಭಾರತದಲ್ಲಿ ವಾಸಿಸುತ್ತಿದ್ದ ಪ್ರಾಕ್ಕಾಲದ ಚರಿತ್ರೆ. ಮಹಾಭಾರತವ

---

14 H. Jacobi : Das Rāmāyana, p. 100 ; M. Winternitz History of Indian Literature, Vol. I. p. 500, 517 ; C. V Vaidya, The Riddle of the Rāmāyana, p. 20.

15. Sanskrit Literature, p. 307.

16. The Age of the Rāmāyana, J.R.A.S. 1915, p. 218.

17. Hist. Ind. Lit. p. 516.

ಕಲಿಯುಗಕ್ಕೆ ಸಮೀಪದ ದ್ವಾಪರದ ಕಥೆ. ಸಂಸ್ಕೃತಿಯು ಯುಗದಿಂದ ಯುಗಕ್ಕೆ ವಿಕಸಿತವಾಗುವುದೆಂದು ಪಾಶ್ಚಾತ್ಯರು ತಿಳಿದರೆ ಹ್ರಾಸಗೊಳ್ಳುವು ದೆಂದು ಭಾರತೀಯರ ಪುರಾಣಗಳು ಹೇಳುತ್ತವೆ. ಈ ಎರಡು ದೃಷ್ಟಿಕೋನ ಗಳು ಸೂಚಿಸುವ ತತ್ವವೂ ರಾಮಾಯಣದ ವಿಷಯದಲ್ಲಿ ಒಂದೇ ಆಗಿದೆ.

**ಕವಿ ವಾಲ್ಮೀಕಿಯ ಜೀವನ ವೃತ್ತಾಂತ:**— ಪ್ರಚಲಿತ ರಾಮಾಯಣದ ಆದ್ಯಂತ ಕಾಂಡಗಳು ಪ್ರಕ್ಷಿಪ್ತವೆಂದರೂ ಅವು ಬಹಳ ಪ್ರಾಚೀನವೆಂಬುದನ್ನು ನೋಡಿದ್ದೇವೆ. ಅವುಗಳೇ ವಾಲ್ಮೀಕಿಯ ವೃತ್ತಾಂತ ವನ್ನು ತಿಳಿಯಲು ಮುಖ್ಯ ಆಧಾರಗಳಾಗುತ್ತವೆ. ಪರಿತ್ಯಕ್ತೆಯಾದ ಸೀತೆಗೆ ಆಶ್ರಯವಿತ್ತು ಲವಕುಶರನ್ನು ಸಾಕಿ ಸಲಹಿ ಅವರಿಗೆ ರಾಮಾಯಣವನ್ನು ಕಲಿಸಿ, ಮತ್ತೆ ಭೂಗರ್ಭದಲ್ಲಿ ಅಡಗುವ ಮೊದಲು ಸೀತೆಯು ರಾಮನನ್ನು ಯಾಗದ ಮಂಟಪದಲ್ಲಿ ಸಂದರ್ಶಿಸುವಂತೆ ಮಾಡಿದ ಕೀರ್ತಿ ವಾಲ್ಮೀಕಿಯ ದೆಂದು ಉತ್ತರಕಾಂಡದಲ್ಲಿ ಹೇಳಿದೆ. ಹೀಗೆ ವಾಲ್ಮೀಕಿ ರಾಮನ ಚರಿತೆಯನ್ನು ಬರೆದ ಕವಿಯಷ್ಟೆ ಅಲ್ಲ, ರಾಮಾಯಣದ ಕಡೆಗೆ ಪ್ರಮುಖ ಪಾತ್ರಧಾರಿಯೂ ಆಗುತ್ತಾನೆ. ಈ ಅಭಿಪ್ರಾಯಕ್ಕೆ ಮತ್ತಷ್ಟು ಪುಷ್ಟಿಯೀಯುವಂತೆ ದಾಕ್ಷಿಣಾತ್ಯ ಪಾಠದ ಅಯೋಧ್ಯಾಕಾಂಡದ ಪ್ರಕ್ಷಿಪ್ತ ಸರ್ಗವೊಂದರಲ್ಲಿ (II. 56) ರಾಮ ಲಕ್ಷ್ಮಣ-ಸೀತೆಯರು ಚಿತ್ರಕೂಟದ ಸಮೀಪದಲ್ಲಿ ವಾಲ್ಮೀಕಿಯನ್ನು ಕಂಡು ವಂದಿಸಿದರೆಂದೂ ಹೇಳಿದೆ. ಬಾಲಕಾಂಡದಲ್ಲಿ ನಾವು ನೋಡಿದ ಕ್ರೌಂಚ ಪ್ರಸಂಗದಿಂದ ವಾಲ್ಮೀಕಿಗಳ ಆಶ್ರಮವು ತಮಸಾನದಿಯ ತೀರದಲ್ಲಿತ್ತೆಂದು ತಿಳಿಯುತ್ತದೆ.

ವಾಲ್ಮೀಕಿಯು ಬೇಡರ ಕುಲದವನೆಂಬ ರೂಢಿ ನಮ್ಮಲ್ಲಿ ಬಹಳ ಮಟ್ಟಿಗೆ ಪ್ರಚಾರದಲ್ಲಿದೆ. ಇದರ ಸತ್ಯಾಸತ್ಯತೆಯನ್ನು ಸ್ವಲ್ಪ ವಿಚಾರಿಸೋಣ. ಈ ಕಥೆ ಮೊದಲು ಸಿಕ್ಕುವುದು ಅಧ್ಯಾತ್ಮ ರಾಮಾಯಣದಲ್ಲಿ (II. VI. 42 –88). ಚಿತ್ರಕೂಟದ ಹತ್ತಿರ ವಾಲ್ಮೀಕಿ ದರ್ಶನಕ್ಕೆ ಬಂದ ರಾಮಾದಿಗಳಿಗೆ ವಾಲ್ಮೀಕಿಯೇ ಹೀಗೆ ಹೇಳುತ್ತಾನೆ:—

**ಅಹಂ ಪುರಾ ಕಿರಾತೇಷು ಕಿರಾತೈಃ ಸಹ ವರ್ಧಿತಃ ।**
**ಜನ್ಮಮಾತ್ರದ್ವಿಜತ್ವಂ ಮೇ ಶೂದ್ರಾಚಾರರತಃ ಸದಾ ॥**

'ನಾನು ಬೆಳೆದದ್ದೆಲ್ಲಾ ಕಿರಾತರ ನಡುವೆ, ಶೂದ್ರಾಚಾರದಲ್ಲಿಯೇ ನಾನಿದ್ದೆ. ಕೇವಲ ಜನ್ಮದಿಂದ ಮಾತ್ರ ನಾನು ದ್ವಿಜನಾಗಿದ್ದೆ. ಅನಂತರ ಕಳ್ಳರ ಸಹವಾಸದಿಂದ ಕಳ್ಳನಾದೆ. ಒಮ್ಮೆ ಸಪ್ತರ್ಷಿಗಳ ವಸ್ತ್ರಾದಿ ಗಳನ್ನಪಹರಿಸಲು ಹೊರಟಾಗ ಅವರೆಂದರು – "ನೀನು ಯಾವ ಹೆಂಡತಿ ಮಕ್ಕಳಿಗಾಗಿ ಇಷ್ಟು ಪಾಪಸಂಚಯ ಮಾಡುತ್ತಿರುವೆಯೋ ಅದರಲ್ಲಿಯೂ ಅವರು ಭಾಗಿಗಳಾಗುವರೋ ಕೇಳಿಕೊಂಡು ಬಾ," ಎಂದರು. ಕೇಳಿದೆ. ಯಾರೂ ಭಾಗಿಗಳಾಗಲು ಒಪ್ಪಲಿಲ್ಲ, ಆದರಿಂದ ವೈರಾಗ್ಯವುಂಟಾಯಿತು. ಅವರು ಅಲ್ಲಿಯೇ ಜಪಮಾಡುವಂತೆ 'ಮರಾ' ಎಂಬ ಮಂತ್ರೋಪದೇಶ ಮಾಡಿದರು.

**ಏಕಾಗ್ರಮನಸಾತ್ರೈವ ಮರೇತಿ ಜಪ ಸರ್ವದಾ (೨೦)**

ನಾನು ಹಾಗೆಯೇ ಮಾಡುತ್ತಿರಲು ನನ್ನಮೇಲೆ ಹುತ್ತ ಬೆಳೆದು ಕೊಂಡಿತು. ಸಾವಿರ ಯುಗಗಳು ಕಳೆದ ಮೇಲೆ ಋಷಿಗಳು ಬಂದು ನನ್ನನ್ನು ಹೊರಗೆ ಬರುವಂತೆ ಕರೆದರು. ಪುನರ್ಜನ್ಮ ಬಂದಿತೆಂದು ಹೇಳಿದರು.

ಇದೇ ಕಥೆಯು ಮುಂದೆ ಆನಂದ ರಾಮಾಯಣದಲ್ಲಿಯೂ ಬರುತ್ತದೆ. (ರಾಜ್ಯಕಾಂಡ, XIV). ಆದರೆ ಈ ಅದ್ಭುತಗಳಿಗೆ ಮೂಲ ರೂಪ ಮಹಾ ಭಾರತದ ಒಂದೆರಡು ಅವತರಣಿಕೆಗಳಲ್ಲಿ ಕಾಣುತ್ತದೆ. ವಾಲ್ಮೀಕಿಯು ಅನು ಶಾಸನಪರ್ವದಲ್ಲಿ ಯುಧಿಷ್ಠಿರನಿಗೆ ಹೇಳುತ್ತಾನೆ:–

**ವಾಲ್ಮೀಕಿಶ್ಚಾಹ ಭಗವಾನ್ ಯುಧಿಷ್ಠಿರಮಿದಂ ವಚಃ ।**
**ವಿವಾದೇ ಸಾಗ್ನಿಮುನಿಭಿರ್ಬ್ರಹ್ಮಘ್ನೋ ವೈ ಭವಾನಿತಿ**
**ಉಕ್ತಃ ಕ್ಷಣೇನ ಚಾವಿಷ್ಟಸ್ತೇನಾಧರ್ಮೇಣ ಭಾರತ ।**
**ಸೋಽಹಮೀಶಾನಮನಘಂ ಅಮೋಘಂ ಶರಣಂ ಗತಃ ॥**
**ಮುಕ್ತಶ್ಚಾಸ್ಮಿ ತತೋ ಪಾಪೈಃ (ಅಧ್ಯಾಯ ೪೯)**

"ಅಗ್ನಿಪೂಜಕರಾದ ಮುನಿಗಳೊಡನೆ ನಾನು ವಿವಾದ ಮಾಡಿದ್ದರಿಂದ 'ನೀನು ಬ್ರಹ್ಮಘ್ನ' ನೆಂದುಬಿಟ್ಟರು. ಕೂಡಲೆ ನಾನು ಅಧರ್ಮಾವಿಷ್ಟನಾದೆ. ಕಡೆಗೆ ಈಶ್ವರನ ಶರಣುಹೋಗಿ ಪಾಪಮುಕ್ತನಾದೆ."

ಅಶ್ವಘೋಷನ ಬುದ್ಧಚರಿತೆಯಲ್ಲಿ ವಾಲ್ಮೀಕಿಯನ್ನು ಚ್ಯವನ ಮಹ ರ್ಷಿಯ ಮಗನೆಂದು ಹೇಳಿದೆ:—

**ವಾಲ್ಮೀಕಿರಾದೌ ಚ ಸಸರ್ಜ ಪದ್ಯಂ ಜಗ್ರಂಥ ಯನ್ನ ಚ್ಯವನೋ ಮಹರ್ಷಿಃ**–(i. 43, ಪಾಠಾಂತರ–ವಾಲ್ಮೀಕಿನಾದಿಷ್ಟ)

ಮಹಾಭಾರತದ ಪ್ರಕಾರ ಚ್ಯವನನು ಭೃಗುವಿನ ಮಗ.–

**ಭೃಗೋರ್ಮಹರ್ಷೇಃ ಪುತ್ರೋಽಭೂತ್ ಚ್ಯವನೋ ನಾಮ ಭಾರ್ಗವಃ.** (vi. 112. 1)

'ಭಾರ್ಗವ' ನಾದ ವಾಲ್ಮೀಕಿಯೇ ರಾಮಚರಿತೆಯನ್ನು ಬರೆದವನೆಂದೂ ಶಾಂತಿಪರ್ವದಲ್ಲಿ ಸ್ಪಷ್ಟ ಉಲ್ಲೇಖವಿದೆ :–

**ಶ್ಲೋಕಶ್ಚಾಯಂ ಪುರಾಗೀತೋ ಭಾರ್ಗವೇನ ಮಹಾತ್ಮನಾ |**
**ಆಖ್ಯಾತೇ ರಾಮಚರಿತೇ ನೃಪತಿಂ ಪ್ರತಿ ಭಾರತ||** (56, 40)

ಈ ಆಖ್ಯಾಯಿಕೆಗಳನ್ನು ನಂಬಬಹುದಾದರೆ ಒಂದು ಮಾತು ಸಿದ್ಧವಾಗುತ್ತದೆ. ವಾಲ್ಮೀಕಿಯು ಜಾತಿಯಿಂದ ಬ್ರಾಹ್ಮಣ, ಶೂದ್ರನಲ್ಲ. ಕೆಲವು ಕಾಲ ಶೂದ್ರಾಚಾರನಿರತನಾಗಿಯೂ ಇದ್ದಿರಬಹುದು. ಆದರೆ ಕಡೆ ಕಡೆಗೆ ಅತಿರಂಜಿತ ಕಥೆಗಳು ಹುಟ್ಟಿಕೊಂಡವು.

**ಕಾವ್ಯ ವಿಮರ್ಶೆ:**–(೫) ಕಥಾವಸ್ತು-ಸಂಯೋಜನೆ ರಾಮಾಯಣದ ಕಥೆ ವಾಲ್ಮೀಕಿಗೂ ಪೂರ್ವದಲ್ಲಿತ್ತೆನ್ನುವುದನ್ನೇ ನಾರದನಿಂದ ಅವನು ಕೇಳಿ ತಿಳಿದುಕೊಂಡನೆಂಬ ಬಾಲಕಾಂಡದ ಉಲ್ಲೇಖವು ತಿಳಿಸಿದರೆ, ರಾಮನನ್ನು ಕುರಿತು ಬೌದ್ಧರ ಪಾಲೀ ಸಾಹಿತ್ಯದ ' ದಶರಥ ಜಾತಕ " ದಲ್ಲಿ ಬರುವ ಕೆಲವು ಪ್ರಾಚೀನ ಗಾಥೆಗಳೂ ಈ ಅಂಶವನ್ನೇ ಸ್ಪಷ್ಟಪಡಿಸುತ್ತವೆಂಬುದು ವೆಬರ್ ಎಂಬ ವಿದ್ವಾಂಸರ ಮತ.[18] ಆದರೆ ಡಾ|| ಲಾಯ್ಡರ್ಸ್ ಅವರು ದಶರಥ ಜಾತಕದ ಗಾಥೆಗಳು ವಾಲ್ಮೀಕಿಗಿಂತ ಈಚಿನವೆಂದು ತೋರಿಸಿ ವೆಬರ್ ರವರ ವಾದವನ್ನು ತಿರಸ್ಕರಿಸಿದ್ದಾರೆ.[19] ಇದು ಹೇಗೇ ಇರಲಿ, ರಾಮಾಯಣದ

---

18. Ueber das Rāmāyana, Berlin, 1870.

19. H. Leuders : Die Jātakas und die Epik. Z D.M.G. Vol. LVIII. (1904) p. 687 ff.

ಈ ಜಾತಕಕಥೆಯ ಸಂಗ್ರಹ ಹೀಗಿದೆ :—ದಶರಥನು ವಾರಾಣಸಿಯ ಅರಸ. ಅವನ ಹಿರಿಯ ಹೆಂಡತಿಗೆ ಮೂರು ಮಕ್ಕಳು :—ಎರಡು ಗಂಡು

ರಚನೆಗೆ ಪೂರ್ವದಲ್ಲಿ ಸೂರ್ಯಕುಲದ ಕ್ಷತ್ರಿಯ ವೀರರನ್ನು ಕುರಿತ ವೀರ ಗಾಥೆಗಳು ಸೂತರಲ್ಲಿ ಪ್ರಚಾರದಲ್ಲಿದ್ದುವೆಂದು ವಿಂಟರ್‌ನಿಟ್ಸ್ ಮುಂತಾದ

---

(ರಾಮಪಂಡಿತ ಮತ್ತು ಲಕ್ಷ್ಮಣ) ಮತ್ತು ಒಂದು ಹೆಣ್ಣು (ಸೀತೆ). ಹಿರಿಯ ಹೆಂಡತಿ ತೀರಿಕೊಂಡಮೇಲೆ ರಾಜನು ಎರಡನೆಯ ಹೆಂಡತಿಯನ್ನು ರಾಣಿ ಯಾಗಿ ಮಾಡಿಕೊಂಡನು ಅವಳಿಗೆ ಬರತನೆಂಬ ಗಂಡು ಮಗ ಹುಟ್ಟಿದ. ಆಗಲೇ ಆಕೆಗೊಂದು ವರ ಕೊಟ್ಟ. ಭರತನಿಗೆ ಏಳು ವರ್ಷ ತುಂಬಿದಾಗ ಅವಳು ಅವನಿಗೆ ರಾಜ್ಯವನ್ನು ಕೊಡಬೇಕೆಂದಳು. ರಾಜನು ನಿರಾಕರಿಸಿದ. ರಾಣಿ ಮತ್ತೆ ಮತ್ತೆ ಪೀಡಿಸಲಾರಂಭಿಸಿದಾಗ ಅವಳು ಗುಟ್ಟಾಗಿ ಏನು ಮಾಡು ವಳೋ ಎಂದು ಹೆದರಿ ತನ್ನ ಇಬ್ಬರು ಮೊದಲ ಮಕ್ಕಳನ್ನೂ ಕರೆದು ಹೇಳು ತ್ತಾನೆ:— 'ಇಲ್ಲಿದ್ದರೆ ನಿಮಗೆ ಕೇಡು ತಪ್ಪಿದ್ದಲ್ಲ. ಇನ್ನಾವುದಾದರೂ ರಾಜ್ಯಕ್ಕೆ ಹೋಗಿರಿ. ನಾನು ಸತ್ತಮೇಲೆ ಹಿಂದಿರುಗಿ ರಾಜ್ಯವನ್ನು ವಹಿಸಿಕೊಳ್ಳಿ' ಎಂದು. ಜೋಯಿಸರನ್ನು ಕರೆದು ತನ್ನ ಆಯುಸ್ಸಿನ ಅವಧಿಯನ್ನು ಕೇಳಿದ. 12 ವರ್ಷ ವೆಂದು ತಿಳಿಯಿತು. 12 ವರ್ಷ ಕಳೆದೊಡನೆ ರಾಜ್ಯವನ್ನು ವಹಿಸಿಕೊಳ್ಳ ಬೇಕೆಂದು ಮಕ್ಕಳಿಗೂ ತಿಳಿಸಿದ ರಾಮ, ಲಕ್ಷ್ಮಣ, ಸೀತೆ, ಎಲ್ಲರೂ ತಂದೆಗೆ (ಇಲ್ಲಿ ಸೀತೆಗೂ ದಶರಥನೇ ತಂದೆ) ನಮಸ್ಕಾರ ಮಾಡಿ ತೆರಳಿದರು. ಹಿಮಾ ಲಯದಲ್ಲಿ ಆಶ್ರಮ ಮಾಡಿಕೊಂಡಿದ್ದರು. ಒಂಭತ್ತು ವರ್ಷಗಳನಂತರವೇ ದಶರಥನು ಪುತ್ರಶೋಕದಿಂದ ಸತ್ತುಹೋದ. ರಾಣಿಯು ಭರತನನ್ನು ರಾಜ್ಯ ದಲ್ಲಿ ಕೂರಿಸಲು ಮಾಡುವ ಯತ್ನ ವಿಫಲವಾಗುತ್ತದೆ. ಭರತ, ಅಮಾತ್ಯ ಎಲ್ಲರೂ ವಿರೋಧಿಸುತ್ತಾರೆ. ರಾಮನನ್ನು ಕರೆತರುವುದಕ್ಕಾಗಿ ಭರತ ಚತುರಂಗ ಸೇನೆಯೊಡನೆ ಹೋಗುತ್ತಾನೆ. ಅಲ್ಲಿ ರಾಮನೊಬ್ಬನೇ ಮೊದಲು ಕಾಣುತ್ತಾನೆ. ಅವನಿಗೆ ತಂದೆಯ ಮರಣವನ್ನು ತಿಳಿಸಿ ಭರತ ಅಳುತ್ತಾನೆ. ರಾಮನು ಅಳುತ್ತಾ ಶೋಕಿಸುವುದಿಲ್ಲ. ಸಂಜೆಯ ಹೊತ್ತಿಗೆ ಲಕ್ಷ್ಮಣ ಸೀತೆಯರು ಬರುತ್ತಾರೆ. ಅವರು ಅಳುತ್ತಾರೆ. ರಾಮಪಂಡಿತನು ಅವರಿಗೂ ಧೈರ್ಯ ಹೇಳುತ್ತಾನೆ. ಭರತನು ಕರೆದಾಗ 'ನನಗೆ ತಂದೆ ಹೇಳಿರುವ ಗಡಿ ೧೨ ವರ್ಷ; ಅಲ್ಲಿಯವರೆಗೆ ಬರಲಾರೆ; ಎನ್ನುತ್ತಾನೆ. ಭರತನ ಆಗ್ರಹವನ್ನು ತಾಳಲಾರದೆ ತನ್ನ ಪ್ರತಿನಿಧಿಯಾಗಿ ಪಾದುಕೆಗಳನ್ನು ಕೊಡುತ್ತಾನೆ. ಸೀತೆ, ಲಕ್ಷ್ಮಣರು ಭರತನೊಡನೆ ಹಿಂದಿರುಗುತ್ತಾರೆ. ಮೂರು ವರ್ಷಗಳಾದ ಮೇಲೆ ರಾಮ ಪಂಡಿತನು ಹಿಂದಿರುಗಿ ತಂಗಿಯಾದ ಸೀತೆಯನ್ನೇ ಮದುವೆಯಾಗುತ್ತಾನೆ. 16000 ವರ್ಷ ರಾಜ್ಯವಾಳಿ ಸ್ವರ್ಗಕ್ಕೆ ತೆರಳುತ್ತಾನೆ

ಇದು ವಾಲ್ಮೀಕಿಯ ಮೂಲದ ವಿಕೃತ ರೂಪವೆಂದು ಯಾರಿಗಾದರೂ ಕಾಣದಿರದು. ಪಾಲೀಭಾಷೆಯಲ್ಲಿರುವ ದಶರಥಜಾತಕದಲ್ಲಿ ಗದ್ಯದಂತೆ ಗಾಥೆ (ಪದ್ಯ) ಗಳೂ ಇವೆ.

ವಿದ್ವಾಂಸರು ಊಹಿಸುತ್ತಾರೆ.[20] ಆ ballad poetry ಅಥವಾ ವೀರ ಗಾಥೆಗಳ ಉದಾಹರಣೆಗಳು ರಾಮಾಯಣ, ಮಹಾಭಾರತಗಳಲ್ಲೇ ನೂರಾರು ಸುರಕ್ಷಿತವಾಗಿರುವುದು ನಿಶ್ಚಯ. ಎಷ್ಟೇ ಆದರೂ ಒಂದು ಅರಮನೆಯಲ್ಲಿ ನಡೆದ ಘಟನೆಗಳ ಕೆಲವು ಸಾಮಗ್ರಿಗಳು ಮಾತ್ರ ವಾಲ್ಮೀಕಿಗೆ ದೊರೆತಿರ ಬೇಕೇ ಹೊರತು, ಮಹಾಕಾವ್ಯದ ತಿರುಳು ದೊರೆತಿರಲಾರದು. ಪ್ರಕ್ಷೇಪ ಗಳನ್ನು ಬಿಟ್ಟುಬಿಟ್ಟರೆ ರಾಮಾಯಣದ ಮುಖ್ಯ ಕಥೆಯೆಲ್ಲಾ ಒಂದು ರಾಜ ಪರಿವಾರದ ಸಾಂಸಾರಿಕ ಚಿತ್ರ; ಪೂರ್ವದಿಂದ ನಡೆದು ಬಂದ 'ಧರ್ಮ'ಕ್ಕೂ ಸನ್ನಿವೇಶಗಳ ವೈಪರೀತ್ಯಕ್ಕೂ ನಡೆಯುವ ಘರ್ಷಣೆ ಸ್ತ್ರೀ ಪುರುಷರ ರಾಗ ಮೋಹಗಳು, ದ್ವೇಷಾಸೂಯೆಗಳು, ಭಯಭೀತಿಗಳು, ಎಲ್ಲವೂ ಸೇರಿಕೊಂಡು ಧರ್ಮವನ್ನು ಪರೀಕ್ಷಿಸತೊಡಗುತ್ತವೆ. ರಾಜನ ಧರ್ಮದ ವ್ಯಾಪ್ತಿ ವೈಯಕ್ತಿ ಕತೆಯನ್ನು ದಾಟಿ ಸಾರ್ವತ್ರಿಕತೆಯನ್ನು ಪಡೆಯುವ ಕಾರಣ, ಕಥೆಯಲ್ಲಿ ಮಾನವೀಯವಾದ ಸ್ವಾರಸ್ಯದ ಜತೆಗೆ ವಿಶಾಲವಾದ ಧ್ಯೇಯಗಳ ದೀಪ್ತಿಯೂ ಸಮ್ಮಿಳಿತವಾಗುತ್ತದೆ ಇದು ಅಯೋಧ್ಯಾಕಾಂಡದ ಸಾರ. ವಯಸ್ಸಾದ ದೊರೆ ದಶರಥ. ಅವನಿಗೆ ಒಂದು ಕಡೆ ಕಿರಿಯ ಹೆಂಡತಿಯಾದ ಕೈಕೆಯ ಮೇಲೆ ಮೋಹ, ಇನ್ನೊಂದು ಕಡೆ ಹಿರಿಯ ಮಗನಾದ ರಾಮನ ಮೇಲೂ ಮೋಹ. ಮೊದಲನೆಯ ಮೋಹದಲ್ಲಿ ಮೈಮರೆತಾಗ ಎಂದೋ ಒಂದು ವಿಷ ಗಳಿಗೆಯಲ್ಲಿ ಕೈಕೆಗೆ ನೀನು ಕೇಳಿದ ಎರಡು ವರಗಳನ್ನು ನಡೆಸುತ್ತೇನೆಂದು ಬಿಟ್ಟಿದ್ದಾನೆ. ಆದರೆ ಯುವರಾಜನ ಪಟ್ಟಕ್ಕೆ ರಾಮನನ್ನು ಕೂರಿಸಬೇಕೆಂದೇ ನಿಶ್ಚಯ. ಕೈಕೆಗೆ ತಿಳಿಯದಂತೆ ಎಲ್ಲಾ ಸನ್ನಾಹ ಮಾಡುತ್ತಾನೆ. ಭರತನು ದೂರದ ಮಾವನಮನೆಯಲ್ಲಿರುವಾಗಲೇ ಅಬಿಷೇಕ ನಡೆದುಹೋಗಬೇಕೆಂದು ಅವನ ಹವಣಿಕೆ. ಹೇಗೋ ಕೈಕೆಗೆ ಸುಳಿವು ಮೊದಲೇ ತಿಳಿದುಹೋಗುತ್ತದೆ. ಮಂಥರೆಯ ದುರ್ಬೋಧನೆಯೂ ಸೇರುತ್ತದೆ. ರಾಮನಲ್ಲಿ ಪ್ರೀತಿಯಿದ್ದರೂ ಸವತಿಯರ ಭೀತಿಗೆ ಒಳಗಾಗಿ ಮುದಕನನ್ನು ಮಾತಿಗೆ ಕಟ್ಟಿಹಾಕುತ್ತಾಳೆ. ದಶರಥನು ಭಾಷೆಗೆ ತಪ್ಪಲಾರ, ರಾಮನ ವನವಾಸ, ಭರತನ ಅಭಿಷೇಕವೆಂಬ ಸಂಗತಿಗಳನ್ನು ಒಪ್ಪಲೂ ಆರ. ಇದು ಅವನ ಧರ್ಮಸಂಕಟ. ಕೈಕೆಗೂ

---

20. Ancient Indian Ballad Poetry Calcutta Review Dec. 1923; V. S. Sukthankar: kane commemoration volume.

ಹೀಗೆಯೇ ಪತಿಯ ಕೋಪ, ಮನಸ್ಸಿನ ಪ್ರೇರಣೆಗಳ ನಡುವೆ ಹುಚ್ಚಿಯಾಗುವ ಸನ್ನಿವೇಶ. ರಾಮನನ್ನು ಬಿಡುವುದೆಂದರೆ ತಂದೆಗೆ ಪ್ರಾಣವನ್ನು ಬಿಡುವಷ್ಟೇ ದುಃಖ, ಆದರೆ ರಾಜನಾಗಿ ಧರ್ಮವನ್ನು ನಡೆಸಲೇಬೇಕು. ಕಡೆಗೆ ರಾಮನು ತಂದೆಯ ಸತ್ಯವಾಕ್ಯವನ್ನುಳಿಸಲು ಮುಂದಾಗುತ್ತಾನೆ. ಕಾಡಿಗೆ ಹೋಗಲೂ ಸಿದ್ಧವಾಗುತ್ತಾನೆ. ತಾಯಿಯ ಇಷ್ಟಕ್ಕೂ ಮಗನ ದೃಢಕ್ಕೂ ಮತ್ತೆ ಘರ್ಷಣ, ಕಾಡಿಗೆ ಹೆಂಡತಿ ಬರಬೇಕೇ? ಬೇಡವೆ? ಮತ್ತೆ ಧರ್ಮ ವಿವೇಚನೆ; ಅರುಳುಮರುಳಿನ ರಾಜನನ್ನು ಎಷ್ಟೋ ಅಷ್ಟರಲ್ಲಿಡಬೇಕೆಂಬ ಲಕ್ಷ್ಮಣ ಅಣ್ಣನ ಮಾತನ್ನು ಮೀರದ ದೃಶ್ಯ, ಪೌರರ ಶೋಕ, ಕಡೆಗೆ ವನ ಪ್ರವೇಶ, ಭರತನ ಮನಸ್ಸಿನಲ್ಲಿ ಬರುವ ಧರ್ಮಸಂಕಟ, ಅವನ ವರ್ತನೆ. ಹೀಗೆ ಅಯೋಧ್ಯಾಕಾಂಡದ ಘಟನೆಗಳೊಂದೊಂದೂ ತಂದೆ, ತಾಯಿ, ಅಣ್ಣ, ತಮ್ಮ, ಗಂಡ, ಹೆಂಡತಿ, ರಾಜ, ಪ್ರಜೆಗಳ ಧರ್ಮ ಹಾಗು ಧರ್ಮಪರೀಕ್ಷೆಗಳನ್ನು ಮನಮುಟ್ಟುವಂತೆ ಕರಳು ಕರಗುವಂತೆ ಚಿತ್ರಿಸುತ್ತವೆ. ದಶರಥನ ಪುತ್ರಶೋಕದ ವರ್ಣನೆಯೂ ಕೌಸಲ್ಯೆಯ ಪರಿತಾಪದ ವರ್ಣನೆಯೂ ರಾಮಾಯಣದಲ್ಲೆಲ್ಲ ರಸಮಯವಾದ ಭಾಗಗಳು.

ಕಾಡಿನಲ್ಲಿ ಸೀತೆ, ರಾಮ, ಲಕ್ಷ್ಮಣರು ಪಡುವ ಸುಖದುಃಖಗಳೇ ಅರಣ್ಯಕಾಂಡದ ವಸ್ತು. ಮನಸ್ಸಿಗೆ ಉಲ್ಲಾಸವಿದ್ದರೆ ವನವಾಸವೂ ಸುಖಮಯವೇ ಆಗಬಹುದು. ಋಷಿಗಳ ಆತಿಥ್ಯದಲ್ಲಿ, ವನದಿಂದ ವನಕ್ಕೆ ಹೋಗಿ ವಿಹರಿಸುತ್ತಾ ಸ್ವಲ್ಪ ಕಾಲ ಕಳೆದರು. ಆದರೆ ರಾಕ್ಷಸಿಯಾದ ಸೂರ್ಪಣಖೆಯು ಮೆಚ್ಚಿ ಬಂದುದು ಅವರಿಗೆ ತತ್ಕಾಲದಲ್ಲಿ ಹಾಸ್ಯವನ್ನು ತಂದರೂ, ಅವಳಿಗೆ ಇವರು ಕೊಟ್ಟ ಶಿಕ್ಷೆ ರಾಕ್ಷಸರೊಡನೆ ವೈರವನ್ನು ತಂದುಹಾಕಿತು. ಖರದೂಷಣಾದಿಗಳನ್ನು ಬಾಹುಬಲದಿಂದ ಕೊಂದರು. ಆದರೆ ಪ್ರಬಲನಾದ ರಾವಣನು ಸಮಯನೋಡಿ ಸೀತೆಯನ್ನು ಅಪಹರಿಸಿದನು. ರಾಮನ ಸುಖ ಮುಗಿಯಿತು. ಜಟಾಯುವಿನಿಂದ ವೈರಿಯ ಹೆಸರು ಮಾತ್ರ ತಿಳಿಯಿತು. ಹೀಗೆ ಅರಣ್ಯಕಾಂಡವು ರಾಮನಿಗೆ ಒದಗಿದ ದುರ್ಘಟನೆಯ ಮುಖ್ಯ ಚಿತ್ರ. ಅದ್ಭುತವಾದ ಸುವರ್ಣಮೃಗದ ಕಥೆಯೂ, ಮಾರೀಚನ ನೀತಿ ಬೋಧೆಯೂ, ಸಾವಿರಾರು ರಾಕ್ಷಸರ ಸಂಹಾರವೂ ಋಷಿಕವಿಯ ಮಹಾಕಾವ್ಯದ ಮುಖ್ಯ ವಸ್ತುಗಳಲ್ಲ. ಸೀತೆಯು ಲಕ್ಷ್ಮಣನನ್ನು ಬೈಯುವ ದೃಶ್ಯವಾಗಲಿ, ರಾಕ್ಷಸರ ಮಾಯೆ

ಯೆಂದು ರಾಮನು ತಿಳಿದೂ ತಿಳಿದೂ ಹೆಂಡತಿಯ ಹಟವನ್ನು ತಾಳಲಾರದೆ ಜಿಂಕೆಯ ಬೆನ್ನಟ್ಟುವುದಾಗಲಿ, ರಾಮನ ಕಟ್ಟಾಜ್ಞೆಯನ್ನು ಮೀರುವ ಲಕ್ಷ್ಮಣ ನಾಗಲಿ. ಅಯೋಧ್ಯಾಕಾಂಡದಲ್ಲಿ ನಾವು ಕಂಡಿರುವ ಅವರ ಸ್ವಭಾವಕ್ಕೆ ಅನುಗುಣವಾಗಿಲ್ಲ. ಅದ್ಭುತಮಯವಾದಷ್ಟು ಕಥೆಯ ಸೊಗಸು ಹೆಚ್ಚುವು ದೆಂಬ ಮುಂದಿನ ಕಾಲದ ಅಭಿರುಚಿಯ ಫಲ ಇದು.[21] ವಾಲ್ಮೀಕಿಯ ಮೂಲ ಕಾವ್ಯದಲ್ಲಿ ಅಮಾನುಷ ಘಟನೆಗಳು ಅಯೋಧ್ಯಾಕಾಂಡದಂತೆ ಇಲ್ಲೂ ಬರುವು ದಿಲ್ಲ. ಆ ಮೂಲ ಪ್ರತಿಭೆಗೆ ರಾಮನನ್ನು ದೇವನೆಂದು ಸಿದ್ಧಮಾಡಲು ಕಬಂಧ ನಾಗಲಿ ಶಬರಿಯಾಗಲಿ ಬೇಕಾಗುವುದಿಲ್ಲ.

ಈಗ ಕಿಷ್ಕಿಂಧಾಕಾಂಡವನ್ನು ನೋಡೋಣ.–ಹುಡುಕುತ್ತಾ ಋಷ್ಯ ಮೂಕಪರ್ವತದ ಹತ್ತಿರ ಬರುತ್ತಾರೆ ರಾಮಲಕ್ಷ್ಮಣರು. ಪಂಪಾಸರೋವರದ ಸೊಬಗು ರಾಮನಲ್ಲಿ ಸೀತೆಯ ವಿರಹತಾಪವನ್ನು ಉಕ್ಕಿಸುತ್ತದೆ. ಅಲ್ಲಿ ಬೆಟ್ಟದ ಮೇಲೆ ವಾಲಿಯ ಭಯದಿಂದಿದ್ದ ಸುಗ್ರೀವ, ಅವನ ನಾಲ್ಕು ಮಂತ್ರಿಗಳು, ಇವರನ್ನು ಕಂಡು ಅಂಜುತ್ತಾರೆ, ಕಡೆಗೆ ಹನುಮಂತನ ಮೂಲಕ ಮಾತ ನಾಡಿಸುತ್ತಾರೆ. ರಾಮ ಸುಗ್ರೀವರಿಬ್ಬರೂ ರಾಜ್ಯಭ್ರಷ್ಟರು, ಹೆಂಡತಿಯನ್ನು ಕಳೆದುಕೊಂಡವರು. ಸಹಜವಾಗಿಯೇ ಸಖ್ಯವಾಗುತ್ತದೆ. ಸುಗ್ರೀವನಿಗೆ ಎಷ್ಟು ರಾಮನ ಸಖ್ಯದಲ್ಲಿ ಆಸೆಯಿತ್ತೋ ರಾಮನಿಗೂ ಅಷ್ಟೇ ಅಗತ್ಯವಿದೆ, ಜನಬಲವಿಲ್ಲದೆ ಅವನು ಮುಂದೆ ಏನೂ ಮಾಡುವಂತೆಯೇ ಇರಲಿಲ್ಲ. ಸುಗ್ರೀವನಿಂದ ಜನಸಹಾಯ ಸಿಕ್ಕಬೇಕಾದರೆ ಅವನ ಗಂಡಾಂತರವನ್ನು ಪಾರು ಮಾಡಬೇಕಾಗಿತ್ತು. ವಾಲಿಯನ್ನು ಮೊದಲು ಕೊಲ್ಲ ಬೇಕಾಗಿತ್ತು.

---

21. ಸಿ. ವಿ. ವೈದ್ಯ ಅವರ The Riddle of the Ramayana ಎಂಬ ಗ್ರಂಥದಲ್ಲಿ ಈ ವಿಷಯವನ್ನು ಕೂಲಂಕಷವಾಗಿ ವಿವೇಚಿಸಿರುವುದಲ್ಲದೆ ಪ್ರಬಲವಾದ ಆಧಾರಗಳನ್ನೂ ಒದಗಿಸಿದೆ.

ಸೀತೆಯು ರಾವಣಸನ್ಯಾಸಿಗೆ, 'ಇನ್ನೇನು ಗಂಡ ಬರುತ್ತಾನೆ; ಪುಲ್ಲಿ, ಉಡ, ಮುಂತಾದ ನಾನಾ ಬೇಟೆಗಳನ್ನು ತರುತ್ತಾನೆ; ಸ್ವಲ್ಪ ಕುಳಿತುಕೋ' ಎನ್ನುತ್ತಾಳೆಯೇ ಹೊರತು (ಆಗಮಿಷ್ಯತಿ ಮೇ ಭರ್ತಾ ವನ್ಯಮಾದಾಯ ಪುಷ್ಕಲಮ್ | ರುರೂನ್ ಗೋಧಾನ್ .) 'ಚಿನ್ನದ ಜಿಂಕೆಗಾಗಿ ಹೋಗಿ ಪ್ರಾಣಾಪಾಯದಲ್ಲಿದ್ದಾನೆ; ಸತ್ತನೋ ಬದುಕಿರುವನೋ ಕಾಣೆ' ಎಂದು ಮನಸ್ಸಿನ ಕಳವಳವನ್ನು ವ್ಯಕ್ತಮಾಡುವುದಿಲ್ಲ.

ಈ ಕಾಡಿನಲ್ಲಿ ಕ್ಷತ್ರಿಯ ಧರ್ಮವೆಂದು ನೇರವಾಗಿ ವಾಲಿಯೊಡನೆ ಯುದ್ಧಕ್ಕೆ ಹೋಗಿದ್ದರೆ ರಾಜನಾದ ವಾಲಿಯ ಅಸಂಖ್ಯ ಸೇನೆಯೂ ಮೇಲೆ ಬೀಳಬಹು ದೆಂದು ಹೆದರಿಕೆಯಾಗಿರಬಹುದು, ಆದ್ದರಿಂದ ಆಪತ್ಕಾಲದಲ್ಲಿ ಆ ಧರ್ಮ ವನ್ನೂ ಮೀರಿ ಮರೆಯಿಂದಲೇ ವಾಲಿಯನ್ನು ಕೊಂದು ಸುಗ್ರೀವನ ಸಹಾಯ ವನ್ನು ಗಟ್ಟಿಮಾಡಿಕೊಳ್ಳಬೇಕಾಯಿತು-ರಾಮ ಇಷ್ಟಾದರೂ ಸುಗ್ರೀವನು ಸ್ತ್ರೀ ಲೋಲನಾಗಿ ತನ್ನ ಕಾರ್ಯವನ್ನು ತಡಮಾಡಿದನು. ರಾಮನು ಬೆದರಿಸಿ ಅವನಿಂದ ದೂತರನ್ನಟ್ಟಿಸಬೇಕಾಯಿತು ಹುಡುಕುತ್ತ ಹೊರಟ ಅಂಗದಾದಿ ವಾನರರಿಗೆ ಎಷ್ಟೋ ಕಷ್ಟವಾಯಿತು, ದಕ್ಷಿಣ ಸಮುದ್ರವನ್ನು ಮುಟ್ಟಿದರು, ಹುಡುಕದೆ ವಾಪಸು ಹೋದರೆ ಮರಣದಂಡನೆಯನ್ನು ಸುಗ್ರೀವನು ವಿಧಿಸುವನೆಂಬ ಭಯದಿಂದ ಪ್ರಾಯೋಪವೇಶಮಾಡಲು ಸಿದ್ಧರಾದರು ಪುಣ್ಯವಶಾತ್ ಜಟಾಯುವಿನ ಅಣ್ಣನಾದ ಸಂಪಾತಿಯಿಂದ ರಾವಣನ ನೆಲೆ ತಿಳಿಯಿತು. ಆಂಜನೇಯನು ಸಮುದ್ರವನ್ನು ಲಂಘಿಸಿ ಸೀತೆಯ ಇರುವಿಕೆಯನ್ನು ತಿಳಿದುಬರುವ ಅಭಯ ಕೊಟ್ಟನು. ಇಲ್ಲಿಯೂ ಹೆಚ್ಚಿನ ಅತಿಮಾನುಷ ಪ್ರಸಂಗಗಳೇನೂ ಇಲ್ಲ

ಸುಂದರ ಕಾಂಡವೆಂಬ ಹೆಸರು ಬರಲು ಹನುಮಂತನು ಸೀತೆಯನ್ನು ಸಂದರ್ಶಿಸಿ ಸಫಲಯತ್ನನಾದುದೇ ಕಾರಣವೆಂದು ತೋರುತ್ತದೆ.[22] ಇಂದಿನ ಕೆಲವರ ಅಭಿಪ್ರಾಯ ನಿಜವಾದರೆ ಲಂಕೆಯೆಂಬುದು ಗೋದಾವರೀ ನದಿಯ ಲ್ಲಿನ ಒಂದು ದ್ವೀಪ. ಮನುಷ್ಯರು ಹಾರಲಾಗದಷ್ಟು ದೂರವಾದರೂ ಸಮರ್ಥ ಕಪಿಯೊಂದು ಹಾರಬಲ್ಲ ದೂರವೇ[23] ಇರಲಿ ಮೈನಾಕ, ಸುರಸೆ, ಲಂಕಿಣಿ ಮುಂತಾದ ಅದ್ಭುತಗಳೆಲ್ಲಾ ಇಲ್ಲಿ ಸೇರಿವೆ ಎಲ್ಲೆಲ್ಲೂ ಹುಡುಕಿಯಾ ಯಿತು. ಸೀತೆ ಸಿಕ್ಕಲಿಲ್ಲ. ಅರಮನೆಯ ಅಂತಃಪುರದಲ್ಲೂ ಸಿಕ್ಕಲಿಲ್ಲ. ಏನೂ ತೋಚದೆ ಕಪಿ ಸಹಜವಾಗಿ ಅಶೋಕವನಕ್ಕೆ ಬಂದಾಗ ಪುಣ್ಯವಶಾತ್ ಸೀತೆಯ ದರ್ಶನವಾಯಿತು. ಅಷ್ಟರಲ್ಲಿ ರಾವಣನೂ ಅಲ್ಲಿಗೆ ಬಂದನು. ಅವರ

---

22 cf. 'ನಷ್ಟದ್ರವ್ಯಸ್ಯ ಲಾಭೋ ಹಿ ಸುಂದರಃ ಪರಿಕೀರ್ತಿತಃ'— ವ್ಯಾಖ್ಯಾನಗಳಲ್ಲಿ ಉದಾಹೃತ.

23 M. V. Kibe : Ravana's Lanka located in Central India, I H Q Vol. IV (1928), pp 693-702.

ಸಂವಾದದಿಂದ ವಿಷಯವೆಲ್ಲಾ ತಿಳಿಯಿತು. ಸೀತೆಯು ಆತ್ಮಹತ್ಯದ ಯೋಚನೆ ಮಾಡುತ್ತಿದ್ದಳು. ಹನುಮಂತನು ಅವಳಿಗೆ ರಾಮನ ಸುದ್ದಿಯನ್ನರುಹಿ ಅವಳ ಯೋಚನೆಯನ್ನು ತಪ್ಪಿಸಿದನು, ರಾಮನ ಮುದ್ರಿಕೆಯನ್ನು ಕೊಟ್ಟನು. ಅವಳಿಂದ ಚೂಡಾಮಣಿಯನ್ನು ತೆಗೆದುಕೊಂಡನು. ರಹಸ್ಯವಾಗಿಯೇ ಬರಲು ಪ್ರಯತ್ನಿಸಿದರೂ ರಾಕ್ಷಸರ ಕೈಗೆ ಸಿಕ್ಕಿ ಮರಣದಂಡನೆ ವಿಭೀಷಣನ ಪ್ರಭಾವದಿಂದ ತಪ್ಪಿತೆಂದು ತೋರುತ್ತದೆ ಆದರೆ ಈಗಿರುವ ಸುಂದರಕಾಂಡದಲ್ಲಿ ಹನುಮಂತನನ್ನು ದೇವ ವೀರನಾಗಿ ಮಾಡುವ ನೂರಾರು ಸನ್ನಿವೇಶಗಳು ಬಂದಿವೆ. ಎಲ್ಲರೂ ವಾಪಸಾದರು ಸುಗ್ರೀವನ ಮಧುವನದಲ್ಲಿ ಸ್ವಾತಂತ್ರ್ಯ ವಹಿಸಿ ಮನದಣಿಯೇ ಜೇನು ಕುಡಿದರು ಹನುಮಂತನು ರಾಮನಿಗೆ ಸೀತೆಯ ಚೂಡಾಮಣಿಯನ್ನು ಕೊಟ್ಟು ಸೀತೆಯ ಸುದ್ದಿಯನ್ನು ತಿಳಿಸಿದನು

ಇನ್ನು ಯುದ್ಧಕಾಂಡ — ರಾಮನಿಗೆ ಸಮುದ್ರ ದಾಟುವುದು ಹೇಗೆಂಬುದೇ ದೊಡ್ಡ ಚಿಂತೆ. ಸೇತುವೆ ಕಟ್ಟುವ ಸನ್ನಾಹದಿಂದ ಜೈತ್ರಯಾತ್ರೆ ಹೊರಟಾಯಿತು. ಅತ್ತ ರಾಮನು ಪರಾಕ್ರಮಿಯೆಂದು ಕೇಳಿ ತಿಳಿದಿದ್ದ ವಿಭೀಷಣನು ರಾವಣನಿಗೆ ಸಂಧಿಯ ಉಪದೇಶ ಮಾಡಿದರೂ ಪಥ್ಯವಾಗುವುದಿಲ್ಲ. ಕುಂಭಕರ್ಣ ಇದನ್ನೇ ಹೇಳಿದರೂ ಕೇಳುವುದಿಲ್ಲ ವಿಭೀಷಣನು ಕಡೆಗೆ ನಿಷ್ಕಾಸಿತನಾಗಿ ರಾಮನ ಕಡೆಗೆ ಸೇರಲು ಬರುತ್ತಾನೆ. ಇತ್ತ ಸೇತುವೆಯೂ ಆಯಿತು ವಿಭೀಷಣನನ್ನು ರಾಮನು ಮನ್ನಿಸಿದನು ಅವನ ಸಹಾಯದಿಂದ ಜಯಾಪಜಯಗಳು ತೂಗಾಡುತ್ತಿದ್ದ ಮಹಾಯುದ್ಧವು ಕೊನೆಗಂಡಿತು. ರಾವಣನು ಹತನಾದನು. ಸೀತೆಯನ್ನು ಕರೆದುಕೊಂಡು ರಾಮನು ಅಯೋಧ್ಯೆಗೆ ಬಂದೊಡನೆ ಭರತನು ರಾಜ್ಯವನ್ನು ಒಪ್ಪಿಸಿಕೊಟ್ಟು ಸುಖಿಯಾದನು. ಈ ಕಾಂಡದಲ್ಲಿ ಅದ್ಭುತ ಚರಿತ್ರೆಗಳನ್ನು ವರ್ಣಿಸಲು ಅವಕಾಶ ಅನಂತವಾದ್ದರಿಂದ ಮಾಯಾಸೀತೆ, ಸಂಜೀವನ, ದೇವೇಂದ್ರನ ರಥ, ಅಗ್ನಿಪರೀಕ್ಷೆ ಇತ್ಯಾದಿ ನೂರಾರು ಅಂಶಗಳನ್ನು ಮುಂದಿನವರು ಸೇರಿಸಿದಂತಿದೆ. ಸೀತೆಯ ಸ್ವಭಾವ ಗೊತ್ತಿದ್ದ ರಾಮನು ಅವಳ ಪಾತಿವ್ರತ್ಯವನ್ನು ಶಂಕಿಸುವುದೇ ಸ್ವಲ್ಪ ವಿಚಿತ್ರವಾಗಿ ಕಾಣುತ್ತದೆ.

ಹೀಗೆ ಪ್ರಕ್ಷೇಪಗಳನ್ನು ಕಿತ್ತುಹಾಕಿದರೆ ವಾಲ್ಮೀಕಿಯ ಮೂಲ ಕಾವ್ಯದಲ್ಲಿ ನಡೆಯುವ ಕಥೆ ದಿವ್ಯಕಥೆಯಲ್ಲ, ದೇವಸಮಾನನಾದರೂ

ದೇವನಲ್ಲದ ಒಬ್ಬ ಆದರ್ಶ ಮಾನವನ ಕಥೆ. ಅವನ ಸಾಂಸಾರಿಕ ಜೀವನದಲ್ಲಿ, ಅವನ ರಾಜಕೀಯ ಜೀವನದಲ್ಲಿ ನಡೆದ ಘಟನೆಗಳು, ಅವನ ಕಷ್ಟಗಳು, ಅವನ ಸುಖಗಳು, ಅವನ ಆದರ್ಶಗಳು, ಅವನ ಕೃತಿಗಳು. ಉಳಿದೆಲ್ಲ ಪಾತ್ರಗಳಿಗೂ ರಾಮನೇ ಕೇಂದ್ರ. ಮೊದಲನೆಯ ಭಾಗದಲ್ಲಿ ಅರಮನೆಯ ಗಡಿಬಿಡಿಗಳು; ಎರಡನೆಯ ಭಾಗದಲ್ಲಿ ಕಾಡಿನ ಕೋಟಲೆಗಳು, ಕಡೆಯಲ್ಲಿ ಧರ್ಮನಿರತನಾದ ರಾಮನ ವಿಜಯ, ಅಧರ್ಮ ಸಮೂಹಗಳ ಪರಾಭವ—ಹೀಗೆ ಮಹಾಕಾವ್ಯವಾದರೂ ರಾಮಾಯಣದಲ್ಲಿ ಅನ್ಯಾದೃಶವಾದ ಒಂದು ಏಕಸೂತ್ರತೆಯಿದೆ, ಒಂದು ಕವಿಪ್ರತಿಭೆಯ ಕೈವಾಡವಿದೆ. ಸಾಮಾನ್ಯ ಘಟನೆಗಳನ್ನೇ ತೆಗೆದುಕೊಂಡು ಇಷ್ಟು ರಸಮಯವಾಗಿಯೂ ಇಷ್ಟು ಹೃದಯಂಗಮವಾಗಿಯೂ ವರ್ಣಿಸಿದ, ಆದಿಕವಿಯ ಕಾವ್ಯಕಲೆಯನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ರಾಮ, ಲಕ್ಷ್ಮಣ, ರಾವಣ, ವಾಲಿ, ಸುಗ್ರೀವ, ಸೀತೆ, ಮಂಥರೆ, ಹನುಮಂತ ಮುಂತಾಗಿ ಎಲ್ಲ ಪಾತ್ರಗಳನ್ನೂ ಪವಾಡಪುರುಷರನ್ನಾಗಿ, ದೇವದೇವಾಂಶಸಂಭೂತರನ್ನಾಗಿ ಮಾಡಿ ಧರ್ಮ ಶ್ರದ್ಧೆಯನ್ನು ಹೆಚ್ಚಿಸುವಂತೆ ಹತ್ತಾರು ಅತಿಮಾನುಷ ಕಥೆಗಳನ್ನು ಸೇರಿಸಿದ ಅಭಿರುಚಿ ಮುಂದಿನ ಭಾರತ ಜನತೆಯದೇ ಹೊರತು, ಆದಿಕವಿಯದಲ್ಲ.[24] ಆದಿಕಾವ್ಯವನ್ನು ಲೌಕಿಕವೆಂದು ತಿಳಿದರೆ ಅದರ ಕಾವ್ಯವಿಮರ್ಶೆಗೆ ಕಳೆ ಹೆಚ್ಚುವುದೇ ಹೊರತು ಕಡಿಮೆಯಾಗುವುದಿಲ್ಲ. ಈ ಪ್ರಕ್ಷೇಪಗಳ ವೈಚಿತ್ರ್ಯಕ್ಕೆ ಒಂದು ಉದಾಹರಣೆ —ಅಗ್ನಿಪರೀಕ್ಷೆಯನ್ನು ಸೀತೆಗೆ ಒಂದು ಸಲ ಮಾಡಿಸಿದರೆ ಮನಸ್ಸಿಗೆ ದಣಿಯದೆ, ಮತ್ತೆ ಎರಡನೆಯ ಸಲ, ಮತ್ತೆ ಮೂರನೆಯ ಸಲ ಮಾಡುವುದು, ಪೂರ್ವಾಪರ ವಿರೋಧವಿದ್ದರೂ ಅದ್ಭುತವು ಯಾವುದಕ್ಕೂ ವಿರುದ್ಧವಲ್ಲವೆಂಬ ಒಂದು ಸಮಾಧಾನ ಮಾಡಿ

24 ವೈದಿಕವಾಙ್ಮಯದಲ್ಲಿ ರಾಮನ ಹೆಸರು ಬರುತ್ತದೆ. (ಋಗ್ವೇದ X 93 14); ಸೀತೆ ಕೃಷಿಯ ಅಧಿಷ್ಠಾತ್ರಿದೇವತೆ (ಅಥರ್ವವೇದ III 17 8) ವೈದಿಕಪ್ರಕೃತಿದೇವತೆಗಳಾದ ಇಂದ್ರ, ಸೂರ್ಯ ಮುಂತಾದವರ ವಿಸ್ತೃತ ಕಲ್ಪನೆಯೇ ರಾಮಸೀತೆಯರ ಸ್ವಭಾವವೆಂದು ವೆಬರ್, ವ್ಹೀಲರ್ ಮುಂತಾದ ವಿದ್ವಾಂಸರು ಹೇಳುತ್ತಿದ್ದರು. ಯಾಕೊಬಿಯವರೂ ಈ ಮೂಲವನ್ನೊಪ್ಪುತ್ತಾರೆ. ರಾಮಾಯಣದಲ್ಲಿ ಇತಿಹಾಸಕ್ಕಿಂತ ಕಲ್ಪನೆ ಹೆಚ್ಚೆಂಬುದನ್ನೇ ಇವು ತೋರಿಸುತ್ತವೆ.

ಕೊಳ್ಳುವುದು ; ಈ ವಿರೋಧಗಳನ್ನು ತಪ್ಪಿಸಲೆಂದು ಮುಂದೆ ಬೇರೆ ಬೇರೆ ರಾಮಾಯಣಗಳನ್ನೂ, ಕಾವ್ಯನಾಟಕಗಳನ್ನೂ ಕಲ್ಪಿಸುವುದು ; ಬೇರೆ ಬೇರೆ ಪೌರಾಣಿಕ ಸಾಮುಗ್ರಿಗಳನ್ನು ಕೂಡಿಸಿಕೊಳ್ಳುತ್ತಾ ಹೋಗುವುದು ,— ರಾಮಾಯಣವು ಶತಕೋಟಿ ಪ್ರವಿಸ್ತರವಾದುದೇ ಹೀಗೆ. ಇಂದಿನ ವೈಜ್ಞಾನಿಕ ಮನೋವಲಯಕ್ಕೆ ಪವಾಡಗಳ ಪ್ರದರ್ಶನಕ್ಕಿಂತ ಮಾನವೀಯ ಮಹತ್ವವೇ ಹೆಚ್ಚು ಶ್ಲಾಘ್ಯವಾದರೂ ಆಗಬಹುದು. ಪವಾಡವನ್ನೇ ಮೆಚ್ಚು ವವರಿಗೆ ಪೂರ್ಣರಾಮಾಯಣವಿದ್ದೇ ಇದೆ. ಅದರ ಮೇಲಿಂದ ರಾಮನಿಗಿಂತ ಹನುಮಂತನೇ ಹೆಚ್ಚು ; ರಾಮನು ವಾಲಿಯನ್ನು ಕೊಂದದ್ದು ಧರ್ಮವೇ ಮುಂತಾದುವನ್ನು ಸಮರ್ಥಿಸಲು ಸಾವಿರಾರು ಪುರಾಣಗಳಲ್ಲೂ ‘ ಶ್ರೀಮದ್ ’ ರಾಮಾಯಣದಲ್ಲೂ ‘ ಸಂಶೋಧನೆ ’ ಮಾಡುತ್ತಾ ಆಯುಷ್ಯವನ್ನು ಕಳೆಯ ಬಹುದು. ಇದು ಧಾರ್ಮಿಕ ಪ್ರಚಾರವಾಗಬಹುದೇ ಹೊರತು ನಿರ್ದುಷ್ಟ ಕಾವ್ಯವಿಮರ್ಶೆಯೆನಿಸಲಾರದೆಂದು ಇಂದು ತಿಳಿಯುವ ಕಾಲ ಬಂದಾಗಿದೆ. ಎರಡರ ಕ್ಷೇತ್ರಗಳೂ ಬೇರೆ ಬೇರೆ. ಕಾವ್ಯದೃಷ್ಟಿಯಿಂದ ರಾಮಾಯಣವು ಮುಖ್ಯವಾಗಿ ಇಕ್ಷ್ವಾಕು ಕುಲದ ರಾಜರ ಒಂದೇ ದೊಡ್ಡ ಆಖ್ಯಾನ, ಋಷಿಗಳ, ದೇವತೆಗಳ, ನೂರಾರು ಅಪ್ರಸಕ್ತ ಕಥೆ ಉಪಕಥೆಗಳ ಆರಣ್ಯವಲ್ಲ –

ಇಕ್ಷ್ವಾಕೂಣಾಮಿದಂ ತೇಷಾಂ ರಾಜ್ಞಾಂ ವಂಶೇ
ಮಹಾತ್ಮನಾಮ್ ।
ಮಹದುತ್ಪನ್ನಮಾಖ್ಯಾನಂ ರಾಮಾಯಣಮಿತಿ ಶ್ರುತಮ್ ॥
(I. V. 3)

ಋಷ್ಯಶೃಂಗ, ನಳ-ದಮಯಂತಿ, ಅಹಲ್ಯೆ-ಇಂದ್ರ, ಸಗರ, ಗಂಗಾವ ತರಣ ಮುಂತಾದ ಉಪಾಖ್ಯಾನಗಳು ಬಹಳ ಪ್ರಾಚೀನವಿರಬಹುದು, ಆವುಗಳಲ್ಲಿ ಕಾವ್ಯದೃಷ್ಟಿಯಿಂದ ಹೇರಳವಾದ ಸ್ವಾರಸ್ಯವೂ ಉಂಟು. ಆದರೆ ಅವುಗಳನ್ನು ಸ್ವತಂತ್ರ ಕಾವ್ಯಗಳೆಂದು ಮಾತ್ರ ಪರಿಶೀಲಿಸಬೇಕೇ ಹೊರತು ಮಹಾಕಾವ್ಯದ ಅಂತರ್ಗತ ಅಂಗಗಳೆಂದಲ್ಲ. ಕಾವ್ಯದಲ್ಲಿ ನಾವು ನೋಡ ಬೇಕಾದದ್ದು ಸಮಸ್ತವೂ ಸುಸಂಧಿಘಟಿತವೂ ಆದ ‘ ಮುನಿಪ್ರಣೀತ ’ ರಘುಚರಿತೆ, ದಶಶಿರನ ವಧೆ. ಹೆಚ್ಚು ಅನವಶ್ಯ, ಅಷ್ಟನ್ನೇ ಹಿಡಿದರೆ

ವಾಕ್ಯಗಳೆಲ್ಲವೂ ಸಮ, ಮಧುರ, ಉಪನತ, ಅರ್ಥಗಳಿಂದ ಸುಬದ್ಧವಾಗಿ ಕಾಣುವುದರಲ್ಲಿ ಸಂದೇಹವಿಲ್ಲ —

**ತದುಪಗತ ಸಮಾಸ ಸಂಧಿಯೋಗಂ**
**ಸಮಮಧುರೋಪನತಾರ್ಥವಾಕ್ಯಬದ್ಧಮ್ ।**
**ರಘುವರಚರಿತಂ ಮುನಿಪ್ರಣೀತಂ**
**ದಶಶಿರಸಶ್ಚ ವಧಂ ನಿಶಾಮಯಧ್ವಮ್ ॥**

**ಪಾತ್ರಗಳ ಪ್ರತಿಪಾದನೆ:**—ಆದಿ ರಾಮಾಯಣದ ಪಾತ್ರಗಳು ದೇವತೆಗಳೇ ಅಲ್ಲ, ದೇವೋಪಮ ಧ್ಯೇಯಗಳನ್ನುಳ್ಳ ಮಾನವರು ಎಂಬ ದೃಷ್ಟಿಯನ್ನು ಇದುವರೆಗೂ ಸ್ಪಷ್ಟಪಡಿಸಲಾಗಿದೆ. ಒಂದು ಬಗೆಯಿಂದ ಅವರನ್ನು ದೇವತೆಗಳೇ ಎನ್ನುವ ದೃಷ್ಟಿಯಾದರೂ ಈ ಮೂಲಾಂಶವನ್ನೇ ಸ್ಥಿರೀಕರಿಸುತ್ತದೆನ್ನಬಹುದು. ಆದರೆ ದಾರಿ ಕವಲೊಡೆಯುವುದು ಯಾವಾಗೆಂದರೆ ದೇವತೆಗಳು ದೋಷಾತೀತರೆಂದು ಸಾಧಿಸುವುದಕ್ಕೆ ಹೊರಟಾಗ. ರಾಮನು ವಿಷ್ಣುವಿನ ಅವತಾರ, ಸೀತೆಯು ಲಕ್ಷ್ಮಿಯ ಅವತಾರವೇ ಎಂದು ಒಪ್ಪಿದರೂ ಅವರು ಮನುಷ್ಯ ರೂಪನ್ನು ಧಾರಣೆ ಮಾಡಿದ ಮೇಲೆ ಮನುಷ್ಯ ದೋಷಗಳಲ್ಲೂ ಭಾಗಿಗಳಾಗಬೇಕೇ ಇಲ್ಲವೆ? ಇಲ್ಲವೆಂದೊಡನೆ ಭಕ್ತಿ ಬೆಳೆದು ಕಾವ್ಯನಿಯಮ ಸಡಿಲಾಗುತ್ತದೆ. ಉಂಟೆನ್ನುವುದಾದರೆ ಕಾವ್ಯದೃಷ್ಟಿಯಿಂದ ಪಾತ್ರಚಿತ್ರಣದ ಪರಿಶೀಲನೆಗೆ ಸಾರ್ಥಕ್ಯ ದೊರೆಯುತ್ತದೆ. ಆರ್ಷಕಾವ್ಯದ ಪಾತ್ರಗಳು ಮನುಷ್ಯರು ನಿಜ, ಆದರೆ ಸಾಮಾನ್ಯ ಮನುಷ್ಯರಲ್ಲ. ಅವರು ಅಸಾಧಾರಣ ಮನುಷ್ಯರು. ನುಡಿ, ನಡೆ, ಬಗೆ—ಎಲ್ಲದರಲ್ಲಿಯೂ ಸಾಮಾನ್ಯ ಜೀವಿಗಳಿಗಿಂತ ಬಹಳ ಮೇಲೆ ಇರತಕ್ಕವರು, ಉದಾತ್ತರು, ಉನ್ನತರು, ಉತ್ತಮರು. ಅವರ ಗುರಿಗಳು ದೊಡ್ಡವು, ಗೈಮೆಗಳೂ ದೊಡ್ಡವು. ಅವರ ಪ್ರೇರಣೆಗಳು ಹೆಚ್ಚಿನವು, ಸಾಮರ್ಥ್ಯವೂ ಹೆಚ್ಚಿನದು. ಆದ್ದರಿಂದಲೇ ಮಾನವರಿಗೆಲ್ಲ ಆದರ್ಶಪ್ರಾಯರಾಗುವ ಯೋಗ್ಯತೆ ಅವರಲ್ಲುಂಟು. ಇಷ್ಟಾದರೂ ಕೆಳಗಿನ ಮಟ್ಟದ ಮಾನವರನ್ನೂ ಅವರನ್ನೂ ಕೂಡಿ ಬೆಸೆಯುವ ಅಂಶಗಳು ಇದ್ದಲ್ಲದೆ ಅವರು ಕಥಾಪುರುಷರಾಗುವುದಿಲ್ಲ. ಅವರು ದೇವತೆಗಳೇ ಆಗಿಬಿಡಬಾರದು. ಅವರಿಗಿಂತ 'ಕಿಂಚಿದೂನ'ವಾಗಿರಬೇಕು. ಎಲ್ಲ ಮಾನವರಲ್ಲೂ ಸಹಾನುಭೂತಿಯನ್ನು ಸಹಧರ್ಮವನ್ನು ತರುವ ಬೆಸುಗೆಯೆಂದರೆ ದುಃಖ, 'ತಾಪತ್ರಯ', ಶೋಕ. ಇದು ಯಾರನ್ನೂ ಬಿಟ್ಟುದಲ್ಲ. ಇದಿಲ್ಲದಿದ್ದರೆ

ಮನುಷ್ಯನು ದೇವನಾಗಿಬಿಡುತ್ತಾನೆ. ಪುರಾಣಗಳ ನೀರಸತೆಗೂ ಕಾವ್ಯದ ಸ್ವಾರಸ್ಯಕ್ಕೂ ಇರುವ ಅಂತರವೇ ಇಲ್ಲಿ. ಸರ್ವಶಕ್ತನೂ, ಸರ್ವಸಿದ್ಧನೂ ಆದ ದೇವನಿಗೆ ಬರುವ ದುಃಖ ಮನುಷ್ಯನ ದುಃಖದಂತೆ ಅನಿವಾರ್ಯವಲ್ಲ, ಅಪ್ರತೀಕಾರ್ಯವಲ್ಲ. ಮಾನವನ ಇತಿಹಾಸದ ಮಹಾಕಾವ್ಯಗಳಲ್ಲೆಲ್ಲ ಕರುಣರಸವೇ ಮನೆಮಾಡಿಕೊಂಡಿರುವುದರ ರಹಸ್ಯವೇ ಇದು. ಈ ದೃಷ್ಟಿಯಿಂದ ನೋಡುವಾಗ ವಿಪ್ರಲಂಭಶೃಂಗಾರವೂ ಪ್ರೇಮಿಗಳ ಶೋಕವೆಂದೇ ಕಾಣುತ್ತದೆ ಎಷ್ಟೇ ಬಲಿಷ್ಠನಿರಲಿ ಮಾನವನನ್ನು ಬಗ್ಗಿಸಿ ಹಣ್ಣುಮಾಡುವ ಒಂದೇ ಅಸ್ತ್ರ ಶೋಕ.' ಶೋಕಕ್ಕೆ ಎಲ್ಲರೂ ಸಮಾನರು; ದೊಡ್ಡವರು ಚಿಕ್ಕವರೆಂಬ ಭೇದವಿಲ್ಲ. ಮಹಾತ್ಮರ ಶೋಕಕ್ಕೆ ಎಷ್ಟೋ ವೇಳೆ ವಿಧಿಯೊಂದೇ ಕಾರಣವೆಂದೂ ತೋರಬಹುದು. ಆದರೆ ಪ್ರತ್ಯಕ್ಷಲೋಕಾನುಭವದಿಂದಲೇ ಹಣ್ಣಾಗಿ ಕಾಲ ಮಿಂಚಿದ ಮೇಲೆ ವಿವೇಕಕ್ಕೆ ಹಳಹಳಿಸುವ ಬದಲು, ಕಾವ್ಯದ ಪರೋಕ್ಷವರ್ಣನೆಯಿಂದಲೇ ಪಾಠಕಲಿತು ವಿವೇಕಿಯಾಗಿ ಬಹುಕಾಲ ಬಾಳಲೆಂಬುದು ಮಹಾಕವಿಗಳ ಗುರಿ ಮತ್ತು ಉಪದೇಶದ ಪರಿ. ಆದ್ದರಿಂದಲೇ ವಿಷವೃಕ್ಷದಿಂದ ಮೂಡಿಬರುವ ಅಮೃತಫಲವೆಂದು ಕಾವ್ಯಕ್ಕೆ ಯುಗಯುಗಗಳ ಪುರಸ್ಕಾರ. ಜೀವನದ ಕೊಳೆಯನ್ನು ತೆಗೆದು ನಂದನವನವನ್ನಾಗಿ ಮಾಡುವ ಸಂಜೀವನ ಸಾಹಿತ್ಯವಾಗಬೇಕಾದರೆ ಬರುವ ಪಾತ್ರಗಳು ಜೀವನದ ದುಃಖಗಳನ್ನು ಎದುರಿಸುವ ಮಹತ್ವದಲ್ಲಿ ಬಹಳ ಮಿಗಿಲಾಗಿರಬೇಕಾಗುತ್ತದೆ. ಅವಕ್ಕೆ ಆ ಮಹತ್ವವನ್ನು ಈಯಬಲ್ಲ ಶಾಶ್ವತ ಸತ್ಯಗಳ ನಿರ್ಬಾಧಿತ ದರ್ಶನವೂ ಇರಬೇಕಾಗುತ್ತದೆ. ವಾಲ್ಮೀಕಿಯು ಸೃಷ್ಟಿಸಿರುವ ಪಾತ್ರಗಳಿಗೆಲ್ಲ ಈ ಮಾತುಗಳು ಅನ್ವಯಿಸುತ್ತವೆ. ಮುಖ್ಯ ಪಾತ್ರಗಳ ಬಗೆಗೆ ಒಂದೆರಡು ಮಾತನ್ನು ಹೇಳಿ ಅನಂತರ ವಾಲ್ಮೀಕಿಯ ಜೀವನ ಸಂದೇಶವನ್ನು ನಿರ್ದೇಶಿಸುತ್ತೇನೆ:—

**ರಾಮ :** ವಿದ್ಯಾಭ್ಯಾಸ, ವಿವಾಹಗಳನ್ನು ಮುಗಿಸಿಕೊಂಡು ಬಂದಿರುವ ರಾಮ ಅಯೋಧ್ಯೆಯಲ್ಲಿ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದಾನೆ. ಇದು ಅವನ ಗುಣಗಾನ:

**ಸ ಹಿ ವೀರ್ಯೋಪಪನ್ನಶ್ಚ ರೂಪವಾನನಸೂಯಕಃ ।**
**ಭೂಮಾವನುಪಮಃ ಸೂನುರ್ಗುಣೈರ್ದಶರಥೋಪಮಃ ॥**

ಸತು ನಿತ್ಯಂ ಪ್ರಶಾಂತಾತ್ಮಾ ಮೃದುಪೂರ್ವಂ ಚ ಭಾಷತೇ ।
ಉಚ್ಯಮಾನೋಽಪಿ ಪರುಷಂ ನೋತ್ತರಾ ಪ್ರತಿಪದ್ಯತೇ ॥
ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ ।
ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ ॥
ಶೀಲವೃದ್ಧೈಃ ಜ್ಞಾನವೃದ್ಧೈಃ ವಯೋವೃದ್ಧೈಶ್ಚ ಸಜ್ಜನೈಃ ।
ಕಥಯನ್ನಾಸ್ತ ವೈ ನಿತ್ಯಂ ಅಸ್ತ್ರಯೋಗ್ಯಾಂತರೇಷ್ವಪಿ ॥
ಬುದ್ಧಿಮಾನ್ ಮಧುರಾಭಾಷೀ ಪೂರ್ವಭಾಷೀ ಪ್ರಿಯಂ ವದಃ ।
ವೀರ್ಯವಾನ್ ನ ಚ ವೀರ್ಯೇಣ ಮಹತಾ ಸ್ವೇನ ಗರ್ವಿತಃ ॥
ನ ಚಾನೃತಕಥೋ ವಿದ್ವಾನ್ ವೃದ್ಧಾನಾಂ ಪ್ರತಿಪೂಜಕಃ ।
ಅನುರಕ್ತಃ ಪ್ರಜಾಭಿಶ್ಚ ಪ್ರಜಾಶ್ಚಾಪ್ಯನುರಂಜತೇ ॥
ಸಾನುಕ್ರೋಶೋ ಜಿತಕ್ರೋಧೋ ಬ್ರಾಹ್ಮಣಪ್ರತಿಪೂಜಕಃ।
ಭೂತಾನುಕಂಪೀ ಧರ್ಮಜ್ಞೋ ನಿತ್ಯಂ ಪ್ರಗ್ರಹವಾನ್ ಶುಚಿಃ ॥
ಕುಲೋಚಿತಮತಿಃ ಕ್ಷಾತ್ರಂ ಧರ್ಮಂ ಸ್ವಂ ಬಹು ಮನ್ಯತೇ।
ಮನ್ಯತೇ ಪರಯಾ ಕೀರ್ತ್ಯಾ ಮಹತ್ ಸ್ವರ್ಗಫಲಂ ತತಃ ॥

[ಅವನು ಮಹಾವೀರ, ರೂಪವಂತ, ಯಾರಲ್ಲಿಯೂ ಅವನಿಗೆ ಅಸೂಯೆ ಯೆಂಬುದಿಲ್ಲ. ಭೂಮಿಯಲ್ಲಿ ಅನುಪಮನಾದ ಆತನು ಗುಣಗಳಲ್ಲಿ ದಶರಥನಿಗೆ ಮಾತ್ರ ಸಮಾನ. ಯಾವಾಗಲೂ ಶಾಂತಾತ್ಮನಾದ ಅವನು ಮುಗುಳ್ನಗೆ ಯಿಲ್ಲದೆ ಮಾತನಾಡುವುದಿಲ್ಲ, ಇನ್ನೊಬ್ಬರು ಗಟ್ಟಿಯಾಗಿ ಬೈದರೂ ಪ್ರತಿಯಾಗಿ ನುಡಿಯುವುದಿಲ್ಲ. ಹೇಗೋ ಒಬ್ಬರಿಂದ ಒಂದು ಸಣ್ಣ ಉಪಕಾರ ವಾದರೂ ಮರೆಯುವುದಿಲ್ಲ, ಒಬ್ಬರು ನೂರು ಅಪಕಾರ ಮಾಡಿದರೂ ಅದನ್ನು ನೆನಪಿಡುವುದಿಲ್ಲ, ಅಂತಹ ಆತ್ಮಸಂಯಮಿ! ಅವನು ನಿತ್ಯವೂ ಮಾತ ನಾಡುವುದು ಶೀಲವೃದ್ಧರು, ಜ್ಞಾನವೃದ್ಧರು, ವಯೋವೃದ್ಧರು, ಇಲ್ಲವೆ ಸಹಪಾಠಿಗಳೊಡನೆ ಮಾತ್ರ! ಬುದ್ಧಿವಂತ ಮತ್ತು ಮಧುರಭಾಷಿ, ಮೊದಲು ಮಾತಾಡಿಸುವವನು ಮತ್ತು ಪ್ರಿಯವನ್ನೇ ಆಡುವವನು. ವೀರ್ಯವಂತ ನಾದರೂ ತಾನು ವೀರನೆಂದು ಗರ್ವಿಸುವವನಲ್ಲ. ಸುಳ್ಳಾಡಿ ಕಂಡವನಲ್ಲ,

ಬಲ್ಲವನು ಮತ್ತು ಹಿರಿಯರನ್ನು ಗೌರವಿಸುವವನು. ಅವನಿಗೆ ಪ್ರಜೆಗಳೆಂದರೆ ಪ್ರಾಣ; ಪ್ರಜೆಗಳಲ್ಲಿಯೂ ಅವನನ್ನು ಕಂಡರೆ ಹಾಗೆಯೇ. ದಯಾವಂತ, ಸಿಟ್ಟನ್ನು ಗೆದ್ದವನು, ಬ್ರಾಹ್ಮಣರನ್ನು ಪೂಜಿಸತಕ್ಕವನು. ಭೂತದಯೆ ಯುಳ್ಳವನು. ಧರ್ಮಜ್ಞ, ಜಿತೇಂದ್ರಿಯ ಮತ್ತು ಶೌಚಪರ. ಕುಲೋಚಿತ ವಾದ ಬುದ್ಧಿಯುಳ್ಳವನು, ಕ್ಷಾತ್ರಧರ್ಮದಲ್ಲಿ ನಿರತನಾದವನು, ಮಹತ್ತಾದ ಸ್ವರ್ಗಫಲಕ್ಕಿಂತಲೂ ಕೀರ್ತಿಯೇ ಹೆಚ್ಚೆಂದು ಭಾವಿಸತಕ್ಕವನು !]

ಹೀಗೆಯೇ ಅಯೋಧ್ಯಾಕಾಂಡ ಮೊದಲನೆಯ ಸರ್ಗದ ಉದ್ದಕ್ಕೂ ವಾಲ್ಮೀಕಿಯ ನಿರ್ಮಲ ವಾಕ್ಪ್ರವಾಹ ಹರಿಯುತ್ತದೆ. ಅಂತಹವನನ್ನು ಮೇದಿನಿಯು ನಾಥನಾಗಬೇಕೆಂದು ಕಾಮಿಸಿದ್ದರಲ್ಲಿ ಆಶ್ಚರ್ಯವಿಲ್ಲ. ದಶರಥನು ಸೂಚಿಸಿದ, ಪ್ರಜೆಗಳು ಅನುಮೋದಿಸಿದರು. ಅವನ ಕಲ್ಯಾಣಗುಣಗಳ ಗಾನವನ್ನು ಅವರೂ ಒಮ್ಮೆ ಮಾಡಿದರು. (II. 26-53) ವಸಿಷ್ಠಾದಿಗಳು ಆನಂದಿಸಿದರು. ಅಭಿಷೇಕ ಇನ್ನೇನು ನಾಳೆ ನಡೆಯಬೇಕು, ಕೌಸಲ್ಯೆ ಮುಂತಾದವರೆಲ್ಲ ಹರ್ಷದಲ್ಲಿ ತೇಲುತ್ತಿದ್ದಾರೆ ತಂದೆ ಕರೆಸಿ ರಾಮನಿಗೆ ಹೇಳುತ್ತಾನೆ —'ನನ್ನ ಆಯುಸ್ಸು ಸ್ಥಿರವಿಲ್ಲ, ಭರತ ಬರುವುದರೊಳಗೇ ಅಭಿಷೇಕ ಮುಗಿದುಹೋಗಲಿ'

**ವಿಪ್ರೋಷಿತಶ್ಚ ಭರತೋ ಯಾವದೇವ ಪುರಾದಿತಃ ।**
**ತಾವದೇವಾಭಿಷೇಕಸ್ತೇ ಪ್ರಾಪ್ತಕಾಲೋ ಮತೋ ಮಮ ॥**

(IV, 25)

ಎಲ್ಲವೂ ಇಷ್ಟು ಅನುಚಿತ ಆತುರದಲ್ಲಿ ನಡೆಯುವುದೇ ಸ್ವಲ್ಪ ಕಳವಳ ವನ್ನು ತರುತ್ತದೆ. ರಾಮನೂ ಅಭಿಷೇಕವನ್ನು 'ಸ್ವಲ್ಪ ತಡಿಯೋಣ' ಎನ್ನ ಲಿಲ್ಲ. ಕೈಕೆಯ ಹಟ ಮುದುಕನ ಕನಸಿನ ಸೌಧವನ್ನು ಪುಡಿಮಾಡುತ್ತದೆ. ರಾಮನ ಮೊದಲ ಸತ್ವಪರೀಕ್ಷೆ ನಡೆಯುತ್ತದೆ. ತಂದೆಯ ಮಾತನ್ನು ಉಳಿಸ ಬೇಕೋ? ತನ್ನ ಸ್ವಂತದ, ಬಂಧು ಮಿತ್ರರ ಸುಖವನ್ನು ನೋಡಬೇಕೋ? ಇದು ಸಮಸ್ಯೆ. ಧರ್ಮ ಹೆಚ್ಚೋ? ಅರ್ಥ ಕಾಮಗಳು ಹೆಚ್ಚೋ? ಎಂಬುದು ಮೂಲಭೂತ ಪ್ರಶ್ನೆ. ರಾಮನು ಅದಿರುವುದಿಲ್ಲ. ಧರ್ಮದ ಪಕ್ಷ ವನ್ನೇ ಆರಿಸಿಕೊಳ್ಳುತ್ತಾನೆ. ಕೈಕೆಯು ಸುಮಂತ್ರನೊಡನೆ ಹೇಳಿ ಕಳಿಸಿ ದಾಗ ವಿಧಿಯ ಅಣಕ ತಿಳಿಯದೆ ಅವನು ಸೀತೆಗೆ ಹೇಳುತ್ತಾನೆ!—

**ದಿಷ್ಟ್ಯಾ ಖಲು ಮಹಾರಾಜೋ ಮಹಿಷ್ಯಾ ಪ್ರಿಯಯಾ ಸಹ ।
ಸುಮಂತ್ರಂ ಪ್ರಾಹಿಣೋದ್ದೂತಂ ಅರ್ಥಕಾಮಕರಂ ಮಮ ॥**

(xvi. 18)

[ನನ್ನ ಭಾಗ್ಯವೇ ಸರಿ:—ಪ್ರಿಯಳಾದ ರಾಣಿಯೊಡನಿರುವ ಮಹಾರಾಜನು ನನ್ನ ಅರ್ಥಕಾಮಗಳು ಸಿದ್ಧಿಯಾಗಲೆಂದು ಸುಮಂತ್ರನ ಮೂಲಕ ನನಗೆ ಹೇಳಿಕಳುಹಿಸಿದ್ದಾನೆ!]

ಹೀಗೆ ಆಸೆಯ ಗೋಪುರವನ್ನು ಕಟ್ಟುತ್ತಿದ್ದ ಅವನಿಗೆ ಹಠಾತ್ತಾಗಿ ದಾರುಣಪರೀಕ್ಷೆಯನ್ನೊಡ್ಡುತ್ತದೆ ವಿಧಿ. ಧರ್ಮದ ದುಸ್ಸಹ ಪಕ್ಷವನ್ನು ಪ್ರತಿಜ್ಞೆಮಾಡಿಯಾಯಿತು. ಮುಖದಲ್ಲಿ ಏನೊಂದೂ ವಿಕಾರ ಕಾಣಗೊಟ್ಟಿಲ್ಲ. ಆದರೆ ರಾಮನಿಗೂ ಮನಸ್ಸಿನಲ್ಲಿ ದುಃಖವಿಲ್ಲದೆ ಇಲ್ಲ.—

**ಧಾರಯನ್ಮನಸಾ ದುಃಖಂ ಇಂದ್ರಿಯಾಣಿ ನಿಗೃಹ್ಯ ಚ ।
ಪ್ರವಿವೇಶಾತ್ಮವಾನ್ ವೇಶ್ಮ . . . . . . . ॥**

(xix. 35)

[ಗಟ್ಟಿಮನಸ್ಸಿನಿಂದ ದುಃಖವನ್ನು ಬಿಗಿಹಿಡಿದುಕೊಂಡು, ಇಂದ್ರಿಯಗಳನ್ನೂ ತಡೆಹಿಡಿದು, ಧೈರ್ಯಬಲದಿಂದ ಮನೆಯನ್ನು ಹೊಕ್ಕನು]

ಕೌಸಲ್ಯೆಯು ವಿಪ್ರಾದಿಗಳನ್ನು ಕರೆದು ಬೇಕಾದಂತೆ ದಾನ ಮಾಡುತ್ತಿದ್ದಾಳೆ. ಅಲ್ಲಿ ಬಂದ ರಾಮನನ್ನು ಮತ್ತೆ ಮತ್ತೆ ಅಭಿನಂದಿಸುತ್ತಾಳೆ! ನಿಜಸ್ಥಿತಿಯನ್ನು ತಿಳಿದ ಅವಳು ಗೋಳಾಡುವುದನ್ನು ನೋಡುವಂತಿಲ್ಲ. ಲಕ್ಷ್ಮಣನು ರೋಷಾವೇಶದಿಂದ ಉರಿದೆದ್ದು ಪರಾಕ್ರಮದಿಂದ ರಾಜ್ಯವನ್ನು ಗೆದ್ದುಕೊಡುವುದಾಗಿ ಆರ್ಭಟಿಸುತ್ತಾನೆ. ಈಗಲೂ ರಾಮನ ಮನಸ್ಸು ಚಲಿತವಾಗುವುದಿಲ್ಲ. ಅವನ ಧರ್ಮಶ್ರದ್ಧೆ ಅಚಲ:—

**ಧರ್ಮೋ ಹಿ ಪರಮೋ ಲೋಕೇ ಧರ್ಮೇ ಸತ್ಯಂ ಪ್ರತಿಷ್ಠಿತಮ್ ।
ಧರ್ಮಸಂಶ್ರಿತಮೇತಚ್ಚ ಪಿತುರ್ವಚನಮುತ್ತಮಮ್ ॥**

(xxi. 41)

**[ಧರ್ಮವೇ ಲೋಕದಲ್ಲಿ ಎಲ್ಲಿಕ್ಕಿಂತಲೂ ಮೇಲಾದುದು! ಧರ್ಮವನ್ನಾಶ್ರಯಿಸಿಯೇ ಸತ್ಯ ನಿಂತಿರುವುದು! ಧರ್ಮವನ್ನನುಸರಿಸಿಯೇ ತಂದೆಯ ಈ ಮಾತೂ ಹೊರಟಿದೆ!]**

ಅಚಿಂತ್ಯವಾದುದು ದೈವಘಟನೆ ಎಂಬ ಸಮಾಧಾನವೂ ಇದೆ :—

**ಯದಚಿಂತ್ಯಂ ತು ತದ್ದೈವಂ ಭೂತೇಷ್ವಪಿ ನ ಹನ್ಯತೇ ।**

(xxii. 20)

ಇವರನ್ನೂ ಸೀತೆಯನ್ನೂ ಒಪ್ಪಿಸಿ ಒಂದು ಸಲ ಹೊರಡುವ ಹೊತ್ತಿಗೆ ರಾಮನಂತಹ ಧೈರ್ಯಸಾಗರನಿಗೂ ಸಾಕುಸಾಕಾಗುತ್ತದೆ. ಕಾಡಿನಲ್ಲಿ ಕೇಡುಗಳು ಹೆಚ್ಚೆಂದು ಗೊತ್ತಿದ್ದರೂ ಅವಳ ಪತಿವ್ರತಾಧರ್ಮಕ್ಕೆ ಕಟ್ಟು ಬಿದ್ದು ಆಕೆಯೊಡನೆ ಹೊರಡಬೇಕಾಗುತ್ತದೆ. ಹೀಗೆ ರಾಮನ ಸರ್ವಾಂಗ ಸುಂದರವಾದ ಪಾತ್ರದಲ್ಲಿ ಮುಖ್ಯ ಮುಖ ಅವನ ಧರ್ಮನಿಷ್ಠೆಯೆಂಬುದನ್ನು ಕವಿ ಒಂದು ಕಾಂಡದ (ಅಯೋಧ್ಯಾ-) ಉದ್ದಕ್ಕೂ ತೋರಿಸಿದ್ದಾನೆ. ಅವನ ಪ್ರಶಾಂತ ಮನೋಧರ್ಮದಲ್ಲಿ ವೈರಕ್ಕೆ ಎಡೆಯಿಲ್ಲ, ದ್ವೇಷಾಸೂಯೆಗಳಿಗೆ ತಾಣವಿಲ್ಲ. ಅವನ ಧರ್ಮವು ಬಲಹೀನನ ಸೋಗಲ್ಲ, ಪ್ರಚಂಡ ಪರಾಕ್ರಮಿಯ ಉಜ್ಜ್ವಲ ಭೂಷಣ. ಅವನು ತಂದೆಗೆ ಹೆದರಿ ಕಾಡಿಗೆ ಹೋಗಬೇಕಾಗಿರಲಿಲ್ಲ. ಕ್ಷಣಾರ್ಧದಲ್ಲಿ ಅವನನ್ನೂ ಅವನ ಬೆಂಬಲಿಗರನ್ನೂ ಮೂಲೆಗೊತ್ತಿ ಯುವರಾಜನಲ್ಲ, ಮಹಾರಾಜನೇ ಆಗಬಹುದಾಗಿತ್ತು. ಆದರೆ ರಾಮನು ಧರ್ಮಕ್ಕೆ ಅಂಜಿ ನಡೆಯುತ್ತಾನೆ ಉದಾತ್ತ ರಾಘವನ ಮನಸ್ಸಿನಲ್ಲಿ ಒಂದು ಸಲವೂ ಪ್ರಾಕೃತ ಜನರಂತೆ ಸಣ್ಣ ಆಲೋಚನೆಗಳು ಬರಲೇ ಇಲ್ಲವೆ? ಎಂಬುದಕ್ಕೆ ಉತ್ತರ ಈ ಕೆಳಗಿನ ಶ್ಲೋಕಗಳು. ಒಂದು ರಾತ್ರಿ ನಿದ್ರೆಯಿಲ್ಲದೆ ಕಾಡಿನಲ್ಲಿ ಕಳೆದಿದ್ದಾರೆ. ತಾವು ಬಿಟ್ಟು ಬಂದುದನ್ನು ಒಮ್ಮೆ ನಿರ್ಲಿಪ್ತನಾಗಿ ರಾಮನು ನೆನೆದು ಹೇಳುತ್ತಾನೆ.—

**ಧ್ರುವಮದ್ಯ ಮಹಾರಾಜೋ ದುಃಖಂ ಸ್ವಪಿತಿ ಲಕ್ಷ್ಮಣ ।**
**ಕೃತಕಾಮಾ ತು ಕೈಕೇಯೀ ತುಷ್ಟಾ ಭವಿತುಮರ್ಹತಿ ॥**
**ಸಾ ಹಿ ದೇವೀ ಮಹಾರಾಜಂ ಕೈಕಯೀ ರಾಜ್ಯಕಾರಣಾತ್ ।**
**ಅಪಿ ನ ಚ್ಯಾವಯೇತ್ ಪ್ರಾಣಾನ್ ದೃಷ್ಟ್ವಾ ಭರತಮಾಗ- [ತಮ್ ॥**
**ಅನಾಥಶ್ಚ ಹಿ ವೃದ್ಧಶ್ಚ ಮಯಾ ಚೈವ ವಿನಾಕೃತಃ ।**
**ಕಿಂ ಕರಿಷ್ಯತಿ ಕಾಮಾತ್ಮಾ ಕೈಕಯೀವಶಮಾಗತಃ ॥**
**ಇದಂ ವ್ಯಸನಮಾಲೋಕ್ಯ ರಾಜ್ಞಶ್ಚ ಮತಿವಿಭ್ರಮಮ್ ।**
**ಕಾಮ ಏವಾರ್ಥಧರ್ಮಾಭ್ಯಾಂ ಗರೀಯಾನಿತಿ ಮೇ ಮತಿಃ ॥**

**ಕೋ ಹ್ಯವಿದ್ವಾನಪಿ ಪುಮಾನ್ ಪ್ರಮದಾಯಾಃ ಕೃತೇ-**
**ತ್ಯಜೇತ್ ।**
**ಛಂದಾನುವರ್ತಿನಂ ಪುತ್ರಂ ತತೋ ಮಾಮಿವ ಲಕ್ಷ್ಮಣ ॥**
(Lm. 6-10)

[ಲಕ್ಷ್ಮಣ. ಈ ಹೊತ್ತು ಮಹಾರಾಜನು ದುಃಖದಿಂದ ಮಲಗಿರುತ್ತಾನೆಂಬುದು ನಿಶ್ಚಯ. ಆಸೆ ಕೈಗೂಡಿದ ಕೈಕೆಯಿ ಒಳ್ಳೆಯ ಸಂತೋಷದಿಂದಿರುತ್ತಾಳೆ! ರಾಜ್ಯದಾಸೆಯಿಂದ ತುಂಬಿರುವ ಆ ರಾಣಿ ಭರತನು ಬಂದುದನ್ನು ಕಾಣುತ್ತಲೇ ಮಹಾರಾಜನ ಪ್ರಾಣವನ್ನೇ ತೆಗೆದುಬಿಡಬಹುದು! ಅನಾಥನೂ, ಮುದುಕನೂ, ನನ್ನನ್ನಗಲಿದವನೂ ಆದ ತಂದೆ ಕೈಕೆಯಿ ವಶದಲ್ಲಿ ಸಿಕ್ಕಿ ಕಾಮಾತ್ಮನಾಗಿ ಏನು ತಾನೆ ಮಾಡುವನು? ಈ ವ್ಯಸನವನ್ನೂ ರಾಜನ ಬುದ್ಧಿಭ್ರಮಣೆಯನ್ನೂ ನೋಡಿ ಕಾಮವೇ ಅರ್ಥ ಧರ್ಮಗಳಿಗಿಂತಲೂ ಹೆಚ್ಚೆಂದು ನನಗೆ ಭಾಸವಾಗುತ್ತಿದೆ ಬುದ್ಧಿಯಿಲ್ಲದವನೇ ಆಗಲಿ, ಯಾವನು ತಾನೆ ಹೆಂಗಸಿನ ಮಾತಿಗಾಗಿ, ಅದೂ ನನ್ನಂತೆ ಇಷ್ಟಾನುವರ್ತಿಯಾದ ಮಗನನ್ನು ತೊರೆದಾನು?]

ಇಷ್ಟೇ ಅಲ್ಲ, ಇಡೀ ಸರ್ಗವೇ ಈ ರೀತಿ ಇದೆ. ಅಂತಹ ರಾಮನಿಗೂ ಮನಸ್ಸಿನ ಒಂದು ಪದರದಲ್ಲಿ ಕೈಕೆಯಿಮೇಲೆ ಆಕ್ರೋಶವಿದೆ, ತಂದೆಯ ಕೆಲಸ ಕಾಮಾಂಧನ ಪ್ರಮಾದವೆಂಬ ಕಲ್ಪನೆಯಿದೆ. ತಂದೆಯ, ತಾಯಿಯಾದ ಕೌಸಲ್ಯೆಯ, ಜೀವವನ್ನೇ ತೆಗೆದಾರೋ ಎಂಬ ಕಳವಳವಿದೆ, ಅರ್ಥ, ಧರ್ಮಗಳಿಗಿಂತ, ಕಾಮವೇ ಹೆಚ್ಚಾಗಬಹುದೆ ಎಂಬ ದುಃಖವಿದೆ. ಒಂದು ಸಲ ಅಯೋಧ್ಯೆಯನ್ನು ಬಾಣಗಳಿಂದ ಧ್ವಂಸಮಾಡಿಬಿಡಲೊ ಎಂದೂ ಎನಿಸುತ್ತದೆ ಆದರೆ ಧರ್ಮದ ವಾಣಿ ಮರುಕ್ಷಣದಲ್ಲೇ ಅವನನ್ನು ತಡೆಯುತ್ತದೆ, ವೀರ್ಯಪ್ರದರ್ಶನಕ್ಕಿಂತ ಕೀರ್ತಿನಿದರ್ಶನ ಹೆಚ್ಚೆಂಬ ವಿವೇಕ ಬರುತ್ತದೆ.--

**ಏಕೋ ಹ್ಯಯಮಯೋಧ್ಯಾಂ ಚ ಪೃಥಿವೀಂ ಚಾಪಿ ಲಕ್ಷ್ಮಣ।**
**ತರೇಯಮಿಷುಭಿಃ ಕ್ರುದ್ಧೋ ನನು ವೀರ್ಯಮಕಾರಣಮ್ ॥**
**ಅಧರ್ಮಭಯಭೀತಶ್ಚ ಪರಲೋಕಸ್ಯ ಚಾನಘ ।**
**ತೇನ ಲಕ್ಷ್ಮಣ ನಾದ್ಯಾಹಮಾತ್ಮಾನಮಭಿಷೇಚಯೇ ॥**
(ಅದೇ. 25-6)

[ನಾನೊಬ್ಬನೇ ಕೋಪದಿಂದ ಅಯೋಧ್ಯೆಯನ್ನು, ಏಕೆ, ಇಡಿಯ ಭೂಮಂಡಲವನ್ನೇ ಅಂಬುಗಳಿಂದ ದಾಟಿಯೇನು! ಆದರೆ ವೀರ್ಯಕ್ಕೀಗ ಸಮಯವಲ್ಲ. ಅಧರ್ಮವೆಂಬ ಭೀತಿಯೊಂದು ಕಡೆ, ಪರಲೋಕದಲ್ಲಿ ನಂಬಿಕೆಯೊಂದು ಕಡೆ; ಇವೆರಡರಿಂದ ಈಗ ನಾನೇ ಹೋಗಿ ಅಭಿಷೇಕವನ್ನು ಬಲವಂತದಿಂದ ಏರ್ಪಡಿಸಿಕೊಳ್ಳುತ್ತಿಲ್ಲ.]

ರಾಮನಲ್ಲಿ ಮನುಷ್ಯತ್ವವೂ ಉಂಟು, ಅವನು ಬರಿಯ ಧರ್ಮದ ಗೊಂಬೆಯಲ್ಲವೆನ್ನಲು ಇದು ಒಂದು ಸಾಕ್ಷಿ. ಅವನಲ್ಲಿಯೂ ಮನಸ್ಸಿನ ದ್ವಂದ್ವಗಳು, ಹೊಯ್ದಾಟಗಳು ತಪ್ಪಿರಲಿಲ್ಲ. ಆದರ ಧರ್ಮದ ಅಂಕೆ ಗಟ್ಟಿಯಾಗಿತ್ತು. ಮುಂದೆ ಭರತನು ಬಂದು ಇನ್ನೊಂದು ಸಲ ರಾಮನ ಸತ್ವವನ್ನು ಪರೀಕ್ಷೆ ಮಾಡುತ್ತಾನೆ ಅಲ್ಲಿಯವರೆಗೂ ವನವಿಹಾರವೂ ಒಂದು ಕ್ರೀಡೆಯೆಂದೇ ಸೀತಾರಾಮರು ಇದ್ದರೆಂದು ಕಾಣುತ್ತದೆ ಆದರೆ ಭರತ, ಭರತನೊಡನೆ ತಾಯಿಯರು, ಸುಮಂತ್ರ, ಎಲ್ಲರೂ ಬಂದರು. ಭರತನ ತರ್ಕ ಅಪರಿಹಾರ್ಯ -- ಜನರ ಇಚ್ಛೆ ಅದು, ನನ್ನ ಇಚ್ಛೆಯೂ ಅದು. ಈಗ ನನ್ನ ರಾಜ್ಯವಾಗಿರುವುದನ್ನು ನನ್ನ ಇಚ್ಛೆಯಿಂದ ನಿನಗೀಯುತ್ತೇನೆ. ತಾಯಿಗೆ ಬುದ್ಧಿಯಿಲ್ಲ, ಅವಳಿಗೆ ಆಗಿರುವ ವೈಧವ್ಯವೆಂಬ ಪ್ರಾಯಶ್ಚಿತ್ತವೇ ಸಾಕು, ಅವಳನ್ನು ಕ್ಷಮಿಸು, ನನಗೆ ರಾಜ್ಯವಾಳಲು ನಿನಗಿರುವ ಶಕ್ತಿಯಿಲ್ಲ, ಅದು ನನಗೆ ಬೇಡ.' ರಾಮನು ಇದಕ್ಕೆ ಉತ್ತರ ಹೇಳಲು ಹೊರಡುವುದಿಲ್ಲ. ತನ್ನ ಅಚಲ ಪ್ರತಿಜ್ಞೆಯನ್ನು ಮತ್ತೆ ಒತ್ತಿ ಹೇಳುತ್ತಾನೆ

**ಲಕ್ಷ್ಮೀಶ್ಚಂದ್ರಾದಪೇಯಾದ್ವಾ ಹಿಮವಾನ್ ವಾ ಹಿಮಂ ತ್ಯಜೇತ್ ।**
**ಅತೀಯಾತ್ ಸಾಗರೋ ವೇಲಾಂ ನ ಪ್ರತಿಜ್ಞಾಮಹಂ ಪಿತುಃ ॥**

(II. 112-18)

[ಚಂದ್ರನನ್ನು ಚೆಲುವು ಅಗಲಬಹುದು, ಹಿಮವಂತನು ಹಿಮವನ್ನು ಬಿಡಬಹುದು, ಸಮುದ್ರವೇ ಮೇರೆಯನ್ನು ಮೀರಬಹುದು. ನಾನು ತಂದೆಯಾಜ್ಞೆಯನ್ನು ಮೀರುವುದಿಲ್ಲ!]

ಈಗ ಬದಲಾಯಿಸಿದರೆ "ರಾಮೋ ದ್ವಿರ್ನಾಭಿಭಾಷತೇ" ಎಂಬ ಬಿರುದಿಗೆ ಕುಂದು. ರಾಮನು ಇದನ್ನು ಒಂದು ದೊಡ್ಡ ಪ್ರಲೋಭನವೆಂದು ಬಗೆದು,

ಶಕ್ತಿ ಮೀರಿ ಅದನ್ನು ದೂರ ಒಗೆಯುತ್ತಾನೆ. ಪಿತೃ ವಚನದ ಯುಕ್ತಾಯುಕ್ತತೆಯ ಕಡೆಗೆ ಹೋಗದೆ ಆ ವಚನವನ್ನು ಅಕ್ಷರಶಃ ಪಾಲಿಸದಿದ್ದರೆ, ವಿಶೇಷತಃ ತಂದೆ ದಿವಂಗತನಾದ ಮೇಲೆ ಪಾಲಿಸದಿದ್ದರೆ ಅದು ಯಾವ ಮಕ್ಕಳಿಗೂ ಶ್ರೇಯಸ್ಕರವಲ್ಲವೆಂದು ಒಂದೇ ಮಾತಿನಿಂದ ಭರತನನ್ನು ಕಟ್ಟಿ ಹಾಕುತ್ತಾನೆ. ಕೈಕೆಯನ್ನು ಹೀನಾಪಮಾನವಾಗಿ ಬಯ್ಯುತ್ತಿರುವ ಭರತನಿಗೆ ಅದು ತಪ್ಪೆಂದು ಬುದ್ಧಿ ಹೇಳುತ್ತಾನೆ. ಪ್ರಾಯೋಪವೇಶಮಾಡುವೆನೆಂಬ ಭರತನ ಸತ್ಯಾಗ್ರಹದ ಬೆದರಿಕೆಗೂ ಸಗ್ಗುವುದಿಲ್ಲ. ಕಡೆಗೆ ಹೇಗೋ ಪಾದುಕೆಗಳನ್ನು ಕೊಡಲೊಪ್ಪುತ್ತಾನೆ, ಅಷ್ಟೆ. ಈ ಎರಡನೆಯ ಅಗ್ನಿಪರೀಕ್ಷೆಯಿಂದ ಪುಟಕ್ಕೆ ಹಾಕಿದ ಚಿನ್ನದಂತೆ ಶ್ರೀರಾಮನ ಧರ್ಮವು ಜಾಜ್ವಲ್ಯಮಾನವಾಗಿ ಹೊಳೆಯುತ್ತದೆ. ಈ ಸನ್ನಿವೇಶದಲ್ಲಿ ಉಳಿದವರು ಯಾರೂ ಹೀಗೆ ಸಾಮಾನ್ಯವಾಗಿ ವರ್ತಿಸುತ್ತಿರಲಿಲ್ಲ. ಅನುಕೂಲಸಿಂಧುವಾದ ಪಕ್ಷವನ್ನನುಸರಿಸುತ್ತಿದ್ದರು.

ಅರಣ್ಯದಲ್ಲಿರುವಾಗ ಮೂರನೆಯ ಸತ್ವಪರೀಕ್ಷೆ ರಾಮನಿಗೆ ಒದಗುತ್ತದೆ. ಕಾಡಿನ ಋಷಿಗಳು ತಮ್ಮ ಯಾಗಕ್ಕೆ ಅಡ್ಡಿ ತರುವ ರಾಕ್ಷಸರನ್ನು ನಾಶಮಾಡಬೇಕೆಂದು ಕೇಳಕೊಂಡರು. ರಾಮನು 'ತಥಾಸ್ತು' ಎಂದನು. ಸೀತೆಗೇ ಇದು ಸರಿಯೆನಿಸಲಿಲ್ಲ. 'ವನಚಾರಿಯಾದವನಿಗೆ ದುಷ್ಟಶಿಕ್ಷಣವೆಂಬ ರಾಜಕಾರ್ಯದ ಗೊಡವೆಯೇಕೆ? ಅದೂ ನಿಷ್ಕಾರಣವಾಗಿ ರಾಕ್ಷಸರ ವೈರವೇಕೆ? ಶಸ್ತ್ರದ ಸಹವಾಸವೇ ಅನರ್ಥಗಳ ಮೂಲ,'ವೆಂದು ರಾಮನಿಗೆ ಧರ್ಮಸೂಕ್ಷ್ಮವನ್ನು ತಿಳಿಸುತ್ತಾಳೆ. 'ಸ್ಮಾರಯೇ ನ ತು ಶಿಕ್ಷಯೇ 'ಎಂದು ಅವಳೆಂದಿರುವುದು ಅವಳ ವಿನಯಕ್ಕೆ ಭೂಷಣ, ಅರ್ಥದಲ್ಲಿ ವ್ಯತ್ಯಾಸವಿಲ್ಲ (III. ix) ರಾಮನು ಅದಕ್ಕೆ ಹೇಳುವ ಉತ್ತರವನ್ನು ನೋಡಿ --

**ಕ್ಷತ್ರಿಯೈರ್ಧಾರ್ಯತೇ ಚಾಪೋ ನಾರ್ತಶಬ್ದೋ ಭವೇದಿತಿ ।**

(X. 3)

[ಕ್ಷತ್ರಿಯರು ಬಿಲ್ಲನ್ನು ಹಿಡಿದಿರುವುದಕ್ಕೆ ಎಲ್ಲಿಯೂ ಆರ್ತಶಬ್ದವಿರಬಾರದೆಂಬುದೇ ಧ್ಯೇಯ!]

ಆರ್ತರನ್ನು ಕಾಯುವುದು ಕ್ಷತ್ರಿಯರೆಲ್ಲರ–ವನವಾಸಿಗಳಾಗಿದ್ದರೂ ಕೂಡ–ಧರ್ಮ. ಅಲ್ಲದೆ ಅವನ ಪ್ರತಿಜ್ಞೆಗಾಗಿ ಪ್ರಾಣ, ಪ್ರಿಯೆ, ತಮ್ಮ,

ಯಾರನ್ನಾದರೂ ಬಿಡಲು ಸಿದ್ಧನಂತೆ. ಈ ವಾಕ್ಯದಲ್ಲಿ ವಿಧಿಯ ವಿಕಟ ಹಾಸ್ಯವನ್ನು ಯಾರೂ ಮರೆಯುವಂತಿಲ್ಲ —

**ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಮ್ ।**
**ನ ತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ॥**

(X 19)

ಇದು ಸ್ವಲ್ಪ ಮಿತಿಮೀರಿದ್ದೆಂದು ಯಾರಿಗಾದರೂ ಕಾಣುತ್ತದೆ. ಇದು ವಿಕ್ರಮವಿರಬಹುದು, ವಿವೇಕವಲ್ಲ ಮನುಷ್ಯನಿಗೆ ಒಮ್ಮೊಮ್ಮೆ ವಿಧಿಯು ವಂಚಿಸುವುದು ಧರ್ಮದ ಸೋಗಿನಲ್ಲಿಯೇ ಎಂಬುದಕ್ಕೆ ಇದು ನಿದರ್ಶನ. ಮೂರನೆಯ ಪರೀಕ್ಷೆಯಲ್ಲಿ ರಾಮನು ಆರಿಸಿಕೊಂಡ ನಿಷ್ಕಾರಣವೈರದಲ್ಲಿ ಮುಂದಿನ ಅನರ್ಥಬೀಜಗಳು ಅಡಗಿದ್ದುವು. ಅವನಿಗೆ ಸೀತೆ ಹೇಳಿದರೂ ತಿಳಿಯಲಾಗಲಿಲ್ಲ. ಇದು ನಿಜವಾಗಿಯೂ ವಿಧಿವಿಲಾಸ.

ಮುಂದಿನ ಘಟನೆಗಳು ಬೇಗ ಬೇಗ ಒದಗಿದುವು. ತನ್ನ ಬಲವನ್ನು ಅತಿಯಂದು ತಿಳಿದು ವೈರಿಗಳ ಬಲವನ್ನು ಕಡೆಗಣಿಸಿ ರಾಮನು ಸಾಗುತ್ತಿದ್ದಾನೆ. ಶೂರ್ಪಣಖಿ ಬಂದಳು ಅವಳ ಭೈರವಾಕಾರವೇ ನಗಿಸುವಂತಿತ್ತು, ಸ್ವಲ್ಪ ಕುಚೋದ್ಯಕ್ಕೆ ರಾಮನು ಮನಸೋತ. ಲಕ್ಷ್ಮಣ, ರಾಮರ ನಡುವೆ ಅವಳು ನಿಜವೆಂದು ನಂಬಿಕೊಂಡು ಪ್ರಣಯಭಿಕ್ಷೆಗೆ ಸುತ್ತಾಡಿದಳು. ಕಡೆಗೆ—ಅದು ಮುಖ್ಯ—ಪರಿಹಾಸದಿಂದ ಕುಚೋದ್ಯಕ್ಕಿಳಿದಿದ್ದ ರಾಮನ ಮನಸ್ಸು ಅವಳ ಅಮಾನುಷ ವಿರೂಪಕರಣಕ್ಕೂ ಅನುಮತಿಯನ್ನಿತ್ತಿತು. ಇಲ್ಲಿ ಅವನ ಧರ್ಮದೃಷ್ಟಿ ಲುಪ್ತವಾಯಿತು ಮೆಚ್ಚಿ ಬಂದವಳನ್ನು ಕೂಡದಿದ್ದರೆ ಹೋಗಲಿ, ಅವಳನ್ನು ನೇರವಾಗಿ ತಿರಸ್ಕರಿಸುವ ಬದಲು ಇಷ್ಟೆಲ್ಲ ಅವಾಂತರ ಮಾಡಿದ್ದು ಅವನಿಗೆ ರಾಕ್ಷಸರ ಮೇಲಿದ್ದ ದುರಾಗ್ರಹದಿಂದಲೇ ಎಂದು ಕಾಣುತ್ತದೆ. ರಾಮನು ಪ್ರಾಕೃತನಂತೆ ನಡೆದ, ಪ್ರಾಕೃತರಂತೆ ಹೆಂಡತಿಯನ್ನು ಕಳೆದುಕೊಂಡ ಶೂರ್ಪಣಖೆಯು ಹೋಗಿ ರಾವಣನಲ್ಲಿ ಅಳದಿದ್ದರೆ ಯಾವ ಹಗರಣವೂ ನಡೆಯುತ್ತಲೇ ಇರಲಿಲ್ಲ. ರಾಕ್ಷಸರಿಗೆ ಮಾಯೆ, ಮೋಸಗಳೇ 'ಧರ್ಮ', ರಾವಣನು ತನ್ನ ಧರ್ಮಕ್ಕನುಸಾರವಾಗಿ ತನ್ನ ರಾಜ್ಯದ ಸೀಮೆಯೊಳಗಿನಿಂದಲೇ ಸೀತೆಯನ್ನೆತ್ತಿಕೊಂಡು ಹೋದನು.

ರಾಮನು ಕಂಗೆಟ್ಟನು, ದಿಕ್ಕುತೋಚದೆ ತೊಳಲಿದನು, ಗಳಗಳನೆ ಅತ್ತನು. ತನ್ನ ಅಖಂಡ ಪರಾಕ್ರಮದ ಅತಿ ವಿಶ್ವಾಸಕ್ಕೆ ಒಂದು ದೊಡ್ಡ ಪೆಟ್ಟು ತಾಗಿತ್ತು. ಯಾವ ಮಾನಕ್ಕಾಗಿ ಬಾಳುತ್ತಿದ್ದನೋ ಅದು ಪಾತಾಳದ ಲ್ಲಿಳಿದಿತ್ತು. ಅಕಸ್ಮಾತ್ ಜಟಾಯುವಿನಿಂದ ವೈರಿಯ ಹೆಸರು ತಿಳಿಯಿತು. ಪ್ರತೀಕಾರಕ್ಕೆ ಪರರ ಸಹಾಯವಿಲ್ಲದೆ ಸಾಧ್ಯವಿಲ್ಲವೆಂದು ಗೊತ್ತಾಯಿತು. ವಾನರರಾದರೂ ಅಡ್ಡಿಯಿಲ್ಲ, ಅವರ ಮನವೊಲಿಸಿ ಅವರ ಸಹಾಯದಿಂದ ಸೀತೆಯನ್ನು ಪುನಃ ಪಡೆಯುವ ಯೋಚನೆಯಿಂದ ಕಿಷ್ಕಿಂಧೆಗೆ ಬಂದನು. ಅವರ 'ಧರ್ಮ'ಗಳು ಕೂಡ ಬೇರೆಯೇ. ಕ್ಷತ್ರಿಯನ ಧರ್ಮಗಳಲ್ಲ. ದುರ್ಬಲನಾದ ತಮ್ಮನನ್ನೋಡಿಸಿ ಅವನ ಹೆಂಡತಿಯನ್ನೂ ಕಸಿದುಕೊಂಡು ವಾಲಿ ಪ್ರಬಲನಾಗಿದ್ದನು. ತಾನು ಮೊದಲು ಉಪಕಾರಮಾಡಿ ಪ್ರತ್ಯುಪ ಕಾರವಾಗಿ ಅವರಿಂದ ಸಹಾಯವನ್ನು ಕೇಳಬೇಕೆಂಬುದು ರಾಮನ ಮನೋಗತ, ಅಸಹಾಯನಂತೆ ಶರಣಾರ್ಥಿಯಾಗಿ ಹೋಗಲು ಅವನ ಅಭಿಮಾನಕ್ಕೆ ಕಡಿಮೆ. ಆದ್ದರಿಂದ ಉಪಕಾರಾರ್ಥಿಯಾಗಿದ್ದ ಸುಗ್ರೀವನನ್ನು ಹಿಡಿದನು; ಸಮರ್ಥನಾಗಿದ್ದ ವಾಲಿಯನ್ನಲ್ಲ. ಸುಗ್ರೀವನಿಗೂ ತನ್ನ ಶಕ್ತಿಯನ್ನು ಪ್ರತ್ಯಕ್ಷವಾಗಿ ತೋರಿಸಿಕೊಡುವವರೆಗೂ ನಂಬಿಕೆಯಿಲ್ಲ. ಸಪ್ತ ಸಾಲವನ್ನು ಒಂದೇ ಬಾಣದಿಂದ ಭೇದಿಸಿ ನಂಬಿಸಬೇಕಾಯಿತು. ಅನಂತರ ಸುಗ್ರೀವನ ಇಷ್ಟಾರ್ಥಸಿದ್ಧಿಗಾಗಿ, ಅವನ 'ಧರ್ಮ'ದಂತೆ—ಕ್ಷತ್ರಿಯ ಧರ್ಮ ದಂತಲ್ಲ- -ವಾಲಿಯನ್ನು ಹಿಂದಿನಿಂದ ಕೊಂದು ಹಾಕಿದನು. ಹೀಗೆ ಮಾಡ ದಿದ್ದರೆ ರಾಮನಿಗೆ ಕಾಡಿನಲ್ಲಿ ಸಾಯುವುದು ವಿನಾ ಸೀತೆಯನ್ನು ಕಾಣುವು ದಾಗಲಿ, ರಾವಣನನ್ನು ಕೊಲ್ಲುವುದಾಗಲಿ, ಒಂದೂ ಆಗುತ್ತಿರಲಿಲ್ಲ. ಇಲ್ಲಿ ರಾಮನು ಅರ್ಥಕ್ಕಾಗಿ ವಾಲಿವಧೆ ಮಾಡಿದನೇ ಹೊರತು ಧರ್ಮಕ್ಕಾಗಿ ಅಲ್ಲ. ಸುಗ್ರೀವಸಖ್ಯಕ್ಕೆ ಅದು ಒಂದೇ ಉಪಾಯ. ಸುಗ್ರೀವಸಖ್ಯವು ರಾವಣ ವಧೆಗೆ ಅನಿವಾರ್ಯ.

ರಾಮನ ಪಾತ್ರ ಮತ್ತೆ ಬರುವುದು ಯುದ್ಧ ಯಾತ್ರೆಯಲ್ಲಿ. ಅಲ್ಲಿ ಅವನು ತನ್ನ ರಣಕೌಶಲವನ್ನೆಲ್ಲ ಮೆರೆದು ವೀರಾಧಿವೀರನೆಂಬ ಕೀರ್ತಿ ಯನ್ನು ಪಡೆಯುತ್ತಾನೆ ಅಲ್ಲಿಯೂ ವಿಭೀಷಣನ ನೆರವು ಸಣ್ಣದಲ್ಲ. ಸೀತೆ ಯನ್ನು ಮರಳಿ ಪಡೆದು ಅಯೋಧ್ಯೆಗೆ ಬಂದು ಎಲ್ಲರನ್ನೂ ಸಂತೈಸುತ್ತಾನೆ.

'ಯತೋ ಧರ್ಮ ಸ್ತತೋ ಜಯಃ' ಎಂಬ ಕಾವ್ಯ ಸತ್ಯವು ಪ್ರತಿಷ್ಠಿತವಾಗುತ್ತದೆ ಫಲಶ್ರುತಿಯಲ್ಲಿ. ಹೀಗೆ ರಾಮನಲ್ಲಿ ಧರ್ಮ, ಅರ್ಥ, ಕಾಮಗಳ ಬೆರಕೆಯನ್ನು ಯಥೋಚಿತವಾಗಿ ತೋರಿಸಿ ಮಹಾಕವಿಯು ರಾಮನನ್ನು ಅಮರಪಾತ್ರವನ್ನಾಗಿ ಮಾಡಿದ್ದಾನೆ ಮುಂದಿನ ಪ್ರಕ್ಷೇಪಕಾರರು ಅವನ ಗುಣಗಳಿಗೆ ಭೂತಗನ್ನಡಿ ಹಿಡಿದು, ದೇವತ್ವ ನಿಷ್ಪಾದಕವಾದ ನೂರಾರು ಕಥೆ ಉಪಕಥೆಗಳನ್ನು ಕೂಡಿಸಿ, ಲೋಪದೋಷಗಳ ನೆರಳೂ ಸುಳಿಯದಂತೆ ರಾಮನ ಪಾತ್ರವನ್ನು ಅಮೃತಶಿಲೆಯ ಪ್ರತಿಮೆಯನ್ನಾಗಿ ಮಾಡಿದ್ದಾರೆ. ಶ್ರೀರಾಮನ ಧರ್ಮನಿಷ್ಠೆಯು ಅವನ ಅರ್ಥಕಾಮಗಳ ಆಸಕ್ತಿಯನ್ನು ಮೆಟ್ಟಿ ನಿಲ್ಲುವುದೆಂಬುದು ನಿಸ್ಸಂಶಯ. ಆದರೆ ಅವನಿಗೆ ಅರ್ಥಕಾಮಗಳ ಆಸಕ್ತಿಯೇ ಶೂನ್ಯವಾಗಿತ್ತೆಂದು ಭಾವಿಸುವ ಕಾರಣವಿಲ್ಲ. ರಾಮಾಯಣದ ವಿಸ್ತೃತ ಹಾಗು ಸುಂದರ ವಿವೇಚನೆಯನ್ನು ಮಾಸ್ತಿಯವರ 'ಆದಿಕವಿ ವಾಲ್ಮೀಕಿ' ಯಲ್ಲಿ ನೋಡಬಹುದು "ರಾಮನ ಗುಣಗಳನ್ನು ಹೇಳುತ್ತ ಹೋದರ ರಾಮಾಯಣವನ್ನು ಮತ್ತೆ ಸಂಗ್ರಹಿಸಬೇಕಾಗುವುದು. ಉದಾತ್ತವಾದ ಒಂದು ಸ್ವಭಾವವನ್ನು ಚಿತ್ರಿಸಿ ತೋರಿಸುವುದು ವಾಲ್ಮೀಕಿಯ ಉದ್ದೇಶ. ಅವನು ಅದನ್ನು ಸಾಧಿಸಿ ಕೃತಕೃತ್ಯನಾದನು," ಎಂಬ ಅವರ ಮಾತು ಸರ್ವಥಾ ಸತ್ಯ. ಅವರು ನಿರ್ದೇಶಿಸದೆ ಬಿಟ್ಟ ಒಂದೆರಡಂಶಗಳನ್ನು ಮಾತ್ರ ಇಲ್ಲಿ ಸೂಚಿಸಲು ಯತ್ನಿಸಿರುವುದರಿಂದ ಶ್ರೀರಾಮನ ಘನತೆಗೆ ಸ್ವಲ್ಪ ಕುಂದೊದಗಿದಂತೆ ತೋರಬಹುದಾದರೂ, ಲೇಖಕನ ಉದ್ದೇಶ ಹಾಗಿಲ್ಲ. ಮದ್ರಾಸಿನ ಶ್ರೀ ಟಿ. ಆರ್. ವೆಂಕಟರಾಮಶಾಸ್ತ್ರಿಗಳು ಬರೆದಿರುವ "ಆತ್ಮಾನಂ ಮಾನುಷಂ ಮನ್ಯೇ" ಎಂಬ ಲೇಖನವನ್ನೂ (Journal of Oriental Research, Vol XVII pt 2) ಈ ಸಂದರ್ಭದಲ್ಲಿ ಓದಬಹುದು.

**ಉಳಿದ ಪಾತ್ರಗಳು:** ರಾಮಾಯಣದ ಉಳಿದ ಪಾತ್ರಗಳಿಗೆಲ್ಲ ಶ್ರೀರಾಮನ ವ್ಯಕ್ತಿತ್ವವನ್ನು ಬೆಳಗಿಸುವುದೇ ಮುಖ್ಯ ಸಾರ್ಥಕ್ಯ. ಆದ್ದರಿಂದ ಅವುಗಳಲ್ಲಿ ಶ್ರೀರಾಮನ ಪಾತ್ರದ ಸರ್ವಾಂಗೀಣ ಪರಿಪುಷ್ಟಿಯನ್ನು ನಿರೀಕ್ಷಿಸಬಾರದು. ರಾಮನ ಮೂವರು ಸೋದರರಲ್ಲಿ ಶತ್ರುಘ್ನನ ಪಾತ್ರಕ್ಕೆ ಹೇಳುವಂತಹ ಔಚಿತ್ಯವಾವುದೂ ಇಲ್ಲ ಅವನು ಭರತನ ತಮ್ಮ, ಸಂಗಡಿಗ, ಅಷ್ಟೆ. ಅವನ ಒಂದೇ ಪ್ರತಾಪದ ಸಂಗತಿ ಎಂದರೆ, ಮಂಥರೆಯನ್ನು ಕೂದಲು

ಹಿಡಿದೆಳೆದು ತರುವುದು. ಆದರೆ **ಭರತ** ರಾಮನಂತೆಯೇ ಧರ್ಮಪರ. ಕವಿಯು ಈ ಇಬ್ಬರು ಧರ್ಮಾತ್ಮರ ಸಂಘರ್ಷವನ್ನು ಬಹಳ ಸೂಕ್ಷ್ಮವಾಗಿ ನಿರೂಪಿಸಿದ್ದಾನೆ. ಕೈಕೆಯ ಮನೋವೈಪರೀತ್ಯಕ್ಕೆ ಭರತ ಕಾರಣನಲ್ಲ, ಆದರೆ ನಿಮಿತ್ತ. ಭರತನ ಸ್ವಭಾವ ದಶರಥನಿಗೂ ಸರಿಯಾಗಿ ತಿಳಿಯದು: 'ಭರತನೇನೋ ಈಗ ತಿಳಿದಮಟ್ಟಿಗೆ ಸನ್ಮಾರ್ಗದಲ್ಲಿಯೇ ಇದ್ದಾನೆ. ಹಿರಿಯು ನನ್ನು ಅನುವರ್ತಿಸಿಕೊಂಡಿದ್ದಾನೆ. ಆದರೆ ಮನುಷ್ಯರ ಮನಸ್ಸು ಯಾವ ಕಾಲಕ್ಕೆ ಹೇಗೋ?'—

**ಕಾಮಂ ಖಲು ಸತಾಂ ವೃತ್ತೇ ಭ್ರಾತಾ ತೇ ಭರತಃ ಸ್ಥಿತಃ ।**
**ಜ್ಯೇಷ್ಠಾನುವರ್ತೀ ಧರ್ಮಾತ್ಮಾ ಸಾನುಕ್ರೋಶೋ ಜಿತೇಂದ್ರಿಯಃ ॥**
**ಕಿಂ ತು ಚಿತ್ತಂ ಮನುಷ್ಯಾಣಾಮನಿತ್ಯಮಿತಿ ಮೇ ಮತಿಃ ।**

(II iv. 26-7)

ಇದೇ ಮಾತನ್ನೇ ಮಂಥರೆ ಮುಂದ ರಾಮನ ವಿಷಯದಲ್ಲಿಯೂ ಹೇಳುತ್ತಾಳೆ. ಹೀಗೆ ರಾಮ, ಭರತರ ಭವಿಷ್ಯವರ್ತನೆಗಳ ಬಗೆಗೆ ಪರಸ್ಪರ ಸಂಶಯ ದಶರಥ ಕೈಕೆಯರಲ್ಲಿ ಬಂದುದರ ಪರಿಣಾಮವಾಗಿ ರಾಮ ಭರತ ರಿಬ್ಬರಿಗೂ ಅನಿಷ್ಟಗಳು ಜನಿಸುತ್ತವೆ. ಹಿರಿಯರಲ್ಲೇ ಪರಸ್ಪರ ದುರುದ್ದೇಶಗಳ ಸಂದೇಹ ಬಂದರೆ ಕಿರಿಯರಿಗೆ ಅದರ ಪರಿಣಾಮ ತಪ್ಪುವುದೆಂತು? ರಾಮನು ಧರ್ಮವನ್ನು ಬಿಡದೆ ಕಾಡಿಗೆ ಹೋದ ಭರತನು ತನಗೆ ಇಷ್ಟವಿರಲಿ, ಇಲ್ಲದಿರಲಿ, ವಿಧಿಪ್ರಾಪ್ತವೆಂದುಕೊಂಡೋ, ತಾಯಿಯ ಪ್ರಸಾದವೆಂದು ಕೊಂಡೋ, ರಾಜನಾಗಿರಬಹುದಾಗಿದ್ದಿತು ಹೇಗೂ ದೇಶವನ್ನು ಅನಾಯಕ ವಾಗಿ ಬಿಡುವಂತಿರಲಿಲ್ಲ. ರಾಮನು ಕಾಡಿಗೆ ಹೋಗಿಯಾಗಿತ್ತು. ಭರತನನ್ನು ತಡೆಯುವವರು ಯಾರೂ ಇರಲಿಲ್ಲ ಆದರೆ ಭರತನು ರಾಜನಾಗುವುದಿಲ್ಲ ವೆಂದು ಶಪಥಮಾಡಿ, ತಾಯಿಯನ್ನು ಬೈದು, ರಾಮನಿಗೆ ರಾಜ್ಯವನ್ನು ಒಪ್ಪಿಸಿಕೊಡುವುದಕ್ಕಾಗಿ ಅವನನ್ನು ಹುಡುಕಿಕೊಂಡು ಕಾಡಿಗೆ ಹೋಗು ತ್ತಾನೆ. ತನ್ನ ಹೆಸರಿನಲ್ಲಿ ನಡೆದ ಅನ್ಯಾಯಗಳಿಗೆ ತನ್ನ ಒಪ್ಪಿಗೆಯಿಲ್ಲವೆಂಬುದು ಸಿದ್ಧವಾಗಬೇಕಾದರೆ ತಾನು ರಾಜ್ಯತ್ಯಾಗಮಾಡುವುದೊಂದೇ ಅವನಿಗೆ ಕಾಣುವ ಉಪಾಯ. ರಾಮ, ಭರತ ಈ ಇಬ್ಬರು ಧರ್ಮಾತ್ಮರ, ಆದರ್ಶ ಸೋದರರ ಸಾಮ್ಯವೈಷಮ್ಯಗಳನ್ನು ಕವಿ ಬಹಳ ಚೆನ್ನಾಗಿ ತೋರಿಸಿದ್ದಾನೆ.

ಸ್ವಾರ್ಥತ್ಯಾಗದಲ್ಲಿ ಇಬ್ಬರೂ ಹುರುಡಿಸುತ್ತಿದ್ದಾರೆ, ಸ್ವಾರ್ಥಸಾಧನೆಯಲ್ಲಲ್ಲ. ರಾಮನು ಅಚಲಪ್ರತಿಜ್ಞನಾದರೆ ಭರತನೂ ಅವನಿಗೆ ಸಗ್ಗದ ಹಟವಾದಿ. ಒಬ್ಬನು ಬರಬೇಕಾದ ರಾಜ್ಯವನ್ನು ತ್ಯಾಗಮಾಡಿ ಬಂದರೆ, ಇನ್ನೊಬ್ಬನು ಬಂದಿದ್ದ ರಾಜ್ಯವನ್ನು ತ್ಯಾಗಮಾಡುತ್ತಿದ್ದಾನೆ. ಮಾತನಾಡುವುದರಲ್ಲಿಯೂ ಭರತನು ರಾಮನಿಗೆ ಕಡಿಮೆಯಿಲ್ಲ. ಆದರೆ ಅಣ್ಣನೆಂಬ ಗೌರವದಿಂದ ಕಡೆಗೆ ತಾನೇ ಸೋಲುತ್ತಾನೆ. ಸೋತರೂ ಗೆಲ್ಲುತ್ತಾನೆನ್ನಬಹುದು. ಇಂತಹ ಭರತನ ಮನೋಧರ್ಮವನ್ನು ನೋಡಿದ ಅಯೋಧ್ಯೆಯ ಜನರು ರಾಮನಿಗಿಂತ ಭರತನು ಧರ್ಮದಲ್ಲಿ ಕಡಿಮೆಯಿಲ್ಲದವನೆಂದು ಸಂತುಷ್ಟರಾಗಿರಬೇಕು. ಇಲ್ಲದಿದ್ದರೆ ಪ್ರಜಾಕ್ಷೋಭದಿಂದ ರಾಜ್ಯವಿಪ್ಲವವಾಗಬಹುದಾಗಿತ್ತು. ಭರತನ ಭ್ರಾತೃಪ್ರೇಮದಿಂದ ಅದು ತಪ್ಪಿತು. ಅವನು ಕೃತಿಯಲ್ಲಿ ರಾಜನಾದರೂ ಅಣ್ಣನ ಪಾದುಕೆಗಳ ಕಿಂಕರನಾಗಿಯೇ ಕೆಲಸಮಾಡಿದನು. ಆದರೆ ಅವನು ರಾಮನಷ್ಟು ಪ್ರಶಾಂತನಲ್ಲ, ಮುಂಗೋಪಿ, ಭಾವನಾಪ್ರಧಾನ ವೃತ್ತಿಯವನು. ಅಣ್ಣನ ಪ್ರೀತಿಯ ಭರದಲ್ಲಿ ತಾಯಿಗೆ ಸಲ್ಲಬೇಕಾದ ವಿನಯವನ್ನು ಈಡಾಡಿಬಿಡುತ್ತಾನೆ. ಅಷ್ಟೇ ಅಲ್ಲ, ಅವಳನ್ನು ಕೊಲ್ಲುವ ಕ್ರೋಧವೂ ಅವನಲ್ಲಿ ಅಡಿಗಡಿಗೆ ಉಕ್ಕುತ್ತದೆ. ರಾಮನ ಭಯದಿಂದ ಸುಮ್ಮನಾಗುತ್ತಾನೆ ಅಷ್ಟೆ. ಹೀಗೆ ರಾಮನಿಗಿಂತ ಸ್ವಲ್ಪ ಹೆಚ್ಚಿನ ತ್ಯಾಗವನ್ನೇ ಭರತ ಮಾಡಿರಬಹುದಾದರೂ, ಲೋಕಾನುಭವದಲ್ಲಿ ರಾಮನಿಗಿಂತ ಕಡಿಮೆ. ಇನ್ನೂ ಅಪಕ್ವಬುದ್ಧಿಯವನೆಂಬುದನ್ನು ವಾಲ್ಮೀಕಿಗಳು ತೋರಿಸಲು ಮರೆತಿಲ್ಲ. ಭರತನು ಭಾವಾವೇಶದಲ್ಲಿ 'ನಾನೇ ಹದಿನಾಲ್ಕು ವರ್ಷ ಕಾಡಿನಲ್ಲಿರುತ್ತೇನೆ, ನೀನು ರಾಜನಾಗು, ತಂದೆಯ ಮಾತು ಹೇಗೂ ನಡೆದಂತಾಗುತ್ತದೆ' ಎಂದು ಮುಂತಾಗಿ ಹೇಳುವಾಗಲೂ ವ್ಯವಹಾರಜ್ಞಾನದ ಅಭಾವವೇ ವ್ಯಕ್ತವಾಗುತ್ತದೆ. ಗುಣಾತಿರೇಕವೂ ದೋಷವಾಗಬಹುದೆಂಬುದು ಇವನ ಪಾತ್ರದಲ್ಲಿ ಉದ್ದಕ್ಕೂ ಕಾಣುತ್ತದೆ.

**ಲಕ್ಷ್ಮಣನ** ಪಾತ್ರವನ್ನು ಆದಿಕವಿ ಮತ್ತೂ ಸ್ಪಷ್ಟರೇಖೆಗಳಿಂದ, ಭಿನ್ನಕೋನಗಳಿಂದ, ಚಿತ್ರಿಸಿದ್ದಾನೆ. ಸೀತೆ ರಾಮನಿಗೆ ಪ್ರಾಣಸಮೆಯಾದರೆ ಲಕ್ಷ್ಮಣ ಪ್ರಾಣಕ್ಕಿಂತಲೂ ಹೆಚ್ಚು. ಲಕ್ಷ್ಮಣನು ಯುದ್ಧರಂಗದಲ್ಲಿ ಮೂರ್ಛೆ ಬಿದ್ದಾಗ ರಾಮನು ಅನೇಕವೇಳೆ ಈ ಮಾತನ್ನು ಹೇಳಿ ಪ್ರಾಣತ್ಯಾಗಕ್ಕೆ ಹೊರಡುತ್ತಾನೆ.

**ರಾಘವೋ ಭ್ರಾತರಂ ದೃಷ್ಟ್ವಾ ಪ್ರಿಯಂ ಪ್ರಾಣಂ ಬಹಿಶ್ಚರಮ್।**
**ದುಃಖೇನ ಮಹತಾವಿಷ್ಟೋ ಧ್ಯಾನಶೋಕಪರಾಯಣಃ ॥**

(VI 102-9)

**ಪರಿತ್ಯಕ್ಷ್ಯಾಮ್ಯಹಂ ಪ್ರಾಣಾನ್ ವಾನರಾಣಾಂ ತು ಪಶ್ಯತಾಮ್**
**ಯದಿ ಪಂಚತ್ವಮಾಪನ್ನಃ ಸುಮಿತ್ರಾನಂದವರ್ಧನಃ ॥**

(VI 49-7)

[ತನ್ನ ಬಹಿಶ್ಚರ ಪ್ರಾಣನಾದ ತಮ್ಮನನ್ನು ರಾಘವನು ನೋಡಿ ಬಹಳ ದುಃಖಾವಿಷ್ಟನಾಗಿ ಚಿಂತಾಶೋಕಪರವಶನಾದನು. ಸೌಮಿತ್ರಿಯು ಸತ್ತಿರುವುದೇ ನಿಜವಾದರ, ಈ ಕಪಿಗಳು ನೋಡುತ್ತಿರುವಂತೆಯೇ ನಾನೂ ಪ್ರಾಣವನ್ನು ತೊರೆಯುವೆನು ' ]

ಸೀತೆ ಕೂಡ ರಾಮನಿಗೆ ಲಕ್ಷ್ಮಣನಲ್ಲಿ ತನಗಿಂತಲೂ ಹೆಚ್ಚಿನ ಪ್ರೀತಿಯೆಂದು ಹನುಮಂತನಿಗೆ ತಿಳಿಸುತ್ತಾಳ —

**ಮತ್ತಃ ಪ್ರಿಯತರೋ ನಿತ್ಯಂ ಭ್ರಾತಾ ರಾಮಸ್ಯ ಲಕ್ಷ್ಮಣಃ**

(V 38-62)

[ತಮ್ಮನಾದ ಲಕ್ಷ್ಮಣನ ಮೇಲೆ ನನಗಿಂತಲೂ ಹೆಚ್ಚಿನ ಮಮತೆ ರಾಮನಿಗೆ! ]

ರಾಮನಿಗೆ ಲಕ್ಷ್ಮಣನಲ್ಲಿ ಇಂತಹ ಪ್ರೇಮವಿರುವುದಕ್ಕೆ ಲಕ್ಷ್ಮಣನ ಭ್ರಾತೃಪ್ರೇಮವೇ ಕಾರಣ; ಜತೆಗೆ ಆದರ್ಶ ಕಿಂಕರನ ಗುಣಗಳೆಲ್ಲವೂ ಆತನಲ್ಲಿ ನೆಲಸಿದ್ದುವು --

**ವೃದ್ಧೋಪಸೇವೀ ಲಕ್ಷ್ಮೀವಾನ್ ಶಕ್ತೋ ನ ಬಹುಭಾಷಿತಾ**

(V. 38-61)

[ಹಿರಿಯರ ಸೇವೆಮಾಡುವವನು, ತೇಜವುಳ್ಳವನು, ಬಲಶಾಲಿ, ಹೆಚ್ಚು ಮಾತನಾಡುವವನಲ್ಲ.]

ಆದರೆ ರಾಮನಿಗೆ ಕ್ರಮಪ್ರಾಪ್ತವಾದ ರಾಜ್ಯ ತಪ್ಪಿದಾಗ ಲಕ್ಷ್ಮಣನು ಧೃತಿಗೆಟ್ಟು ಕೋಪಭರದಲ್ಲಿ ಬೇಕಾದಂತೆ ಗುಡುಗುತ್ತಾನೆ. ಎಲ್ಲರನ್ನೂ ಕೊಂದು

ಬಿಡುವೆನೆಂದು ಗರ್ಜಿಸುತ್ತಾನೆ. ರಾಮನು ಮೃದುವಾಗಿರುವುದರಿಂದಲೇ ಎಲ್ಲ ಅನರ್ಥಕ್ಕೂ ಮೂಲವೆಂದು ಮೂದಲಿಸುತ್ತಾನೆ:—

**ಭರತಸ್ಯಾಸ್ಯ ಪಕ್ಷ್ಯೋ ವಾ ಯೋ ವಾಸ್ಯ ಹಿತಮಿಚ್ಛತಿ ।**
**ಸರ್ವಾನೇವ ಹನಿಷ್ಯಾಮಿ ಮೃದುರ್ಹಿ ಪರಿಭೂಯತೇ ॥**

(II 21-11)

**ಪ್ರೋತ್ಸಾಹಿತೋಽಯಂ ಕೈಕೇಯ್ಯಾ ಸ ದುಷ್ಟೋ ಯದಿ ನಃ ಪಿತಾ ।**
**ಅಮಿತ್ರಭೂತೋ ನಿಸ್ಸಂಗಂ ವಧ್ಯತಾಂ ಬಧ್ಯತಾಮಪಿ ॥**

(II 21-12)

[ಯಾರು ಯಾರು ಭರತನ ಪಕ್ಷದವರೋ ಅಥವಾ ಅವನ ಹಿತವನ್ನು ಕೋರುವವರೋ, ಎಲ್ಲರನ್ನೂ ಕೊಂದುಬಿಡುತ್ತೇನೆ. ಮೃದುವಾಗಿರುವವನನ್ನು ಎಲ್ಲರೂ ನೀಳ್ಕರಿಸುವವರೇ! ಈ ಕೈಕೆಯ ಪ್ರಚೋದನೆಗೆ ಒಳಗಾಗಿ ನಮ್ಮ ತಂದೆಯೇ ದುಷ್ಟನಾಗಿರಲು ಅವನನ್ನೂ ಮೋಹವಿಲ್ಲದೆ ಶತ್ರುವೆಂದೇ ಒಗೆದು ಕೊಲ್ಲಬೇಕು, ಇಲ್ಲವೆ ಸರೆಯಿಡಬೇಕು! ]

ಗುರುವಾದರೂ ನೀತಿಗೆಟ್ಟರೆ, ರೀತಿಗೆಟ್ಟರೆ, ದಂಡಾರ್ಹನಾಗುವನೆಂದು ಅವನಿಗೂ ಶಾಸ್ತ್ರ ಗೊತ್ತಿದೆ —

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ॥**

(II 21 13)

[ಗುರುವೇ ಇರಲಿ, ಗರ್ವಿತನೂ, ಕಾರ್ಯಾಕಾರ್ಯ ಪರಿಜ್ಞಾನವಿಲ್ಲದವನೂ ಆಗಿ ದಾರಿಬಿಟ್ಟು ಹೊರಟರೆ, ಅವನನ್ನು ನಿಗ್ರಹಿಸುವುದೇ ಕರ್ತವ್ಯ!]

ಅವನಿಗೆ ಸಂಯಮ ಕಡಿಮೆ, ಆದರ ರಾಮನ ಮಾತನ್ನು ಮೀರದಿರುವ ಗುಣವಿದೆ. ಎಂತಹ ಪ್ರಸಂಗದಲ್ಲೂ ರಾಮನನ್ನು ಬಿಡೆನೆಂಬ ಹಟವಿದೆ --

**ದೀಪ್ತಮಗ್ನಿಮರಣ್ಯಂ ವಾ ಯದಿ ರಾಮಃ ಪ್ರವೇಕ್ಷ್ಯತಿ ।**
**ಪ್ರವಿಷ್ಟಂ ತತ್ರ ಮಾಂ ದೇವಿ ತ್ವಂ ಪೂರ್ವಮವಧಾರಯ ॥**

(II. 21. 17)

[ಉರಿಯುವ ಬೆಂಕಿಯೇ ಆಗಲಿ, ಅಡವಿಯಾಗಲಿ, ಎಲ್ಲಿ ರಾಮನು ಪ್ರವೇಶಿಸುವನೋ ನಾನೂ ಅಲ್ಲೇ ಅವನಿಗಿಂತ ಮುಂದಾಗಿ ಪ್ರವೇಶಿಸುವೆನು!]

ರಾಮನು 'ಧರ್ಮ' ಹೇಳುತ್ತಾನೆ. ಕೋಪದ ಭರದಲ್ಲಿ 'ನಿನ್ನ ಧರ್ಮವನ್ನು ನಾನು ದ್ವೇಷಿಸುತ್ತೇನೆ' ಎಂದರೂ ಮರುಕ್ಷಣದಲ್ಲಿ ಮೆತ್ತಗಾಗುತ್ತಾನೆ —

**ಯೇನೇಯಮಾಗತಾ ದ್ವೈಧಂ ತವ ಬುದ್ಧಿರ್ಮಹಾಮತೇ।**
**ಸ ಹಿ ಧರ್ಮೋ ಮಮ ದ್ವೇಷ್ಯಃ ಪ್ರಸಂಗಾದ್ಯಸ್ಯ ಮುಹ್ಯಸಿ॥**

(II 23 11-12)

[ಮಹಾಮತಿಯಾದ ನಿನಗೂ ಬುದ್ಧಿವಿಕಲ್ಪವನ್ನು ಯಾವುದು ಮಾಡುತ್ತಿರುವುದೋ ಆ ಧರ್ಮವನ್ನೇ ನಾನು ದ್ವೇಷಿಸುತ್ತೇನೆ. ಅದರಿಂದಲೇ ನೀನು ಮೂಢನಾಗಿರುವೆ!]

ಕಾಡಿಗೆ ರಾಮ ಹೊರಟರೆ ಅವನಿಗೆ ಬೇರೆಯಾಗಿ ಆನಮತಿಯೂ ಅವಶ್ಯವಿಲ್ಲ. ರಾಮನ ಬಹಿಶ್ಚರ ಪ್ರಾಣವೇ ಅವನಲ್ಲವೆ? ಭರತನು ಸೈನ್ಯದೊಡನೆ ಬರುತ್ತಿರುವುದನ್ನು ಕಂಡೊಡನೆ ಮತ್ತೆ ಅವನ ಸಿಟ್ಟು ಕೆರಳುತ್ತದೆ ಭರತನನ್ನು ಕೊಲ್ಲಲು ಅಪ್ಪಣೆ ಕೇಳುತ್ತಾನೆ.

**ಸಂಪ್ರಾಪ್ತೋಽಯಮರಿರ್ವೀರ ಭರತೋ ವಧ್ಯ ಏವ ಮೇ।**
**ಭರತಸ್ಯ ವಧೇ ದೋಷಂ ನಾಹಂ ಪಶ್ಯಾಮಿ ರಾಘವ॥**

(II 96. 23)

[ಇದೋ, ವೀರನೆ, ವೈರಿ ಬಂದಿದ್ದಾನೆ. ಭರತನು ನನ್ನಿಂದ ವಧಾರ್ಹನೇ ಸರಿ. ಭರತನನ್ನು ಕೊಲ್ಲುವುದರಿಂದ ಯಾವ ದೋಷವೂ ನನಗೆ ಕಾಣುವುದಿಲ್ಲ!]

ಇದು ಅವನ ಸ್ವಭಾವ, ಅಮಿಶ್ರಿತವಾದ ಪೂರ್ಣಕ್ಷಾತ್ರ. ಮುಂದಾಲೋಚನೆ ಧರ್ಮವಿವೇಚನೆಗಳು ಕಡಿಮೆ. ರಾಮನ ಸಹವಾಸದಲ್ಲಿ ಅವು ಹದ್ದಿನಲ್ಲಿರುತ್ತವೆ.

**ಭ್ರಾತಾ ಭರ್ತಾ ಚ ಬಂಧುಶ್ಚ ಪಿತಾ ಚ ಮಮ ರಾಘವಃ।**

(II. 58. 31)

[ಅಣ್ಣ, ಒಡೆಯ, ನಂಟ, ತಂದೆ, ಎಲ್ಲವೂ ನನಗೆ ರಾಮನೇ!]
ಎಂದು ದೃಢವಾಗಿ ನಂಬಿದ್ದ.

**ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಮ್ ।**
**ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಮ್ ॥**

(II 40. 9)

[ರಾಮನನ್ನೇ ದಶರಥನೆಂದು ತಿಳಿದುಕೊ. ಸೀತೆಯನ್ನೇ ನಾನೆಂದು ತಿಳಿದುಕೊ. ಅಡವಿಯನ್ನೇ ಅಯೋಧ್ಯೆಯೆಂದು ತಿಳಿದುಕೊ. ಅಪ್ಪಾ, ಹೋಗಿಬಾ, ನಿನಗೆ ಒಳ್ಳೆಯದಾಗಲಿ!]

ಎಂಬ ತಾಯಿಯ ಹರಕೆಯನ್ನು ಅಕ್ಷರಶಃ ಪಾಲಿಸುತ್ತಿದ್ದ, ಕಾಡಿನಲ್ಲಿ ರಾಮನಿಂದಲೇ ಕ್ಷಣಕ್ಷಣವೂ ಶ್ಲಾಘನೆ ಪಡೆಯುತ್ತಿದ್ದ (III 15. 27-29) ಲಕ್ಷ್ಮಣನ ಚಾರಿತ್ರವನ್ನು ಸೀತೆ ಶಂಕಿಸುವುದಾಗಲಿ, ಬಿರುನುಡಿಗಳನ್ನು ವಾಚಾಮಗೋಚರವಾಗಿ ನುಡಿವುದಾಗಲಿ ಗಂಟಲಲ್ಲಿಳಿಯದ ಗುಳಿಗೆ. ಇದು ಪ್ರಕ್ಷಿಪ್ತವೆನ್ನಲು ಮುಂದೆ ಸೀತೆ ಹನುಮಂತನಿಗೆ ಹೇಳುವ ಮಾತೇ ಸಾಕ್ಷಿ —

**ಪಿತೃವದ್ವರ್ತತೇ ರಾಮೋ ಮಾತೃವನ್ಮಾಂ ಸಮಾಚರನ್ ।**
**ಹ್ರಿಯಮಾಣಾಂ ತದಾ ವೀರೋ ನ ತು ಮಾಂ ವೇದ ಲಕ್ಷ್ಮಣಃ ॥**

(V. 38. 60-1)

'ತಾಯಿಯೆಂದು ನನ್ನ ಸೇವೆ ಮಾಡುತ್ತಿದ್ದ ಲಕ್ಷ್ಮಣನಿಗೆ ನನ್ನ ಅಪಹರಣವು ತಿಳಿಯಲಿಲ್ಲ.'

ಋಷ್ಯಮೂಕದಲ್ಲಿ ಸೀತೆಯ ಆಭರಣಗಳು ಸಿಕ್ಕಿದಾಗ ಕಾಲಂದಿಗೆ ಹೊರತು ಉಳಿದವುಗಳ ಗುರುತುಗಳೂ ಗೊತ್ತಿಲ್ಲದವನು ವಾಲ್ಮೀಕಿಯ ಲಕ್ಷ್ಮಣ —

**ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।**
**ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್ ॥**

(IV. 6-22)

[ಬಂದಿಯ ಗುರುತು ನನಗಿಲ್ಲ; ಓಲೆಯ ಗುರುತೂ ನನಗಿಲ್ಲ. ನಿತ್ಯವೂ ಕಾಲ್ಗೆರಗುತ್ತಿದ್ದುದರಿಂದ ಕಾಲ್ಬಳೆಯ ಗುರುತು ಮಾತ್ರ ಇದೆ.]

ಲಕ್ಷ್ಮಣನು ರಾಮನ ಸಿಟ್ಟನ್ನು ಸುಗ್ರೀವನಿಗೆ ತಿಳಿಸಲು ಹೊರಟಾಗ ಕಾಡಿ ನಲ್ಲಿ ನಡೆಯುತ್ತಿದ್ದರೆ ಮಂದರಾಚಲವೇ ನಡೆಯುವಂತಿದ್ದಿತಂತೆ, ಬಿಲ್ಲು ಬಾಣಗಳೇ ಶಿಖರಗಳಂತಿದ್ದುವು –

**ಶಕ್ರಬಾಣಾಸನಪ್ರಖ್ಯಂ ಧನುಃ ಕಾಲಾಂತಕೋಪಮಮ್ ।**
**ಪ್ರಗೃಹ್ಯ ಗಿರಿಶೃಂಗಾಭಂ ಮಂದರಃ ಸಾನುಮಾನಿವ ॥**

(IV 31-11)

ಲಕ್ಷ್ಮಣನ ಪ್ರತಾಪದ ಪ್ರಕಾಶಕ್ಕೆ ಯುದ್ಧರಂಗ ಸರಿಯಾದ ಕ್ಷೇತ್ರ, ಆವನಿಗೆ ಅಲ್ಲಿ ರಸದೂಟ ಸಿಕ್ಕಿತು. ಹೀಗೆ ಲಕ್ಷ್ಮಣನ ಪಾತ್ರದಲ್ಲಿ ಮೊದಲಿ ನಿಂದ ಕಡೆಯವರೆಗೂ ಎದ್ದು ನಿಲ್ಲುವ ಚಿತ್ರವೆಂದರೆ ಧೀರೋದ್ಧತನದು. ಧೀರಶಾಂತನಾದ ರಾಮನಿಗೂ ಅವನಿಗೂ ಮೊದಲಿನಿಂದ ಕಡೆಯವರೆಗೂ ಸ್ವಭಾವ ವೈಗುಣ್ಯವನ್ನು ಕವಿ ತೋರಿಸಿ ಇಬ್ಬರ ಪಾತ್ರಗಳನ್ನೂ ಸ್ಫುಟವಾಗಿ ಚಿತ್ರಿಸಿದ್ದಾನೆ.

**ಸೀತೆ :**—ಸೀತೆಯ ಪಾತ್ರದ ಮುಖ್ಯ ಚಹರೆಗಳೂ ಸಿಕ್ಕಿದಷ್ಟು ಮಟ್ಟಿಗೆ ರಾಮಾಯಣದಲ್ಲಿ ಪ್ರಕ್ಷೇಪಗಳು ಸೇರಿವೆ ಇಂದಿನ ಕನ್ಯಾಪಿತೃಗಳು ಕಷ್ಟಪಡುವಂತೆಯೇ ಪ್ರಾಪ್ತವಯಸ್ಕಳಾದ ಸೀತೆಯನ್ನು, ನೋಡಿ ಜನಕನು ಹಳಹಳಿಸಿದನೆಂದು ಬರೆದಿದೆ —

**ಪತಿಸಂಯೋಗಸುಲಭಾಂ ವಯೋ ದೃಷ್ಟ್ವಾ ತು ಮೇ ಪಿತಾ ।**
**ಚಿಂತಾಮಭ್ಯಗಮದ್ದೀನೋ ವಿತ್ತನಾಶಾದಿವಾಧನಃ ॥**

(II 118 34)

**ಚಿಂತಾರ್ಣವಗತಃ ಪಾರಂ ನಾಸಸಾದಾಪ್ಲವೋ ಯಥಾ ॥**

(11. 36)

[ವಿವಾಹಕ್ಕೆ ಪ್ರಾಪ್ತವಯಸ್ಕಳಾದ ನನ್ನನ್ನು ನೋಡಿ ತಂದೆ ದೀನನೂ ಚಿಂತಾಕುಲನೂ ಆದನು–ಆಸ್ತಿಯನ್ನು ಕಳೆದುಕೊಂಡ ಬಡವನಂತೆ! ದೋಣಿ ಯಿಲ್ಲದವನಂತೆ ಚಿಂತಾರ್ಣವದ ಪಾರಗಾಣಲಿಲ್ಲ! ]

ಇವನ್ನು ಸೀತೆ ಹೇಳಿರಲಾರಳು. ಜನಕನ ಅಳಿಯನಾಗಲು ನೂರಾರು ರಾಜ ಪುತ್ರರು ಯತ್ನಿಸಿ ವಿಫಲರಾಗಿದ್ದರು. ಶಿವಧನುರ್ಭಂಗವನ್ನು ಸಾಧಿಸಿ ಶ್ರೀ

ರಾಮನು ಆಕೆಯನ್ನು ವೀರಶುಲ್ಕವಾಗಿ ಪಡೆದಿದ್ದನು. ಅವಳು ರಾಜಪುತ್ರಿ, ವೀರರಮಣಿ, ಬಣಗುಹೆಣ್ಣುಗಳಂತೆ ಕಾಡಿಗೆ ಹೆದರುವವಳಲ್ಲ. ಕ್ಷತ್ರಿಯಕನ್ಯೆಯಂತೆ ನಿರ್ಭಯವಾಗಿ ಗಂಡನೊಡನೆ ಹೊರಡುವಳು. ಗಂಡನು ಬೇಡವೆಂದರೆ ಅಂತಹ ರಾಮನನ್ನೇ ದಿಟ್ಟೆಯಂತೆ ಕೆಣಕಿ ನುಡಿಗಳಿಂದ ಚುಚ್ಚುವಳು:—

**ಕಿಂ ತ್ವಾಮನ್ಯತ ವೈದೇಹಃ ಪಿತಾ ಮೇ ಮಿಥಿಲಾಧಿಪಃ ।**
**ರಾಮ ಜಾಮಾತರಂ ಪ್ರಾಪ್ಯ ಸ್ತ್ರಿಯಂ ಪುರುಷವಿಗ್ರಹಂ ॥**

(II. 30. 3)

[ರಾಮನೆ! ಮಿಥಿಲೆಯ ರಾಜನಾದ ನಮ್ಮ ತಂದೆ ನಿನ್ನನ್ನು ಅಳಿಯನೆಂದು ಮಾಡಿಕೊಂಡಾಗ ನೀನು ಪುರುಷರೂಪಿನ ಹೆಣ್ಣೆಂದು ತಿಳಿದನೆ?] ಗಂಡನನ್ನು ಗಂಡುವೇಷದ ಹೆಣ್ಣೆಂದು ಕರೆಯುವ ಕ್ಷಾತ್ರ ಅವಳಲ್ಲಿದೆ. 'ಶೈಲೂಷ' (ನಟ) ನಂತೆ ಹೆಂಡತಿಯನ್ನು ಬಿಟ್ಟು ಹೋಗಲು ನಾಚಿಕೆಯಿಲ್ಲವೆ ಎಂದು ಹಂಗಿಸುತ್ತಾಳೆ. ಅವಳಿಗೆ ರಾಜ್ಯ ಹೋದರೆ ವ್ಯಥೆಯಿಲ್ಲ; ಬಿಟ್ಟು ಹೋಗುವನಲ್ಲಾ ಎಂಬುದೇ ಕೊರಗು. ರಾಮನು ಮಣಿದು ಬೆಣ್ಣೆಯಾಗುತ್ತಾನ 'ನೀನು ನನ್ನೊಡನೆ ವನವಾಸಕ್ಕೆಂದೇ ಹುಟ್ಟಿರುವೆಯೆಂದು ಕಣ್ಣೀರಿಡುತ್ತಾನೆ, 'ನನ್ನ ಕೀರ್ತಿಯೇ ನೀನು, ನಿನ್ನನ್ನೆಂದೂ ಅಗಲಲಾರೆ' ಎನ್ನುತ್ತಾನೆ. ಇದು ಅವಳ ಪಾತ್ರದ ತಿರುಳು:

**ಯತ್ ಸೃಷ್ಟಾಸಿ ಮಯಾ ಸಾರ್ಧಂ ವನವಾಸಾಯ ಮೈಥಿಲಿ ।**
**ನ ವಿಹಾತುಂ ಮಯಾ ಶಕ್ಯಾ ಕೀರ್ತಿರಾತ್ಮವತಾ ಯಥಾ ॥**

(II 30-29)

ಗಂಡನ ಸುಖದುಃಖಗಳಲ್ಲಿ ಸಂತೋಷದಿಂದ ಸಮಭಾಗಿನಿಯಾಗುವ ಪತಿವ್ರತೆ ಅವಳು. ಇದು ಅವಳ ಕುಲಕ್ಕೆ ಅನುರೂಪವಾಗಿದೆ.

ಕಾಡಿನಲ್ಲಿಯೂ ಅವಳ ಸರಳ ಸಂತೋಷಗಳಿಗೆ ಕಡಿಮೆಯಿರಲಿಲ್ಲ. ಹೂವು ಹಣ್ಣುಗಳ, ಗಿಡ ಮರ ಬಳ್ಳಿಗಳ, ಪ್ರಕೃತಿದೇವಿಯ ಸಾನ್ನಿಧ್ಯವು ಪತಿಯ ಸಹವಾಸದಲ್ಲಿ ರಮಣೀಯವಾಗಿಯೇ ಇತ್ತು —

**ಏಕೈಕಂ ಪಾದಪಂ ಗುಲ್ಮಂ ಲತಾಂ ವಾ ಪುಷ್ಪಶಾಲಿನೀಮ್ ।**
**ಅದೃಷ್ಟಪೂರ್ವಾಂ ಪಶ್ಯನ್ತೀ ರಾಮಂ ಪಪ್ರಚ್ಛ ಸಾಬಲಾ ॥**

(II. 55-30)

**ವಿಚಿತ್ರವಾಲುಕಾಂ ನೀಲಾಂ ಹಂಸಸಾರಸನಾದಿತಾಮ್ ।**
**ರೇಮೇ ಜನಕರಾಜಸ್ಯ ಸುತಾ ಪ್ರೇಕ್ಷ್ಯ ತದಾ ನದೀಮ್ ॥**
(II 55 32-3)

[ಹಿಂದೆ ನೋಡದಿದ್ದ ಒಂದೊಂದು ಮರ, ಗಿಡ, ಹೂಬಳ್ಳಿಯನ್ನೂ ಕಂಡೊಡನೆ ರಾಮನನ್ನು ಕೇಳುತ್ತಿದ್ದಳು. ಬಣ್ಣದ ಮರಳು, ನೀಲಪ್ರವಾಹ, ಹಂಸಸಾರಸಗಳ ಇಂಚರಗಳಿಂದ ಕೂಡಿದ ಆ ನದಿಯನ್ನು ಕಂಡು ಜನಕ ನಂದಿನಿ ಆನಂದಿಸಿದಳು ]

ರಾಕ್ಷಸರ ನಿಷ್ಕಾರಣ ವೈರ ಬೇಡವೆಂದು ರಾಮನಿಗೆ ಬುದ್ಧಿ ಹೇಳುವುದನ್ನು ರಾಮನ ಪಾತ್ರವಿವೇಚನೆಯಲ್ಲಿ ನೋಡಿದೆ. ರಾಮನಿಗೆ ಕೋಪ ಬರುವುದರ ಬದಲು ಅದರಿಂದ ಸಂತೋಷವೇ ಆಗುತ್ತದೆ. ಆದರೆ ಅವನು ಪ್ರತಿಜ್ಞೆ ಮೀರುವಂತಿರಲಿಲ್ಲ —

**ಸದೃಶಂ ಚಾನುರೂಪಂ ಚ ಕುಲಸ್ಯ ತವ ಚಾತ್ಮನಃ ।**
**ಸಧರ್ಮಚಾರಿಣೀ ಮೇ ತ್ವಂ ಪ್ರಾಣೇಭ್ಯೋಽಪಿ ಗರೀಯಸೀ ॥**
(III. 10-22)

[ನಿನ್ನ ಮತ್ತು ನನ್ನ ವಂಶಗಳೆರಡಕ್ಕೂ ಯಾವುದು ಸದೃಶವೋ, ಯಾವುದು ಅನುರೂಪವೋ ಅದನ್ನೇ ನುಡಿದಿರುವೆ. ಸಹಧರ್ಮಚಾರಿಣಿಯಾದ ನೀನು ನನ್ನ ಪ್ರಾಣಕ್ಕಿಂತ ಹೆಚ್ಚಿನವಳು ]

ಇಂತಹ ಸೀತೆಗೆ ಬೇಡವೆಂದರೂ ಹೊನ್ನ ಹುಲ್ಲೆಗೆ ಬಾಯಿಬಿಡುವುದಾಗಲಿ, ಲಕ್ಷ್ಮಣನನ್ನು ಹೀನವಾಗಿ ಬಯ್ಯುವುದಾಗಲಿ, ಸದೃಶವೂ ಅಲ್ಲ ಅನು ರೂಪವೂ ಅಲ್ಲವೆಂಬುದನ್ನೂ ನೋಡಿದ್ದೇವೆ. ಕಾಡಿನಲ್ಲಿ ರಾಮಲಕ್ಷ್ಮಣರು ಬೇಟೆಗೆ ಹೋಗಿದ್ದಾಗ ಅಪಹರಣವಾಗಿ ಹೋಗಿದೆ, ವಿಧಿವಿಲಾಸ. ಪಾತಿವ್ರತ್ಯದಿಂದ ರಾವಣನನ್ನೇಕೆ ಸುಡಲಿಲ್ಲವೆಂದು ಕಾರಣ ಹೇಳುವ ಪ್ರಕೃತ ವಾಲ್ಮೀಕಿಗಿಲ್ಲ. ಇದು ಸ್ವಾಭಾವಿಕ ಘಟನೆಯೇ ಹೊರತು ಅಲೌಕಿಕ ಘಟನೆಯಲ್ಲ.

ಅಲ್ಲಿಂದ ಮುಂದೆ ಅವಳು ಕಣ್ಣೀರಲ್ಲಿ ಕೈತೊಳೆಯುವುದೇ ಆಯಿತು. ಅವಳು ರಾವಣನ ಯಾವ ನಯ, ಭಯ, ಅನುನಯಗಳಿಗೂ ಒಳಗಾಗದೆ

ಪಾತಿವ್ರತ್ಯವನ್ನು ಕಾಯ್ದುಕೊಂಡಳು. ಅವಳಿಗೆ ರಾಮನು ಬಂದು ಬಿಡಿಸಿ ಕೊಂಡು ಹೋಗುವನೆಂಬ ದೃಢವಿದ್ದೇ ಇತ್ತು :—

**ಸಾಂಧಕಾರಾ ಹತದ್ಯೋತಾ ಹತರಾಕ್ಷಸಪುಂಗವಾ ।**
**ಭವಿಷ್ಯತಿ ಪುರೀ ಲಂಕಾ ನಿರ್ದಗ್ಧಾ ರಾಮಸಾಯಕೈಃ ॥**

(V 26-26)

[ರಾಮನ ಬಾಣಗಳು ಲಂಕಾಪಟ್ಟಣವನ್ನು ಸುಟ್ಟುರಿಸುವುದು ಖಂಡಿತ. ಆಗ ಕಗ್ಗತ್ತಲೆ ಊರಲ್ಲಿ ತುಂಬುವುದು. ಬೆಳಕೆಲ್ಲ ಅಳಿಯುವುದು. ರಾಕ್ಷಸಪುಂಗವರೆಲ್ಲರೂ ಹತರಾಗುವರು.]
ಹನುಮಂತನೊಡನೆ ಅವಳು ಮಾತನಾಡಿದ್ದನ್ನು ಕುರಿತು ರಾಕ್ಷಸಿಯರು ಕೇಳಿದರೆ ಬಾಯಿಬಡಿಯುವ ಬುದ್ಧಿವಂತಿಕೆಯೂ ಇತ್ತು. ಹಾವಿನ ಹೆಜ್ಜೆ ಹಾವಿಗೇ ಗೊತ್ತು, ಸುಮ್ಮನೆ ನನ್ನನ್ನು ಕೇಳುವುದೇಕೆ, ಎನ್ನುತ್ತಾಳೆ :

**ಯೂಯಮೇವಾಭಿಜಾನೀತ ಯೋಽಯಂ ಯದ್ವಾ ಕರಿಷ್ಯತಿ।**
**ಅಹಿರೇವ ಹ್ಯಹೇಃ ಪಾದಾನ್ ವಿಜಾನಾತಿ ನ ಸಂಶಯಃ ॥**

(V. 42-9)

ಮುಂದಿನ ಪರಿತ್ಯಾಗ, ಶುದ್ಧಿ, ಪುನಃ ಪರಿತ್ಯಾಗ ಇತ್ಯಾದಿಗಳು ಸೀತೆಯ ಪಾತ್ರದ ವಿಸ್ತೃತ ರೂಪಗಳು. ಮೂಲ ರಾಮಾಯಣದಲ್ಲಿ ಆದರ್ಶ ನಾಯಕನಾದ ರಾಮನಿಗೆ ಆದರ್ಶಪತ್ನಿ ಸೀತೆ.

ಮಿಕ್ಕ ಪಾತ್ರಗಳಿಗೆಲ್ಲಾ ಕಥಾದೃಷ್ಟಿಯಿಂದ ಪ್ರಾಮುಖ್ಯವುಂಟೇ ಹೊರತು ಪಾತ್ರದೃಷ್ಟಿಯಿಂದಲ್ಲ. ಹನುಮಂತನು ಆದರ್ಶ ದೂತ, ಸುಗ್ರೀವನು ಯೋಗ್ಯಮಿತ್ರ, ವಿಭೀಷಣನು ಉತ್ತಮ ಸಹಾಯಕ. ರಾವಣನು ಖಳನಾಯಕ.

**ವಾಲ್ಮೀಕಿಯ ಜೀವನ ಸಂದೇಶ:**— ಇದನ್ನು ಹುಡುಕಿ ಕೊಂಡು ಹೋಗುವಕಾರಣವಿಲ್ಲ. ಕಥೆಯ ವಿನ್ಯಾಸದಲ್ಲಿ ಪಾತ್ರಗಳ ನಿರೂಪಣೆ ಯಲ್ಲ, ಹೊಂದಿಕೊಂಡೇ ಮಹಾಕಾವ್ಯದ ಉದ್ದಕ್ಕೂ ಕವಿಯ ಉಪದೇಶವು ನಿರ್ದಿಷ್ಟವಾಗಿದೆ. ಈಗಾಗಲೇ ಸೂಚಿಸಿದಂತೆ ಜೀವನವನ್ನು ಉನ್ನತಗೊಳಿ ಸುವುದಕ್ಕೆ ಧರ್ಮವೇ ಪರಮಸಾಧನ. ಧರ್ಮಶ್ರದ್ಧೆಯು ಮಹಾತ್ಮನ ಮೊದಲ ಗುಣ. ಧರ್ಮಕ್ಕೆ ಯಾವಾಗಲೂ ಅರ್ಥ, ಕಾಮಗಳೇ ವೈರಿಗಳು.

ರಾಮನು ಧರ್ಮಮಾರ್ಗವನ್ನು ಹಿಡಿದರೆ, ಕೈಕೆಯಿ ಅರ್ಥಮಾರ್ಗವನ್ನೂ ರಾವಣನು ಕಾಮಮಾರ್ಗವನ್ನೂ ಹಿಡಿದಿದ್ದಾರೆ. ಆಪಾತತಃ ಅರ್ಥಕಾಮ ಗಳು ಗೆದ್ದಂತೆ ಕಂಡರೂ ಕಡೆಗೆ ವಿಜಯವಾಗುವುದು ಧರ್ಮಕ್ಕೆ ಮಾತ್ರ ಹೀಗೆ ಧರ್ಮಕ್ಕೆ ಅವಿರುದ್ಧವಾಗಿ ಅರ್ಥಕಾಮಗಳನ್ನು ಅನುಭೋಗಿಸುವುದೇ ಸಂಸ್ಕೃತ ಮನುಷ್ಯನ ಧ್ಯೇಯವಾಗಬೇಕು. ಅರ್ಥಕಾಮಗಳ ಉರುಬಿನಲ್ಲಿ ಮೊರಡುವ ಸ್ವಾರ್ಥಪರತೆಯು ಇತರರನ್ನು ದುಃಖದಲ್ಲಿ ಮುಳುಗಿಸುವಂತೆ ಸ್ವಕಾರ್ಯವನ್ನೂ ಹಾಳುಮಾಡಿಕೊಳ್ಳುವುದು. ರಾಮನು ಧೀರೋದಾತ್ತನೂ, ಪೂಜ್ಯನೂ ಆಗುವುದಕ್ಕೆ ಅವನ ಧರ್ಮದೃಷ್ಟಿಯೇ ಮುಖ್ಯ ಕಾರಣ. ಆದರೆ ಎರಡು ಭಿನ್ನ ಧರ್ಮಗಳಿಗೇ ಸಂಘರ್ಷವುಂಟಾದಾಗ ಮನುಷ್ಯನ ಬುದ್ಧಿ ಮಂಕಾಗುತ್ತದೆ. ಅವನ ವರ್ತನೆ ಇತ್ತ ದರಿ, ಅತ್ತ ಪುಲಿ, ಎಂಬಂತಾಗು ತ್ತದೆ. ಆಗ ಅವನು ಯಾವುದನ್ನು ಆರಿಸಿಕೊಂಡರೂ ಅನರ್ಥ ತಪ್ಪಿದ್ದಲ್ಲ. ದಶರಥನು ಕುಲಕ್ರಮದಿಂದ ಹಿರಿಯಮಗನಿಗೆ ಪಟ್ಟಕಟ್ಟುವುದೂ ಧರ್ಮ, ಕೊಟ್ಟ ಭಾಷೆಯಂತೆ ಭರತನಿಗೆ ಪಟ್ಟಕಟ್ಟುವುದೂ ಧರ್ಮ ಈ ಧರ್ಮ ಸಂಕಟದಲ್ಲಿ ಅವನು ದೇಹವನ್ನೇ ಬಿಡಬೇಕಾಯಿತು. ತಪ್ಪಿಸಿಕೊಳ್ಳಲಾಗ ಲಿಲ್ಲ. ಕೈಕೆಯಿಗೆ ಮಗನ ಹಿತರಕ್ಷಣೆ ಧರ್ಮ, ಪತಿಯ ಇಷ್ಟಾನುವರ್ತ ನೆಯೂ ಧರ್ಮ. ಒಂದನ್ನಾರಿಸಿ ಅವಳು ವೈಧವ್ಯವನ್ನು ತಂದುಕೊಂಡಳು, ಎಲ್ಲರ ನಿಂದೆಗೂ ಗುರಿಯಾದಳು ರಾಮನ ಪಿತೃವಾಕ್ಯವನ್ನು ಪಾಲಿಸುವುದು ಧರ್ಮ, ಭರತನ ಇಷ್ಟಾರ್ಥವನ್ನು ನೆಡೆಸುವುದೂ ಧರ್ಮ. ಮೊದಲನೆಯ ದನ್ನು ಸ್ವೀಕರಿಸಿದ ರಾಮನಿಗೆ ಸೀತಾವಿಯೋಗಾದಿಗಳು ಬಂದವು. ಋಷಿ ಗಳ ರಕ್ಷಣೆ ಧರ್ಮ, ರಾಕ್ಷಸರನ್ನು ನಿಷ್ಕಾರಣವಾಗಿ ನೋಯಿಸದಿರುವುದೂ ಧರ್ಮ. ಇಲ್ಲಿಯೂ ಸೀತೆಯನ್ನು ರಾವಣನ ಕೈಯಿಂದ ಬಿಡಿಸಲು ಋಷಿ ಗಳೇನೂ ಬರಲಿಲ್ಲ ವಾಲಿಯನ್ನು ಎದುರಿಸುವುದು ಧರ್ಮ, ಸುಗ್ರೀವನ ಇಚ್ಛೆಯಂತೆ ನಡೆಯುವುದೂ ಧರ್ಮ. (ಸೀತೆಯನ್ನು ಸ್ವೀಕರಿಸುವುದೂ ಧರ್ಮ, ಬಿಡುವುದೂ ಧರ್ಮ. —ಹೀಗೆ ರಾಮಾಯಣದಲ್ಲಿ ಪ್ರತಿಯೊಂದು ಸನ್ನಿವೇಶದಲ್ಲಿಯೂ ಎರಡು ಧರ್ಮಗಳ ಸಂಘರ್ಷ ಬರುತ್ತದೆ. ಅದೇ ಜೀವನದ ತಥ್ಯವೆಂಬುದು ವಾಲ್ಮೀಕಿಗಳ ಸಿದ್ಧಾಂತವೆಂದು ಕಾಣುತ್ತದೆ. ಯಾರೂ ದುಃಖಗಳನ್ನು ತಪ್ಪಿಸಿಕೊಳ್ಳಲಾರರು. ದುಃಖಗಳಿಗೆಲ್ಲ ಅಚಿಂತ್ಯ

ಕಾರಣವೇ ವಿಧಿ. ಆದ್ದರಿಂದ ಎಲ್ಲರೂ ತಾಳಿಕೊಳ್ಳಲು ತಿಳಿದುಕೊಳ್ಳಬೇಕು. ಕೇವಲ ಸುಖಾಪೇಕ್ಷಿಗಳಾಗಬಾರದು. ಸುಖಬಂದರೆ ಹಿಗ್ಗದೆ, ದುಃಖದಲ್ಲಿ ಕುಗ್ಗದೆ ಇರಬೇಕು. ಇದೇ ಮೋಕ್ಷವೆಂಬ ಪರಮಪುರುಷಾರ್ಥದ ಮೂಲ. ರಾಮಾಯಣದ ಮುಖ್ಯ ರಸ ಕರುಣವಾಗಿರುವುದಕ್ಕೆ ಈ ಜೀವನ ಸಂದೇಶವೇ ಕಾರಣ. ಆದರೆ ದುಃಖವೇ ಜೀವನದ ಕಡೆಯ ಮಾತಲ್ಲ. ದುಃಖವು ಜೀವನದ ಒಂದು ಅನಿವಾರ್ಯ ಮುಖ ಅಷ್ಟೆ. ದುಃಖವು ಮುಗಿದು ಮತ್ತೆ ಸುಖಕ್ಕೆ ಕಾರಣವಾಗುತ್ತದೆ. ತಾಳಿಕೊಂಡವನಿಗೆ—'ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ.' (V 34-6 ಮತ್ತು VI. 129-2) ಹೀಗೆ ವೇದಶಾಸ್ತ್ರಗಳ ಸಾರವನ್ನು ಸರ್ವಜನರ ಹೃದಯಗ್ರಾಹಿಯಾಗುವಂತೆ ಮೊತ್ತ ಮೊದಲು ಬೋಧಿಸಿದ ಮಹಾಕವಿ–ವಾಲ್ಮೀಕಿ.

**ವಾಲ್ಮೀಕಿಯ ಶೈಲಿ :**—ಅರಮನೆಯ ವಿಚಾರಗಳಿಂದ ಹಿಡಿದು ವನವಾಸಿಗಳ ಸಂಚಾರಗಳವರೆಗೆ, ಶಾಂತಿಯ ಸವಿನುಡಿಗಳಿಂದ ರಣರಂಗದ ಪ್ರಚಂಡ ಕೋಲಾಹಲದವರೆಗೆ, ಕಪಿಗಳ ಚೇಷ್ಟೆಯಿಂದ ರಾಕ್ಷಸರ ಮಾಯೆಯವರೆಗೆ, ಎಲ್ಲವನ್ನೂ ಒಂದೇ ವಿಧವಾದ ಸ್ಪಷ್ಟರೇಖೆಗಳಿಂದ ಚಿತ್ರಿಸುವ ಅಪೂರ್ವ ಶಕ್ತಿಯಿದೆ ವಾಲ್ಮೀಕಿಯ ಆರ್ಷಶೈಲಿಗೆ. ಅದು ಯಾವಾಗಲೂ ತುಂಬಿ ಹರಿಯುವ ಹೊಳೆಯಂತೆ ಗಂಭೀರ, ಪ್ರಸನ್ನ, ರಮಣೀಯ. ಅರ್ಧ ನೀರಿನ ಕೊಡದಂತೆ ಸುಮ್ಮನೆ ಸದ್ದು ಮಾಡುವುದಿಲ್ಲ. ವಾಲ್ಮೀಕಿಯ ಶ್ಲೋಕದ ಮಂಜುಳ ಸಂಗೀತಕ್ಕೆ ಮನಸೋಲದ ಮಾನವನೇ ಇಲ್ಲವೆನ್ನಬಹುದು. ಅವನ ಸೀತೆಯಂತೆ ಅವನ ಭಾಷೆಯೂ 'ನಿರಾಲಂಕಾರಶೋಭಿನಿ' ಅದಕ್ಕೆ ದೀರ್ಘಸಮಾಸಗಳ ಸರಪಣಿಗಳಾಗಲಿ, ಶ್ಲೇಷಾದಿ ಚಮತ್ಕಾರಗಳ ಬಂದಿಬಾವಲಿಗಳಾಗಲಿ ಅಗತ್ಯವಿಲ್ಲ, ವಾಲ್ಮೀಕಿಯ ವಾಣಿಯ ಗಮನ ರಾಮಸಾಯಕದಂತೆ ಋಜು, ಅದರ ಸಿದ್ಧಿ ಅಂತೆಯೇ ಅಮೋಘ. ಸಂಸ್ಕೃತದ ಆಡುನುಡಿಯ ಬೆಡಗು ಬಿನ್ನಾಣಗಳನ್ನು ನೋಡಬೇಕಾದರೆ ವಾಲ್ಮೀಕಿ ರಾಮಾಯಣವೊಂದೇ ತವರುಮನೆ, ವಿವಿಧ ಭಾವಗಳನ್ನು ಸಂಶಯಲೇಶಕ್ಕೆ ಎಡೆಯಿಲ್ಲದಂತೆ, ಅತ್ಯುಕ್ತಿಗೂ ಆಸ್ಪದವಾಗದಂತೆ ಮೃದು ಮಧುರವಾಗಿ, ಹಿತ ಮಿತವಾಗಿ, ವಾಲ್ಮೀಕಿಯಂತೆ ವರ್ಣಿಸಿರುವ ಕವಿಗಳು ಸಂಸ್ಕೃತ ಸಾಹಿತ್ಯದಲ್ಲಿ ವಿರಳ. ಪುರಾಣಗಳ ಲಾಲಿತ್ಯವನ್ನೂ ಕಾವ್ಯಗಳ ಲಾವಣ್ಯ

ವನ್ನೂ, ಭಾಷೆಯ ಸಹಜ ಸೌಂದರ್ಯವನ್ನೂ ಒಂದೆಡೆ ನೋಡಲು ರಾಮಾಯಣವನ್ನೇ ಓದಬೇಕು. ವಾಲ್ಮೀಕಿಯ ಶ್ಲೋಕತರಂಗಿಣಿಯ ವೈವಿಧ್ಯವಿಲಾಸಗಳನ್ನು ಸೂಚಿಸಲು ಕೆಳಗೆ ಬರೆದ ಗಂಗೆಯ ವಿಶೇಷಣಗಳು ಸ್ವಲ್ಪಮಟ್ಟಿಗೆ ಶಕ್ತವಾಗಬಹುದು —

**ಜಲಾಘಾತಾಟ್ಟಹಾಸೋಗ್ರಾಂ ಫೇನನಿರ್ಮಲಹಾಸಿನೀಮ್ ।**
**ಕ್ವಚಿದ್ವೇಣೀಕೃತಜಲಾಂ ಕ್ವಚಿದಾವರ್ತಶೋಭಿತಾಮ್ ॥**

**ಕ್ವಚಿತ್ ಸ್ತಿಮಿತಗಂಭೀರಾಂ ಕ್ವಚಿತ್ ವೇಗಜಲಾಕುಲಾಮ್ ।**
**ಕ್ವಚಿತ್ ಗಂಭೀರನಿರ್ಘೋಷಾಂ ಕ್ವಚಿತ್ ಭೈರವನಿಸ್ವನಾಮ್ ॥**

**ದೇವಸಂಘಾಪ್ಲುತಜಲಾಂ ನಿರ್ಮಲೋತ್ಪಲಶೋಭಿತಾಮ್ ।**
**ಕ್ವಚಿದಾಭೋಗಪುಲಿನಾಂ ಕ್ವಚಿನ್ನಿರ್ಮಲವಾಲುಕಾಮ್ ॥**

**ಹಂಸಸಾರಸಸಂಘುಷ್ಟಾಂ ಚಕ್ರವಾಕೋಪಕೂಜಿತಾಮ್ ।**
**ಸದಾ ಮತ್ತೈಶ್ಚ ವಿಹಗೈರಭಿಸಂನಾದಿತಾಂತರಾಮ್ ॥**

**ಕ್ವಚಿತ್ತೀರರುಹೈರ್ವೃಕ್ಷೈಃ ಮಾಲಾಭಿರುಪಶೋಭಿತಾಮ್ ।**
**ಕ್ವಚಿತ್ಫುಲ್ಲೋತ್ಪಲಚ್ಛನ್ನಾಂ ಕ್ವಚಿತ್ಪದ್ಮವನಾಕುಲಾಮ್ ॥**

. .. . . .... . . ... ... ... . . .

**ಪ್ರಮದಾಮಿವ ಯತ್ನೇನ ಭೂಷಿತಾಂ ಭೂಷಣೋತ್ತಮೈಃ ॥**

(L. 16f)

ಒಂದೆಡೆ ನೊರೆಯ ನಗೆ, ಇನ್ನೊಂದೆಡೆ ತೆರೆಯ ಬಗೆ, ಒಮ್ಮೆ ಸ್ತಿಮಿತ ಗಂಭೀರ, ಇನ್ನೊಮ್ಮೆ ವೇಗಜಲಾಕುಲ, ಒಮ್ಮೆ ಗಂಭೀರ, ಒಮ್ಮೆ ಭೈರವ, ಇಲ್ಲಿ ಉತ್ಪಲ, ಅಲ್ಲಿ ಕಮಲ, ಇತ್ತ ಪುಲಿನ, ಅತ್ತ ಶೈವಲ, ಈ ಕಡೆ ಹಂಸ ಸಾರಸಗಳ ಕೂಜನ, ಆ ಕಡೆ ನೀರ್ವಕ್ಕಿಗಳ ಮೆಲ್ಲುಲಿ, ಒಂದೆಡೆ ಗಿಡಗಳ ಪುಷ್ಪಮಾಲೆ, ಇನ್ನೊಂದೆಡೆ ಪದ್ಮಗಳ ವನರಾಜಿ. ಒಟ್ಟಿನಲ್ಲಿ ಭೂಷಣೋತ್ತಮಗಳಿಂದ ಭೂಷಿತೆಯಾದ ವರವನಿತೆಯಂತೆ! ವಾಲ್ಮೀಕಿಯ ಕವಿತೆಗೂ ಈ ಮಾತು ಸುಂದರವಾಗಿ ಅನ್ವಯಿಸುತ್ತದೆ. ಚೆಲುವು ಅಯತ್ನಕೃತವಾಗಿದ್ದರೂ ಪ್ರಯತ್ನಕೃತವಾದ ಸೌಂದರ್ಯವನ್ನೂ ಮೀರಿಸಿದೆ. ಈಗಾಗಲೇ ಪ್ರಸಂಗಾಂತರಗಳಲ್ಲಿ ವಾಲ್ಮೀಕಿಯ ಅನೇಕ ಪದ್ಯರತ್ನಗಳನ್ನು ಬರೆದಿರುವುದ

ರಿಂದ ಈಗ ಅಕೃತ್ರಿಮಾಲಂಕಾರಗಳಿಗೆ ಮಾತ್ರ ಒಂದೆರಡು ಉದಾಹರಣೆ ಗಳನ್ನು ಬರೆಯುತ್ತೇವೆ. ವಾಲ್ಮೀಕಿಯ ಪ್ರಕೃತಿವರ್ಣನೆಗಳೆಲ್ಲವೂ ಉದಾ ಹರಣಯೋಗ್ಯವಾಗಿಯೇ ಇವೆ. ಮಾನವನ ಜೀವನಕ್ಕೆ ಪ್ರಕೃತಿ ಬಹಿರ್ಭೂತ ಪ್ರಚೋದಕ ಮಾತ್ರವಲ್ಲ, ಅವನ ಸುಖದುಃಖಗಳಲ್ಲಿಯೂ ಸಮಭಾಗಿಯೆಂಬ ಭಾವನೆ ಆದಿಕವಿಯಲ್ಲಿದ್ದಂತೆ ಭಾಸವಾಗುತ್ತದೆ. ಅವನ ಗಿರಿ, ನದಿ, ಸೂರ್ಯ, ಚಂದ್ರ, ಸಮುದ್ರ, ಗಿಡ, ಬಳ್ಳಿ, ಹೂ ಮುಂತಾದ ಪ್ರಕೃತಿವರ್ಣನೆಗಳನ್ನು ಓದುವಾಗ ಕವಿಪ್ರತಿಭೆಯ ಪ್ರಭೆಯಲ್ಲಿ ಪ್ರಕೃತಿಯ ಜಡತ್ವವಿಲ್ಲವಾಗಿ ಎಲ್ಲೆಲ್ಲೂ ಅಪೂರ್ವ ಚೈತನ್ಯವೇ ಲಹರಿಲಹರಿಯಾಗಿ ಹರಿಯುತ್ತದೆ. ಪ್ರಾಚೀನಾಲಂಕಾರಿಕರೇ ರಾಮಾಯಣದಿಂದ ಆರಿಸಿರುವ ಪದ್ಯರತ್ನಗಳಲ್ಲಿ ಇವು ಕೆಲವು —

**೧. ರವಿಸಂಕ್ರಾಂತ ಸೌಭಾಗ್ಯಸ್ತುಷಾರಾವೃತಮಂಡಲಃ ।**
**ನಿಃಶ್ವಾಸಾಂಧ ಇವಾದರ್ಶಃ ಚಂದ್ರಮಾ ನ ಪ್ರಕಾಶತೇ ॥**

'ಚಂದ್ರನ ಸೌಭಾಗ್ಯವೆಲ್ಲ ಇನ್ನು ಮುಂದೆ ಸೂರ್ಯನದೇ. ತನ್ನ ಬಿಂಬವನ್ನೆಲ್ಲ ಮಂಜು ಮುಚ್ಚಿದ್ದರಿಂದ, ಉಸಿರು ತಗಲಿ ಕುರುಡಾದ ಕನ್ನಡಿಯಂತೆ ಚಂದ್ರನು ಮಂಕಾಗಿದ್ದಾನೆ'

ಇದು ಚಳಿಗಾಲ ಬಂತೆಂದು ಲಕ್ಷ್ಮಣ ರಾಮನಿಗೆ ಸೂಚಿಸುವ ಪರಿ. ಇದರಲ್ಲಿ 'ಕುರುಡುಕನ್ನಡಿ' ಯೆಂಬ ಒಂದೇ ಪದದ ಸ್ವಾರಸ್ಯಕ್ಕೆ ಆನಂದವರ್ಧನನಂತಹ ಮಹಾ ವಿಮರ್ಶಕನು ಕೂಡ ಮಾರುಹೋಗಿದ್ದಾನೆ.

**೨. ಧನ್ಯಾಃ ಖಲು ವನೇ ವಾತಾಃ ಕಲ್ಹಾರಾಃ ಸುಖಶೀತಲಾಃ ।**
**ರಾಮಮಿಂದೀವರಶ್ಯಾಮಂ ಯೇ ಸ್ಪೃಶಂತ್ಯನಿವಾರಿತಾಃ ॥**

'ತಡೆಬಡೆಯಿಲ್ಲದೆ ಇಂದೀವರಶ್ಯಾಮನಾದ ರಾಮನನ್ನು ಮುಟ್ಟಿ ಸುಖಿಸುವ ಕಾಡಿನ ತಂಗಾಳಿಗಳೇ ಧನ್ಯ.'

ಇದು ರಾಮನು ಹೋದನೆಂದು ಹಂಬಲಿಸುವ ದಶರಥನ ಮಾತು. ತಾನು ಎಷ್ಟು ಹೀನನೆಂಬ ಸಂಕಟವು ಇಲ್ಲಿ ವ್ಯಂಗ್ಯವಾಗಿ ಉಕ್ಕುತ್ತದೆ. ಇದನ್ನು ಅಪ್ಪಯ್ಯದೀಕ್ಷಿತರು 'ವ್ಯಾಜಸ್ತುತಿ' ಅಲಂಕಾರಕ್ಕೆ ಉದಾಹರಣೆಯೆಂದು ವಿವರಿಸಿದ್ದಾರೆ.

೩. ಆಸ್ಫೋಟಯಾಮಾಸ ಚುಚುಂಬ ಪುಚ್ಛಂ,
ನನಂದ ಚಿಕ್ರೀಡ ಜಗೌ ಜಗಾಮ ।
ಸ್ತಂಭಾನರೋಹನ್ನಿಪಪಾತ ಭೂಮೌ
ನಿದರ್ಶಯನ್ ಸ್ವಾಂ ಪ್ರಕೃತಿಂ ಕಪೀನಾಮ್ ॥

(V. x 54)

'ಬಾಲವನ್ನು ಅಪ್ಪಳಿಸಿದ, ಮುತ್ತಿಟ್ಟುಕೊಂಡ, ನಲಿದ, ಆಡಿದ, ಹಾಡಿದ, ಓಡಿದ, ಕಂಬಗಳನ್ನು ಹತ್ತಿ ಹತ್ತಿ ನೆಲಕ್ಕೆ ಕುಪ್ಪಳಿಸಿದ, ತನ್ನ ಕಪಿಸ್ವಭಾವ ಚೆನ್ನಾಗಿ ಕಾಣುವಂತೆ ಮಾಡಿದ'

ಹನುಮಂತನು ಮಂಡೋದರಿಯನ್ನು ಕಂಡು ಸೀತೆಯೆಂದು ಭ್ರಮಿಸಿದಾಗ ಪಟ್ಟ ಆನಂದದ ವೈಖರಿ ಇದು. ಇದಕ್ಕಿಂತ ಉತ್ತಮವಾದ ಸ್ವಭಾವೋಕ್ತಿ ಬೇಕೆ?

ತೂಕಮಾಡಿದಂತೆ ಪದಪುಂಜಗಳನ್ನು ಪ್ರಯೋಗಿಸುವ ಶೈಲಿಗೆ ಒಂದು ಉದಾಹರಣೆ —

ಸರ್ವೇ ಕ್ಷಯಾಂತಾ ನಿಚಯಾ ಪತನಾಂತಾಸ್ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾನ್ತಾಃ ಮರಣಾಂತಂ ಚ ಜೀವಿತಮ್ ॥

(II Cv 10)

'ಸಂಚಯದ ಕೊನೆ ಕ್ಷಯ, ಅಭ್ಯುದಯದ ಕೊನೆ ಪತನ. ಸಂಯೋಗದ ತುದಿ ವಿಯೋಗ, ಜೀವನದ ತುದಿ ಮರಣ.'

ವಿಷಮಾಲಂಕಾರದ ಸಹಜಸೌಂದರ್ಯಕ್ಕೆ ಕೆಳಗಿನ ಪದ್ಯಗಳು ಉತ್ತಮ ನಿದರ್ಶನಗಳು. ಶೂರ್ಪಣಖಿ ರಾಮನನ್ನು ಕಾಮಿಸಿ ಬಂದಳು; ಹೀಗೆ—

ಸುಮುಖಂ ದುರ್ಮುಖೀ ರಾಮಂ ವೃತ್ತಮಧ್ಯಂ ಮಹೋದರೀ ।
ವಿಶಾಲಾಕ್ಷಂ ವಿರೂಪಾಕ್ಷೀ ಸುಕೇಶಂ ತಾಮ್ರಮೂರ್ಧಜಾ ॥

**ಪ್ರೀತಿರೂಪಂ ವಿರೂಪಾ ಸಾ ಸುಸ್ವರಂ ಭೈರವಸ್ವರಾ।**
**ತರುಣಂ ದಾರುಣಾ ವೃದ್ಧಾ ದಕ್ಷಿಣಂ ವಾಮಭಾಷಿಣೀ॥**

(III 17 10-11)

'ಇವನು ಸುಂದರವದನ, ಅವಳು ದುರ್ಮುಖಿ, ಇವನ ನಡು ಸಣ್ಣ, ಅವಳ ಹೊಟ್ಟೆ ಗುಡಾಣ, ಇವನು ವಿಶಾಲಾಕ್ಷ, ಅವಳು ವಿರೂಪಾಕ್ಷಿ, ಇವನು ಸುಕೇಶ, ಅವಳು ರಕ್ತಕೇಶಿ, ಇವನು ಪ್ರಿಯರೂಪ, ಅವಳು ವಿರೂಪಿ, ಇವನು ಸುಸ್ವರ, ಅವಳು ಭೈರವಸ್ವರೆ; ಇವನು ತರುಣ, ಅವಳು ಮುದುಕಿ, ಇವನು ದಕ್ಷಿಣ, ಅವಳು ವಾಮೆ'

ಈ ಜೋಡಿ ಯಾರಾದರೂ ಬಿದ್ದು ಬಿದ್ದು ನಗುವಂತಿದೆ.

ಉಪಮಾರಾಜ್ಯದಲ್ಲಿ ಕಾಳಿದಾಸನನ್ನು ಚಕ್ರವರ್ತಿಯೆನ್ನುವುದುಂಟು. ಆದರೆ ವಾಲ್ಮೀಕಿಯ ಉಪಮೆಗಳು ಯಾವ ದೃಷ್ಟಿಯಿಂದಲೂ ಕಾಳಿದಾಸನಿಗೆ ಕಡಿಮೆಯೆನಿಸುವುದಿಲ್ಲ ಸಂಖ್ಯೆಯಲ್ಲಿ, ಔಚಿತ್ಯದಲ್ಲಿ, ವೈಚಿತ್ರ್ಯದಲ್ಲಿ, ಹೃದಯವನ್ನು ಮುಟ್ಟುವ ಗುಣದಲ್ಲಿ, ಯಾವುದರಲ್ಲೂ ವಾಲ್ಮೀಕಿಯ ಉಪಮೆಗಳಿಗೆ ಕೊರತೆಯಿಲ್ಲ. ಸ್ಥಲಾಭಾವದ ಪ್ರಯುಕ್ತ ಒಂದೇ ಉದಾಹರಣೆಯಿಂದ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಕೋಪಗೃಹದಲ್ಲಿದ್ದ ಕೈಕೆಯನ್ನು ದಶರಥನು ಕಾಣುವ ಚಿತ್ರವಿದು.

**ಅಪಾಪಃ ಪಾಪಸಂಕಲ್ಪಾಂ ದದರ್ಶ ಧರಣೀತಲೇ।**
**ಲತಾಮಿವ ವಿನಿಷ್ಕೃತ್ತಾಂ ಪತಿತಾಂ ದೇವತಾಮಿವ॥**
**ಕಿಂನರೀಮಿವ ನಿರ್ಧೂತಾಂ ಚ್ಯುತಾಮಪ್ಸರಸಂ ಯಥಾ।**
**ಮಾಲಾಮಿವ ಪರಿಭ್ರಷ್ಟಾಂ ಹರಿಣೀಮಿವ ಸಂಯುತಾಮ್॥**
**ಕರೇಣುಮಿವ ದಿಗ್ಧೇನ ವಿದ್ಧಾಂ ಮೃಗಯುನಾ ವನೇ।**
**ಮಹಾಗಜ ಇವಾರಣ್ಯೇ ಸ್ನೇಹಾತ್ ಪರಿಮಮರ್ಶ ತಾಮ್॥**

(II. x 24-25)

'ಪಾಪವನ್ನರಿಯದ ದಶರಥ ಪಾಪಸಂಕಲ್ಪೆಯಾದ ಕೈಕೆಯನ್ನು ನೆಲದಮೇಲೆ ನೋಡಿದ ಕಿತ್ತೆಸೆದ ಲತೆಯಂತೆ, ಕೆಳಗೆ ಬಿದ್ದ ದೇವಾಂಗನೆಯಂತೆ, ನೂಕಿ ನುಗ್ಗಾದ ಕಿನ್ನರಿಯಂತೆ, ಉರುಳಿ ಬಿದ್ದ ಅಪ್ಸರೆಯಂತೆ,

ತಳ್ಳಿಹಾಕಿದ ಹೂಮಾಲೆಯಂತೆ, ಬಲೆಗೆ ಬಿದ್ದ ಹೆಣ್ಣು ಹುಲ್ಲೆಯಂತೆ, ಬೇಡನ ವಿಷಬಾಣದ ಪೆಟ್ಟು ತಾಗಿ ಉರುಳಿದ ಹೆಣ್ಣಾನೆಯಂತೆ. ಕಾಡಿನಲ್ಲಿ ಕಂಡರೆ ಅದನ್ನು ಮದ್ದಾನೆಯು ಸವರುವಂತೆ ದಶರಥನೂ ಆಕೆಯನ್ನು ಪ್ರೀತಿಯಿಂದ ಸವರಿದನು.'

ವಾಲ್ಮೀಕಿಯ ಉಪಮೆಗಳು ಒಂದರ ಮೇಲೊಂದು ಮಾಲೆ ಮಾಲೆಯಾಗಿ ಬಹುವ ಸೊಬಗನ್ನು ಗಮನಿಸಬೇಕು. ಇದು ರಾಮಾಯಣದ ವೈಶಿಷ್ಟ್ಯ. ರಾಮನಿಲ್ಲದ ಅಯೋಧ್ಯೆ ಅವನನ್ನು ಬಿಟ್ಟು ಬಂದ ಪ್ರಜೆಗಳಿಗೆ ತೋರಿತ್ತಂತೆ --

**ಚಂದ್ರಹೀನಮಿವಾಕಾಶಂ ತೋಯಹೀನಮಿವಾರ್ಣವಮ್ ।**
(II 48-18)

[ಚಂದ್ರನಿಲ್ಲದ ಆಕಾಶದಂತೆ, ನೀರಿಲ್ಲದ ಸಾಗರದಂತೆ]

ಇದು ಸೂರ್ಯೋದಯದ ಸರಲಚಿತ್ರ —

**ಭಾಸ್ಕರೋದಯಕಾಲೋಽಯಂ ಗತಾಭಗವತೀ ನಿಶಾ ।**
**ಅಸೌ ಸುಕೃಷ್ಣೋ ವಿಹಗಃ ಕೋಕಿಲಸ್ತಾತ ಕೂಜತಿ ॥** (II. 2)

ಇದು ಸೂರ್ಯನ ಉದಯಕಾಲ. ನಿಶಾದೇವತೆಯು ಹೊರಟು ಹೋಗಿದ್ದಾಳೆ. ಅಪ್ಪಾ, ಈ ಕಪ್ಪಾದ ಹಕ್ಕಿ, ಕೋಗಿಲೆ ಹಾಡುತ್ತಿದೆ. ಸೀತಾವಿರಹದಲ್ಲಿ ರಾಮನಿಗೆ ಪ್ರಕೃತಿಯೇ ಸೀತೆಯ ಹಾಗೆ ಅಳುತ್ತಿರುವಂತೆ ಭಾಸವಾಗುತ್ತದೆ —

**ಏಷಾ ಘರ್ಮಪರಿಕ್ಲಿಷ್ಟಾ ನವವಾರಿಪರಿಪ್ಲುತಾ ।**
**ಸೀತೇವ ಶೋಕಸಂತಪ್ತಾ ಮಹೀ ಬಾಷ್ಪಂ ವಿಮುಂಚತಿ ॥**
**ಏಷ ಫುಲ್ಲಾರ್ಜುನಃ ಶೈಲಃ ಕೇತಕೈರಧಿವಾಸಿತಃ ।**
**ಸುಗ್ರೀವ ಇವ ಶಾಂತಾರಿರ್ಧಾರಾಭಿರಭಿಷಿಚ್ಯತೇ ॥**
(IV 28 7, 9)

ಬಿಳಿಹೂ, ಕೇದಗೆಗಳರಳಿರುವ ಶೈಲವು ಸುಗ್ರೀವನಂತೆ ಹರ್ಷಗೊಂಡ ಹಾಗಿದ್ದಿತಂತೆ. ಇಲ್ಲಿ ಪ್ರಕೃತಿಯು ಉಪಮೆಯ ಸೋಗಿನಿಂದ ಪಾತ್ರಗಳೊಡನೆ ಆತ್ಮೀಯ ಸಂಬಂಧ ಪಡೆಯುವುದನ್ನು ಕಾಣಬಹುದು. ಈ ಬಗೆಯ

ಉತ್ಪ್ರೇಕ್ಷೆ ಇಂಗ್ಲಿಷ್ ಸಾಹಿತ್ಯದಲ್ಲಿ Pathetic Fallecy ಎಂಬ ಹೆಸರಿನಿಂದ ಪ್ರಸಿದ್ಧ.

ರಾಮನು ಕೋಪಬಂದು ಸುಗ್ರೀವನಿಗೆ ಕಳಿಸುವ ಸಂದೇಶವಿದು.

**ನ ಚ ಸಂಕುಚಿತಃ ಪಂಥಾಃ ಯೇನ ವಾಲೀ ಹತೋ ಗತಃ ।**
**ಸಮಯೇ ತಿಷ್ಠ ಸುಗ್ರೀವ ಮಾ ವಾಲಿಪಥಮನ್ವಗಾಃ ॥**

(IV 30-81)

'ವಾಲಿ ಸತ್ತು ಯಾವ ದಾರಿಯಲ್ಲಿ ನಡೆದನೋ ಅದಿನ್ನೂ ಅಷ್ಟೇ ಅಗಲವಾಗಿಯೇ ಇದೆ, ಸ್ವಲ್ಪವೂ ಸಣ್ಣನಾಗಿಲ್ಲ. ನಿನ್ನ ಮಾತಿನಂತೆ ನಡೆ. ವಾಲಿಯ ದಾರಿಗೇ ಹೋಗಬೇಡ.'

ಇಲ್ಲಿಯ ಪರ್ಯಾಯೋಕ್ತವು ಬಹಳ ಸತ್ವಶಾಲಿಯಾಗಿದೆ.

ಉಪಮಾಲಂಕಾರದಂತೆ ರೂಪಕವನ್ನೂ ಕವಿ ವಿಪುಲವಾಗಿ ಬಳಸುತ್ತಾನೆ. 'ಪುರುಷವ್ಯಾಘ್ರ', 'ಸುಮಿತ್ರಾನಂದವರ್ಧನ' ಮುಂತಾದ ವಿಶೇಷಣಗಳು ಸಾಮಾನ್ಯವಾಗಿ ಎಲ್ಲ ಶ್ಲೋಕಗಳಲ್ಲಿಯೂ ಬಂದು ವಾಲ್ಮೀಕಿಯ ವೈಶಿಷ್ಟ್ಯವೆನಿಸುವಂತೆ 'ದುಃಖಾರ್ಣವ', 'ವಾಗ್ವಜ್ರ', 'ಪದ್ಮಾಕ್ಷ', 'ಪೂರ್ಣಚಂದ್ರಾನನ' ಮುಂತಾದ ಸಣ್ಣ ರೂಪಕ ಸಮಾಸಗಳು ಕಾವ್ಯದುದ್ದಕ್ಕೂ ತಪ್ಪದೆ ಬರುತ್ತವೆ. ರಸಪೂರ್ಣವಾದ ವಾಲ್ಮೀಕಿಯ ಕಾವ್ಯವಾಹಿನಿಯಲ್ಲಿ ಎಲ್ಲಿಯೂ ಅವು ಪುನರುಕ್ತವೆನಿಸಿ ಬೇಸರಗೊಳಿಸುವುದಿಲ್ಲ ಸ್ವತಂತ್ರವಾಗಿ ಬರುವ ರೂಪಕಾಲಂಕಾರಕ್ಕೆ ಕೆಳಗಿನದು ಉದಾಹರಣೆ —

ಇದು ರಾಮನ ಪಟ್ಟಾಭಿಷೇಕಕ್ಕೆಂದು ಬೀದಿಯಲ್ಲಿ ನೆರೆದ ಜನ ಸಮೂಹದ ಚಿತ್ರ.—

**ಜನಬೃಂದೋರ್ಮಿ ಸಂಘರ್ಷಹರ್ಷಸ್ವನವತಸ್ತದಾ ।**
**ಬಭೂವ ರಾಜಮಾರ್ಗಸ್ಯ ಸಾಗರಸ್ಯೇವ ನಿಸ್ವನಃ ॥**

(II. V. 17)

[ಜನಸಮೂಹವೆಂಬ ಅಲೆಗಳ ಉಲ್ಲೋಲಕಲ್ಲೋಲವೆಂಬ ಹರ್ಷಧ್ವನಿ ತುಂಬಿರಲು, ರಾಜಮಾರ್ಗದ ಕಲಕಲವು ಸಮುದ್ರಘೋಷದಂತಿದ್ದಿತು.]

ಉತ್ಪ್ರೇಕ್ಷೆಯ ಸರಳ ಸೌಂದರ್ಯಕ್ಕೂ ರಾಮಾಯಣದಲ್ಲಿ ಕೊರತೆಯಿಲ್ಲ. ರಾಮನು ವನವಾಸಕ್ಕೆ ಹೊರಟಾಗ ಅಡ್ಡ ಬಂದ ತಮಸಾನದಿಯೇ ಅವನನ್ನು ಹೋಗಬೇಡವೆಂದು ತಡೆಯುವಂತಿದ್ದಿತಂತೆ —

**'ದದೃಶೇ ತಮಸಾ ತತ್ರ ವಾರಯಂತೀವ ರಾಘವಮ್'**

(II 52. 32)

ಮಾಸ್ತಿಯವರು ವಾಲ್ಮೀಕಿಯ ಅಲಂಕಾರಗಳನ್ನು ವಿಮರ್ಶಿಸುತ್ತಾ (ಆದಿಕವಿ ವಾಲ್ಮೀಕಿ, ಪು ೧೯೬) 'ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ । ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥' ಎಂಬ ಶ್ಲೋಕದಲ್ಲಿ 'ಅನ್ವಯಾಲಂಕಾರ'ವುಂಟೆಂಬುದನ್ನು ಉಲ್ಲೇಖಿಸಿದ್ದಾರೆ. ಅಲ್ಲಿರುವುದು ಅನ್ವಯಾಲಂಕಾರವಲ್ಲ, **ಅನನ್ವಯಾಲಂಕಾರ.**

ಹೀಗೆ ಅಯತ್ನಸಂಪನ್ನವಾದ ಅಲಂಕಾರಗಳಿಂದ ರಮಣೀಯವೂ, ಸರ್ವದಾ ರಸಸ್ಯಂದಿಯೂ, ಪ್ರಸನ್ನ ಸುಭಗವೂ ಆದ ವಾಲ್ಮೀಕಿಯ ವಾಗ್ವಿಲಾಸವನ್ನು ಆತನ ವಿಶೇಷಣಗಳಿಂದಲೇ ಪುನರುಚ್ಚರಿಸಿ ಮುಗಿಸಬಹುದಾಗಿದೆ —

**ಅವಿಸ್ತರಂ ಅಸಂದಿಗ್ಧಂ ಅವಿಲಂಬಿತಂ ಅದ್ರುತಮ್ ।**
**ಉರಃಸ್ಥಂ ಕಂಠಗಂ ವಾಕ್ಯಂ ವರ್ತತೇ ಮಧ್ಯಮೇ ಸ್ವರೇ ॥**
**ಸಂಸ್ಕಾರಕ್ರಮಸಂಪನ್ನಾಮದ್ರುತಾಮವಿಲಂಬಿತಾಮ್ ।**
**ಉಚ್ಚಾರಯತಿ ಕಲ್ಯಾಣೀಂ ವಾಚಂ ಹೃದಯಹಾರಿಣೀಮ್ ॥**

(IV 3. 31-32)

ಈ ಶೈಲಿಯ ಬಾಹ್ಯರೂಪದ ಅನುಕರಣ ಸುಲಭ, ಆದರೆ ಅಂತಸ್ಸತ್ವ ಮಾತ್ರ ಮಹಾಕವಿಗಳಿಗೂ ದುರ್ಲಭ. ಪ್ರಕ್ಷಿಪ್ತಭಾಗಗಳ ಕೃತ್ರಿಮತೆಗೂ ಮೂಲಕಾವ್ಯದ ಸಹಜ ಸೌಂದರ್ಯಕ್ಕೂ ಸ್ಪಷ್ಟವಾದ ಅಂತರ ಗೋಚರವಾಗುವುದೇ ಇಲ್ಲ.

**ಮುಂದಿನ ಕವಿಪರಂಪರೆಯ ಮೇಲೆ ವಾಲ್ಮೀಕಿಯ ಪ್ರಭಾವ:** ಇದನ್ನು ಇಲ್ಲಿ ವಿಚಾರಿಸುವುದಕ್ಕಿಂತಲೂ ಗ್ರಂಥದ ಕಡೆಗೆ ವಿಚಾರಿಸುವುದು ಯುಕ್ತಕರವೆಂದು ಕಾಣುತ್ತದೆ. ಏಕೆಂದರೆ ಅಶ್ವಘೋಷ, ಭಾಸ, ಕಾಳಿದಾಸ, ಭವಭೂತಿ, ಬಾಣ, ಮುರಾರಿ, ರಾಜಶೇಖರ, ಕವಿರಾಜ

ಮುಂತಾದ ಮುಂದಿನ ಸಂಸ್ಕೃತ ಮಹಾಕವಿಗಳೆಲ್ಲರೂ ವಾಲ್ಮೀಕಿಗೆ ನಮಸ್ಕರಿಸಿ ಕಾವ್ಯರಚನೆ ಮಾಡಿದ್ದಾರ. ವಿಷ್ಣು, ವಾಯು, ಭಾಗವತ, ಕೂರ್ಮ, ಅಗ್ನಿ, ನಾರದೀಯ, ಬ್ರಹ್ಮ, ಸ್ಕಂದ, ಪದ್ಮ ಮುಂತಾದ ಪುರಾಣ, ಉಪಪುರಾಣಗಳಲ್ಲೆಲ್ಲ ವಾಲ್ಮೀಕಿಯ ರಾಮಕಥೆಯು ಬೇರೆ ಬೇರೆ ರೂಪದಿಂದ ಬೆಳೆದು ಮಹಾ ವಟವೃಕ್ಷವಾಗಿದೆ. ಇವುಗಳಲ್ಲದೆ ಯೋಗವಾಸಿಷ್ಠ, ಅಧ್ಯಾತ್ಮ ರಾಮಾಯಣ, ಅದ್ಭುತರಾಮಾಯಣ, ಆನಂದರಾಮಾಯಣ, ಮುಂತಾಗಿ ಹತ್ತಾರು ಸ್ವತಂತ್ರ ಉದ್ಗ್ರಂಥಗಳೂ ರಚಿತವಾಗಿ ರಾಮಾಯಣದ ಸಂಸ್ಕೃತಿ ಪ್ರಸಾರವನ್ನು ಬೇರ ಬೇರೆ ರೀತಿಗಳಿಂದ ಮಾಡುತ್ತ ಬಂದಿವೆ. ಭಿನ್ನ ಮತೀಯರಾದ ಜೈನರೂ ಬೌದ್ಧರೂ ತಮ್ಮ ಧರ್ಮಬೋಧೆಗೆ ರಾಮ ಕಥೆಯನ್ನಾಶ್ರಯಿಸಿದ್ದಾರೆ. ದೇಶಭಾಷೆಗಳಲ್ಲಂತೂ ಲೆಕ್ಕವೇ ಇಲ್ಲ. ರಾಮ ಕಥೆಯ ಬೆಳೆವಣಿಗೆ ಸಾವಿರಾರು ವರ್ಷಗಳ ಕಾಲ ನಡೆದಿರುವುದರಿಂದ ಅದರ ಪರೀಕ್ಷಣೆಯನ್ನು ಪ್ರಸ್ತುತ ಗ್ರಂಥದ ಮಿತಿಯೊಳಗೆ ಕೂಡಿಸುವಂತಿಲ್ಲ. ಆದರೆ ಸಂಸ್ಕೃತ ಕಾವ್ಯಗಳ ಪರಿಚಯವು ಮುಂದೆ ಬರುವುದರಿಂದ ವಾಲ್ಮೀಕಿಯು ಆದಿಕವಿಯಷ್ಟೇ ಅಲ್ಲ, **ಕವಿಗಳ ಕವಿ (Poets' Poet)** ಯೂ ಹೌದೆಂಬ ಮಾತು ಮನದಟ್ಟಾಗುತ್ತದೆ. ಬೃಹದ್ಧರ್ಮಪುರಾಣದಲ್ಲಿ ಹೇಳಿರುವಂತೆ ಮಹಾಕಾವ್ಯವಾದ ವಾಲ್ಮೀಕಿ ರಾಮಾಯಣವೇ ಮುಂದಿನ ಅನೇಕ ಕಾವ್ಯ, ಇತಿಹಾಸ, ಪುರಾಣಗಳಿಗೆಲ್ಲ ಮೂಲ, ವಿಸ್ತೃತ ಮಹಾಭಾರತಕ್ಕೂ ಅದೇ ಪ್ರೇರಕ ಆದರ್ಶ -

**ರಾಮಾಯಣಂ ಮಹಾಕಾವ್ಯಮಾದೌ ವಾಲ್ಮೀಕಿನಾ ಕೃತಮ್ ।**
**ತನ್ಮೂಲಂ ಸರ್ವಕಾವ್ಯಾನಾಮಿತಿಹಾಸಪುರಾಣಯೋಃ ॥**
**ಸಂಹಿತಾನಾಂ ಚ ಸರ್ವಾಸಾಂ ಮೂಲಂ ರಾಮಾಯಣಂ ಮತಮ್ ।**
**ತದೇವಾದರ್ಶಮಾರಾಧ್ಯ ವೇದವ್ಯಾಸೋ ಮುನೀಶ್ವರಃ ॥**
**ಚಕ್ರೇ ಮಹಾಭಾರತಾಖ್ಯಾತಮಿತಿಹಾಸಂ ಪುರಾತನಮ್ ।**

(ಪೂರ್ವಭಾಗ, ಅಧ್ಯಾಯ ೨೫, 28-30)

ಅದೇ ಪುರಾಣದಲ್ಲಿ ಕವಿತಾಶಕ್ತಿಯ ದೇವತೆಯಾದ ಸರಸ್ವತಿಯೇ ವಾಲ್ಮೀಕಿಯ ವದನದಲ್ಲಿ ನೆಲೆಸಿ ಅವನ ಶೋಕವನ್ನು ಕಳೆದಳೆಂದೂ

(ಕ್ರೌಂಚವಧಜನಿತವಾದ ಶೋಕ) ಉಳಿದ ಕವಿಗಳೆಲ್ಲರೂ ಅವನ ಅನುಕರಣ ದಿಂದಲೇ ಸಾರ್ಥಕ್ಯಪಡೆಯುವರೆಂದೂ ವರ್ಣಿಸಿದೆ —

**ಕವಿತಾಶಕ್ತಿರೂಪಾ ಚ ವಿದ್ಯಾರೂಪಾ ಸರಸ್ವತೀ ।**
**ತಸ್ಯ ಶೋಕಾಪನೋದಾಯ ಮಹರ್ಷೇರ್ಮುಖಮಾಯಯೌ**
(ಅಲ್ಲೇ, 64)

**ಕೃತೇ ತ್ವಯಾ ಮಹಾಕಾವ್ಯೇ ಭಾವ್ಯರ್ಥೇ ರಾಮಚೇಷ್ಟಿತೇ ।**
**ಲೋಕೇಷ್ವನುಚರಿಷ್ಯಂತಿ ಕವಯೋಽನ್ಯೇ ಸದುಕ್ತಯಃ ॥**
(ಅಲ್ಲೇ, 80)

ಅಂದಿನಿಂದ ಇಂದಿನ "ರಾಮಾಯಣದರ್ಶನ" ದವರೆಗೂ ಮಹಾ ಕವಿಗಳ ಮನೋಮುಕುರದಲ್ಲಿ ರಾಮಾಯಣದ ದಿವ್ಯಸ್ಫೂರ್ತಿಯು ಉಜ್ಜ್ವಲ ವಾಗಿ, ಸಜೀವವಾಗಿ ನಿಂತಿರುವುದೇ ಈ ಮಾತಿಗೆ ಪ್ರಮಾಣ. ಶ್ರೀರಾಮನ ವ್ಯಕ್ತಿತ್ವ ಅಷ್ಟು ದೊಡ್ಡದು; ಅಷ್ಟು ಮೋಹಕವಾದುದು. ಜಯದೇವನು ಹೇಳುವಂತೆ—"ಕವಿತ್ವದ್ರುಮದ ಬೀಜ ಅನೇಕ ಜನ್ಮಾರ್ಜಿತ ಪುಣ್ಯ, ದಾಂಗುಡಿಯೇ ಪ್ರಜ್ಞೆ, ಪಂಡಿತಮಂಡಲಿಯ ಪರಿಚಯವೇ ಕಾಂಡ, ಕಾವ್ಯವೇ ಹೊಸ ತಳಿರು, ಕೀರ್ತಿಯೇ ಪುಷ್ಪಪರಂಪರೆ. ಹೀಗಿರುವಾಗ ರಘುಕುಲೋತ್ತಂಸನ ವರ್ಣನೆಯೆಂಬ ಫಲದಿಂದ ವಂಚಿತರಾಗಬಹುದೆ?" ಎಂಬುದು ಪ್ರತಿಯೊಬ್ಬ ಸಂಸ್ಕೃತ ಕವಿಯ ಅಂತರಂಗವಾಣಿಯ ಪ್ರತಿಧ್ವನಿ

**ಬೀಜಂ ಯಸ್ಯ ಚಿರಾರ್ಜಿತಂ ಸುಚರಿತಂ ಪ್ರಜ್ಞಾ**
**ನವೀನೋಽಂಕುರಃ**
**ಕಾಂಡಃ ಪಂಡಿತಮಂಡಲೀಪರಿಚಯಃ ಕಾವ್ಯಂ ನವಂ ಪಲ್ಲವಃ ।**
**ಕೀರ್ತಿಃ ಪುಷ್ಪಪರಂಪರಾ ಪರಿಣತಃ ಸೋಽಯಂ ಕವಿತ್ವದ್ರುಮಃ**
**ಕಿಂ ವಂಧ್ಯಃ ಕ್ರಿಯತೇ ವಿನಾ ರಘುಕುಲೋತ್ತಂಸ**
**ಪ್ರಶಂಸಾಫಲಮ್ ॥**[೮]

—ಪ್ರಸನ್ನರಾಘವನಾಟಕ, ಪ್ರಸ್ತಾವನೆ.

---

೮೨. ರಾಮಾಯಣದ ಸ್ವಾರಸ್ಯ ಗ್ರಹಣಕ್ಕೆ ಕೆಳಗಿನ ಗ್ರಂಥಗಳು ಉಪಯುಕ್ತವಾಗಿವೆ:—

1. Rt Hon V S Srinivasa Sastri Lectures on the Ramayana,

2 Masti Venkatesa Iyengar :
(a) The Poetry of Valmiki
(b) ಆದಿಕವಿ ವಾಲ್ಮೀಕಿ

3 T Sundarachariar Studies in the Ramayana

4 K S Ramaswami Sastri Studies in Ramayana

5. Monier Willams : Indian Wisdom

6 T R Venkatarama Sastri : " ಆತ್ಮಾನಂ ಮಾನುಷಂ ಮನ್ಯೇ "
(Journal of Oriental Research, Madras,
Vol XVII, pt ii),

7. ಕುವೆಂಪು ತಪೋನಂದನ.



# ಅಧ್ಯಾಯ ೩

## ವ್ಯಾಸ : ಮಹಾಭಾರತ

ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ
ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ
ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥

ಉರುಬುದ್ಧಿಯ ವ್ಯಾಸರ್ಷಿಯ
ಸರಸೀರುಹಪತ್ರನೇತ್ರ ವಂದಿಪೆನಡಿಯಂ ।
ವರಭಾರತಮೆಂಬೆಣ್ಣೆಯಿಂ-
ನುರಿಸಿರುವಯ್ ಜ್ಞಾನದೀಪಮಂ ಭಾಸುರಮಂ ॥

ಭಾರತಂ ಚೇಕ್ಷುದಂಡಂ ಚ ಕಲಾನಾಥಂ ಚ ವರ್ಣಯ ।
ಕಾಲಿದಾಸಃ ಕವಿರ್ಬ್ರೂತೇ ಪ್ರತಿಪರ್ವರಸಾವಹಮ್ ॥

ನುತಭಾರತಮಂ ರಜನೀ-
ಪತಿಯಂ ತನಿಗರ್ಜನಂತೆ ನುತಿಸೆನಲರಸಂ ।
ಪ್ರತಿಪರ್ವರಸಾವಹಮೆಂ-
ದತಿಚತುರಂ ಕಾಳಿದಾಸನೊರೆದಂ ಭರದಿಂ ॥

ಮಹಾಭಾರತವು ಭಾರತೀಯರಿಗೆಲ್ಲ ಪೂಜ್ಯತಮವಾದ ಗ್ರಂಥ, ಕಥೆಗಳ, ಉಪಾಖ್ಯಾನಗಳ ಸಾಗರ, ಕವಿಗಳ ಸ್ಫೂರ್ತಿಗೆ ಉದ್ಗಮಸ್ಥಾನ.[1]

---

1. ಇದರಲ್ಲಿ ಇಲ್ಲದ ವಿಷಯವೇ ಇಲ್ಲವೆಂದು 'ಫಲಶ್ರುತಿ'ಯಲ್ಲಿ ಹೇಳಿದೆ —

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥ XVIII 5 50

ಅನುಕ್ರಮಣಿಕೆಯಲ್ಲಿ ಇದು ಇತರರಿಗೆ ಸ್ಫೂರ್ತಿದಾಯಕವಾಗುವ ಮಹಿಮೆಯನ್ನು ಹೀಗೆ ವರ್ಣಿಸಿದೆ :—

ಅರಸುಗಳ ಕ್ಷಾತ್ರದಂತೆ ದ್ವಿಜೋತ್ತಮರ ವೇದಸಾರವೂ, ಯೋಗೀಶ್ವರರ ತತ್ವವಿಚಾರದಂತೆ ಮಂತ್ರಿಜನರ ನೀತಿಸಾರವೂ, ಶೃಂಗಾರಾದಿ ನವರಸಗಳಂತೆ ವಿದ್ಯಾಪರಿಣತರ ಅಲಂಕಾರಗಳೂ, ಧರ್ಮಬೋಧೆಯಂತೆ ಅರ್ಥಸಾಧನೆಯ ಅಂಗಗಳೂ ಎಲ್ಲವೂ ಸೇರಿರುವ ಮಹಾಸಮುದ್ರ. ಆದರೆ ಭಿನ್ನರುಚಿಯ ಜನರೆಲ್ಲರಿಗೂ ಬೇರೆ ಬೇರೆ ರೀತಿಗಳಿಂದ ಅತ್ಯಂತ ಪ್ರಿಯವಾಗಿರುವ ಮಹಾಕಾವ್ಯ. ಕೆಲವರು ಅದನ್ನು ಸಕಲ ವೇದಾಂತಗಳ ನವನೀತವಾದ ಗೀತೆಗಾಗಿ ಗೌರವಿಸಿದರೆ, ಇತರರು ಪರಮ ರಮಣೀಯವಾದ ನಳಚರಿತ್ರೆ, ಸಾವಿತ್ರೀಚರಿತ್ರೆ ಮುಂತಾದ ಉಪಾಖ್ಯಾನಗಳಿಗಾಗಿ ಮೆಚ್ಚುತ್ತಾರೆ. ಅನ್ಯರು ವಿದುರನೀತಿಗಾಗಿ ಅದನ್ನು ಅಧ್ಯಯನಮಾಡಿದರೆ, ಬೇರೆಯವರು ಕೃಷ್ಣನ ಚರಿತಾಮೃತವೆಂಬ ಭಕ್ತಿಭಾವದಿಂದ ಪರಿಸುತ್ತಾರೆ. ಪ್ರಾಚೀನ ಭಾರತದ ಧರ್ಮಕೋಶವೆಂದು ಕೆಲವರು ಅದನ್ನು ಓದಿದರೆ ಉಳಿದವರು ಭಾರತದ ಪ್ರಾಚೀನ ಲೌಕಿಕಜೀವನದ ಏಕಮೇವ ಮಣಿದರ್ಪಣವೆಂದು ಮನ್ನಣೆ ಕೊಡುತ್ತಾರೆ. ಮಹಾಭಾರತವು ಗಾತ್ರದಲ್ಲಿ ಬಹಳ ದೊಡ್ಡದು; ವಸ್ತುವಿನಲ್ಲಿಯೂ ಬಹಳ ತೂಕವಾದುದು.[2] ಇಲ್ಲಿ ಬರುವ ಪಾತ್ರಗಳು

---

ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತದ್ರುಮಃ ॥ I. 1. 92.

ಇಲ್ಲಿ ಪರ್ವಶ್ಲೋಕಾದಿಗಳ ಸಂಖ್ಯಾನಿರ್ದೇಶವು ನೀಲಕಂಠನ ವ್ಯಾಖ್ಯಾನ ಸಹಿತವಾದ ಪುಣೆಯ ಚಿತ್ರಶಾಲಾ ಪ್ರೆಸ್ಸಿನ ಸಂಸ್ಕರಣಕ್ಕೆಂದು ತಿಳಿಯಬೇಕು.

2. ಹಿಂದೆ ದೇವತೆಗಳು ತಕ್ಕಡಿ ಹಿಡಿದುಕೊಂಡು ಒಂದು ಕಡೆ ಸರಹಸ್ಯವಾದ ವೇದಗಳನ್ನೂ ಇನ್ನೊಂದು ಕಡೆ ಭಾರತವನ್ನೂ ಇಟ್ಟು ತೂಗಿ ನೋಡಿದರಂತೆ. ಭಾರತದ ತೂಕವೇ ಹೆಚ್ಚಾಗಿತ್ತು; ಅಂದಿನಿಂದ 'ಮಹಾಭಾರತ'ವೆಂಬ ಹೆಸರಾಯಿತಂತೆ.

ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಮ್ ।
ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ॥
ತದಾ ಪ್ರಭೃತಿ ಲೋಕೇಽಸ್ಮಿನ್ ಮಹಾಭಾರತ ಮುಚ್ಯತೇ ।
ಮಹತ್ತ್ವೇ ಚ ಗುರುತ್ವೇ ಚ ಧ್ರಿಯಮಾಣಂ ಯತೋಽಧಿಕಮ್ ॥
ಮಹತ್ವಾದ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ ।

(I. 1. 71-3)

ಒಂದೆರಡಲ್ಲ; ಸಾವಿರಾರು ಕ್ಷಾತ್ರದ ಪ್ರತಿನಿಧಿಗಳಾಗಿ ವೀರಾಧಿವೀರರು ಬರುವಂತೆ ಬ್ರಹ್ಮಜ್ಞಾನಿಗಳಾದ ನೂರಾರು ಮಂದಿ ತಪಸ್ವಿಗಳೂ ಬರುತ್ತಾರೆ. ಎಷ್ಟೆಷ್ಟೋ ರಾಜರು ವಿಧಿವಿಲಾಸದಿಂದ ಪಡಬಾರದ ಪಾಡುಗಳನ್ನೆಲ್ಲ ಪಡುತ್ತಾರೆ; ಧರ್ಮದ ಪ್ರಭಾವದಿಂದ ಅತಿಮಾನುಷವಾದ ಸಾಧನೆಗಳನ್ನು ಎಷ್ಟೋ ಸಾಮಾನ್ಯ ಜನರು ಮಾಡಿ ತೋರಿಸುತ್ತಾರೆ. ಸತ್ಯ, ಅಹಿಂಸೆ, ಪರೋಪಕಾರಗಳ ಮಹತ್ವವನ್ನೂ ಅಸತ್ಯ ಅನ್ಯಾಯಗಳ ದುಷ್ಫಲಗಳನ್ನೂ ನಿದರ್ಶಿಸುವ ಕಥೆಗಳಿಗೆ ಲೆಕ್ಕವಿಲ್ಲ, ಪಶುಪಕ್ಷಿಗಳ ಕಥೆಗಳು, ದೇವಾಸುರರ ಕಥೆಗಳು, ಯಕ್ಷರಾಕ್ಷಸರ ಕಥೆಗಳು, ಎಲ್ಲವೂ ಇವೆ. ಇವೆಲ್ಲವೂ ಭಾರತೀಯರ ಜೀವನದ ಒಂದು ಅಂಗವೆನಿಸುವ ಮಟ್ಟಿಗೆ ಅವರ ರಕ್ತದ ರಕ್ತವಾಗಿ ಹೋಗಿವೆ. ನೂರಾರು ಕವಿಗಳ, ಪೌರಾಣಿಕರ, ಕೀರ್ತನಕಾರರ ಪ್ರಚಾರ ಕಾರ್ಯದಿಂದ ಭಾರತದಲ್ಲಿ ಮಹಾಭಾರತದ ಸಾರವು ಹರಿಯದ ಭಾಷೆಯಿಲ್ಲ, ಪ್ರವೇಶಿಸದ ಮನೆಯಿಲ್ಲ. ಅದು ಹಾಗೆ ನಿತ್ಯಜೀವಂತವಾಗಿರುವುದರ ಪರಿಣಾಮವಾಗಿ ನೂರಾರು ಜನರು ಅದನ್ನು ಕಾಲದಿಂದ ಕಾಲಕ್ಕೆ ಹೆಚ್ಚಿಸುತ್ತ ಹೋಗಿದ್ದಾರೆ; ಅದೊಂದು 'ಸಾಹಿತ್ಯದೈತ್ಯ'ನೆಂದು ವಿದ್ವಾಂಸರು ಹೇಳುವ ಮಟ್ಟಿಗೆ ಈ ಪ್ರಕ್ಷೇಪಕಾರ್ಯ ನಡೆದಿದೆ. ಎಷ್ಟೇ ಕಣ್ಣಲ್ಲಿ ಕಣ್ಣಿಟ್ಟು ಹಸ್ತ ಪ್ರತಿಗಳನ್ನು ಪರಿಶೋಧಿಸಿದರೂ—ಪುಣೆಯ ಭಾಂಡಾರಕರ ಸಂಶೋಧನ ಸಂಸ್ಥೆ ಮಾಡುತ್ತಿರುವಂತೆ—ಅದರ ಅತ್ಯಂತ ಮೂಲ ರೂಪದ ಹೊಲಬು ಇನ್ನೂ ಹತ್ತುವಂತಿಲ್ಲ, ಅಷ್ಟು ಪೂರ್ವದಲ್ಲಿಯೇ ಗ್ರಂಥವು ಅಗಾಧವಾಗಿ ಬೆಳೆದುಹೋಗಿಬಿಟ್ಟುದರಿಂದ, ವ್ಯಾಸರ ಅಮಲ ವಚಸ್ಸರೋಜವು ಕ್ಷಣ ಕ್ಷಣವೂ ಹರಿಕಥಾಪ್ರಸಂಗದಿಂದ ಅರಳುತ್ತದೆ; ಅದರ ಗೀತೆಯೆಂಬ ಉತ್ಕಟ ಪರಿಮಳವು ಹೃದಯ ಹೃದಯದಲ್ಲೂ ಹರಡುತ್ತದೆ. ಅದರ ಒಂದೊಂದು ಆಖ್ಯಾನವೂ ಒಂದೊಂದು ಹೊಸ ಕೇಸರ. ದಿನದಿನವೂ ಸಜ್ಜನಭೃಂಗಗಳು ಅದರ ಮಕರಂದಾಮೃತವನ್ನು ಸವಿಯುತ್ತವೆ. ಈ ಭಾರತ ಪಂಕಜವು ಕಲಿಮಲವಿನಾಶಕವೆಂಬ ಧಾರ್ಮಿಕ ಪೂಜ್ಯತೆ ಅದಕ್ಕೆ ಮೀಸಲು. ಪ್ರಚಲಿತ ಹಿಂದೂ ಧರ್ಮದ ಪವಿತ್ರ ಗ್ರಂಥವಾವುದೆಂದು ಕೇಳಿದರೆ ಮಹಾಭಾರತ ವೆಂದು ಹೇಳದೆ ಗತ್ಯಂತರವಿಲ್ಲ. ಈ ಪರಿಸ್ಥಿತಿಯಲ್ಲಿ ಅದರ ಪಾವಿತ್ರ್ಯ ಪ್ರದರ್ಶನಕ್ಕೆ ಇಲ್ಲಿ ಹೊರಡದೆ ಕೇವಲ ಕಾವ್ಯಸಮೀಕ್ಷೆಯ ದೃಷ್ಟಿಯಿಂದ

ಒಂದು ಪರಿಚಯವನ್ನು ಪ್ರಯತ್ನಿಸಿದೆ; ಅದಕ್ಕೆ ಪೀಠಿಕೆಯಾಗಿ ಆಧುನಿಕ ವಿದ್ವಾಂಸರ ಸಂಶೋಧನೆಗಳ ಮುಖ್ಯಾಂಶಗಳನ್ನೂ ಸಂಗ್ರಹವಾಗಿ ಕೊಟ್ಟಿದೆ:—

**ಪಾರಾಶರ್ಯ ವಚಸ್ಸರೋಜಮಮಲಂ ಗೀತಾರ್ಥ ಗಂಧೋತ್ಕಟಂ**
**ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾಬೋಧಿತಮ್।**
**ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ**
**ಭೂಯಾದ್ಭಾರತಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥**[3]

## ಮಹಾಭಾರತದ ಬಗೆಗೆ ವಿದ್ವಾಂಸರ ಸಂಶೋಧನೆಗಳು

ಮಾನವಸಂಸ್ಕೃತಿಯ ವಿಭಿನ್ನ ಅಭಿವ್ಯಕ್ತಿಗಳನ್ನೂ ಶಾಸ್ತ್ರೀಯವಾಗಿ, ತುಲನಾತ್ಮಕವಾಗಿ, ಅಭ್ಯಾಸ ಮಾಡಲು ಹೊರಟವರಲ್ಲಿ ಜರ್ಮನ್ ವಿದ್ವಾಂಸರೇ ಅಗ್ರಗಾಮಿಗಳು. ತಮ್ಮ ಖಂಡದ ಪೂರ್ವಸಂಸ್ಕೃತಿಯ ನಿಧಿಗಳಾದ ಗ್ರೀಕ್ ಮತ್ತು ರೋಮನ್ ಸಾಹಿತ್ಯ, ತತ್ವಜ್ಞಾನ, ಇತಿಹಾಸಾದಿಗಳನ್ನು ಪರಿಶೀಲಿಸಿದನಂತರ ಅವರು ಇಂದಿಗೆ ಒಂದು ಶತಮಾನಕ್ಕೂ ಮೊದಲೇ ಭಾರತೀಯ ಪುರಾತನ ಗ್ರಂಥಗಳ ಪರಿಶೀಲನೆಗೆ ಪ್ರಾರಂಭಿಸಿದರು. ಹೊಸ ಹೊಸ ಸಂಗತಿಗಳು ಬೆಳಕಿಗೆ ಬಂದಂತೆಲ್ಲ ಅವರ ನಿರ್ಣಯಗಳೂ ಬದಲಾಯಿಸುತ್ತ ಬಂದಿವೆ. ಮಹಾಭಾರತದ ವಿಚಾರವಾಗಿ ಅವರ ಕಲ್ಪನೆಗಳ ಸಂಗ್ರಹವನ್ನು ಕೆಳಗೆ ಕೊಡಲಾಗಿದೆ:—

ಸಿ. ಲಾಸೆನ್ (C. Lassen) ಮಹಾಭಾರತದ ಶಾಸ್ತ್ರೀಯ ಅಧ್ಯಯನವನ್ನು ಮೊತ್ತಮೊದಲು ಆರಂಭಿಸಿ, ತನ್ನ ವಿಚಾರಗಳನ್ನು ಕ್ರಿ. ಶ. 1847–72 ರ ಅವಧಿಯಲ್ಲಿ ಲೈಪ್ಸಿಕ್ ನಗರದಿಂದ Indische Alterthumskunde (ಭಾರತೀಯ ಪ್ರಾಚೀನ ವಿಚಾರಗಳು) ಎಂಬ ಎರಡು ಸಂಪುಟಗಳಲ್ಲಿ ಪ್ರಕಟಮಾಡಿದನು. ಅವನ ಅಭಿಪ್ರಾಯದಲ್ಲಿ “ಯಾವ ಮಹಾಭಾರತವನ್ನು ಸೂತನು ಹೇಳಿದನೋ ಅದು ವಸ್ತುಸ್ಥಿತಿಯಲ್ಲಿ ಪೂರ್ವತನ ಭಾರತದ ದ್ವಿತೀಯ ಸಂಸ್ಕರಣ ಮಾತ್ರ.

---

3 ಧ್ಯಾನಶ್ಲೋಕ.

ಆಶ್ವಲಾಯನ ಗೃಹ್ಯಸೂತ್ರದಲ್ಲಿ 'ಭಾರತ'ದ ಪಕ್ಕದಲ್ಲಿ 'ಮಹಾಭಾರತ'ದ ಉಲ್ಲೇಖವೂ ಬರುತ್ತದೆ. ಆಶ್ವಲಾಯನ ಗೃಹ್ಯಸೂತ್ರದ ಕಾಲ ಸುಮಾರು ಕ್ರಿ. ಪೂ. 350. ಆದ್ದರಿಂದ 'ಮಹಾಭಾರತ'ದ ನಿರ್ಮಾಣ ಕಾಲವು ಇನ್ನು ಒಂದು ಶತಮಾನ ಎಂದರೆ ಕ್ರಿ. ಪೂ. 450 ಕ್ಕಿಂತ ಹಿಂದಾಗಿರಲಾರದು. ಅನಂತರ ಕಾಲದಲ್ಲಿ ವೈಷ್ಣವ ಆಖ್ಯಾನಗಳು ಅದರಲ್ಲಿ ಸಮಾವೇಶಗೊಳ್ಳುತ್ತಲೇ ಇದ್ದುವು. ಪಂಚ ಪಾಂಡವರು ವಸ್ತುತಃ ಯಾವುದೋ ಪ್ರಾಚೀನ ರಾಜಕೀಯ ಪಂಗಡದ ಪ್ರತಿನಿಧಿ ಸದಸ್ಯರೆಂದು ತೋರುತ್ತದೆ."

1852 ರಲ್ಲಿ ಪ್ರಸಿದ್ಧ ಸಂಶೋಧಕನಾದ ಎ. ವೆಬರ್ (A. Weber) ಉಳಿದ ವಿಷಯಗಳಂತೆ ಮಹಾಭಾರತವನ್ನೂ ಸಂಶೋಧನೆಗೆ ತೆಗೆದುಕೊಂಡನು. ಈತನ ವಿಚಾರಗಳು ಅನೇಕ ಸಂಪುಟಗಳಲ್ಲಿ Indische Studien (ಭಾರತೀಯ ಅಧ್ಯಯನಗಳು) ಎಂಬ ಹೆಸರಿನಿಂದ ಬರ್ಲಿನ್ ನಗರದಲ್ಲಿ ಪ್ರಕಟವಾದುವು. ಇವನ ಪ್ರಕಾರ –ಋಗ್ವೇದದ 'ನಾರಾಶಂಸೀ' ಗಾಥೆಗಳು, ದಾನಸ್ತುತಿಗಳು, ಮುಂತಾದ ಲೌಕಿಕ ರಚನೆಗಳೇ ಮಹಾಭಾರತದ ಮೂಲ. ಯಜ್ಞಕಾಲದಲ್ಲಿ ಇವುಗಳನ್ನು ಹಾಡುತ್ತಿದ್ದಂತೆ, ಉಳಿದ ಕಾಲಗಳಲ್ಲಿ ಹಾಡುತ್ತಿದ್ದ ಲೌಕಿಕ ರಚನೆಗಳು ರಾಜವಂಶಗಳಲ್ಲಿ ಪ್ರಚಾರದಲ್ಲಿದ್ದಿರಬೇಕು. ಕುರುವಂಶದವರನ್ನು ಕುರಿತ ಇಂತಹ ಲೌಕಿಕ ಕೃತಿಗಳು ಕಾಲಕ್ರಮದಲ್ಲಿ ವಿಸ್ತಾರವನ್ನು ಪಡೆಯುತ್ತಾ ಪಡೆಯುತ್ತಾ 'ಮಹಾಭಾರತ' ವಾಯಿತು. ಯಜ್ಞಕಾಲದಲ್ಲಿ ಕ್ಷತ್ರಿಯರ ಯಶೋಗಾನ ಮಾಡುವುದು ಬ್ರಾಹ್ಮಣರಿಗೆ ಸೇರುತ್ತಿರಲಿಲ್ಲವೆಂದು ಕಾಣುತ್ತದೆ. ಆದ್ದರಿಂದಲೇ ವೈದಿಕ ಗಾಥೆಗಳಲ್ಲಿ ದೇವತೆಗಳ ಹೆಸರು ಮಾತ್ರ ಬರುತ್ತದೆ. ಆದರೆ ಮುಂದೆ ಪುರಾಣ ನಿರ್ಮಾತೃಗಳು ದೇವತೆಗಳ ಬದಲು ಮನುಷ್ಯರನ್ನು ತಂದು ಕೂರಿಸಿದರು.

1884 ರಲ್ಲಿ ಪ್ರಸಿದ್ಧ ವೇದ ಸಂಶೋಧಕನಾದ ಎ. ಲುಡ್‌ವಿಗ್ ಮಹಾಭಾರತದ ಬಗೆಗೆ ತಮ್ಮ ಅಧ್ಯಯನವನ್ನು ಆರಂಭಿಸಿ 1895 ರಲ್ಲಿ ಪ್ರಾಗಿನಿಂದ Uber die Mythische Grundlage dem Mahābhārata ಎಂಬ ಪುಸ್ತಕವನ್ನು ಪ್ರಕಟಿಸಿದನು. ವೇಬರ್‌ನಂತೆ ಈತನೂ ಮಹಾಭಾರತದ ಮೂಲವನ್ನು ವೇದಗಳಲ್ಲಿ ಹುಡುಕಲು ಯತ್ನಿಸಿದ್ದಾನೆ. ಆದರೆ ಇವನ ಅಭಿಪ್ರಾಯದಲ್ಲಿ ಸ್ವಲ್ಪ ಭೇದವಿದೆ. ಇವನು ಹೇಳು

ವುದೇನೆಂದರೆ—"ಪಾಂಡವರು ಐತಿಹಾಸಿಕ ವ್ಯಕ್ತಿಗಳೇ ಅಲ್ಲ; ಅಂತೆಯೇ ಮಹಾಭಾರತವು ಒಂದು ಇತಿಹಾಸವೆನಿಸಲೂ ಆರದು. ಅದರಲ್ಲಿರುವ ಕಥೆಗಳು ವಾಸ್ತವವಾಗಿ ದೇವ-ದೇವತೆಯರ ಕಥೆಗಳು; ಅವುಗಳಿಗೂ ಋತು-ಪರಿವರ್ತನಗಳಿಗೂ ಸಂಬಂಧವಿದೆ. 'ಮಹಾಭಾರತ'ವು ಋತುಪರಿವರ್ತನೆಗಳ ಒಂದು ದೊಡ್ಡ ರೂಪಕ. ಪಾಂಡುವೆಂದರೆ 'ಮಂಕಾದ ಸೂರ್ಯ.' ಧೃತರಾಷ್ಟ್ರನು ಕುರುಡನೆಂದರೆ ನಿಷ್ಪ್ರಭನಾದ ಸೂರ್ಯ. ಗಾಂಧಾರಿಯ ಕಣ್ಣಿಗೆ ಪಟ್ಟಿ ಕಟ್ಟುವುದು ಸೂರ್ಯನು ಮೇಘಾವೃತನಾಗುವುದರ ಪ್ರತೀಕ. ದ್ರೌಪದಿಗೆ ಕೃಷ್ಣೆಯೆಂಬ ಹೆಸರೂ ಇರುವುದು ಅವಳು ಪೃಥ್ವಿಯ ಪ್ರತೀಕವೆಂದು ಸೂಚಿಸುತ್ತದೆ. ಸಭೆಯಲ್ಲಿ ಅವಳು ವಿವಸನೆಯಾಗುವುದು ಸಸ್ಯಹೀನ ಪೃಥಿವಿಯ ಸ್ಮಾರಕ. ಕೃಷ್ಣನು ಯಜ್ಞಧೂಮಾವೃತನಾದ ಸೂರ್ಯನೇ ಇರಬಹುದು."

ಎಲ್ಲರಿಗಿಂತಲೂ ವಿಸ್ತಾರವಾಗಿ ಮಹಾಭಾರತದ ಅಧ್ಯಯನ ಮಾಡಿದ ಮೊದಲ ವಿದ್ವಾಂಸನೆಂದರೆ ಹೋಲ್ಟ್ಸ್‌ಮಾನ್ (Holtzman). ಅವನ ಅಧ್ಯಯನ ಫಲವು 1892-5 ರ ಅವಧಿಯಲ್ಲಿ Das Mahābhārata und seine Teile ಎಂಬ ಹೆಸರಿನ ನಾಲ್ಕು ಸಂಪುಟಗಳಲ್ಲಿ ಕೀಲ್ ನಗರದಿಂದ ಪ್ರಕಟವಾಯಿತು. ಯುಧಿಷ್ಠಿರನು ಧರ್ಮರಾಜನಾದರೂ ಅವನಿಗೆ ಜೂಜಿನ ಹವ್ಯಾಸವೇಕೆ ಒದಗಿತೆಂಬುದೂ, ಶ್ರೀಕೃಷ್ಣನು ಅವತಾರಪುರುಷನಾದರೂ ಮೋಸ ಕಪಟಗಳನ್ನೇಕೆ ಆಶ್ರಯಿಸುವನೆಂಬುದೂ ಈ ವಿದ್ವಾಂಸನಿಗೆ ಸಮಸ್ಯೆಗಳಾದವು. ಈತನು ಇದಕ್ಕೊಂದು ಪರಿಹಾರವನ್ನು ಸೂಚಿಸಿದನು:—'ವಸ್ತುತಃ ಕೌರವರೇ ಧರ್ಮಭೀರುಗಳೂ ನ್ಯಾಯಪ್ರಿಯರೂ ಆಗಿದ್ದರು. ಜೂಜಿನಲ್ಲಿ ಅವರು ಮೋಸದಿಂದ ಗೆದ್ದರೂ ಯುದ್ಧದಲ್ಲಿ ನಡೆದ ಮೋಸವೆಲ್ಲ ಪಾಂಡವರದೇ. ಆದ್ದರಿಂದ ಮಹಾಭಾರತದಲ್ಲಿ ಕೌರವರ ಪ್ರಶಂಸೆ ಬರುವ ಭಾಗಗಳೆಲ್ಲ ಪ್ರಾಚೀನ; ಪಾಂಡವರ ಪ್ರಶಂಸೆ ಬರುವ ಭಾಗಗಳೆಲ್ಲ ಅರ್ವಾಚೀನ. ಕೌರವರ ಹೆಸರು ವೇದ-ಬ್ರಾಹ್ಮಣಗಳಲ್ಲಿಯೂ ಬರುತ್ತದೆ. ಇದರಿಂದಲೂ ಅವರ ಪ್ರಾಚೀನತೆಯೇ ಪ್ರಮಾಣಿತವಾಗುತ್ತದೆ. ಕೌರವರು ಶೈವರು; ಪಾಂಡವರು ವೈಷ್ಣವರು. ಇವೆರಡು ಸಂಪ್ರದಾಯಗಳಿಗೆ ಎಂದಿನಿಂದಲೂ ಸ್ಪರ್ಧೆಯಿದ್ದೇ ಇದೆ. ಶೈವ ಸಂಪ್ರದಾಯವು ಬೌದ್ಧ

ಧರ್ಮದ ಮೇಲೂ ಪ್ರಭಾವ ಬೀರಿತ್ತು. ಆದ್ದರಿಂದ ಕೌರವರು ಬುದ್ಧನ ವಿಚಾರಗಳನ್ನೂ ಅಷ್ಟಿಷ್ಟು ಸ್ವೀಕರಿಸಿರಬಹುದು. ಪ್ರಾಚೀನಕಾಲದಲ್ಲಿ ಸೂತರ (= ಸಾರಥಿಗಳ) ಸಂಘಗಳಿರುತ್ತಿದ್ದುವು. ಅವರಲ್ಲೊಬ್ಬ ಕವಿ ಬೌದ್ಧ ರಾಜನೊಬ್ಬನನ್ನು ವರ್ಣಿಸಲು–ಅಶೋಕನೇ ಇರಬಹುದು— ಕಾವ್ಯ ಬರೆದಿರ ಬಹುದು. ಅನಂತರಕಾಲದಲ್ಲಿ ಬ್ರಾಹ್ಮಣರು ಬೌದ್ಧಧರ್ಮವನ್ನು ಓಡಿಸಿ ದಾಗ, ಈ ಕಾವ್ಯವನ್ನೂ ತೆಗೆದುಕೊಂಡು ಸಿಕ್ಕಾಬಟ್ಟೆ ಬದಲಾಯಿಸಿ, ಕೌರ ವರ ಸ್ತುತಿಯನ್ನೆಲ್ಲ ತಮ್ಮ ರಕ್ಷಕರಾದ ಪಾಂಡವರಿಗೆ ಅನ್ವಯಿಸುವಂತೆ ಮಾಡಿ ಬರೆದಿರಬಹುದು. ಮತ್ತೂ ಕೆಲವು ಕಾಲದ ಮೇಲೆ ಕಾವ್ಯದಲ್ಲಿ ಬುದ್ಧನ ಹೆಸರೂ ಕಾಣದಂತಾಗಿ ಒಂದು ವೈಷ್ಣವಗ್ರಂಥವಾಗಿ ಹೋಗಿರ ಬಹುದು. ಇಂದು ಮಹಾಭಾರತವು ಇರುವ ಸ್ಥಿತಿಯಲ್ಲಿ ಅದರ ಕಾಲ ಕ್ರಿ. ಶ. ಹನ್ನೆರಡನೆಯ ಶತಮಾನದವರೆಗೂ ಹೋಗಬಹುದು.' ಫಾನ್ ಷ್ರೋಡೆರ್ ಎಂಬ ವಿದ್ವಾಂಸರೂ ಇದೇ ಬಗೆಯ ವಿಚಾರಗಳನ್ನೇ ವ್ಯಕ್ತ ಮಾಡಿದ್ದಾರೆ.

ಸುಪ್ರಸಿದ್ಧ ವಿದ್ವಾಂಸರಾದ ಮ್ಯಾಕ್ಸ್ ಮ್ಯುಲರ್ ಅವರೂ ಲ್ಯಾಸೆನ್ನನ ವಾದಸರಣಿಯನ್ನೇ ಅನುಸರಿಸಿ ತಮ್ಮ History of Ancient Sanskrit Literature (1859) ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ.– 'ಮಹಾಭಾರತವು ಒಬ್ಬ ಕವಿಯ ಗ್ರಂಥವೆನಿಸುವುದು ಸರ್ವಥಾ ಅಸಂಭವ. ಇದರ ಸಂಗ್ರಾಹಕನು ಮನುಪ್ರೋಕ್ತಧರ್ಮದ ಅನುಯಾಯಿಯಾದ ಬ್ರಾಹ್ಮ ಣನೇ ಆಗಿದ್ದಿರಬೇಕು. ಪರಂತು, ಇವನೆಷ್ಟು ಕೈಯಾಡಿಸಿದರೂ ಪಾಂಡವರ ಪೂರ್ವಚರಿತ್ರೆಯನ್ನು ಪೂರ್ತಿ ಬೈತಿಡಲಾಗಲಿಲ್ಲ. ಬಾಲ್ಯದಿಂದಲೇ ಬ್ರಾಹ್ಮ ಣರ ಸಂಪರ್ಕ, ಶಿಕ್ಷಣಗಳಿತ್ತಿನ್ನುವ ಪಾಂಡವರು ಐವರೂ ಒಬ್ಬಳನ್ನು ಲಗ್ನ ವಾಗುತ್ತಾರೆ. ಎಷ್ಟೆಷ್ಟು ಬಣ್ಣ ಬಳಿದರೂ ಈ ಸಂಗತಿಯನ್ನು ಮುಚ್ಚಿಡ ಲಾಗಿಲ್ಲ.

ಡೆನ್ಮಾರ್ಕಿನ ಡಾ|| ಸೋರೆನ್‌ಸೆನ್ ಅವರು 1904 ರಲ್ಲಿ ಬಹಳ ಉಪಯುಕ್ತವಾದ 'Index to the names of the Mahābharata ' ಎಂಬ ಸೂಚಿಯನ್ನು ಪ್ರಕಟಿಸಿದ್ದಲ್ಲದೆ 'ಭಾರತೀಯ ಸಂಸ್ಕೃತಿ ಯಲ್ಲಿ ಮಹಾಭಾರತದ ಸ್ಥಾನ' ವೆಂಬ ಪ್ರೌಢನಿಬಂಧವನ್ನೂ ರಚಿಸಿದ್ದರು.

ಅವರು 'ಮಹಾಭಾರತದ ಮೂಲ ಪ್ರಾಚೀನ ಪೌರಾಣಿಕ ಗಾಥೆಗಳೇ ಇರ ಬೇಕು. ಆದರೆ ಅದು ಒಂದು ಗ್ರಂಥವಾದ್ದರಿಂದ ಒಬ್ಬ ಕವಿಯ ಕೈವಾಡವೂ ಇದ್ದಿರಲೇಬೇಕು. ಪರಸ್ಪರ ವಿರುದ್ಧ ಘಟನೆಗಳು, ಪುನರುಕ್ತಿಗಳು, ಅಪ್ರಾ ಸಂಗಿಕ ವಸ್ತುಗಳು ಬರಕೂಡದು; ಬಂದರೆ ಪ್ರಕ್ಷಿಪ್ತವೆಂದರಿಯಬೇಕು. ಈ ವರೆಗಲ್ಲಿನಿಂದ ನೋಡಿದರೆ 8000 ಕ್ಕಿಂತ ಹೆಚ್ಚು ಮೂಲಶ್ಲೋಕಗಳು ಸಿಕ್ಕುವುದಿಲ್ಲ,' ಎಂದಿದ್ದಾರೆ.

ಜಿ. ಬ್ಯೂಲೆರ್ (Buhler) ಅವರು ತಮ್ಮ 'ಮಹಾಭಾರತದ ಇತಿ ಹಾಸ' ದಲ್ಲಿ ಮಹಾಭಾರತವು ವಸ್ತುತಃ ಇತಿಹಾಸವೂ ಅಲ್ಲ, ಪುರಾಣವೂ ಅಲ್ಲ, ಅದು ಸ್ಮೃತಿ ಅಥವಾ ಧರ್ಮಶಾಸ್ತ್ರವೆಂದು ಸಮರ್ಥಿಸಿದ್ದಾರೆ. ಇವರ ಶಿಷ್ಯ ಜೋಸೆಫ್ ಡಾಲ್‌ಮಾನ್ ಅವರು ಈ ಅಭಿಪ್ರಾಯವನ್ನು ಪುಷ್ಟೀ ಕರಿಸಲು ಸ್ವತಂತ್ರ ಕೃತಿಗಳನ್ನು ರಚಿಸಿದ್ದಾರೆ. 1895, 1899, ಈ ವರ್ಷ ಗಳಲ್ಲಿ ಬರ್ಲಿನಿನಿಂದ ಅವು ಪ್ರಕಟವಾಗಿವೆ ಇದರಲ್ಲಿ ಮೊದಲನೆಯದು. Das Mahābhārata als Epos und Rechtsbuch, ಎರಡನೆಯದಾದ Genesis des Māhabhārata ಎಂಬ ಪುಸ್ತಕ ದಲ್ಲಿ ಅವರು ಅನೇಕ ತಲೆಮಾರುಗಳ ವರೆಗೂ ಕ್ರಮಕ್ರಮವಾಗಿ ವಿಕಾಸ ಗೊಳ್ಳುತ್ತಾ ಕಾಲಕಾಲಕ್ಕೆ ಬೇರೆ ಬೇರೆ ಆಖ್ಯಾನಗಳನ್ನೊಳಗೊಳ್ಳುತ್ತ ಬೆಳೆದ ಮಹಾಕಾವ್ಯವೇ ಮಹಾಭಾರತವೆಂಬ ವಾದವನ್ನು ನಿಸ್ಸಾರವೆಂದು ನಿರ್ಣಯಿಸಲು ಯತ್ನಿಸಿದ್ದಾರೆ. ವಸ್ತುತಃ ಒಂದೇ ಸಮಯದಲ್ಲಿ ಒಂದು ಸಂಪಾದಕ ಮಂಡಲಿಯಿಂದ ಈ ಕೆಲಸವಾಗಿದೆಯೆಂದು ಅವರ ಅಭಿಮತ. ಎಲ್ಲ ಆಖ್ಯಾನಗಳನ್ನೂ ಪೋಣಿಸುವ ಒಂದು ಏಕಸೂತ್ರತೆಯುಂಟೆಂಬುದು ಇವರ ಸಿದ್ಧಾಂತ. "ವಾಸ್ತವಿಕವಾಗಿ ನೋಡಿದರೆ ಯುದ್ಧವು ಕೇವಲ ಕವಿಕಲ್ಪಿತ, ಅದು ನಿಜವಾಗಿ ನಡೆದಿದ್ದರೆ ಏನಾದರೂ ಐತಿಹಾಸಿಕ ಪ್ರಮಾಣ ಗಳು ಉಳಿದಿರುತ್ತಿದ್ದುವು. ಇದರಲ್ಲಿ ತೋರಿಸಿರುವ ಯುದ್ಧ, ಧರ್ಮ ಮತ್ತು ಅಧರ್ಮಗಳಿಗೆ ಎಂದೆಂದೂ ನಡೆಯುವ ಯುದ್ಧ. ಆದ್ದರಿಂದ ಪಾಂಡವಾದಿ ಗಳು ಧರ್ಮವನ್ನೂ ಕೌರವರು ಅಧರ್ಮವನ್ನೂ ಪ್ರತಿನಿಧೀಕರಿಸುವ ಸಂಕೇತ ಗಳೆಂದು ತಿಳಿಯಬೇಕು; ಐತಿಹಾಸಿಕ ವ್ಯಕ್ತಿಗಳೆಂದಲ್ಲ. ಮೊದಲು ಎರಡು ಬಗೆಯ ಸಾಹಿತ್ಯಗಳಿದ್ದಿರಬಹುದು—(1) ರಾಜವಂಶದ ಪ್ರಶಸ್ತಿಗಾಥೆಗಳು

(2) ಧರ್ಮೋಪದೇಶ ಪರ ಕವಿತೆಗಳು. ಧರ್ಮಪ್ರಚಾರದ ದೃಷ್ಟಿಯಿಂದ ಒಂದು ಕವಿಮಂಡಲಿಯು ಇವೆರಡನ್ನೂ ಕೂಡಿಸಿ ಒಂದು ಗ್ರಂಥದ ರೂಪಕ್ಕೆ ತಂದಿರಬೇಕು. ಪೌರಾಣಿಕ ಅಂಶದಲ್ಲಿ ಕೌರವರ ಪತನ, ಪಾಂಚಾಲರ ಉತ್ಥಾನವೆಂಬ ಪ್ರಾಚೀನ ಆಖ್ಯಾನವನ್ನು ಕೇಂದ್ರೀಕರಿಸಿ ಧಾರ್ಮಿಕ ಉಪದೇಶಗಳ ಸಲುವಾಗಿ ಅನೇಕಾನೇಕ ಉಪಾಖ್ಯಾನಗಳನ್ನು ಸುತ್ತಲೂ ನೆಯ್ದಿದೆ. ಧರ್ಮೋಪದೇಶಕ್ಕೆ ಪಂಚವಲ್ಲಭೆಯಾದ ಪಾಂಚಾಲಿಯಿಂದ ತೊಂದರೆ ಬರುತ್ತದೆ. ಆದರೆ ಲುಡ್‌ವಿಗ್ ಹೇಳಿದಂತೆ ಇದು ಋತುಪರಿವರ್ತನಗಳ ರೂಪಕವಾಗಬಹುದು, ಅಥವಾ ಸಂಪತ್ತಿನ ಹಂಚಿಕೆಯ ಒಂದು ಪ್ರತೀಕವಿರಬಹುದು, ಎಂದು ಅವರು ಬರೆದಿದ್ದಾರೆ. ಫ್ರೆಂಚ್ ವಿದ್ವಾಂಸರಾದ ಎ. ಬಾರ್ತ್ ಅವರೂ ಸಿಲ್ವೇನ್ ಲೇವಿ ಅವರೂ ಇದೇ ಬಗೆಯ ಅಭಿಪ್ರಾಯಗಳನ್ನೇ ಅನುಮೋದಿಸಿದ್ದಾರೆ. (ನೋಡಿ–Bhandarkar Commemoration Volume).

ಎಂ. ವಿಂಟರ್‌ನಿಟ್ಸ್ ಅವರು ೧೯೦೭ ರಲ್ಲಿ ತಮ್ಮ ಭಾರತೀಯ ಸಾಹಿತ್ಯದ ಇತಿಹಾಸವನ್ನು ಜರ್ಮನ್‌ನಲ್ಲಿ ಬರೆದರು. ಅದರ ಇಂಗ್ಲಿಷ್ ಅನುವಾದವನ್ನು ೧೯೨೭ ರಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯ ಅಚ್ಚುಮಾಡಿದೆ. ಇದು ಎಲ್ಲಕ್ಕಿಂತಲೂ ಹೆಚ್ಚಿನ ಪ್ರಮಾಣಗ್ರಂಥವೆಂದು ತಿಳಿಯಲಾಗುತ್ತದೆ. ಅವರ ವಿಚಾರಸರಣಿಯಿದು —“ಭಾರತ ಯುದ್ಧದ ಐತಿಹಾಸಿಕ ಮೂಲವನ್ನು ಸಂಭವತಃ ಒಪ್ಪಬೇಕಾಗಬಹುದು. ಆದರೆ ಒಂದು ಸಾಧಾರಣ ಘಟನೆಯನ್ನು ತೆಗೆದುಕೊಂಡು ಅದರ ಸುತ್ತಲೂ ವಿಭಿನ್ನ ವಿಷಯಗಳ ಒಂದು ದೊಡ್ಡ ಕೋಟೆಯನ್ನೇ ಕಟ್ಟಲಾಗಿದೆ. ಭಾರತದ ಪ್ರಾಚೀನ ಸಾಹಿತ್ಯದ ನಿರ್ಮಾಣವು ಹೆಚ್ಚಾಗಿ ಬ್ರಾಹ್ಮಣರ ಕೈಯಲ್ಲಿಯೇ ಇದ್ದಿತು. ಅಥರ್ವವೇದದ ಪ್ರಾಚೀನ ಜನಜನಿತ ಮಂತ್ರಗಳ ಮೂಲಸ್ವರೂಪವೇ ತಿಳಿಯಲಾಗದ ಮಟ್ಟಿಗೆ ಅವರು ತಮ್ಮ ಉಪದೇಶಗಳನ್ನು ಅದರಲ್ಲಿ ಸೇರಿಸಿಬಿಟ್ಟಿದ್ದಾರೆ; ಯಜ್ಞಕರ್ಮಕ್ಕೆ ವಿರುದ್ಧವಾದ ಉಪನಿಷತ್ ತತ್ವಗಳನ್ನೂ ಕೂಡ ಸೇರಿಸಿರುವುದನ್ನು ನೋಡಿದ್ದೇವೆ. ವೀರಗಾಥೆಗಳ ಪ್ರಾಶಸ್ತ್ಯ ಹೆಚ್ಚುತ್ತ ಬಂದಂತೆಲ್ಲ ಬ್ರಾಹ್ಮಣರು ಅದನ್ನೂ ತಮ್ಮದನ್ನಾಗಿ ಮಾಡಿಕೊಳ್ಳಲು ಮುಂದಾದರು. ಇದರ ಫಲವಾಗಿ ದೇವತೆಗಳ ಕಥೆಗಳ, ಬ್ರಾಹ್ಮಣ ಸಂಪ್ರದಾಯದ ಉಪದೇಶಗಳ, ನೀತಿ, ಧರ್ಮ, ಶಾಸ್ತ್ರಗಳ, ಎಲ್ಲವುಗಳ

ಸಮಾವೇಶವೂ ಮಹಾಭಾರತದಲ್ಲಿ ಉಂಟಾಯಿತು. ಸಮಾಜದ ಮೇಲೆ ತಮ್ಮ ಪ್ರಭಾವವನ್ನು ದೃಢವಾಗಿಸಲು ಬ್ರಾಹ್ಮಣರು ಪ್ರಾಚೀನ ಲೋಕ ಪ್ರಿಯ ಗಾಥೆಗಳನ್ನು ಸ್ವಾಗತಿಸಿದರು. ಅವುಗಳಲ್ಲಿ ಋಷಿ—ಮಹರ್ಷಿಗಳ ಅದ್ಭುತ ಪವಾಡಗಳನ್ನೂ ಮನುಷ್ಯರಿರಲಿ, ದೇವಾದಿಗಳನ್ನೂ ಅಂಜಿಸುವ ಶಾಪ ಪ್ರಭಾವಾದಿಗಳನ್ನೂ, ತಪೋಮಹಿಮೆಯನ್ನೂ ತೋರಿಸುವ ನೂರಾರು ಕಥೆಗಳನ್ನೂ ತುಂಬಿದರು. 'ಕರ್ತುಮಕರ್ತುಮನ್ಯಥಾ ಕರ್ತುಂ' ಸಾಮರ್ಥ್ಯ ವಿದೆ ಆ ಋಷಿಗಳಿಗೆ ಆದರೆ ಈ ಕೈವಾಡವು ಯಾಜ್ಞಿಕ ವಿಪ್ರರದಲ್ಲ, ವೇದ ಜ್ಞಾನಕಡಿಮೆಯಾದ ಪುರೋಹಿತ ಜನರದು. ಇವರು ರಾಜಾಸ್ಥಾನಗಳಲ್ಲಿ ನೆಲಸಿದ್ದರು. ವೀರ--ಗಾಥೆಗಳು ಸೂತರಿಂದ ಹಾಡಲ್ಪಟ್ಟಾಗ ಇವರಿಗೆ ಕೇಳುವ ಅವಕಾಶವೂ ಇರುತ್ತಿತ್ತು. ಇವರನ್ನು ಮುಂದಿನ ಕ್ಷೇತ್ರ ದೇವಾಲಯ ಗಳ ಪೂಜಾರಿಗಳೊಡನೆ ಹೋಲಿಸಬಹುದಾಗಿದೆ. ಸ್ಥಲ ಪುರಾಣಗಳನ್ನು ಬರೆದು ಬರೆದು ಪುರಾಣಗಳಲ್ಲಿ ಸೇರಿಸಿಕೊಂಡಂತೆ ಈ ಜನರೇ ಶಿವ, ವಿಷ್ಣು ಮುಂತಾದ ದೇವತೆಗಳನ್ನು ಕುರಿತ ಕಥೆಗಳನ್ನು ಮಹಾಭಾರತದಲ್ಲಿಯೂ ತಂದು ತುಂಬಿದರು. ವಿಷ್ಣುವಿನ ಉಪಾಸನೆ ಪ್ರಚಲಿತವಿದ್ದ ಪ್ರದೇಶ ದಲ್ಲಿಯೇ ಈ ಗಾಥೆಗಳ ಪ್ರಚಾರವೂ ಹೆಚ್ಚಾಗಿತ್ತೆಂದು ಕಾಣುತ್ತದೆ. ಆದ್ದರಿಂದಲೇ ಮಹಾಭಾರತದಲ್ಲಿ ಮುಖ್ಯ ಅವತಾರದ ಸ್ಥಾನ ಕೃಷ್ಣನಿಗೆ ಸಿಕ್ಕಿದೆ. ಮುಂದೆ ಶೈವ ಪ್ರದೇಶಗಳಲ್ಲಿಯೂ ಪ್ರಚಾರ ಬಂದಾಗ ಶಿವಾಖ್ಯಾನ ಗಳನ್ನು ಜೋಡಿಸಕೊಳ್ಳಲಾಯಿತು. ಈ ಪೂಜಾರಿ ಬ್ರಾಹ್ಮಣರಲ್ಲದೆ ಪ್ರಾಚೀನ ಕಾಲದ ಕಾವ್ಯ ರಚನೆಯಲ್ಲಿ ಭಾಗವಹಿಸುತ್ತಿದ್ದ ಜನರೆಂದರೆ ಸನ್ಯಾಸಿಗಳು. ಸಂಸಾರವನ್ನು ಮಿಥ್ಯೆಯೆಂದು ವೈರಾಗ್ಯೋಪದೇಶ ಮಾಡು ತ್ತಿದ್ದ ಈ ಜನಗಳ ಒಂದು ದೊಡ್ಡ ಸಾಹಿತ್ಯವೇ ಇದ್ದಿತು. ಈ ಸಾಹಿತ್ಯದಲ್ಲಿ ದೃಷ್ಟಾಂತರೂಪವಾಗಿ ಪಶು–ಪಕ್ಷಿಗಳ, ದೇವ–ದಾನವರ, ಭೂತ–ಪ್ರೇತಗಳ ಅನೇಕಾನೇಕ ಕತೆಗಳಿದ್ದುವು. ಈ ಸಂನ್ಯಾಸಿ—ಸಾಹಿತ್ಯದ ಬಹುಭಾಗವೂ ಮಹಾಭಾರತದಲ್ಲಿ ಸೇರಿಹೋಗಿದೆ . . . . ಶ್ರದ್ಧಾಳುವಾದ ಹಿಂದುವೆಂಬ ದೃಷ್ಟಿಯಿಲ್ಲದೆ, ಸಾಹಿತ್ಯಾಲೋಚಕ ಇಲ್ಲವೆ ಇತಿಹಾಸಕಾರನ ದೃಷ್ಟಿಯಿಂದ ಮಾತ್ರ ನೋಡುವ ನಮಗೆ ಮಹಾಭಾರತವು ಎಂದೂ ಕಲೆಯ ಕೃತಿಯೆನಿಸ ಲಾರದು. ಇಷ್ಟು ಮಾತ್ರ ನಿಶ್ಚಯ ; ಯಾವ ಒಬ್ಬ ವ್ಯಕ್ತಿಯೂ ಅದನ್ನು

ರಚಿಸಿರಲಾರ; ಆ ಸಂಗ್ರಹಕಾರನಾದರೂ ಚತುರನಲ್ಲ. ನಿಜವಾಗಿಯೂ ಮಹಾಭಾರತವು ಒಂದು ಸಾಹಿತ್ಯಭೂತ. ಈ ಕಾವ್ಯದ ಅರಣ್ಯದಲ್ಲಿ ಈಗೀಗ ವಿದ್ವಾಂಸರು ದಾರಿ ಬಿಡಿಸುತ್ತಿದ್ದಾರೆ, ಇನ್ನೂ-ಹುಲ್ಲುಪೊದರುಗಳಿಂದ ಮುಚ್ಚಿಹೋಗಿರುವ ಸ್ವಚ್ಛಕಾವ್ಯದಮೊಳಕೆಗಳೂ ಅಲ್ಲಲ್ಲಿ ಕಾಣುವುದುಂಟು ಈ ಅಕಟವಿಕಟವಾದ ರಾಶಿಯಲ್ಲಿ ಒಮ್ಮೊಮ್ಮೆ ಅಮರ ಕಾವ್ಯಕಲೆಯ ಹಾಗು ಪ್ರಜ್ಞಾಸಾರದ ಸುಂದರ ಕುಸುಮಗಳೂ ಹೊಳೆಯುವುದುಂಟು."

ಇಂಗ್ಲಿಷ್ ವಿದ್ವಾಂಸರಲ್ಲಿ ಪ್ರಸಿದ್ಧರಾದ ಮೊನಿಯರ್ ವಿಲಿಯಮ್ಸ್ ಅವರು ೧೮೭೫ ರಲ್ಲಿ ಪ್ರಕಟವಾದ ತಮ್ಮ Indian Wisdom ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ —'ಬ್ರಾಹ್ಮಣ ಸಂಪ್ರದಾಯದ ಮುಖ್ಯ ಕೇಂದ್ರ ಅಯೋಧ್ಯೆಯಾಗಿತ್ತು, ಅದೇ ರಾಮಾಯಣದ ಕಾರ್ಯಕ್ಷೇತ್ರ. ಅಲ್ಲಿಂದ ಮುಂದೆ ಹೋದರೆ ಕುರು ಪಾಂಚಾಲ ದೇಶದಲ್ಲಿ ಈ ಸಂಪ್ರದಾಯದ ಪ್ರಭಾವ ಅಧಿಕವಾಗಿರಲಿಲ್ಲ. ಅದರಿಂದಲೇ ಮಹಾಭಾರತದಲ್ಲಿ ಬೌದ್ಧರ ನಾಸ್ತಿಕವಾದದ ಗಂಧವಿದೆ. ಅದರಲ್ಲಿ ವರ್ಣಿತವಾಗಿರುವ ಸಮಾಜ ರಾಮಾಯಣದ ಸಮಾಜಕ್ಕಿಂತ ಸಭ್ಯತೆಯಲ್ಲಿ ಹೀನ. ಆದರೆ ಅದರ ಧರ್ಮ ವ್ಯವಸ್ಥೆಯು ರಾಮಾಯಣದ್ದಕ್ಕಿಂತಲೂ ಅಧಿಕ ಲೋಕಪ್ರಿಯ ಹಾಗೂ ವ್ಯಾಪಕ. ಇಲ್ಲಿ ವಿಷ್ಣುವೇ ಕೃಷ್ಣ, ಅಲ್ಲಿ ರಾಮಚಂದ್ರ ಹೇಗೋ ಹಾಗೆ. ಆದರೆ ರಾಮಾಯಣದಲ್ಲಿ ರಾಮ ನಾಯಕ, ಮಹಾಭಾರತದಲ್ಲಿ ಕೃಷ್ಣ ನಾಯಕನಲ್ಲ. ಕೃಷ್ಣನ ದೇವತ್ವದ ಬಗೆಗೂ ಕೆಲವು ಪಾತ್ರಗಳಿಗೆ ಸಂದೇಹವೇ ಉಂಟು. ಪಾಂಡವರಲ್ಲಿಯೂ ಒಮ್ಮೊಮ್ಮೆ ಒಬ್ಬೊಬ್ಬರಿಗೆ ಪ್ರಾಧಾನ್ಯ ಬರುತ್ತದೆ. ಹೇಗೋ ಶಿವನೂ ಸಂದಿಯಿಂದ ನುಗ್ಗಿ ಬಂದಿದ್ದಾನೆ ಒಮ್ಮೆ ಕೃಷ್ಣ ಶಿವನನ್ನು ಪೂಜಿಸಿದರೆ ಇನ್ನೊಮ್ಮೆ ಶಿವ ಕೃಷ್ಣನನ್ನು ಪೂಜಿಸುತ್ತಾನೆ ಇವೆಲ್ಲವೂ ಪರಸ್ಪರ ವಿರುದ್ಧ ವಿದ್ಯಮಾನಗಳು. ಮಹಾಭಾರತದಲ್ಲಿ ಸಿಕ್ಕುವುದು ಇಂದಿನ ಹಿಂದೂಧರ್ಮದ ಚಿತ್ರ—ದ್ವೈತ ಅದ್ವೈತ, ಅಧ್ಯಾತ್ಮವಾದ—ಭೌತಿಕ ವಾದ! ನಿಯಮಗಳ ಕಾಠಿನ್ಯ—ಶೈಥಿಲ್ಯ; ಪುರೋಹಿತರ ಪ್ರಶಂಸೆ--ನಿಂದೆ; ವರ್ಣಭೇದಗಳ ಅಸಮಾನತೆ—ಉದಾರ ಸಹಿಷ್ಣುತೆ; ಭಕ್ತಿವಾದ--ಬುದ್ಧಿವಾದ --ಎಲ್ಲವುಗಳ ವಿಚಿತ್ರ ಸಮ್ಮಿಶ್ರಣ ಗ್ರೀಸಿನ ಮಹಾಕವಿ ಹೋಮರನ ಇಲಿಯಡ್, ಒಡೆಸ್ಸಿ ಎರಡನ್ನೂ ಕೂಡಿಸಿದ್ದಕ್ಕಿಂತ ಎಂಟರಷ್ಟು ದೊಡ್ಡದು.

ಮಹಾಭಾರತ. ಆದರೆ ಕಲೆಯ ದೃಷ್ಟಿಯಿಂದ ಎರಡಕ್ಕೂ ಹೋಲಿಸು ವಂತೆಯೇ ಇಲ್ಲ--ಹತ್ತು ತಲೆ ಇಪ್ಪತ್ತು ಕೈಗಳ ಗೊಂಬೆಗೂ ಸುಂದರ ಗ್ರೀಕ್ ಶಿಲಾ ಪ್ರತಿಮೆಗೂ ಹೇಗೆ ಹೋಲಿಕೆಯಿಲ್ಲವೋ ಹಾಗೆ.

೧೮೯೯ ರಲ್ಲಿ ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ಬರೆದ ಮೆಕ್ಡಾನಲ್ ಅವರು ಮಹಾಭಾರತವು ಧರ್ಮಶಾಸ್ತ್ರವೆಂದು ಡಾಲ್‌ಮಾನರ ಮತವನ್ನೇ ಉಲ್ಲೇಖಿಸಿದ್ದಾರೆ.

ಅಮೇರಿಕಾದ ಯೇಲ್ ವಿಶ್ವವಿದ್ಯಾಲಯದ ಇ. ಡಬ್ಲ್ಯು. ಹಾಪ್ಕಿನ್ಸ್ ಅವರು ೧೯೦೧ ರಲ್ಲಿ The Great Epics of India ಎಂಬ ಗ್ರಂಥವನ್ನು ಬರೆದು ಪ್ರಖ್ಯಾತಿಯನ್ನು ಪಡೆದರು. ಅವರು ಮಹಾಭಾರತದ ವಿಷಯಗಳಮೇಲೆ ಬಹಳ ಸೂಕ್ಷ್ಮ ವಿಶ್ಲೇಷಣೆ ಮಾಡಿದ್ದಾರೆ. ಅವರ ನಿರ್ಣಯವಾದರೂ ಇಷ್ಟೆ :—"ಪ್ರಾಚೀನ ಗಾಥೆಗಳೊಳಗೆ ಲೆಕ್ಕವಿಲ್ಲದಷ್ಟು ಉಪಾಖ್ಯಾನಗಳನ್ನೂ ಧರ್ಮೋಪದೇಶಗಳನ್ನೂ ಜೋಡಿಸಿ ಭಾರತವನ್ನು ಮಹಾಭಾರತ ಮಾಡಿದೆ. ಪ್ರಾಚೀನಗಾಥೆಗಳು ಕುರು ಪಾಂಚಾಲ ವಂಶಗಳಿಗೆ ಸಂಬಂಧಪಟ್ಟವುಗಳು. ಪಾಂಡವ ಗಾಥೆಗಳು ಹಳೆಯವಾದರೂ ಅವಕ್ಕಿಂತ ಈಚಿನವು. ಮಹಾಭಾರತದಲ್ಲಿ ಎರಡನ್ನೂ ಕೂಡಿಸಲು ಯತ್ನಿಸಿದೆ ಭಾರತೀಯ ವಿದ್ವಾಂಸರಲ್ಲಿ ಪ್ರಮುಖರಾದ ಚಿಂತಾಮಣಿರಾವ ವೈದ್ಯರೂ The Mahā Bhartha criticsm ಅಂತರ ಪ್ರಮಾಣಗಳಿಂದಲೇ ಮಹಾಭಾರತದ ಉತ್ಪತ್ತಿ, ಬೆಳೆವಣಿಗೆಗಳು ಸಿದ್ಧವಾಗುವುದನ್ನು ತೋರಿಸಿದ್ದಾರೆ. ಅದರ ಆರಂಭವು ಮೂರು ವಿಧವಾಗಿ ಪರಿಗಣಿತವಾಗುತ್ತಿದ್ದ ಅಂಶವು ಆದಿಪರ್ವದಲ್ಲೇ ಉಕ್ತವಾಗಿದೆ:—

**ಮನ್ವಾದಿ ಭಾರತಂ ಕೇಚಿತ್ ಆಸ್ತಿಕಾದಿ ತಥಾಪರೇ ।**
**ತಥೋಪರಿ ಚರಾದ್ಯನ್ಯೇ ವಿಪ್ರಾಃ ಸಮ್ಯಗಧೀಯತೇ ॥**

(II.52)

'ತತೋ ಜಯಮುದೀರಯೇತ್' ಎಂಬ ಮಂಗಳದ ಭಾಗವೂ 'ಜಯೋ ನಾಮ ಇತಿಹಾಸೋಽಯಮ್ (ಸ್ವರ್ಗಾರೋಹಣಪರ್ವ) ಎಂಬ ಉಕ್ತಿಯೂ ಇದಕ್ಕೆ "ಜಯ" ವೆಂಬ ಹೆಸರು ಮೊದಲಿದ್ದುದನ್ನು ಸೂಚಿಸುತ್ತವೆ. ಇದರ ವಿಸ್ತಾರವನ್ನು ಒಂದು ಕಡೆ 24000 ಶ್ಲೋಕಗಳೆಂದರೆ

ಇನ್ನೊಂದು ಕಡೆ ಸೌತಿಯು ಹೇಳುವುದು ಒಂದು ಶತ ಸಹಸ್ರವೆಂದೂ ಬರೆದಿದೆ:

**ಉಪಾಖ್ಯಾನೈಃ ಸಹ ಜ್ಞೇಯಮಾದ್ಯಂ ಭಾರತ ಮುತ್ತಮಮ್ ।**
**ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಹಿತಾಮ್ ॥**
**ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ।**
(I.102–3)

**ಅಸ್ಮಿಂಸ್ತು ಮಾನುಷೇ ಲೋಕೇ ವೈಶಂಪಾಯಿನ ಉಕ್ತವಾನ್ ।**
**ಏಕಂ ಶತಸಹಸ್ರಂತು ಮಯೋಕ್ತಂ ವೈ ನಿಬೋಧತ ॥** (I.107)

ಅಲ್ಲದೆ ಪ್ರತಿಯೊಂದು ಪರ್ವಾಂತ್ಯದಲ್ಲಿಯೂ 'ಶತಸಾಹಸ್ರೀ ಸಂಹಿತೆ' ಎಂದು ಇದನ್ನು ಕರೆದಿರುವುದರಿಂದ ಇದು ಒಬ್ಬನ ಕಾವ್ಯವಲ್ಲ, ಆದರೆ ಸಂಕಲನ ವೆಂಬುದೇ ಸ್ಪಷ್ಟ. [ಈ ವಿಚಾರದಲ್ಲಿ ಹೆಚ್ಚಿನ ವಿವರಗಳಿಗೆ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳ 'ವಚನ ಭಾರತದ ಪೀಠಿಕೆ (ಪು–೨೩–೨೭)ಯನ್ನು ನೋಡ ಬಹುದು.[4]]

ಡಾ॥ ವಿ. ಎಸ್ ಸುಕರಣಕರ ಅವರು ಭಾರತವು ಮಹಾಭಾರತ ಹೇಗಾಯಿತೆಂಬ ವಿಷಯದಲ್ಲಿ ಕೂಲಂಕಷವಾದ ಸಂಶೋಧನೆ ನಡೆಸಿ ಇದಕ್ಕೆ ಭೃಗು ವಂಶೀಯರೇ ಕಾರಣವೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಉತ್ತಂಕ, ಶುಕ್ರ, ಶೌನಕ, ಮಾರ್ಕಂಡೇಯ, ಚ್ಯವನ, ಜಮದಗ್ನಿ ಮುಂತಾದ ಅನೇಕ

---

4 ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।
ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿ ವಾ ನ ವಾ ॥

ಎಂಬ ಪದ್ಯದ ಆಧಾರದ ಮೇಲೆ ಮೆಕ್ಡಾನೆಲ್ ಅವರು ಅತ್ಯಂತ ಮೂಲರೂಪದ 'ಜಯ'ವು ಕೇವಲ ೮೮೦೦ ಶ್ಲೋಕಗಳಿಂದ ಕೂಡಿತ್ತೆಂದು ಊಹಿಸಿದರು. ವಸ್ತುತಃ ಇದು 'ಕೂಟಶ್ಲೋಕ'ಗಳನ್ನು ಕುರಿತ ಸಂಖ್ಯೆಯೆಂಬುದನ್ನು ಇದರ ಉತ್ತರಾರ್ಧದಿಂದಲೂ ಮುಂದಿನ ಶ್ಲೋಕಾರಂಭವಾದ 'ತತ್ ಶ್ಲೋಕಕೂಟ ಮದ್ಯಾಪಿ ಗ್ರಥಿತಂ ಸುದೃಢಂ ಮುನೇ' ಎಂಬುದರಿಂದಲೂ ಸ್ಪಷ್ಟ ಮೆಕ್ಡಾನೆಲರ ಊಹೆ ಭ್ರಮಾನ್ವಿತವೆಂದು ಸಿ. ವಿ. ವೈದ್ಯರು ತಿಳಿಯುತ್ತಾರೆ. ವಿದ್ವದ್ವರ್ಯರ ಅಭಿಪ್ರಾಯಗಳ ಸಂಗ್ರಹಕ್ಕೆ A. D. Pusalkar ಅವರ 'Studies in Epics and Puranas of India' ಎಂಬ ಪುಸ್ತಕವನ್ನು ನೋಡಬಹುದು.

ಉಪಾಖ್ಯಾನಗಳ ನಾಯಕರೆಲ್ಲ ಭೃಗು ವಂಶದವರೇ. ಅಲ್ಲದೆ ಈ ಕಥೆಗಳು ಮೇಲಿಂದ ಮೇಲೆ ಮತ್ತೆ ಮತ್ತೆ ಬರುತ್ತವೆ. ಪರಶುರಾಮನನ್ನು ದಶಾವತಾರ ಗಳಲ್ಲಿ ಸೇರಿಸಿದ ಕೆಲಸವು 'ಭಾರ್ಗವ'ರಿಂದಲೇ ಮೊತ್ತಮೊದಲು ಮಹಾ ಭಾರತದ ಮೂಲಕ ನಡೆಯಿತೆಂದೂ ಅವರು ಉಪಪಾದಿಸಿದ್ದಾರೆ. ಶಾಂತಿ, ಮತ್ತು 'ಅನುಶಾಸನ' ಪರ್ವಗಳಲ್ಲಿರುವ ಅನೇಕ ಧರ್ಮ-ಮತ್ತು ನೀತಿ ಬೋಧೆಗಳಿಗೂ ಅವರೇ ಕಾರಣರಿರಬಹುದೆಂದೂ ಊಹಿಸಿದ್ದಾರೆ. ಪೂರ್ವದ ಇತಿಹಾಸಕಾವ್ಯವನ್ನು ಒಂದು ಧರ್ಮಶಾಸ್ತ್ರದ ಆಕರವಾಗಿ ಮಾರ್ಪಡಿಸಿದ ಕಾರ್ಯ ಇವರದೇ ಇರಬೇಕೆಂಬ ಊಹೆಗೆ ಭೃಗು ವಂಶೀಯರು ಧರ್ಮ ಶಾಸ್ತ್ರ ಪಾರಂಗತರಾಗಿದ್ದುದ್ದೂ ಒಂದು ಆಧಾರ. (Epic Studies VI) ಭೃಗು-ಆಂಗಿರಸ ವಂಶದ ಪುರೋಹಿತರೇ ಅಥರ್ವವೇದದಲ್ಲಿ ಪ್ರಧಾನ ರಾಗಿರುವುದರಿಂದ, ಅಥರ್ವವೇದಾಂಗವಾದ ಧನುರ್ವಿದ್ಯೆಯಲ್ಲಿಯೂ, ಇವರೇ ನಿಷ್ಣಾತರಾಗಿದ್ದುದೂ, ಕ್ಷತ್ರಿಯರೊಡನೆ ಇವರ ಸಂಪರ್ಕ ಹೆಚ್ಚಾಗಿದ್ದುದೂ ವ್ಯಕ್ತವಾಗುತ್ತದೆ. ಇದನ್ನೆಲ್ಲ ಕೂಲಂಕಷವಾಗಿ ಡಾ|| ಎನ್. ಜೆ. ಷೆಂಡೆ ಅವರು ವಿಮರ್ಶಿಸಿ ಡಾ|| ಸುಕಠಣಕರರ ಸಿದ್ಧಾಂತಕ್ಕೆ ಪುಷ್ಟಿಯನ್ನೊದಗಿಸಿ ದ್ದಾರೆ. (The Authorship of the Mahābhārata, A. B O. R I. XXIV ಮತ್ತು Atharuan in the Vedic and Epic Literature, Bombay University Journal, vol VII-pt.2)

ಮೇಲಿನ ಸಂಗ್ರಹದಿಂದ ಇಷ್ಟು ಕಾಣುತ್ತದೆ: ಈ ವಿದ್ವಾಂಸರು ಯಾರು ಮಹಾಭಾರತದ ಕಾವ್ಯ ಗುಣವನ್ನು ಸಹಾನುಭೂತಿಯಿಂದ ಸಮೀಕ್ಷಿಸಲೆಂದಾಗಲಿ, ಭಾರತ ಜನತೆಯ ಪ್ರೀತಿವಸ್ತುವಾದ ಇದರ ಅಂತ ಸ್ಸತ್ವವನ್ನು ಪ್ರಕಟಿಸಲೆಂದಾಗಲಿ ಧರ್ಮಶ್ರದ್ಧೆಗೆ ಪ್ರೇರಕವಾದ ಇದರ ಚೈತನ್ಯವನ್ನು ವಿವರಿಸಲೆಂದಾಗಲಿ ಹೊರಟವರಲ್ಲ. ಇದನ್ನು ಬರೆದವರು ಯಾರು? ಎಂದು? ಅದರಲ್ಲಿ ವ್ಯಕ್ತವಾಗುವ ಸಂಸ್ಕೃತಿಯ ಸ್ವರೂ ಪವು ಕಲಸುಮೇಲೋಗರವೋ ಅಲ್ಲವೋ? ಇಷ್ಟನ್ನು ಮಾತ್ರ ಅತುಲ ವಾದ ತಾಳ್ಮೆಯಿಂದ ಕಂಡುಹಿಡಿಯಲು ಹೊರಟು ಯಾವ ನಿರ್ದಿಷ್ಟ ನಿರ್ಣಯಗಳನ್ನೂ ಮುಟ್ಟದೆ ಸಾವಿರಾರು ಪುಟಗಳ ನೀರಸ ಚರ್ಚೆಯನ್ನು

ಬೆಳೆಸಿದ್ದಾರೆ. ಏನಾದರೂ, ಇಂದು ಇಷ್ಟನ್ನು ಎಲ್ಲರೂ ಒಪ್ಪುವಂತಾಗಿದೆ:— ಮಹಾಭಾರತದಲ್ಲಿ ಮೂಲ ಕಾವ್ಯವಸ್ತುವಿನ ಸುತ್ತ ಲೆಕ್ಕವಿಲ್ಲದಷ್ಟು ಕಾವ್ಯೇತರ ವಸ್ತುಗಳು ಸೇರಿಯ್ದು ಕೊಂಡಿವೆ. ಭಿನ್ನ ಕಾಲದ ವಿಚಾರ ಪರಂಪರೆಗಳಂತೆ ಭಿನ್ನ ಸಂಪ್ರದಾಯಗಳ ವಿಚಾರಗಳೂ ಸೇರಿಕೊಂಡಿವೆ. ರಾಮಾಯಣದಂತೆ ಇಲ್ಲಿ ಮೂಲ ಮತ್ತು ಪ್ರಕ್ಷೇಪಗಳನ್ನು ಬೇರ್ಪಡಿಸುವ ಕೆಲಸ ಸಾಗುವಂತಿಲ್ಲ. (ಹರಿವಂಶವೊಂದು ಮಾತ್ರ ನಿಸ್ಸಂದೇಹವಾಗಿ ಮಹಾಭಾರತದ ಕಡೆಗೆ ಬರುವ ಪ್ರಕ್ಷೇಪ) ಇದು ಪ್ರಾಚೀನ ಭಾರತದ ವಿಶ್ವಕೋಶ (Encyclopadia) ಸಕಲ ವಿದ್ಯಾಸಾರ ಸಂಗ್ರಹ. ಚರಿತ್ರೆ, ಭೂಗೋಳ ಭಕ್ತಿ, ವೇದಾಂತ, ತತ್ತ್ವ, ನೀತಿ, ಸಮಾಜ ಶಾಸ್ತ್ರ, ವಿಜ್ಞಾನ, ರಾಜನೀತಿ ಧರ್ಮ, ಕಥೆ, ಇತ್ಯಾದಿಯಾಗಿ ಅದರಲ್ಲಿ ಅಡಕವಾಗದ ವಿಷಯವೇ ಇಲ್ಲ.[5] ಶುದ್ಧ ಕಾವ್ಯದೃಷ್ಟಿಯಿಂದ ನೋಡಿದರೆ ಅದು ಒಂದು ಕಾವ್ಯವೆನ್ನುವುದಕ್ಕಿಂತ ಒಂದು ಕಾವ್ಯ ಮಂಜರಿಯೆನ್ನಬಹುದು. ಅದರಲ್ಲಿ ಬರುವ ಒಂದೊಂದು ಉಪಾಖ್ಯಾನವೂ ಒಂದೊಂದು ಸ್ವತಂತ್ರ ಕಾವ್ಯವೇ. ಚಮತ್ಕಾರದ ದೃಷ್ಟಿಯಿಂದ ಬಹಳ ಏರು ಪೇರುಗಳೂ ಅಸಮಾನತೆಗಳೂ ಕಾಣಬಹುದು. ಈಗಿರುವ ರೂಪದಲ್ಲಿ ಅದು ಮೂಲ ರಾಮಾಯಣಕ್ಕಿಂತ ಈಚಿನದು ; ಆದರೆ ಉಳಿದೆಲ್ಲ ಸಂಸ್ಕೃತ ಕಾವ್ಯಗಳಿಗಿಂತಲೂ, ಕಡೆಗೆ ರಾಮಾಯಣಕ್ಕಿಂತಲೂ, ಪ್ರಾಚೀನವಾದ ಎಷ್ಟೋ ಕಾವ್ಯ ಭಾಗಗಳು ಅದರ ಗರ್ಭದಲ್ಲಡಗಿವೆ. ಅಂತೆಯೇ ಅದರ ಇನ್ನು ಕೆಲವು ಭಾಗಗಳು ಕ್ರಿ. ಶ. 500 ರವರೆಗೂ ರಚಿತವಾಗಬಹುದು.

## ಪುಣೆಯ ಭಾಂಡಾರಕರ ಸಂಶೋಧನ ಸಂಸ್ಥೆಯ ಮಹಾಭಾರತ ಸಂಸ್ಕರಣ

ಮೇಲೆ ನೋಡಲಾದ ಪಾಶ್ಚಾತ್ಯ ವಿದ್ವಾಂಸರ ಮತಭೇದಗಳಿಗೆಲ್ಲ ಮುಖ್ಯ ಕಾರಣವೆಂದರೆ 'ಮಹಾಭಾರತ'ದ ಮೂಲ ಪಾಠದ ಬಗ್ಗೆ ಇದ್ದ ಅನಿಶ್ಚಿತತೆ. ಅಚ್ಚಾದ ಮಹಾಭಾರತಗಳಲ್ಲಿ ಮುಖ್ಯವಾಗಿ 'ಔತ್ತರೇಯ' 'ದಾಕ್ಷಿಣಾತ್ಯ' ಎಂಬ ಭಿನ್ನ ಪಾಠ ಕ್ರಮಗಳುಂಟು. ಅವುಗಳೊಂದೊಂದರಲ್ಲೂ ಮತ್ತೆ ಕಾಶ್ಮೀರಕ, ಬಂಗಾಲಿ, ನೇಪಾಲಿ, ದೇವನಾಗರಿ ಮತ್ತು

5. 'ವ್ಯಾಸೋಚ್ಛಿಷ್ಟಂ ಜಗತ್ಸರ್ವಮ್' ಎಂಬ ಹೇಳಿಕೆಯನ್ನು ಹೋಲಿಸಿ.

ತೆಲಗು, ಗ್ರಂಥ, ಮಲಯಾಳ ಮುಂತಾದ ಪಾಠ ಪ್ರಭೇದಗಳೂ ಉಂಟು. ದೇವಬೋಧ, ಅರ್ಜುನಮಿಶ್ರ, ನೀಲಕಂಠ ಮುಂತಾದ ವಿಭಿನ್ನ ವ್ಯಾಖ್ಯಾನಕಾರರ ಪಾಠಾಂತರಗಳೂ ಉಂಟು. ಉಪಲಬ್ಧವಿರುವ ಎಲ್ಲ ಬಗೆಯ ಹಸ್ತಪ್ರತಿಗಳನ್ನೂ ಒಂದು ಕಡೆ ಸಂಗ್ರಹಿಸಿ, ಒದೊಂದನ್ನೂ ವರ್ಗೀಕರಿಸಿ, ಪ್ರತಿ ಶ್ಲೋಕದ ಪ್ರತಿ ಶಬ್ದಪಾಠವನ್ನೂ ಹೋಲಿಸಿ ಪರೀಕ್ಷಿಸಿ, ಮೂಲ ಪಾಠವನ್ನು ಊಹಿಸಿ ನಿರ್ಣಯಿಸುವ ಕೆಲಸ ಎಷ್ಟು ಕಷ್ಟವಾದರೂ ಅತ್ಯಗತ್ಯವಾದುದೆಂಬುದನ್ನು ಪಾಶ್ಚಾತ್ಯ ವಿದ್ವಾಂಸರೇ ಮನಗಂಡು ಅದಕ್ಕಾಗಿ ಸ್ವಲ್ಪ ಧನ ಸಂಗ್ರಹವನ್ನೂ ಆ ದಿಕ್ಕಿನಲ್ಲಿ ಪ್ರಯತ್ನವನ್ನೂ ಈ ಶತಮಾನದ ಆರಂಭದಲ್ಲಿ ಮಾಡಿದ್ದರು. ಆದರೆ ಯುದ್ಧಾದಿಗಳಿಂದ ಅವರಿಗೆ ಅದನ್ನು ಸಾಧಿಸಲಾಗಲಿಲ್ಲ. ಆ ದೊಡ್ಡ ಹೊಣೆಯನ್ನು ಹೊತ್ತು ಮುಕ್ಕಾಲು ಮೂರು ವೀಸೆ ಕೆಲಸವನ್ನು ಆಗಲೇ ವಿಶ್ವ ಸಮರ್ಪಕವಾಗಿ ಮುಗಿಸಿರುವ ಶ್ರೇಯಸ್ಸು ಪುಣೆಯ ಭಾಂಡಾರಕರ ಸಂಶೋಧನ ಸಂಸ್ಥೆಯದು. ಪಾಶ್ಚಾತ್ಯ ಪೌರ್ವಾತ್ಯ ಸಂಶೋಧನಾ ಶಾಸ್ತ್ರ ಪರಿಣತರಾದ ಡಾ|| ವ್ಹಿ. ಎಸ್. ಸುಕಠಣಕರ ಅವರು ೧೯೨೫ ರಲ್ಲಿ ಈ ಕೆಲಸವನ್ನು ಉತ್ಸಾಹದಿಂದ ಆರಂಭಿಸಿ, ಆದಿ ಪರ್ವದ ಪ್ರಥಮ ಖಂಡವನ್ನು ೧೯೨೭ ರಲ್ಲಿ ವಿದ್ವದ್ವಿಖ್ಯಾತವಾದ ತಮ್ಮ ಪೀಠಿಕೆಯೊಂದಿಗೆ (Prolegomena) ಪ್ರಕಟಿಸಿದರು. ಮ್ಯಾಕ್ಸ್‌ಮುಲರ್ ಪ್ರಕಟಿಸಿದ ಋಗ್ವೇದಸಂಸ್ಕರಣವಾದಮೇಲೆ ಸಂಸ್ಕೃತ ಪರಿಶೋಧನೆಯಲ್ಲೇ ಇದೊಂದು ಅಷ್ಟೇ ಮಹತ್ತ್ವದ ಮೈಲಿಗಲ್ಲೆಂದು ಸಂಸ್ಕೃತ ವಿದ್ವಾಂಸರೆಲ್ಲರೂ ಕೊಂಡಾಡಿದರು. ಇವರು ತಮ್ಮ ಪರಿಷ್ಕರಣದ ಸೂತ್ರಗಳನ್ನು ಪೀಠಿಕೆಯಲ್ಲಿ ಹೀಗೆ ನಿರ್ದೇಶಿಸಿದ್ದಾರೆ.—

೧. ಕಾಶ್ಮೀರಕ ಪಾಠಕ್ಕೂ ದೂರದ ದಾಕ್ಷಿಣಾತ್ಯ (ಮಲಯಾಳ) ಪಾಠಕ್ಕೂ ಸಂವಾದವಿದ್ದಲ್ಲಿ ಅದನ್ನು ಮೂಲವೆಂದು ತಿಳಿಯುವುದು.

೨. ಎರಡು ವರ್ಗದ ಪಾಠಗಳು ಮತ್ತೆರಡು ವರ್ಗದ ಪಾಠಗಳಿಗೆ ಭಿನ್ನವಾಗಿದ್ದಾಗ ಕಾಶ್ಮೀರ ಪಾಠಗಳನ್ನೇ ಮೂಲವೆಂದು ಭಾವಿಸುವುದು.

೩. ಭಾಷೆ, ಛಂದಸ್ಸುಗಳ ದೃಷ್ಟಿಯಿಂದ ಹತ್ತಾರು ಪಾಠಗಳ ನಡುವೆ ಯಾವುದು ಪ್ರಾಚೀನವೆಂದು ತೋರುವುದೋ ಅದನ್ನೇ ಮೂಲವೆಂದು ಹಿಡಿಯುವುದು.

೪. ಅರ್ಥಸೌಲಭ್ಯವುಳ್ಳ ಪಾಠಕ್ಕಿಂತ ಇಲ್ಲದಿರುವುದೇ ಪ್ರಾಚೀನ ತರವೆಂದು ಒಪ್ಪುವುದು.

೫. ವಿಸಂಧಿಯನ್ನೂ, ಅಪಾಣಿನೀಯ ರೂಪಗಳನ್ನೂ ತಿದ್ದದ ಪಾಠವನ್ನೇ ಮೂಲವೆಂದು ತೋರಿಸುವುದು.

೬. ಛಂದೋದೋಷಗಳನ್ನೂ ಹಾಗೆಯೇ ಇಟ್ಟುಕೊಳ್ಳುವುದು.

೭. ನೀಲಕಂಠನ ದೇವನಾಗರೀ ಪಾಠವನ್ನೇ ತುಲನಾತ್ಮಕ ಪರೀಕ್ಷಣೆಗೆ ಕೇಂದ್ರ (Vulgate) ವೆಂದು ತಿಳಿಯುವುದು ; ಮೇಲೆ ಹೇಳಿದ ಮಾರ್ಪಾಟುಗಳನ್ನು ಅದರಲ್ಲಿಯೇ ಮಾಡುವುದು.

೮. ಯಾವ ಸಮಯದಲ್ಲೂ ಪರೀಕ್ಷಿಸದೆ ಯಾವುದೇ ಹಸ್ತ ಪ್ರತಿಯ ಪಾಠವನ್ನೂ ಮೂಲವೆಂದು ಗ್ರಹಿಸದಿರುವುದು.

೯. ಸಂಶಯ ಗ್ರಸ್ತವಾದುವನ್ನೆಲ್ಲ ಸರಪಳಿ ರೇಖೆಯಿಂದ ( ಗುರುತಿಸುವುದು.

೧೦. ಪಾಠಾಂತರಗಳೆಲ್ಲವನ್ನೂ ಅಡಿ ಟಿಪ್ಪಣಿಗಳಲ್ಲ ಅಥವಾ ಕಡೆಯಲ್ಲಿ ಪೂರ್ಣವಾಗಿ ಕೊಡುವುದು.

೧೧. ಉಪಯೋಗಿಸಿದಷ್ಟೂ ಹಸ್ತ ಪ್ರತಿಗಳ ಪೂರ್ಣಪರಿಚಯವನ್ನು ಪೀಠಿಕೆಯಲ್ಲಿ ಕೊಡುವುದು.

ಈ ಪ್ರಕಾರವಾಗಿ ಪರಿಶೋಧಿಸಿ ಮುದ್ರಿಸಿದ ಪಾಠವೇ ವ್ಯಾಸನು ಬರೆದ ಮೂಲಪಾಠ, ಅಥವಾ ಅದಕ್ಕೆ ಅತ್ಯಂತಸಮೀಪವರ್ತಿಯಾದ ಪಾಠ, ಅಥವಾ ಪ್ರಕ್ಷೇಪರಹಿತವಾದ ಪಾಠ ಎನ್ನಲು ಬರುತ್ತದೆಯೇ ಎಂಬ ಪ್ರಶ್ನೆಯೇಳುವುದು ಸಹಜ. ಅದನ್ನು ಕುರಿತು ಸುಕಠಣಕರರ ಉತ್ತರವಿಷ್ಟೆ:— "ಮಹರ್ಷಿ ವ್ಯಾಸನೇ ಸಹಿ ಮಾಡಿ ಬರೆದ ಗ್ರಂಥದ ಪ್ರತಿಯಂತೂ ಈ ಪರಿಷ್ಕರಣದ ಪಾಠವಲ್ಲವೆಂಬುದು ಸಂಪಾದಕನಿಗೆ ದೃಢವಾಗಿ ನಿಶ್ಚಯವಾಗಿದೆ. 'ಆದಿ–ಮಹಾಭಾರತ' ಅಥವಾ 'ಆದಿ ಭಾರತ'ದ ಸಂಸ್ಕರಣವೇ ಇದಲ್ಲ. ಜನಮೇಜಯನಿಗೆ ಹೇಳತಾದ ಕಾವ್ಯದ ಪ್ರತಿರೂಪ ಮೊದಲೇ ಇದಲ್ಲ. ಸೂತ (ಅಥವಾ ಸೌತಿ) ಶೌನಕಾದಿಗಳಿಗೆ ನೈಮಿಷಾರಣ್ಯದಲ್ಲಿ ಹೇಳಿದನೆನ್ನುವ ಪಾಠವನ್ನು ಇದೆಷ್ಟರ ಮಟ್ಟಿಗೆ ಸಮೀಪಿಸುತ್ತದೆಂಬುದೂ ಅನಿಶ್ಚಿತ. ಇದು

ಉಪಲಬ್ಧವಿರುವ ಹಸ್ತ ಪ್ರತಿಗಳ ಸಾಮಗ್ರಿಯಿಂದ ಎಷ್ಟು ಪ್ರಾಚೀನವಾದ ಪಾಠವನ್ನು ಕಲ್ಪಿಸಲು ಶಕ್ಯವೋ, ಅಷ್ಟನ್ನು ಮಾತ್ರ ಮಾಡಿಕೊಡುವ ವಿನಮ್ರ ಯತ್ನ ಮಾತ್ರ. ಪ್ರಾಯಶಃ, ಇದು ಆ ಮಹಾಗ್ರಂಥದ ಶಕ್ಯ ಇಲ್ಲವೆ ವಿದ್ಯಮಾನ ಪಾಠಗಳಲ್ಲೆಲ್ಲ ಉತ್ತಮವಾದುದೆಂದಾಗಲಿ ಅಥವಾ ಸಮರ್ಪಕ ವಾದುದೆಂದಾಗಲಿ ಹೇಳುವಂತಿಲ್ಲ. ಆದರೆ ಹಸ್ತ ಪ್ರತಿಗಳು ಬೆಳೆದ ಇತಿಹಾಸದ ದೃಷ್ಟಿಯಿಂದ ಇದು ಎಲ್ಲಕ್ಕಿಂತಲೂ ಪ್ರಾಚೀನವೆನ್ನುವುದೂ ಇದು ಉಳಿದೆಲ್ಲ ಪಾಠಗಳ ಲಿಪಿದೋಷ ಮತ್ತು ಪ್ರಕ್ಷೇಪದೋಷಗಳಿಂದ ಮುಕ್ತವಾಗಿರುವು ದೆಂದೂ ಮಾತ್ರ ಇದು ಹೇಳಿಕೊಳ್ಳುತ್ತದೆ. ಸಂಪಾದಕನು ತನ್ನ ಕೆಲಸವನ್ನು ಸರಿಯಾಗಿ ನಿರ್ವಹಿಸಿದ್ದರೆ ಇದು ಇರುವ ಹಸ್ತಪ್ರತಿಗಳಿಗೆಲ್ಲಾ ಮಾತೃಜ ನೆಂದು ಭಾವಿಸಬಹುದು. ಹೀಗೆ ಪರಿಷ್ಕರಿಸಿದ ಪಾಠವನ್ನು ಕಾಲದಿಂದ ನಿರ್ದೇಶಿಸುವುದಕ್ಕಾಗಲಿ, ಒಂದು ಪ್ರದೇಶಕ್ಕೆ ಸೀಮಿತಗೊಳಿಸುವುದಕ್ಕಾಗಲಿ ಒಬ್ಬ ಕರ್ತೃವಿಗೆ ಅನ್ವಯಿಸುವುದಕ್ಕಾಗಲಿ ಸಾಧ್ಯವಿಲ್ಲ. ನಮ್ಮ ಹಸ್ತಪ್ರತಿಗಳೇ ಒಟ್ಟಿನ ಮೇಲೆ ಈಚಿನವಾದ್ದರಿಂದ, ನಮ್ಮ ಮೂಲವೂ ಬಹಳ ಪ್ರಾಚೀನ ವಾಗಲಾರದು. ಇದೂ (ಉಳಿದ ಸಂಸ್ಕರಣಗಳಂತೆಯೇ) ಹಳೆಯ ಮತ್ತು ಹೊಸ ವಿಷಯಗಳ ಕಲಸುಮೇಲೋಗರವೆಂಬುದು ಸ್ವತಸ್ಸಿದ್ಧ. ಎಂದರೆ ಈ ಸಂಸ್ಕರಣದ ಯಾವುದೇ (ಮತ್ತು ಉಳಿದ ಸಂಸ್ಕರಣಗಳ) ಒಂದು ಅಧ್ಯಾಯ ದಲ್ಲಿಯೂ ಕ್ರಿ. ಪೂ. ಎರಡನೆ ಶತಮಾನದ ಒಂದು ಶ್ಲೋಕದ ಮುಂದಿನ ಶ್ಲೋಕವೇ ಕ್ರಿ. ಶ. ಎರಡನೆ ಶತಮಾನದಲ್ಲಿ ಬರೆದುದಾಗಿರಬಹುದು. ಒಮ್ಮೊಮ್ಮೆ ಒಂದೇ ಶ್ಲೋಕಾರ್ಧದ ನಡುವೆಯೇ ಈ ಬಿರುಕು ಬರಬಹುದು" (Prolegomena P 103)

ಇದಕ್ಕಿಂತ ವಿನಯಪೂರ್ವಕವಾಗಿ ಮಹಾ ವಿದ್ವಾಂಸರೊಬ್ಬರು ಬರೆಯುವುದು ದುಷ್ಕರ. ಇಂದು ನಮಗೆ ಸಿಕ್ಕುವ ಹಸ್ತಪ್ರತಿಗಳಲ್ಲಿ 16 ನೆ ಶತಮಾನಕ್ಕಿಂತ ಹಿಂದಿನವು ಇಲ್ಲವೆಂಬುದನ್ನು ಈ ಸಂದರ್ಭದಲ್ಲಿ ಗಮನಿಸ ಬೇಕು. ೧೯೩೬ ರಲ್ಲಿ ಡಾ|| ರಘುವೀರರಿಂದ ಸಂಪಾದಿತವಾಗಿ 'ವಿರಾಟ ಪರ್ವ' ಅಚ್ಚಾಯಿತು. ಸಂಪಾದಕನ ವೈಯಕ್ತಿಕ ಬುದ್ಧಿಗೆ ಆಸ್ಪದವೇ ಇಲ್ಲದಂತೆ ಪರಿಷ್ಕರಣ ತತ್ವಗಳು ಸ್ಫುಟವಾಗಿದ್ದುವೆಂದು ಅವರು ಹೇಳಿದರೂ ಅದು ಪೂರ್ಣವಾಗಿ ಲುಪ್ತವಾಗುವುದು ಅಸಂಭವ. ಹೇಗೇ ಇರಲಿ ; ಅವರು

ಮೂಲದಲ್ಲಿಟ್ಟುಕೊಂಡ 1834 ಶ್ಲೋಕಗಳಲ್ಲಿ 300 ಮಾತ್ರ ನಿಶ್ಚಿತ; ಉಳಿದುವೆಲ್ಲ ಅನಿಶ್ಚಿತ ಗೆರೆಯುಳ್ಳವೇ. ಎಂದ ಮೇಲೆ ಕಾವ್ಯ ವಿಮರ್ಶಕನಿಗೆ ಅದರಿಂದಾಗುವ ಲಾಭವನ್ನು ವಾಚಕರೇ ಊಹಿಸಿಕೊಳ್ಳಬಹುದು. ೧೯೪೦ ರಲ್ಲಿ ಡಾ|| ಎಸ್. ಕೆ. ಡೇ. ಅವರಿಂದ ಸಂಪಾದಿತವಾದ ಉದ್ಯೋಗಪರ್ವ ಪ್ರಕಟಿತವಾಯಿತು. ಈ ಮೂವರೂ ಮದ್ರಾಸಿನ ಪಿ. ಪಿ. ಎಸ್. ಶಾಸ್ತ್ರಿಗಳಿಂದ ಸಂಪಾದಿತವಾದ 'ದಾಕ್ಷಿಣಾತ್ಯ 'ಪಾಠ ಕ್ರಮದ ದೋಷಗಳನ್ನು ತೋರಿಸಿರುವರು. ಮುಂದೆ ಸುಕಠಣಕರರಿಂದ 'ಅರಣ್ಯ ಪರ್ವ' ವೂ, ಡಾ|| ಎಜರ್‌ಟನ್ ಅವರಿಂದ 'ಸಭಾಪರ್ವ 'ವೂ ಡಾ|| ಎಸ್. ಕೆ. ಬೆಳವಳಕರರಿಂದ 'ಭೀಷ್ಮಪರ್ವ 'ವೂ ಇತರ ವಿದ್ವಾಂಸರಿಂದ ಉಳಿದ ಪರ್ವಗಳೂ ಕ್ರಮೇಣ ಪ್ರಕಟವಾಗುತ್ತ ಬಂದಿವೆ.

ಪ್ರಕ್ಷೇಪಗಳೆಂದು ಈ ಪರಿಷ್ಕರಣಗಳ ಸಂಪಾದಕರು ನಿರ್ಣಯಿಸಿರುವ ಕೆಲವು ಮುಖ್ಯ ಕಥಾ ಭಾಗಗಳನ್ನು ಇಲ್ಲಿ ಸೂಚಿಸಬಹುದು :—

**೧. 'ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥'**

ಎಂಬ ಮಂಗಳ ಶ್ಲೋಕ (Prolegomena, p 3)

೨. ಗಣೇಶನು ವ್ಯಾಸನಿಗೆ ಲಿಪಿಕಾರನಾದ ಕಥೆ

೩. ದ್ರೌಪದೀ ಸ್ವಯಂವರದಲ್ಲಿ ಕರ್ಣನು ಮತ್ಸ್ಯಯಂತ್ರ ಭೇದನಕ್ಕೆ ಸಿದ್ಧನಾದಾಗ ದ್ರೌಪದಿಯು ತಟ್ಟನೆ ತಾನು ಸೂತ ಪುತ್ರನನ್ನು ವರಿಸುವು ದಿಲ್ಲವೆಂದು ಅವನ ತೇಜೋವಧೆ ಮಾಡುವ ಕಥೆ.

೪. ಆದಿಪರ್ವದಲ್ಲಿ ಬರುವ 'ಕಣಿಕ ನೀತಿ'

೫. ವಿರಾಟ—ಮತ್ತು ಭೀಷ್ಮಪರ್ವಗಳಲ್ಲಿ ಬರುವ ದುರ್ಗಾ ಸ್ತೋತ್ರಗಳು.

೬. ದ್ರೌಪದಿ ವಸ್ತ್ರಾಪಹರಣದ ಪ್ರಸಂಗದಲ್ಲಿ ಅವಳು ಕೃಷ್ಣನ ಸ್ತೋತ್ರ ಮಾಡುವುದು. ಕೃಷ್ಣನು ಅವಳ ಸೀರೆಗಳನ್ನು ಅಕ್ಷಯಗೊಳಿಸುವುದು.

೭. ವನವಾಸದಲ್ಲಿರುವ ಪಾಂಡವರನ್ನು ಪರೀಕ್ಷಿಸಲು ದುರ್ವಾಸರು

ಬಂದು ಊಟವನ್ನು ಕೇಳುವುದು. ದ್ರೌಪದಿಯು ಕೃಷ್ಣಾನುಗ್ರಹದಿಂದ ಅಕ್ಷಯ ಪಾತ್ರೆಯನ್ನು ಪಡೆಯುವುದು.

೮. ಅರಣ್ಯಪರ್ವದಲ್ಲಿ ಅರ್ಜುನನ ಸಂಗವನ್ನು ಬಯಸಿ ವಿಫಲಳಾದ ಊರ್ವಶಿ ಅವನನ್ನು ನಪುಂಸಕನಾಗೆಂದು ಶಪಿಸುವ ಕಥೆ.

೯. ಉದ್ಯೋಗ ಪರ್ವದಲ್ಲಿ ಶಂಕರಾಚಾರ್ಯರ ಭಾಷ್ಯವಿಲ್ಲದ 'ಸನತ್ಸುಜಾತೀಯ'ದ ಒಂದು ಅಧ್ಯಾಯ.

೧೦. ಭೀಷ್ಮಪರ್ವದಲ್ಲಿ ಬರುವ ವಿಶ್ವೋಪಾಖ್ಯಾನ ಮತ್ತು ಮೂರನೆಯ ದಿನವೇ ಕೃಷ್ಣನು ಭೀಷ್ಮನಮೇಲೆ ಕೋಪದಿಂದ ಯುದ್ಧಕ್ಕೆ ಹೊರಟ ವರ್ಣನೆಯ ಪುನರುಕ್ತಿಯಾಗಿ ಮತ್ತೆ ಒಂಭತ್ತನೆಯ ದಿನ ಚಕ್ರವನ್ನು ಹಿಡಿಸುವುದು.

೧೧. ಅನೇಕ ಕ್ಷೇತ್ರಮಹಾತ್ಮ್ಯಗಳು, ಇತ್ಯಾದಿಗಳು.

ಈ ನೂತನ ಸಂಸ್ಕರಣದ ಬೆಲೆಯನ್ನು ಅತಿಯಾಗಿ ಎತ್ತಿ ಹಿಡಿಯುವ ವಿದ್ವಾಂಸರಿರುವಂತೆ, ಕಡಿಮೆ ಮಾಡುವ ವಿದ್ವಾಂಸರೂ ಇದ್ದಾರೆ. ಡಾ|| ಸಿಲ್ವೇನ್ ಲೇವಿ ಅವರು ಇದನ್ನು ಮಹಾಭಾರತದ ಪರಿವರ್ತನ ಶೀಲವಾದ ಅದರ ಪಾಠದ ಸ್ವರೂಪವೆಂದು ವಿಮರ್ಶೆ ಬರೆದುದಕ್ಕೆ ಪ್ರತಿಯಾಗಿ ಡಾ|| ಎಡ್‌ಜರ್‌ಟನ್ ಅವರು ತಮ್ಮ 'ಸಭಾಪರ್ವ' ಸಂಸ್ಕರಣದ ಪೀಠಿಕೆಯಲ್ಲಿ– 'ಈ ಮೂಲಪಾಠವು ಒಂದು ಕಾಲದಲ್ಲಿ ವಾಸ್ತವವಾಗಿತ್ತೆಂದು ನನಗೆ ಸಂಪೂರ್ಣ ವಿಶ್ವಾಸವಿದೆ . ಈ ಪಾಠವೇ ಅನಿಯತ ಪರಿವೃತ್ತಿಮಯವಾಗಿ ರಲಿಲ್ಲ. ಮಹಾಭಾರತವು ಒಂದು ಅನಿಯತವಾದ 'ಸಾಹಿತ್ಯ'ವಲ್ಲ; ಸರಂತು ಒಂದು ನಿಯತವಾದ ಸಾಹಿತ್ಯ ಕೃತಿ" (pp. xxxvi–vii) ಎಂದು ಸಮರ್ಥಿಸಿಕೊಂಡಿದ್ದಾರೆ. ರೋಮ್ ನಗರದ ವಿದ್ವಾಂಸರಾದ ವಿಟ್ಟೋರ್ ಪಿಸಾನಿ ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಈಗ 'ಮಹಾಭಾರತವು ಒಬ್ಬ ಕವಿಯ ಬುದ್ಧಿ ಪೂರ್ವಕ ರಚನೆಯೇ ಹೊರತು ಕೇವಲ ಕಾಕತಾಲೀಯಗಳ ಪರಿಣಾಮವಲ್ಲ'ವೆಂದಿದ್ದಾರೆ. ಹಿಂದಿನ ವಿದ್ವಾಂಸರು ಇದನ್ನು ಒಪ್ಪದೆ ಇದ್ದುದಕ್ಕೆ ಅವರ ಶಸ್ತ್ರಚಿಕಿತ್ಸಾರೂಪವಾದ ವಿಮರ್ಶೆಯೆ (Surgical Criticism) ಕಾರಣವೆಂದು ತೀರ್ಮಾನಿಸಿದ್ದಾರೆ. ಮಹಾಭಾರತವನ್ನು 'ಸಾಹಿತ್ಯಭೂತ'ವೆಂದ ವಿಂಟರ್‌ನಿಟ್ಸರ ಅಳತೆ ಗೋಲು–

ಪಾಶ್ಚಾತ್ಯ ಕಾವ್ಯಗಳ ಅಧ್ಯಯನದಿಂದಾದುದೆಂದೂ ಭಾರತೀಯ ಸಂಸ್ಕೃತಿಗೆ ಅದು ನಿಷ್ಪ್ರಯೋಜಕವೆಂದೂ ಸಾರಿದ್ದಾರೆ. ಮಹಾಭಾರತದ ಸಾಮಗ್ರಿಗಳ (Materials) ಪರಿಶೀಲನೆಯೇ ಸಮಗ್ರ ಭಾರತದ ಪರಿಶೀಲನೆಯೆಂದು ಅವರು ಭ್ರಮಿಸಿರುವುದನ್ನೂ ಸ್ಪಷ್ಟಪಡಿಸಿದ್ದಾರೆ. ಮರಗಳನ್ನು ಮಾತ್ರ ಅವರು ನೋಡಿ ಅರಣ್ಯವನ್ನೇ ಕಾಣದೆ ಹೋಗಿರುವಂಶವನ್ನು ಪ್ರಸ್ತಾಪಿಸಿದ್ದಾರೆ.

ಇವರ ಸಮಗ್ರ ದೃಷ್ಟಿಗೆ, ಸಂಪ್ರದಾಯವನ್ನು ಪರ್ಯಾಯವಾಗಿ ಸಮರ್ಥಿಸುವ ಇವರ ದೃಷ್ಟಿಗೆ, ಮಹಾಭಾರತವು ಪ್ರಥಮತಃ ಕಾವ್ಯ, ಉಪಾಖ್ಯಾನಾದಿಗಳೂ ಧರ್ಮನೀತಿ ಬೋಧೆಗಳೂ ಕಾಲಾಂತರದ ಪ್ರಕ್ಷೇಪಗಳೆಂಬ ಭಾವನೆಯೇ ತಪ್ಪಾಗಿ ತೋರುತ್ತದೆ. ಮೊದಲಿನಿಂದಲೂ ಇವೆಲ್ಲವನ್ನೂ ತ್ರಿವೇಣಿ ಸಂಗಮದಂತೆ ಕೂಡಿಸಿಕೊಂಡು ಬರೆಯಬೇಕೆಂಬ ಕವಿ ವಿವಕ್ಷೆಯೇ ಇತ್ತೆಂಬುದು ಅವರ ಅಭಿಪ್ರಾಯ. ಮಹಾಭಾರತದ ಕೇಂದ್ರಸ್ಥಾನವೇ ಭಗವದ್ಗೀತೆಯೆಂದು ಹೇಳಿದ ಸಿಲ್ವೇನ್ ಲೇವಿಯವರ ಮತವನ್ನೇ (Bhandarkar Commemoration Volume) ಇವರು ವಿಂಟರ್‌ನಿಟ್ಸರ ಟೀಕೆಗಳಿಂದ ಮುಕ್ತವಾಗಿಸಿ ಎತ್ತಿಹಿಡಿಯುತ್ತಾರೆ--ಮಹಾಭಾರತದ ಕವಿಯು ಸೂತರ ಬಾಯಿಂದ ಬಾಯಿಗೆ ಪ್ರಚಾರದಲ್ಲಿ ಬಂದಿದ್ದ ಅನೇಕ ಸಂಗತಿಗಳನ್ನೇ ಹೆಚ್ಚು ಬದಲಿಸದೆ ಬಳಸಿಕೊಂಡಿರುವನೆಂಬುದು ಇವರ ಸಿದ್ಧಾಂತ. ಹೀಗೆ ಬಳಸಿಕೊಂಡ ಸಾಮಗ್ರಿಯಲ್ಲಿ 'ಆಶ್ವಲಾಯನ ಗೃಹ್ಯಸೂತ್ರ'ದಲ್ಲಿ ಉಲ್ಲೇಖಿಸಲ್ಪಟ್ಟ 'ಭಾರತ', 'ಮಹಾಭಾರತ'ಗಳಂತೆ ತೀರ್ಥ ಕ್ಷೇತ್ರ ಮಹಾತ್ಮ್ಯಗಳೂ ಪುರಾಣಗಳೂ, ಋಷಿಗಳ ಕಥೆಗಳೂ, ಧರ್ಮನೀತಿ ಶಾಸ್ತ್ರವಾಕ್ಯಗಳೂ ಎಲ್ಲವೂ ಸೇರುತ್ತವೆ. ಅದರಷ್ಟೇ ಮುಖ್ಯವಾದ ಕವಿಯ ಮತ್ತೊಂದು ಗುರಿ ಕೃಷ್ಣನ ಮೂಲಕ ನೂತನ ಧರ್ಮದ ಪ್ರಚಾರಮಾಡುವುದು. ಪರಕೀಯರ ಆಕ್ರಮಣಗಳಿಂದಲೂ ಬುದ್ಧ ಧರ್ಮದ ಆಘಾತಗಳಿಂದಲೂ ಆರ್ಯಭೂಮಿಯನ್ನುಳಿಸಿಕೊಳ್ಳಲು ನಡೆದ ಅಮೋಘ ಪ್ರಯತ್ನವೇ ಮಹಾಭಾರತ! (The Rise of the Mahābhārata–A Volume of Eastern and Indian Studies presented to prof. F W. Thomas)

ಈ ತೀರ್ಮಾನಕ್ಕೆ ಇನ್ನೊಂದು ಅನಿರೀಕ್ಷಿತ ದಿಕ್ಕಿನಿಂದಲೂ ಪುಷ್ಟಿ ದೊರೆಯುತ್ತದೆ. ಅತಿ ಪ್ರಾಚೀನವಾದ ಜೈನ ಮತ ಗ್ರಂಥಗಳೆನಿಸುವ ಅರ್ಧಮಾಗಧೀ ಭಾಷೆಯ 'ಉತ್ತರಾಧ್ಯಯನ' ಸೂತ್ರಗಳಲ್ಲೇ ಕೃಷ್ಣ ಬಲರಾಮರ ಉಲ್ಲೇಖವಿರುವುದಲ್ಲದೆ ಉದಾಹರಣೆಗೆ ಬರುವ ಕಥೆಗಳಲ್ಲಿ ಕೃಷ್ಣಪಾಂಡವರ ಕಥಾಭಾಗವೂ ನಿರ್ದಿಷ್ಟವಾಗಿದೆ. ಇದಕ್ಕೆ ಭದ್ರಬಾಹುವೇ 'ನಿರ್ಯುಕ್ತಿ'ಯನ್ನೂ ಜಿನದಾಸಮಹತ್ತರನು 'ಚೂರ್ಣಿ'ಯನ್ನೂ, ಶಾಂತ್ಯಾಚಾರ್ಯನು 'ಬೃಹದ್ವೃತ್ತಿ'ಯನ್ನೂ ಬರೆದಿದ್ದಾರೆ. ಇವರೆಲ್ಲರೂ 'ಸುಖಬೋಧಾ' ಎಂಬ ಕಡೆಯ ಟೀಕೆಯನ್ನು (ಕ್ರಿ. ಶ. ೧೧ನೆಯ ಶತಮಾನದ ಕಡೆ) ಬರೆದ ದೇವೇಂದ್ರನಿಗಿಂತ ಪ್ರಾಚೀನರು. ಪವಿತ್ರ ಗ್ರಂಥಗಳು ಕ್ರಿ. ಶ. ೩–೪ನೆಯ ಶತಮಾನದಷ್ಟು ಪ್ರಾಚೀನ 'ಪಉಮಚರಿಯ'ವನ್ನು ಬರೆದ ವಿಮಲಸೂರಿಯೇ (ಕ್ರಿ. ಶ. ೭ ನೆ ಶತಮಾನ ?) 'ಹರಿವಂಶ ಚರಿತ'ವನ್ನೂ ಬರೆದನೆಂದು ಉದ್ಯೋತನನ ಹೇಳಿಕೆ. ಈ ಶ್ವೇತಾಂಬರರ 'ಹರಿವಂಶ'ವನ್ನ ಕ್ರಿ.ಶ. 868ರಲ್ಲಿ ಬರೆದ ಶೀಲಾಚಾರ್ಯನ 'ಚೌಪ್ಪನ್ನ ಮಹಾಪುರಿಸಚರಿಅ'ವಲ್ಲಿಯೂ ನೋಡಬಹುದು. ದಿಗಂಬರರು ಮತ್ತೂ ವಿಸ್ತಾರವಾಗಿ ಬರೆದ 'ಹರಿವಂಶ'ದ ಸ್ವರೂಪವೇ ಜಿನಸೇನನು (ಆದಿಪುರಾಣಕಾರ ಜಿನಸೇನನಿಗಿಂತ ಇವನು ಭಿನ್ನ) ಕ್ರಿ. ಶ. ೭೮೩ ರಲ್ಲಿ ಬರೆದ **ಹರಿವಂಶ.** ಬ್ರಾಹ್ಮಣರ ಪವಿತ್ರ ಮತ ಗ್ರಂಥಗಳಂತೆ ತಾವೂ ಮತ ಗ್ರಂಥ ರಚನೆಮಾಡಬೇಕೆಂದು ಹೊರಟ ಜೈನರು ಮಹಾಭಾರತ–ಹರಿವಂಶಗಳೆರಡನ್ನೂ ಸ್ವತಂತ್ರವಾಗಿ ಭಾವಿಸದೆ ಹರಿವಂಶದಲ್ಲೇ ಭಾರತ ಕಥೆಗೂ ಆಸ್ಪದವೀಯುತ್ತಿದ್ದುದೂ, ಕೃಷ್ಣನ ಪಾತ್ರಕ್ಕೆ ವಿಶೇಷ ಪ್ರಾಶಸ್ತ್ಯವೀಯುತ್ತಿದ್ದುದೂ ಸ್ಪಷ್ಟವಾಗಿದೆ. ಹೀಗೆ ಅವರು ಭಾವಿಸಲು ಕ್ರಿ. ಶ. ೪–೫–೬ ನೆಯ ಶತಮಾನದ ಬ್ರಾಹ್ಮಣರೂ ಅದೇ ಭಾವನೆಯನ್ನು ಇಟ್ಟುಕೊಂಡಿದ್ದರೆಂದು ಹೇಳದೆ ಗತ್ಯಂತರವಿಲ್ಲ. (ವಿವರಗಳಿಗೆ ಡಾ|| ಎ. ಎಮ್. ಘಾಟಗೆ ಅವರ Kahāṇaya-Tigaṁ (ಕಥಾನಕ–ತ್ರಿಕ), A Prakrit Reader, Introduction ನೋಡಿ) ಮುಂದೆ ಶಂಕರ, ರಾಮಾನುಜ, ಮುಂತಾದ ಆಚಾರ್ಯರೆಲ್ಲರೂ ಮಹಾಭಾರತದ ವಿಷಯದಲ್ಲಿ ಇದೇ ಅಭಿಪ್ರಾಯವನ್ನು ಸ್ಪಷ್ಟವಾಗಿ ತಾಳಿದ್ದಾರೆ. ಈ ಅಭಿಪ್ರಾಯವನ್ನೇ ಅಲ್ಲಗಳೆದರೆ ಅನೇಕ ಪಾಶ್ಚಾತ್ಯ

ವಿದ್ವಾಂಸರು ಎಬ್ಬಿಸಿರುವಂತೆ ಭಗವದ್ಗೀತೆಯ ಮೂಲ-ಪ್ರಕ್ಷೇಪಗಳ ಬಗ್ಗೆ ಮುಗಿಯದ ವಿವಾದವಾರಂಭವಾಗುವುದಷ್ಟೇ ಅಲ್ಲ, ಇಡಿಯ ಭಗವದ್ಗೀತೆಯೇ ಕಾವ್ಯದಲ್ಲಿ ಪ್ರಕ್ಷೇಪವೆಂಬ ಆಶಂಕೆಯೂ ಅನಿವಾರ್ಯವಾಗುವುದು. ಭಾರತೀಯ ವಿದ್ವಾಂಸರು ಇನ್ನೂ ಇದನ್ನು ಅಂಗೀಕರಿಸುವ ಮಟ್ಟಕ್ಕೆ ಬಂದಿಲ್ಲ. (ಪ್ರೊ|| ಆರ್. ಎನ್. ದಾಂಡೇಕರ ಅವರು ಪ್ರಾಚೀನ ಭಾರತ-ಮೂಲವು ಸೂತಸಂಪ್ರದಾಯದ ಕೃತಿಯೆಂದೂ, ಅದು ಮುಂದೆ ಕೃಷ್ಣ ಭಕ್ತಿ ಮತ್ತು ಮಂತ್ರ ಸಂಪ್ರದಾಯದವರಿಂದ ಪರಿವರ್ಧಿತವಾಗಿ ಈ ರೂಪಕ್ಕೆ ಬಂದಿತೆಂದೂ ವಿವರಿಸಿದ್ದಾರೆ. (Unıversty of Ceylon Review, XII)

**ರಾಮಾಯಣ ಮತ್ತು ಮಹಾಭಾರತ :** ಇವೆರಡರ ಹೋಲಿಕೆ ಸಂಸ್ಕೃತ ಕಾವ್ಯ ಪರಂಪರೆಯ ಅಭ್ಯಾಸದಲ್ಲಿ ಅಗತ್ಯವಾಗುತ್ತದೆ ರಾಮಾಯಣವು ಮುಖ್ಯವಾಗಿ ಮಹಾಕವಿಯೊಬ್ಬನ ಪ್ರತಿಭಾವಿಲಾಸ, ಮಹಾಭಾರತದ ಮೂಲಸೂತ್ರವನ್ನು ಒಬ್ಬ ಕವಿ, ವ್ಯಾಸ, ಬರೆದನೆಂದು ಭಾವಿಸಿದರೂ ಅದರಲ್ಲಿ ಯುದ್ಧಸಂಬಂಧವಾದ ರಸಗಳನ್ನು ಬಿಟ್ಟರೆ ಉಳಿದವಕ್ಕೆ ಪ್ರವೇಶವಿಲ್ಲ. ರಾಮಾಯಣದಲ್ಲಿ ಕವಿಕಲ್ಪನೆಗೆ ಅನಿಯಂತ್ರಿತ ಅವಕಾಶವಿದೆ, ಮಹಾಭಾರತದಲ್ಲಿ ಅದು ಸದಾ ಇತಿಹಾಸದ ಕಟ್ಟಿನಲ್ಲೇ ಬದ್ಧವಾಗಬೇಕಾಗಿದೆ. ವಾಲ್ಮೀಕಿಗೆ ಕಾವ್ಯ ಮುಖ್ಯ, ಉಪದೇಶ ಗೌಣ. ವ್ಯಾಸನಿಗೆ ಉಪದೇಶವೇ ಮುಖ್ಯ, ಕಾವ್ಯ ಗೌಣ. ವಾಲ್ಮೀಕಿಯ ಪಾತ್ರಗಳು ನಾಲ್ಕಾರು; ವ್ಯಾಸನ ಪಾತ್ರಗಳು ಸಾವಿರಾರು. ಹೀಗಾಗಿ ಪಾತ್ರಪರಿಪೋಷಣೆಗೆ ಯಥೋಚಿತ ಗಮನಕ್ಕೆ ಆಸ್ಪದವಿಲ್ಲ. ರಾಮನು ಉದಾತ್ತ ಮಾನವ; ಕೃಷ್ಣನು ಮಾನವಾತೀತವಾದ ಅದ್ಭುತ ಕಾರ್ಯಗಳನ್ನು ಮಾಡುವವ. ರಾಮಾಯಣದ ಆಸಕ್ತಿ ಸಾಂಸಾರಿಕ, ಮಹಾಭಾರತದ್ದು ರಾಜಕೀಯ. ಆದ್ದರಿಂದ ಮುಂದಿನ ಕವಿಕೃತಿಗಳಿಗೆ ರಾಮಾಯಣಕ್ಕೆ ಕಡಿಮೆಯಲ್ಲದ, ವಸ್ತುತಃ ಎಷ್ಟೋ ಹೆಚ್ಚಿನ, ಸಾಮಗ್ರಿಯನ್ನೇ ಮಹಾಭಾರತವು ಒದಗಿಸಿದರೂ ವಾಲ್ಮೀಕಿಯ ವರ್ಣನಾವಿಲಾಸದಂತೆ ವ್ಯಾಸರ ಶೈಲಿಯು ಮುಂದಿನ ಕವಿಗಳಿಗೆ ಮಾರ್ಗದರ್ಶಿಯಾಗಲಿಲ್ಲ. ಅದರ ಪ್ರಭಾವ ಬಿದ್ದುದು ಕಾವ್ಯಗಳೇ ಅಲ್ಲದ ಪುರಾಣಗಳ ಮೇಲೆ ಮಾತ್ರ. ಎರಡರಲ್ಲೂ ವೇದೋತ್ತರ-ಕಾಲೀನ ಸಂಸ್ಕೃತಿಯೇ ಪ್ರತಿಬಿಂಬಿತವಾಗಿರುವುದು. ಪೂರ್ವದ

ಯಜ್ಞಯಾಗಾದಿಗಳ ಪ್ರಾಧಾನ್ಯ ಕುಗ್ಗಿ, ಅವುಗಳ ಸ್ಥಾನದಲ್ಲಿ ತ್ರಿಮೂರ್ತಿಗಳ ಪೂಜೆ, ಭಕ್ತಿವಾದ, ತೀರ್ಥಯಾತ್ರೆ ಮುಂತಾದುವುಗಳು ಪ್ರಾಶಸ್ತ್ಯ ಪಡೆಯುತ್ತವೆ. ಆದರೆ ಸಂಸ್ಕೃತಿಯ ಆದರ್ಶಗಳಲ್ಲಿ ಎರಡಕ್ಕೂ ಎಷ್ಟೋ ವ್ಯತ್ಯಾಸವಿದೆ. ರಾಮಾಯಣದ ಕಥಾವಸ್ತು ಭ್ರಾತೃಪ್ರೇಮ, ಮಹಾಭಾರತದ ಮುಖ್ಯ ವಿಷಯ ಭ್ರಾತೃದ್ರೋಹ. ರಾಮಾಯಣದ ಸಂಸ್ಕೃತಿ ಪ್ರೇಮಪ್ರಧಾನ, ಮಹಾಭಾರತದ್ದು ಕರ್ಮಪ್ರಧಾನ. ರಾಮಾಯಣದಲ್ಲಿ ಆದರ್ಶ ಜೀವನ ಹೆಚ್ಚು, ಮಹಾಭಾರತದಲ್ಲಿ ರಾಜನೀತಿ, ಪರಾಕ್ರಮ, ಔದ್ಧತ್ಯಗಳೇ ಹೆಚ್ಚು. ಒಂದು ಸತ್ಯಯುಗದ ಅವಶೇಷವಾದರೆ ಇನ್ನೊಂದು ಕಲಿಯುಗದ ಆರಂಭದ ಪ್ರತೀಕ. ಭಾಷೆ ಮತ್ತು ಛಂದಸ್ಸುಗಳ ದೃಷ್ಟಿಯಿಂದ ನೋಡಿದರೂ ಎರಡಕ್ಕೂ ಸಾಮ್ಯಕ್ಕಿಂತ ವೈಷಮ್ಯವೇ ಹೆಚ್ಚು. ರಾಮಾಯಣವು ಕೇವಲ ಪದ್ಯಮಯ, ಮಹಾಭಾರತದಲ್ಲಿ ಪದ್ಯದಂತೆ ಗದ್ಯವೂ ಉಂಟು. ರಾಮಾಯಣವನ್ನು ಎಲ್ಲರೂ ಕಾವ್ಯವೆನ್ನುತ್ತಾರೆ; ಮಹಾಭಾರತವನ್ನು ಇತಿಹಾಸ, ಶಾಸ್ತ್ರ, ಐದನೆಯ ವೇದವೆನ್ನುವುದೇ ವಾಡಿಕೆ.[6] ರಾಮಾಯಣದಲ್ಲಿ ಏಕೈಕ ವಿಷಯವರ್ಣನೆಗೆ ಪ್ರವೃತ್ತವಾದ ಸರ್ಗಗಳಿವೆ. ಅನೇಕ ಸರ್ಗಗಳು ಕೂಡಿ ಒಂದು 'ಕಾಂಡ'ವಾಗುತ್ತದೆ. ಒಂದೊಂದು ಸರ್ಗದ ಕಡೆಗೂ ಶ್ಲೋಕದ ಛಂದಸ್ಸು ಬದಲಾಯಿಸಿ ಉಪಜಾತಿಯ ವೃತ್ತಗಳು ಬರುತ್ತವೆ. ಆದರೆ ಮಹಾಭಾರತದಲ್ಲಿ ಸರ್ಗಗಳಿಲ್ಲ; ಅಧ್ಯಾಯಗಳಿವೆ. ಈ ಅಧ್ಯಾಯಗಳಲ್ಲಿ ಸರ್ಗಬಂಧದಲ್ಲಿರುವ ವಿಷಯದ ಐಕ್ಯವಾಗಲಿ, ವರ್ಣನಾ ಪ್ರಾಧಾನ್ಯವಾಗಲಿ ಇಲ್ಲ, ಇರುವುದೆಲ್ಲ ಇತಿವೃತ್ತದ ಕಥಂಚಿತ್ ನಿರೂಪಣೆ. ಛಂದೋವೈವಿಧ್ಯವು ಪ್ರತಿ ಅಧ್ಯಾಯದ ಕಡೆಯಲ್ಲಿ ಕಾಣದು. ಶ್ಲೋಕ ಉಪಜಾತಿಗಳ ಜತೆಗೆ 'ಜಗತೀ' ಮುಂತಾದ ವೈದಿಕಛಂದಸ್ಸುಗಳೂ, ಬಗೆಬಗೆಯ ಲೌಕಿಕ ವೃತ್ತಗಳೂ ಅಲ್ಲಲ್ಲಿ ಬರುತ್ತವೆ. ರಾಮಾಯಣದಲ್ಲಿ ಶ್ಲೇಷಾದಿ ಅರ್ಥ ಚಮತ್ಕಾರಗಳೂ ಶಬ್ದಚಮತ್ಕಾರಗಳೂ ಇಲ್ಲವೆನ್ನಬಹುದು; ಅರ್ಥವ್ಯಕ್ತಿ ಅದರಷ್ಟು ತಿಳಿಯಾಗಿರುವ ಬೇರೆ ಕಾವ್ಯವೇ ದುರ್ಲಭ. ಆದರೆ ಮಹಾ

---

6. ಹೋಲಿಸಿ 'ಕೃಷ್ಣಂ ವೇದಮಿಮಂ ವಿದ್ವಾನ್ ಶ್ರಾವಯಿತ್ವಾರ್ಥಮಶ್ನುತೇ' (I. 1. 68) ಮತ್ತು 'ಭಾರತಃ ಪಂಚಮೋ ವೇದಃ' 'ಆಖ್ಯಾಸ್ಯವಿ, ತಥೈವಾನ್ಯೇ ಇತಿಹಾಸಮಮುಂ ಭುವಿ' (I i 26) ಇತ್ಯಾದಿ.

ಭಾರತದಲ್ಲಿ ಹತ್ತಾರು 'ಕೂಟ' ಶ್ಲೋಕಗಳು ಅಥವಾ ದುರ್ಬೋಧ ಪದ್ಯಗಳು ಬರುತ್ತವೆ. ಇಂತಹ ಒಂದು ಪದ್ಯವು ಶಾರ್ದೂಲವಿಕ್ರೀಡಿತ ವೃತ್ತದಲ್ಲಿರುವುದು ಮತ್ತೂ ವಿಶೇಷ. ಇವುಗಳಲ್ಲಿ ಶಬ್ದಾರ್ಥಗಳ ಪ್ರಯತ್ನ ಕೃತ ವೈಚಿತ್ರ್ಯವನ್ನು ನೋಡಬಹುದು.[7]

ಪಾತ್ರಗಳ ನಿರ್ಮಾಣದಲ್ಲಿಯೂ ವಾಲ್ಮೀಕಿ ವ್ಯಾಸರ ಉದ್ದೇಶಗಳು ವಿಭಿನ್ನವಾಗಿರುವುದು ಸ್ಪಷ್ಟ. ಮೂಲರಾಮಾಯಣದಲ್ಲಿ ಮುಖ್ಯವ್ಯಕ್ತಿಗಳ ಅದ್ಭುತಜನನವು ಅಷ್ಟು ವರ್ಣನಾವಿಷಯವಾಗಿಲ್ಲ. ಪ್ರಕ್ಷಿಪ್ತಭಾಗದಲ್ಲಿ ಮಾತ್ರ ಇದರ ಕಡೆಗೆ ಹೆಚ್ಚಿನ ಗಮನ ಬಿದ್ದಿದೆಯೆಂದು ತೋರುತ್ತದೆ. ಆದರೆ ಮಹಾಭಾರತದಲ್ಲಿ ಹಾಗಲ್ಲ. ಮೊದಲಿನಿಂದಲೇ ಅಲ್ಲಿ ಬರುವ ಹತ್ತಾರು ವ್ಯಕ್ತಿಗಳೆಲ್ಲ ಅಸಾಧಾರಣವಾದ, ಅತ್ಯದ್ಭುತರೀತಿಯಲ್ಲಿ, ಹುಟ್ಟಿದವರೆಂಬುದನ್ನು ತೋರಿಸಿದೆ. ಪಂಚಪಾಂಡವರು ಇಂದ್ರಾದಿ ದೇವಾಂಶಸಂಭೂತರೆಂಬುದೂ, ಪಾಂಡುವಿನ ಕ್ಷೇತ್ರಜರೇ ಹೊರತು ತನುಜರಲ್ಲವೆಂಬುದೂ ಸುಪ್ರಸಿದ್ಧ. ಅದಿರಲಿ. ಅವರ ಹಿಂದಿನ ತಲೆಯವರಾದ ಧೃತರಾಷ್ಟ್ರ, ಪಾಂಡು, ವಿದುರರೂ ಔರಸರಲ್ಲ. ವ್ಯಾಸರಿಂದ ಉತ್ಪನ್ನರಾದ ಕ್ಷೇತ್ರಜರೇ. ಅವರು ಹೆಸರಿಸುವ ತಂದೆಗಳಾದ 'ಚಿತ್ರವೀರ್ಯ, ವಿಚಿತ್ರವೀರ್ಯರ ತಾಯಿ 'ಮತ್ಸ್ಯಗಂಧಿ,' ತಂದೆ ಶಂತನು. ಶಂತನುವಿನ ಜ್ಯೇಷ್ಠಪತ್ನಿ ಗಂಗೆ, ಗಂಗಾಪುತ್ರ ಭೀಷ್ಮ, ಇತ್ತ ಪಾಂಡವರ ಉತ್ಪತ್ತಿ ವಿಚಿತ್ರವೆಂದರೆ ಅತ್ತ ದುರ್ಯೋಧನಾದಿ ಕೌರವರ ಉತ್ಪತ್ತಿ ಮತ್ತು ವಿಚಿತ್ರ. ಗಾಂಧಾರಿಯು ಒಂದು ಗರ್ಭಪಿಂಡವನ್ನು ಹಡೆದುದು ತೊಳೆಯುವಾಗ ನೂರೊಂದಾಗಿ ಎಣ್ಣೆ ಗಡಿಗೆಗಳಲ್ಲಿ ಬೆಳೆದು ಪ್ರಸವವಾಯಿತಂತೆ. ಶ್ರೀಕೃಷ್ಣನ ಜನ್ಮ ವೃತ್ತಾಂತವಂತೂ ಅದ್ಭುತಮಯವಾಗಿಯೇ ಇದೆ. ಶಿಶುಪಾಲನು ಹುಟ್ಟುವಾಗ ಮೂರು ಕಣ್ಣುಗಳಿದ್ದುವಂತೆ. ಕೃಷ್ಣನೆತ್ತಿಕೊಂಡಮೇಲೆ ಕಡಿಮೆಯಾಯಿತಂತೆ. ಜರಾಸಂಧನು ಹುಟ್ಟಿದಾಗ ಎರಡು ಹೋಳಾಗಿದ್ದು ಜೀವವಿಲ್ಲವೆಂದು ಎಸೆದುಬಿಟ್ಟಿದ್ದರಂತೆ. ಜರೆಯೆಂಬ ರಾಕ್ಷಸಿ ಕೂಡಿಸಿದಾಗ ಜೀವ ಬಂತಂತೆ. ಕರ್ಣನಂತೂ ಸೂರ್ಯಪುತ್ರ, ಕನ್ಯಾಸುತ. ದ್ರೋಣನು ಕುಂಭಸಂಭವ. ದ್ರೌಪದಿಯೂ ಅವಳ ಸೋದರನೂ ಯಜ್ಞಕುಂಡದ ಅಗ್ನಿ

7. ಇವನ್ನು ಈ ಅಧ್ಯಾಯದ ಕಡೆಗೆ ವಿವರಿಸಿದೆ.

ಯಿಂದಲೇ ಹುಟ್ಟಿ ಬಂದವರು. ಸೋದರನು ಹುಟ್ಟುವಾಗ ಹೆಣ್ಣಾಗಿದ್ದು ಆ ಮೇಲೆ ಗಂಡಾದ್ದರಿಂದ ಅವನು ಶಿಖಂಡಿ. ಕೃಪ, ಅಶ್ವತ್ಥಾಮರು ಚಿರ ಜೀವಿಗಳು. ಹೀಗೆ ಮಹಾಭಾರತದ ಮುಖ್ಯಪಾತ್ರಗಳ ಜನನವೆಲ್ಲ ಅಸಾ ಧಾರಣವಾಗಿರುವುದರಿಂದ ಇದರಲ್ಲಿ ಕವಿ ವಿವಕ್ಷೆಯಿಲ್ಲವೆನ್ನುವಂತಿಲ್ಲ. ಅಮಾ ನುಷವೂ ಅತಿಮಾನುಷವೂ ಆದ ಸಾಹಸಾತಿಶಯಗಳನ್ನು ವರ್ಣಿಸಬೇಕೆಂಬ ವಿವಕ್ಷೆಯಿದ್ದುದರಿಂದಲೇ ವ್ಯಾಸರು ಯಥೋಚಿತವಾದ ಅದ್ಭುತ ಪಾತ್ರಗಳನ್ನು ನಿರ್ಮಿಸಿಕೊಂಡಿದ್ದಾರೆನ್ನಬೇಕಾಗುತ್ತದೆ. ಮನುಷ್ಯಸಾಮಾನ್ಯರ ಸಂಕುಚಿತ ದೃಷ್ಟಿಯಿಂದ ಇವರ ವರ್ತನೆಗಳನ್ನಳೆಯುತ್ತ, ಅಂಥ ಪಾಂಡವರು ಒಬ್ಬಳು ಹೆಂಡತಿಯನ್ನು ಮದುವೆಯಾಗುವುದು ಸರಿಯೆ ಮುಂತಾದ ಕ್ಷುಲ್ಲಕವಿಚಾರ ಗಳನ್ನು ವಿಸ್ತರಿಸುವುದು ತಪ್ಪಾಗುತ್ತದೆ.

ಶ್ರೀ ಅರವಿಂದ ಘೋಷರು ತಮ್ಮದೇ ಆದ ಪೂರ್ಣ ದೃಷ್ಟಿಯಿಂದ ಇವೆರಡನ್ನೂ ಮಾರ್ಮಿಕವಾಗಿ ವಿಮರ್ಶಿಸಿದ್ದಾರೆ.—ನಿಷ್ಕಾಮಕರ್ಮವೆಂಬ ಯಾವ ಸಂಯಮದ ಸಿದ್ಧಾಂತವನ್ನು ದ್ವಾರಕೆಯ ಕೃಷ್ಣನು ಬೋಧಿಸಿ, ದ್ವೈಪಾಯನನಾದ ಕೃಷ್ಣನು ಪ್ರಚಾರಮಾಡಿದನೋ, ಅದೇ ಮಹಾಭಾರ ತದ ಮುಖ್ಯಸ್ವರ. ಅದರ ಪರಿಚಯವು ವಾಲ್ಮೀಕಿಯ ಬುದ್ಧಿಗೆ ಎಲ್ಲೂ ಇದ್ದಂತೆ ಕಾಣುವುದಿಲ್ಲ. ಒಂದು ವೇಳೆ ಅವನಿಗೆ ಅದರ ಪರಿಚಯವಾಗಿದ್ದರೆ ಅವನ ಸ್ವಭಾವಸಿದ್ಧವಾದ ಪ್ರೀತ್ಯನಯವೂ ಭಾವುಕವೃತ್ತಿಯೂ ಅದನ್ನು ದೂರ ಮಾಡುತ್ತಿದ್ದುವೆಂದೇ ತೋರುತ್ತದೆ. ಅಂತಹ ಮನೋಧರ್ಮಗಳು ಮೆಚ್ಚು ವುದು ಪ್ರಕಟಿತವಾದ ಭಾಸ್ವರ ಶೌರ್ಯವನ್ನೇ ಹೊರತು ಸಂಯಮನಿಯಮಿತ ವಾದ ಪ್ರಶಾಂತ ಶೌರ್ಯವನ್ನಲ್ಲ. ವಾಲ್ಮೀಕಿಯ ಪಾತ್ರಗಳು ವರ್ತಿಸುವುದು ಭಾವನಾಪರವಶ ಉತ್ಸಾಹದಿಂದಲೇ ಹೊರತು ಬುದ್ಧಿಯ ದಾರ್ಢ್ಯದಿಂದಲ್ಲ. ರಾವಣನನ್ನು ಸುತ್ತಲೂ ತಿರುಗಿಸುವುದೂ ಒಂದು ಅನೀತಿಯ ಉತ್ಸಾಹವೇ. ಎಲ್ಲ ಧೀರ ನೀತಿವಂತರಂತೆ ಆತನು ಪೂರ್ವಸಿದ್ಧವಾದ ಸದಾಚಾರವನ್ನೇ ಸರ್ವರೂ ಸರ್ವದಾ ಮಾನ್ಯಮಾಡಬೇಕೆಂದು ಒತ್ತಿ ಹೇಳಿದನು, ತರ್ಕವಾದಗಳನ್ನು ತಪ್ಪಿಸಿಕೊಂಡನು. ನೂತನ ತತ್ವಚಿಂತಕರ ಸೂಕ್ಷ್ಮ ವಿಚಾರಗಳು ನಿತ್ಯಜೀವನದ ನೀತಿಯ ತಳಪಾಯಕ್ಕೆ ಅಪಾಯಕಾರಿಗಳಾಗ ಬಹುದೆಂದು ಅವುಗಳನ್ನು ದೂರವಿಟ್ಟನು. ಆದ್ದರಿಂದ ನಮ್ಮ ಲೌಕಿಕ ಕಾವ್ಯದ

ಜನಕಪ್ರಾಯನಾದ ವಾಲ್ಮೀಕಿ ಹಿಂದೂ ಸತ್ವದ ವೀರಯುಗದ ನೀತಿಯ ನಾಗರಿಕತೆಯ ಪ್ರತಿನಿಧಿ. ವಾಲ್ಮೀಕಿಯನ್ನೇ ಅನುಸರಿಸಿ ವ್ಯಾಸನು ಇನ್ನೊಂದು ಹೆಜ್ಜೆ ಮುಂದಿನ ಧೀರರ ವಿಪ್ಲವ ಅಥವಾ ಕಲಕಲದಲ್ಲಿ ಕಾಲಿಟ್ಟನು. ಅವನನ್ನು ಕುರಿತ ಕಥೆಗಳಲ್ಲಿ ಸ್ವಲ್ಪವಾದರೂ ತಥ್ಯವಿರುವುದಾದರೆ, ವಾಲ್ಮೀಕಿಯ ಆದರ್ಶ ಗಳಾದ ಆಡಳಿತ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆಗಳನ್ನೇ ಕಾರ್ಯಗತಮಾಡಿ ತೋರಿಸಲು ಆತನು ಸಮರ್ಥವಾಗಿ ಯತ್ನಿಸಿರಬೇಕು. ಧರ್ಮಪ್ರವೃತ್ತಿಗಳಿಗೆಲ್ಲ ಕೇಂದ್ರವಾಗಿ ಅಧರ್ಮಗಳಿಗೆಲ್ಲ ವಿನಾಶಕವಾಗುವಂತೆ ಒಂದು ರಾಜ್ಯವ್ಯವಸ್ಥೆ ಯನ್ನು ನಿರ್ಮಿಸಲು ಶ್ರಮಿಸುತ್ತಿದ್ದ ಒಬ್ಬ ರಾಜನೀತಿವಿಶಾರದನಿಗೆ ಅವನು ತನ್ನ ಬೆಂಬಲವನ್ನೆಲ್ಲ ಕೊಟ್ಟಿರಬೇಕು. ವಾಲ್ಮೀಕಿ ತನ್ನ ಆದರ್ಶಕ್ಕೂ ಪರಿ ಸರಕ್ಕೂ ಸಮನ್ವಯ ದೊರೆಯದೆ ಭವ್ಯ ಗತಕಾಲವನ್ನು ಮಾತ್ರ ಚಿಂತಿಸಿದರೆ ವ್ಯಾಸನು ತನ್ನ ಕಾಲದಲ್ಲಿಯೇ ಆವರಣದೊಡನೆ ಯೋಗ್ಯ ಸಮನ್ವಯವನ್ನು ಸಾಧಿಸಿ, ಅದರ ವೃತ್ತಿಗಳಿಂದ ಪೂರ್ಣನಾಗಿ, ಅದರ ಪರಿಣಾಮಗಳ ಬಗ್ಗೆ ಆಶಾಯುತನಾಗಿ ಆದರ್ಶಭವಿಷ್ಯವನ್ನು ಎದುರುನೋಡುತ್ತಿದ್ದ ಕವಿ. ಒಬ್ಬನು ಯೋಗ್ಯತರವಾದ ಗತಪರಂಪರೆಯ ಪುನರುಜ್ಜೀವನವನ್ನು ಬಯಸುವ ರಕ್ಷಣಾವಾದಿ ರಾಜಕಾರಣಿ, ಇನ್ನೊಬ್ಬನು ಯೋಗ್ಯತರವಾದ ಭವಿಷ್ಯಪರಂ ಪರೆಯ ನಿರ್ಮಾಣವನ್ನು ಎತ್ತಿಹಿಡಿಯುವ ಪ್ರಗತಿವಾದಿ ರಾಜಕಾರಣಿ. ಆದ್ದ ರಿಂದಲೇ ವ್ಯಾಸನು ಪೂರ್ವಪರಂಪರೆಯ ನೀತಿಯನ್ನು ತಪ್ಪೆನ್ನುವ ವಿದ್ರೋ ಹಕ್ಕೆ ಹೊರಡುವುದಿಲ್ಲ. ಅದೂ ತನ್ನ ಧೀರ ಸತ್ವಕ್ಕೆ ಅನ್ವಿತವೇ ಆಗುತ್ತದೆ. ಅದನ್ನು ವ್ಯವಹಾರಕ್ಕೆ ಮೂಲವೆಂದಂಗೀಕರಿಸುತ್ತಾನೆ. ಆದರೆ ಹಾಗೆ ಮಾಡು ವಾಗ ನಿಷ್ಕಾಮಕರ್ಮವೆಂಬ ಉಜ್ವಲ ತತ್ವದಿಂದ ಅದನ್ನು ಶುದ್ಧೀಕರಿಸಿ ರೂಪಾಂತರಗೊಳಿಸುತ್ತಾನೆ. ಆದರೆ ಎಲ್ಲಕ್ಕಿಂತಲೂ ಹೆಚ್ಚಾಗಿ ತರ್ಕಶುದ್ಧಿಯೇ ಆತನ ದಿವ್ಯರಾಗ. ವಿಚಾರಗಳಲ್ಲಿ ವೇದಾಂತಗಳಲ್ಲಿ ನೀತಿಸಮಸ್ಯೆಗಳಲ್ಲಿ ಅವನ ಆಸಕ್ತಿ ಅಗಾಧ. ವಾಲ್ಮೀಕಿಯ ಸುಕುಮಾರ ಮನೋಧರ್ಮವು ಮಾಡಲು ಹಿಂಜರಿದ ಧರ್ಮಸೂಕ್ಷ್ಮಪರೀಕ್ಷೆಯನ್ನು ಇವನು ಧೈರ್ಯದಿಂದ ಮಾಡು ತ್ತಾನೆ. ವ್ಯಾವಹಾರಿಕ ನೀತಿಗಿಂತಲೂ ಮೇಲೆ ಬುದ್ಧಿ, ಶೀಲಗಳಿಂದ ಬರುವ ಒಂದು ಆಚರಣೆಯ ತತ್ವವುಂಟೆಂಬುದನ್ನು ದೃಢವಾಗಿ ತೋರಿಸುತ್ತಾನೆ. ಅವನು ಆಡಳಿತ ಸಮಾಜಗಳನ್ನು ವ್ಯಾವಹಾರಿಕ ಹಾಗೂ ರಾಜಕಾರಣಪಟು ವಿನ ದೃಷ್ಟಿಗಳಿಂದಲೇ ನೋಡುತ್ತಾನೆ; ಧ್ಯೇಯಗಳನ್ನು ತೋರಿಸಿದರೂ

ಪ್ರಯೋಗಗಳ ವೈವಿಧ್ಯಕ್ಕಾಗಿ ಮಾತ್ರ. ವಸ್ತುತಃ ಅವನು ಮುಟ್ಟದಿರುವ ವಿಷಯವೇ ಇಲ್ಲ, ಯಾವ ವಿಷಯವನ್ನು ಮುಟ್ಟಲಿ ಅದನ್ನು ತನ್ನ ನೂತನ ದೃಷ್ಟಿ, ಸೂಕ್ಷ್ಮದರ್ಶಿತ್ವ, ಸಮತೋಲ ವಿವೇಚನೆ, ಧೀರ ಕಲ್ಪನೆಗಳಿಂದ ಸಫಲ ಹಾಗೂ ಸ್ವರಸವೆನಿಸುತ್ತಾನೆ. ಈ ಎಲ್ಲ ಅಂಶಗಳಲ್ಲಿಯೂ ಅವನು ಚಿತ್ರಿಸಿರುವ ಸಂಸ್ಕೃತಿಯ ತನುಜನೇ ಅವನು; ಆ ಸಂಸ್ಕೃತಿಯಲ್ಲಿ ಧರ್ಮ ಅರ್ಥಗಳೆರಡೂ ತರ್ಕನಿರ್ಣೀತವಾಗಿವೆ. ಈ ಪ್ರಖರ ವಿಚಾರಶೀಲತೆಯೇ ಮಹಾಭಾರತದ ಪಾತ್ರಗಳಲ್ಲೆಲ್ಲ ಎದ್ದು ಕಾಣುವ ಅಂಶ. ಅವರ ಪ್ರತಿಯೊಂದು ಕೃತಿಯನ್ನೂ ಪ್ರೇರಿಸುವುದು ಅವರ ಬುದ್ಧಿಯ ಪ್ರಚಂಡ ರಭಸ, ಅವೇ ಮುಂದೆ ಘನೀಭೂತವಾಗಿ ಕಾಣುವ ಅವರ ಶೀಲ. ಇದರಿಂದ ಅವರ ಕೃತಿಗಳೊಂದೊಂದೂ ಕಲ್ಲಿನಲ್ಲಿ ಕಡೆದಿಟ್ಟಂತಿವೆ. ರಾಮಾಯಣದ ಪ್ರತಿಯೊಂದು ಮಹಾಕೃತಿಯ ಹಿಂದೆಯೂ ಧರ್ಮ ಅಥವಾ ಅಧರ್ಮದ ಭಾವೋದ್ವೇಗವು ಎಷ್ಟರಮಟ್ಟಿಗೆ ಸ್ಫುಟವೋ ಅಷ್ಟೇಮಟ್ಟಿಗೆ ಇಲ್ಲಿ ಪ್ರಜ್ಞೆಯ ಮಹಾ ಮಂತ್ರ ಶಕ್ತಿಯೂ ಗಮನಾರ್ಹ. ಕಾವ್ಯದುದ್ದಕ್ಕೂ ಆ ಯುಗದಲ್ಲಿ ವಿಜಯಿಯೂ, ವಿಪುಲವೂ ಆದ ಮನೋವ್ಯಾಪಾರದ ದರ್ಶನವೇ ಪ್ರಧಾನ. ಅದೇ ಆ ಸಂಸ್ಕೃತಿಗೆ ರೂಪಾಧಾಯಕವಾದುದು. ಇಲ್ಲಿ ರಾಮಾಯಣಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ವ್ಯಾಪಾರಸಹಕೃತ ವಿಚಾರವಿದೆ, ನಿರ್ವ್ಯಾಪಾರವಾದ ವಿಚಾರ ಕಡಿಮೆ. ಒಂದು ಬೃಹದಾಕಾರದ ಸಂಘರ್ಷ, ಸಂಕ್ಷೋಭಗಳ ಯುಗವನ್ನು ಚಿತ್ರಿಸುತ್ತದೆ. ಇನ್ನೊಂದು ಜನತೆಯ ಮಟ್ಟಿಗೆ ಹೇಳುವುದಾದರೆ, ಶಾಂತಿ, ಪ್ರಸನ್ನತೆಗಳ ಯುಗವನ್ನು ಬಿಂಬಿಸುತ್ತದೆ. (Age of Kālidāsa)

ಇಂದಿನ ಭಾಷೆಯಲ್ಲಿ ಇದಕ್ಕಿಂತ ಹೆಚ್ಚು ತಲಸ್ಪರ್ಶಿಯಾದ ವಿಮರ್ಶೆ ದುರ್ಲಭ. ಇದನ್ನೇ ಪ್ರಾಚೀನರು ಮಹಾಭಾರತವು ಕಾವ್ಯವಷ್ಟೇ ಅಲ್ಲ; ಶಾಸ್ತ್ರವೂ ಹೌದು , ಸ್ಮೃತಿಯಷ್ಟೇ ಅಲ್ಲ, ಸರ್ವಜನೋಚಿತವಾದ ವೇದವೂ ಹೌದು, ಎಂಬ ಮಾತುಗಳಲ್ಲಿ ಹೇಳುತ್ತಿದ್ದರೆಂದು ತೋರುತ್ತದೆ. ಸುಬಂಧು, ಬಾಣ, ಮುಂತಾದ ಮಹಾಕವಿಗಳು ವ್ಯಾಸನನ್ನು ಕವೀಶ್ವರನೆಂದು ಕೊಂಡಾಡಿರುವಂತೆ ಆನಂದವರ್ಧನನಂತಹ ಮಹಾವಿಮರ್ಶಕರು ಕೂಡ ಮಹಾಭಾರತದ ವೈಶಿಷ್ಟ್ಯವನ್ನು ಪ್ರತಿಪಾದಿಸಲು ವಿಶೇಷ ಶ್ರಮಪಟ್ಟಿದ್ದಾರೆ. ಒಂದೊಂದು ಪರ್ವಕ್ಕೂ ಪೂರ್ವಾಪರ 'ಸಂಗತಿ' ಅಥವಾ ಸಮನ್ವಯವನ್ನು ಸಾಂಪ್ರದಾಯಕವಾಗಿ ಸೂಚಿಸುವ ನೀಲಕಂಠ ಚತುರ್ಧರನೇ ಮೊದಲಾದ

ವರೂ ಈ ದಿಕ್ಕಿನಲ್ಲಿ ಯತ್ನಿಸಿದ್ದಾರೆ. ಉಪಾಖ್ಯಾನಗಳೆಲ್ಲಕ್ಕೂ ಮೂಲದ ಯಾವುದೋ ಒಂದು ಸಂಗತಿಯನ್ನು ವಿಶದೀಕರಿಸುವ ಔಚಿತ್ಯವಿರುವುದೇ ಹೊರತು, ಸಮಗ್ರ ಕಾವ್ಯದ ದೃಷ್ಟಿಯಿಂದ ಪ್ರಧಾನ ಔಚಿತ್ಯವಿರುವುದಿಲ್ಲ. ಪ್ರಾಧಾನ್ಯವೆಲ್ಲ 'ಜಯ'ಕ್ಕೆ; ಅದರ ಹಿಂದಿನ ಮಹಾಯುದ್ಧಕ್ಕೆ; ಯುದ್ಧದ ಹಿನ್ನೆಲೆಯ ಸನ್ನಿವೇಶಗಳಿಗೆ. ಇಷ್ಟನ್ನಾದರೂ ಕಾವ್ಯವಿಮರ್ಶಕರು ಒಪ್ಪಲೇ ಬೇಕು. ಒಪ್ಪಿದೊಡನೆಯೇ ಮಹಾಭಾರತದ ಮಹಾಸಾಗರದಲ್ಲಿಯೂ ಒಂದು ಐಕ್ಯ ಕಾಣಲು ಬರುತ್ತದೆ. ಅಲ್ಲಿ ಅನೇಕ ತಿಮಿ ತಿಮಿಂಗಿಲಗಳೂ, ನಕ್ರ ಮಕರಗಳೂ ಆಳದಲ್ಲಿ ನಿದ್ರಿಸುತ್ತಿರಬಹುದು. ಮೇಲೆ ಎಷ್ಟೋ ಅಲೆಗಳೂ ಸುಳಿಗಳೂ ನೊರೆಗಳೂ ಅಪ್ಪಳಿಸಿ ಭೋರ್ಗರೆಯುತ್ತಿರಬಹುದು. ಎಷ್ಟೋ ನದಿನದಗಳೂ ಬಂದು ಸೇರುತ್ತಿರಬಹುದು. ಇಷ್ಟಾದರೂ ('ಅಂಭೋ ಯಥಾ ಸಲಿಲಮೇವ ಹಿ ತತ್ಸಮಸ್ತಮ್') ಸಮಸ್ತವೂ ನೀರೇ ಎಂಬ ಕಲ್ಪನೆ ಹೇಗೆ ಮಾಸುವುದಿಲ್ಲವೋ ಹಾಗೆ ಮಹಾಭಾರತವೆಲ್ಲವೂ ಕೃಷ್ಣ ರೂಪಿಯಾದ ಒಬ್ಬ ಭಗವಂತನ ಅಭಿನಯ ಅರ್ಜುನಾದಿಗಳೆಲ್ಲರೂ ನಿಮಿತ್ತ ಮಾತ್ರರು ಭಗವದ್ಗೀತೆಯೇ ಅದರ ತತ್ತ್ವಸಾರ; ಲೋಕೋದ್ಧಾರ-ಲೋಕವಿನಾಶಗಳು ತಕ್ಕಡಿಯಲ್ಲಿ ತೂಗಾಡುತ್ತಿರುವುದೇ ಅದರ ಕಥಾವಸ್ತುವೆಂದು ಭಾಸವಾದೀತ. ಧರ್ಮಾಧರ್ಮಗಳ ವಿವೇಚನೆ ಮೂಲಭಾರತಕ್ಕೆ ಹೊರಗೆಂದು ತಿಳಿಯುವ ಪಾಶ್ಚಾತ್ಯ ಪಂಡಿತರು ಎಂದೂ ಅದರ ಜೀವವನ್ನು ಅರಿಯಲಾರರು ಮಹಾಭಾರತವು ಇತಿಹಾಸವೆಂದು ಭಾರತೀಯರು ಅದಕ್ಕೆ ಮನ್ನಣೆ ಯೀಯುವುದಿಲ್ಲ; ಅದರ ಐತಿಹಾಸಿಕಸಾಮಗ್ರಿಗಳ ವಿಮರ್ಶೆಯೇ ಅಪ್ರಕೃತ. ಕ್ರಿಶ್ಚಿಯನರು ಬೈಬಲಿನ ಕಥೆಗಳನ್ನು ಪವಿತ್ರವೆಂದು ಪೂಜಿಸುವಂತೆ, ಇನ್ನೂ ದೊಡ್ಡವಳೇ ಆಗದ ಮೇರಿಗೆ ಮಗನಾದುದು ಸಂಭವವೆಂದು ನಂಬುವಂತೆ, ಭಾರತೀಯರಾದರೂ ಶ್ರೀಕೃಷ್ಣನ ಜನ್ಮವೃತ್ತಾಂತ ಮತ್ತು ದಿವ್ಯಸಂದೇಶಗಳನ್ನು ತಿಳಿಸುವ ಪರಮ ಪವಿತ್ರ ಗ್ರಂಥವೆಂದು ಮಹಾಭಾರತ ವನ್ನು ತಿಳಿಯುತ್ತಾ ಬಂದಿದ್ದಾರೆ. ಕಾವ್ಯವಿಮರ್ಶಕನಿಗೆ ಈ ಎರಡು ಅತಿಗಳೂ ಅಗತ್ಯವಿಲ್ಲ; ಅವನಿಗೆ ಬೇಕಾದುದು ರಸಗ್ರಾಹಿಯಾದ ಮಧ್ಯಮಾರ್ಗ, ಕಾವ್ಯಮಾರ್ಗದಲ್ಲಿ ಪ್ರತಿಪಾದಿತವಾಗಿರುವ ಜೀವನ ವಿಮರ್ಶೆ. ಇದಕ್ಕೆ ಮಹಾ ಭಾರತದಲ್ಲಿ ಕೊರತೆಯೇನೂ ಇಲ್ಲ. ಆದರೆ ರಾಮಾಯಣದಂತೆ ಅದರ ಸ್ಪಷ್ಟ ಕಲ್ಪನೆ ಬರುವುದು ಮಾತ್ರ ದುಸ್ಸಾಧ್ಯ ಯೋಗ್ಯ ಮಾರ್ಗದರ್ಶನವಿಲ್ಲದೆ

ಹೋದರೆ. ಅಂತಹ ಮಾರ್ಗದರ್ಶನವು ಶ್ರೀ ಅರವಿಂದರ ಮತ್ತು ಪ್ರಾಚೀನರ ಬರವಣಿಗೆಯಲ್ಲಿದೆಯೆಂದು ತಿಳಿದು ಮುಂದುವರಿದ್ದಿದೆ.

**ಕಾವ್ಯವಿಮರ್ಶೆ :**

**“ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್॥**
**ಓಂ ನಮೋ ಭಗವತೇ ವಾಸುದೇವಾಯ. ”**

**[ನಮಿಸಿ ನಾರಾಯಣನ ನರನ ಪುರುಷೋತ್ತಮನ ।**
**ವ್ಯಾಸವಾಗ್ದೇವಿಯರ ಬಳಿಕ ಹೇಳ್ವುದು ಜಯವ ॥]**

——ಭಾಷಾಂತರ ಎ. ಆರ್ ಕೃಷ್ಣಶಾಸ್ತ್ರಿಗಳದು.

ಇದು ಮಹಾಭಾರತದ ಆದಿಯಲ್ಲೇ ಕೆಲವು ಹಸ್ತ ಪ್ರತಿಗಳಲ್ಲಿ ಬರುವ ಮಂಗಳ. ಇದು ಪ್ರಕ್ಷಿಪ್ತವೆಂದರೂ ಅತಿ ಪ್ರಾಚೀನವಾದ ಭಾಗವತ ಸಂಪ್ರದಾಯದ ಪ್ರತೀಕವೆಂದೊಪ್ಪಬೇಕು. ಇದರಲ್ಲಿ ಒಂದೊಂದು ಮಾತು ಗಮನಾರ್ಹ. “ಜಯ”ವೆಂದು ವಸ್ತು ನಿರ್ದೇಶಮಾಡುವಾಗಲೇ ಅದರ ಕೀರ್ತಿಯನ್ನೆಲ್ಲ ವಾಸುದೇವ ಅಥವಾ ನಾರಾಯಣ ಅಥವಾ ನರೋತ್ತಮ ನರ ಅಥವಾ ಭಗವಂತನಿಗೆ ಭಕ್ತಿಯಿಂದ ಸಮರ್ಪಿಸುತ್ತಿದ್ದಾನೆ ವ್ಯಾಸಋಷಿ. ನಾರಾಯಣ ಶಬ್ದದಿಂದ ಶ್ರೀಕೃಷ್ಣನೂ ನರಶಬ್ದದಿಂದ ಅರ್ಜುನನೂ ವಿವಕ್ಷಿತರೆಂದು ಹೇಳಿದರೂ ಶ್ರೀಕೃಷ್ಣನಿಗೆ ಅಗ್ರಪೂಜೆ, ಅವನ ನಿಮಿತ್ತಮಾತ್ರನೆಂದು ಅರ್ಜುನನಿಗೆ ಮರ್ಯಾದೆ. ಪಾಂಡವರ ವಿಜಯವೇ ಕಾವ್ಯದ ತಿರುಳೆಂಬುದ ನಿಜ. ಆ ವಿಜಯಕ್ಕೆ ಅರ್ಜುನನ ವಿಕ್ರಮವೂ ಧರ್ಮರಾಯನ ಪುಣ್ಯವೂ ಕಾರಣಗಳೆಂದು ಮೇಲುನೋಟಕ್ಕೆ ತೋರುವುದೂ ನಿರ್ವಿವಾದ. ಆದರೆ ಕವಿಯ ಅಭಿಪ್ರಾಯ ಮಾತ್ರ ಇವೆರಡಕ್ಕೂ ಮೂಲವಾಗಿ ಲೀಲಾ ಮಾನುಷ ವಿಗ್ರಹನಾದ ಶ್ರೀಕೃಷ್ಣನ ಪ್ರಭಾವವುಂಟೆಂಬುದೇ. ಇಲ್ಲಿ ಯುದ್ಧ ನಡೆಯುವುದು, ಸಂಘರ್ಷವೊದಗುವುದು, ಕೆಲವು ದಾಯಾದಿಗಳಿಗೆ ಮಾತ್ರವಲ್ಲ, ಪರಸ್ಪರ ವಿರುದ್ಧವಾದ ಎರಡು ದೃಷ್ಟಿಕೋನಗಳಿಗೆ, ಸಮನ್ವಯಾತೀತವಾದ ಎರಡು ಆಚಾರ ಮತ್ತು ವಿಚಾರ ಪರಂಪರೆಗಳಿಗೆ; ಗತ ವೈದಿಕಸಂಪ್ರದಾಯ ಮತ್ತು ಜನಿಷ್ಯಮಾಣ ವಿಶಾಲ ಹಿಂದೂ ಧರ್ಮಗಳಿಗೆ,

ರೂಢಮೂಲವಾದ, ಗತಸತ್ವವಾದ, ಪೂರ್ವ ಪರಂಪರೆಯ ರಕ್ಷಕರಾದ ಕ್ಷತ್ರಿಯರು ಮತ್ತು ಉದಯೋನ್ಮುಖವಾದ ಜಾತ್ಯತೀತ, ವಿಶ್ವಧರ್ಮದ ಬೆಂಬಲಿಗರಿಗೆ. ಇದನ್ನು ನೋಡಲು ಸರಿಯಾಗಿ ಗ್ರಹಿಸಬೇಕು ; ಗ್ರಹಿಸಿದರೆ ಮಹಾಭಾರತವು ರಾಷ್ಟ್ರೀಯಮಹಾಕಾವ್ಯವೆಂಬಖ್ಯಾತಿಗೆ ಭಾಜನವಾಗುವುದು ಸಾರ್ಥಕವೆಂಬುದರ ಅರಿವಾಗುತ್ತದೆ.

ಶ್ರೋತ್ರಿಯರ ಬ್ರಹ್ಮಚರ್ಯದ ಫಲವಾಗಿ ಪ್ರಾಚೀನ ವೇದಗಳು ಇಂದಿನವರೆಗೂ ಉಳಿದುಬಂದಿವೆ. ಅವುಗಳಿಂದ ಸಾವಿರ ವರ್ಷಗಳನಂತರ ಭಾರತದ ಆರ್ಷಕಾವ್ಯಗಳನ್ನು ಕಾಣುತ್ತೇವೆ. (ವೇದಕಾಲೀನ ಲೌಕಿಕ ಸಾಹಿತ್ಯ ನಮಗೆ ಉಪಲಬ್ಧವಿಲ್ಲ.) ಆದರೆ ಮಧ್ಯಂತರದ ಈ ದೀರ್ಘ ಕಾಲಾವಧಿಯಲ್ಲಿ ಭಾರತೀಯರ ಲೌಕಿಕ ಜೀವನದ ಧ್ಯೇಯಗಳಲ್ಲಿ ಬೇಕಾದಷ್ಟು ಏರುಪೇರುಗಳು ಬಂದಿದ್ದುವು ವರ್ಣಾಶ್ರಮಧರ್ಮಗಳ ಬಿಗಿ ಬಹಳವಾಗಿ, ಒಂದು ಕಡೆ ಸ್ವರ್ಗಾದಿ ಸುಖಾಪೇಕ್ಷೆಯಿಂದ ಮಾಡುವ ಯಜ್ಞಾದಿಗಳ ಬಾಹ್ಯಪ್ರದರ್ಶನಗಳೂ ಇನ್ನೊಂದು ಕಡೆ ಮೋಕ್ಷಾಪೇಕ್ಷೆ ಯಿಂದ ಸಂನ್ಯಾಸಿಗಳಾಗುತ್ತಿದ್ದವರ ಆಧಿಕ್ಯವೂ ಸಿತ್ಯಚಿತ್ರಗಳಾಗಿದ್ದುವು. ಮೊದಲನೆಯ ಪ್ರವೃತ್ತಿಮಾರ್ಗವು ಅಂತಸ್ಸತ್ವವನ್ನು ಕಳೆದುಕೊಂಡು ಭಿನ್ನ ವರ್ಗಗಳಲ್ಲಿ ರಾಗದ್ವೇಷಗಳನ್ನು ಬೆಳೆಯಿಸುವುದರಲ್ಲೇ ಪರ್ಯವಸಾನ ವಾಗುತ್ತಿದ್ದಿತೆಂದು ಕಾಣುತ್ತದೆ. ಅರ್ಥಕಾಮಗಳ ಸಂಯಮವನ್ನು ಸಾಧಿಸಲು ಅದರ ಅಂತಸ್ಸತ್ತ್ವವಾದ ಧರ್ಮದ ಪುನರುಜ್ಜೀವನ ಅಗತ್ಯ ವಾಗಿದ್ದಿತು. ಅರ್ಥಶೂನ್ಯವಾದ ಕರ್ಮಾಚರಣೆ ತಪ್ಪಿ ಭಕ್ತಿಪೂರ್ಣವಾದ ಸಮಾಜೋಪಕಾರಕವಾದ ಕರ್ಮಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಅವಶ್ಯವಾ ಗಿದ್ದಿತು. ವೇದೋಕ್ತವೆಂಬ ಒಂದೇ ಕಾರಣದಿಂದ ಇಂದ್ರ ಮೊದಲಾದ ಅನೇಕ ದೇವತೆಗಳಿಗೆ ಯಜ್ಞಮಾಡಿದರೆ ದೇಶೋದ್ಧಾರವಾಯಿತೆಂಬ ಭಾವನೆ ರಾಜರಲ್ಲಿ ಹೆಚ್ಚಿದಂತೆಲ್ಲ, ಯಾಜಿಕ ಪಂಗಡದವರ ಪ್ರಾಬಲ್ಯ ಹೆಚ್ಚುತ್ತ ವೇದಾಧಿಕಾರವಿಲ್ಲದ ಜನಸಾಮಾನ್ಯರ ಪ್ರಗತಿ ಕುಂಠಿತವೂ ಆಗುತ್ತಿದ್ದಿರಬಹುದು. ಹಾಗೆಯೇ ಎರಡನೆಯ ನಿವೃತ್ತಿಮಾರ್ಗವೂ ಸಮಾಜದ ಕಲ್ಯಾಣವನ್ನು ಕೈಬಿಡುತ್ತಿದ್ದಿರಬೇಕು. ಹೀಗೆ ದೇಶದಲ್ಲಿ ಪಕ್ಷಪಂಗಡಗಳೂ, ವರ್ಗಗಳೂ ಧರ್ಮದ ಹೆಸರಿನಲ್ಲಿ ಹೆಚ್ಚುವುದನ್ನು ತಪ್ಪಿಸಿ,

ಶಾಶ್ವತವಾದ ನೂತನ ಧರ್ಮಸಂಸ್ಥಾಪನೆ ಮಾಡಿದ ಮಹಾತ್ಮನೇ ಶ್ರೀಕೃಷ್ಣ ; ಅವನ ನೂತನ ಧರ್ಮ ಪ್ರಾಚೀನ ಧರ್ಮದ ಅಂತಸ್ಸತ್ವವನ್ನೆಲ್ಲ ಹೀರಿಕೊಂಡಿದ್ದಂತೆ ನಿರ್ಜೀವ ಅಂಶಗಳನ್ನು ನಿರ್ದಾಕ್ಷಿಣ್ಯವಾಗಿ ದೂರೀಕರಿಸಿಯೂ ಇತ್ತು, ಅನೇಕ ದೇವತೆಗಳ ಸಂತೆಯ ಬದಲು ಒಬ್ಬ ಸರ್ವಾಂತರ್ಯಾಮಿ ಭಗವಂತನ ಕಲ್ಪನೆ, ಅರ್ಥಹೀನಯಜ್ಞಕ್ಕೆ ಬದಲು ಭಕ್ತಿಪೂರ್ಣ ಆರಾಧನೆ, ಸಂನ್ಯಾಸಮಾರ್ಗದ ಬದಲು ನಿಷ್ಕಾಮಕರ್ಮದ, ಲೋಕಸೇವೆಯ ಧ್ಯೇಯ, ಜ್ಞಾನ-ಕರ್ಮ-ಭಕ್ತಿಗಳ ಸಮನ್ವಯ, ಧರ್ಮದ ಸಾರ್ವತ್ರಿಕತೆ, ಇವೇ ಅವನ ಹೊಸ ಸಂದೇಶದ ಮುಖ್ಯಾಂಶಗಳು. ಶ್ರೀಕೃಷ್ಣನು ಕ್ರಾಂತಿ ಮಾರ್ಗವನ್ನನುಸರಿಸದೆ ಶಾಂತಿಮಾರ್ಗದಿಂದಲೇ ತನ್ನ ಪ್ರಚಾರವನ್ನು ನಡೆಸುತ್ತಿದ್ದುದರಿಂದ ಯಜ್ಞಮಾಡಬೇಡಿ ಎನ್ನುವ ಬದಲು, ಯಜ್ಞದ ಮೂಲತತ್ವವನ್ನು ನೋಡಿ ಆಚರಿಸಿ, ಅದರ ಮೂಲತತ್ವವೇ ಸಮಾಜಸೇವೆ ಅಥವಾ ನಿಷ್ಕಾಮಕರ್ಮ, ಜ್ಞಾನಹೀನವಾದ ಅಂಧಾಚರಣೆ ವ್ಯರ್ಥ, ಸ್ಥಿತಪ್ರಜ್ಞರಾಗಿ ಕೆಲಸಮಾಡಿ; ಸ್ವರ್ಗಕ್ಕಿಂತ ನಿಃಸ್ವಾರ್ಥಕರ್ಮದಿಂದ ಬರುವ ಧರ್ಮ ಹೆಚ್ಚಿನದು, ನಿಜವಾದ ಭಕ್ತಿಯಿಂದ ಸನ್ಮಾರ್ಗದಲ್ಲಿದ್ದರೆ ಭಗವಂತನೆಂದೂ ಕೈಬಿಡುವುದಿಲ್ಲ, ನೀವು ಯಾವ ದೇವರಿಗೆ ಕೈಮುಗಿದರೂ ಅದು ಭಗವಂತನಿಗೇ ಸೇರುತ್ತದೆ. ಅವನಿಗೆ ಬೇಕಾದುದು ಅಂತರಂಗ ಶುದ್ಧಿ, ಬಾಹ್ಯಾಡಂಬರವಲ್ಲ, ಅವನಿಗೆ ಎಲ್ಲರೂ ಒಂದೇ ಸಮ, ಮೇಲಿನವರು, ಕೀಳಿನವರೆಂಬ ಭೇದಗಳಿಲ್ಲ, ಇದನ್ನೇ ಹಿಂದಿನ ಉಪನಿಷತ್ತುಗಳಲ್ಲೂ ಹೇಳಿದೆ' ಎಂದು ಸರ್ವರಿಗೂ ಸರ್ವಕಾಲಕ್ಕೂ ಅನ್ವಯಿಸುವಂತೆ ತತ್ವ ಪ್ರಚಾರ ಮಾಡುತ್ತಿದ್ದನು. ಇದೇ ಭಗವದ್ಗೀತೆಯ ಸಾರ. ಅದನ್ನು ಅಂದಿನಿಂದ ಇಂದಿನವರೆಗೂ ವಿಶ್ವಧರ್ಮದ ಸುಂದರತಮ ಕಾವ್ಯವೆಂದು ದೊಡ್ಡವರೆಲ್ಲರೂ ಅಂಗೀಕರಿಸುತ್ತಲೇ ಬಂದಿದ್ದಾರೆ.

ಆದರೆ ಕೃಷ್ಣನ ಕಾಲದ ಅನೇಕರಿಗೆ ಈ ನೂತನ ಧರ್ಮವು ಅಪ್ರಿಯವಾಗಿ ಕಂಡಿತು. ದೇಶವು ಇನ್ನೂ ಆ ವಿಶ್ವಕಲ್ಯಾಣದ ಉದಾತ್ತ ತತ್ವವನ್ನು ಅಂಗೀಕರಿಸಲು ಪಕ್ವವಾಗಿರಲಿಲ್ಲ. ದೇಶವು ಅನೇಕ ಅರಸರ ಅಂಕೆಯಲ್ಲಿತ್ತು. ಒಬ್ಬೊಬ್ಬರೂ ರಾಜ್ಯಲೋಲುಪರೂ, ಭೋಗಾಸಕ್ತರೂ ಆಗಿದ್ದರು. ಯುದ್ಧವಿದ್ಯೆಗೆ ಎಲ್ಲಕ್ಕಿಂತ ಹೆಚ್ಚಿನ ಮನ್ನಣೆಯಿತ್ತು. ಇಬ್ಬರು ರಾಜರು

ಶಾಂತಿಯಿಂದ ಸುಖವಾಗಿರುವುದಕ್ಕಿಂತ ಕಾದಿ ವೀರಸ್ವರ್ಗವನ್ನು ಪಡೆಯು ವುದೇ ಹೆಚ್ಚಿನ ಕ್ಷಾತ್ರವೆಂಬ ವಿಪರೀತಬುದ್ಧಿಯೂ ಕೆಲವರಲ್ಲಿ ಬೆಳೆದಿತ್ತು. ಇವರಿಂದ ಪ್ರಜಾಕ್ಷೋಭೆಯಾಗುತ್ತಿದ್ದುದು ಸಹಜವಾಗಿಯೇ ಇದೆ. ಜೂಜು, ವನಿತಾಪಹಾರ, ರಾಜರನ್ನು ಸೆರೆಯಲ್ಲಿಡುವುದು ಮುಂತಾದುವು ದಿನಚರ್ಯೆಗಳಾಗಿದ್ದುವು. ದೈವಭಕ್ತಿಗಾಗಲಿ, ಪರಸ್ಪರ ಪ್ರೇಮ, ಸೌಹಾರ್ದ ಗಳಿಗಾಗಲಿ, ಮೋಕ್ಷದ ಅಪೇಕ್ಷೆಗಾಗಲಿ ಅಲ್ಲಿ ಸಾಕಷ್ಟು ಬೆಲೆಯಿರಲಿಲ್ಲ. ಇಂತಹವರೆಲ್ಲರೂ–ಆರ್ಯಕ್ಷತ್ರಿಯರು ಮತ್ತು ಅನಾರ್ಯ 'ದಾನವ'ರು–ಕೃಷ್ಣನ ವಿರೋಧಿಗಳಾದರು. ಆಗ ಕೃಷ್ಣನ ಸಂದೇಶವನ್ನು ಶಿರಸಾಮಾನ್ಯಮಾಡಿ ಒಪ್ಪಿ ಕೊಂಡವರಲ್ಲಿ ದೀರ್ಘದರ್ಶಿಗಳಾದ ಭೀಷ್ಮ, ವ್ಯಾಸ, ವಿದುರರು ಮುಖ್ಯರು. ಆಚರಣೆಗೆ ತರಲು ಅಥವಾ ಶ್ರಮಿಸಿದವರೆಂದರೆ ಪಾಂಡವರು. ಸಾಮಾನ್ಯ ಜನತೆಯು ಆಗಲೇ ಆತನನ್ನು ಪ್ರತ್ಯಕ್ಷ ದೇವತೆಯೆಂದು ಪೂಜಿಸಲಾರಂಭಿ ಸಿದ್ದಿತು. ಹತ್ತಾರು ಅರಸರನ್ನು ಗೆದ್ದರೂ ತಾನು ಸಿಂಹಾಸನವನ್ನೇರದೆ, ಎಲ್ಲ ವರ್ಗದವರಲ್ಲೂ ರಕ್ತಸಂಬಂಧವನ್ನು ಬೆಳೆಸಿ, ಯುದ್ಧ ಅನಿವಾರ್ಯ ವಾದಾಗಲೂ ತಾನು ಶಸ್ತ್ರಹಿಡಿಯದೆ, ತನ್ನ ಜೀವನವನ್ನು ಲೋಕಕಲ್ಯಾಣಕ್ಕೆ ಮೀಸಲಾಗಿಟ್ಟು, ಸಾಮ, ದಾನ, ಭೇದ, ದಂಡಗಳೆಲ್ಲದರಿಂದಲೂ ಸಂತತ ಶ್ರಮಿಸಿ, ಇತರರಿಗೆ ಮಾದರಿಯಾಗುವಂತೆ ಬಾಳಿದ ಮಹಾತ್ಮ ಕೃಷ್ಣ ಶಾಂತಿಯು ಅಸಾಧ್ಯವಾಗಿ, ತನ್ನ ನೂತನ ಧರ್ಮವು ನೆಲೆಗೊಳ್ಳಲು ಗತ್ಯಂತರವಿಲ್ಲದೆ ಬಂದಾಗ ಕ್ಷಾತ್ರದ ತಪ್ಪುಕಲ್ಪನೆ ನಿರ್ನಾಮವಾಗುವಂತೆ ಕ್ಷತ್ರಿಯ ವಂಶಗಳೆಲ್ಲ ನಾಶವನ್ನೈದುವಂತಹ ಘೋರಯುದ್ಧವನ್ನು ಯೋಜನೆ ಮಾಡಿ, ದಿನದಿನಕ್ಕೂ ಎಚ್ಚರಿಕೆಯಿಂದ ನಿರ್ವಾಹಮಾಡಿದ ಸೂತ್ರಧಾರ ಶ್ರೀಕೃಷ್ಣ. ಇದರಿಂದ ವಿಶ್ವಶಾಂತಿಗೆ, ಲೋಕಕಲ್ಯಾಣಕ್ಕೆ, ಕಂಟಕಪ್ರಾಯವಾಗಿದ್ದ ಕ್ಷತ್ರಿಯಕುಲ ವಿನಾಶವಾಯಿತೆಂದು ತಿಳಿಯಬೇಕೇ ಹೊರತು ಜನತೆಯೂ ಜತೆಗೇ ವಿಲಯವೈದಿತೆಂದು ತಿಳಿಯಬಾರದು ಹಳೆಯ ಭಾವನೆಗಳು ತೊಲಗಿ ಹೊಸಬಾಳು ಮುಂದಕ್ಕೆ ಹಸನಾಯಿತು. ಶ್ರೀಕೃಷ್ಣನ ಅವತಾರ ಕಾರ್ಯ ನಿಜವಾಗಿ ನೆರವೇರಿದ್ದು ನೂತನ ಧರ್ಮವು ಸಂಸ್ಥಾಪಿತವಾದಾಗಲೇ. ಕಲಿಯುಗವೂ ಸತ್ಯಯುಗವಾಗಬೇಕಾದರೆ ಹೇಗಿರ ಬೇಕೆಂಬ ಸಂದೇಶವನ್ನು ಶ್ರೀಕೃಷ್ಣನು ಬಾಯಿಂದ ಸಾರಿ, ಬಾಳಿಂದ ತೋರಿ, ತನ್ನ ಕಾರ್ಯ ಮುಗಿದೊಡನೆ ದೇಹತ್ಯಾಗ ಮಾಡಿದ ಮಹಾತ್ಮ.

ಅವನ ಸಂದೇಶದ, ಅವನ ಕೃತಿಗಳ, ಮಹಾಕಾವ್ಯವೇ ಮಹಾಭಾರತ. ಅವನ ಮಹತ್ವವನ್ನೊಪ್ಪಿದವರೆಲ್ಲ ಮೇಧಾವಿಗಳು, ಪುಣ್ಯಾತ್ಮರು, ಅಭಿವಂದ್ಯರು. ಅವನ ಭಕ್ತಾಗ್ರೇಸರ, ಅವನ ಬಲಗೈ--ಅವನ ಜೀವವೇ ಎಂದರೂ ಸಲ್ಲುತ್ತದೆ—ಅರ್ಜುನ. ಇವರ ಚರಿತೆ ಹೀಗೆ ಶ್ರೀಕೃಷ್ಣನ ದಿವ್ಯಚರಿತೆಗೆ ಅಂಗ. ಹೀಗೆ ತಿಳಿಯುವುದರಿಂದ ದುರ್ಗಮ ಅರಣ್ಯದಂತೆ ಭಾಸವಾಗುವ ಮಹಾಭಾರತದ ನೂರಾರು ಘಟನೆಗಳಿಗೂ ಸುಂದರವಾದ ಸಮನ್ವಯವು ಸಿಕ್ಕುತ್ತದೆ. ಈ ಏಕಸೂತ್ರತೆಯನ್ನು, ಕಥೆಯ ಸುಸಂಘಟಿತ ರೀತಿಯನ್ನು, ಸ್ಪಷ್ಟವಾಗಿ ತಿಳಿದುಕೊಳ್ಳುವುದು ಕಾವ್ಯವಿಮರ್ಶಕನ ಪ್ರಥಮಕರ್ತವ್ಯ.

**' ಅಂತರ್ನಿಗೂಢಾರ್ಥಚಯಪ್ರಕಾಶೇ ದೀಪಃ ಕ್ಷಮೋ**
**ಭಾರತಮಂದಿರೇಽಸ್ಮಿನ್ ।**

ಎಂದು ಅನ್ವರ್ಥಕವಾದ ' ಭಾರತ ಭಾವದೀಪ 'ವನ್ನು ಬರೆದಿರುವ ನೀಲ ಕಂಠನು ಭಾರತದ ತಾತ್ಪರ್ಯವನ್ನು ಸಂಗ್ರಹಿಸುವ ಶ್ಲೋಕಗಳೆಂದು ಈ ಎರಡನ್ನು ನಿರ್ದೇಶಿಸುತ್ತಾನೆ –

**ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ**
**ಸ್ಕಂಧಃ ಕರ್ಣಃ ಶಕುನಿಸ್ತಸ್ಯ ಶಾಖಾಃ ।**
**ದುಃಶಾಸನಃ ಫಲಪುಷ್ಪೇ ಸಮೃದ್ಧೇ**
**ಮೂಲಂ ರಾಜಾ ಧೃತರಾಷ್ಟ್ರೋಽಮನೀಷೀ ॥**

**ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ**
**ಸ್ಕಂಧೋಽರ್ಜುನೋ ಭೀಮಸೇನೋಽಸ್ಯ ಶಾಖಾಃ ।**
**ಮಾದ್ರೀಸುತೌ ಪುಷ್ಪಫಲೇ ಸಮೃದ್ಧೇ**
**ಮೂಲಂ ಕೃಷ್ಣೋ ಬ್ರಹ್ಮ ಚ ಬ್ರಾಹ್ಮಣಾಶ್ಚ ॥**

(I. 1. ೧೧೦-೧)

[ದುರ್ಯೋಧನನು ಕ್ರೋಧವೆಂಬ ಮಹಾವೃಕ್ಷ. ಕಾಂಡವೇ ಕರ್ಣ, ಶಕುನಿಯೇ ಅದರ ಕೊಂಬೆ. ಅದರ ಫಲಪುಷ್ಪಸಮೃದ್ಧಿಯೇ ದುಶ್ಶಾಸನ. ಅವಿವೇಕಿಯಾದ ಅರಸ ಧೃತರಾಷ್ಟ್ರನೇ ಬೇರು.

ಯುಧಿಷ್ಠಿರನು ಧರ್ಮವೆಂಬ ಮಹಾವೃಕ್ಷ. ಕಾಂಡವೇ ಅರ್ಜುನ,

ಭೀಮಸೇನನೇ ಅದರ ಕೊಂಬೆ. ಅದರ ಫಲಪುಷ್ಪಸಮೃದ್ಧಿಯೆಂದರೆ ನಕುಲಸಹದೇವರೇ. ಕೃಷ್ಣ, ಬ್ರಹ್ಮ, ಮತ್ತು ಬ್ರಾಹ್ಮಣರೇ ಬೇರು.]

ಈ ರೂಪಕಮಾಲೆಯಲ್ಲಿ ವಿವಕ್ಷಾತಿಶಯವಿರುವುದೆಲ್ಲ ಕಡೆಯ ಮಾತಿನಲ್ಲೆಂಬುದು ಸ್ಪಷ್ಟ. ಕೃಷ್ಣ, ಬ್ರಹ್ಮ, ಬ್ರಾಹ್ಮಣರು-ಇದೇ ಧರ್ಮದ್ರುಮದ ಮೂಲ. ಅತ್ತಕಡೆ ಅಮನೀಷಿಯಾದ ಧೃತರಾಷ್ಟ್ರನು ಅಧರ್ಮದ ಮೂಲ. ಇವರಿಬ್ಬರ ಸ್ವಭಾವವನ್ನು ಸರಿಯಾಗಿ ತಿಳಿಯದಿದ್ದರೆ, ಬರಿಯ ಮರದ ಎಲೆಗಳನ್ನೋ ಹೂಗಳನ್ನೋ, ಕಾಯಿಗಳನ್ನೋ ಮಾತ್ರ ತಿಳಿದಂತಾಗುತ್ತದೆ. ಇದನ್ನೇ ಇನ್ನೂ ಸ್ಪಷ್ಟವಾಗಿ—

**ವಾಸುದೇವಸ್ಯ ಮಾಹಾತ್ಮ್ಯಂ ಪಾಂಡವಾನಾಂ ಚ ಸತ್ಯತಾಮ್ ।**
**ದುರ್ವೃತ್ತಂ ಧಾರ್ತರಾಷ್ಟ್ರಾಣಾಂ ಉಕ್ತವಾನ್ ಭಗವಾನ್ ಋಷಿಃ ॥**

**(I.1. ೧೦೦--೧)**

[ವಾಸುದೇವನ ಮಾಹಾತ್ಮ್ಯ, ಪಾಂಡವರ ಸತ್ಯ, ಕೌರವರ ದೌರ್ಜನ್ಯ— ಇವನ್ನೇ ಋಷಿಯು ಹೇಳಿರುವುದು]

ಎಂಬ ಶ್ಲೋಕದಲ್ಲಿ ಹೇಳಿದೆ. ಈ ಮಾತನ್ನು ನೀಲಕಂಠನು ಪ್ರತಿ ಪರ್ವದ ಪೀಠಿಕೆಯಲ್ಲಿಯೂ ಬಿಡಿಸಿ ತೋರಿಸಿದ್ದಾನೆ. ದ್ರೌಪದೀ ಪರಿತ್ರಾಣವೇ ಸಭಾ ಪರ್ವದ ಸಾರವೆಂದೂ ಅದರಿಂದ ಭಕ್ತಿಯ ಮಾಹಾತ್ಮ್ಯವೇ ದರ್ಶಿತವಾಗುವುದೆಂದೂ ಅವನು ತಿಳಿಸಿ, ಅದಕ್ಕೆ ಪೋಷಕಗಳಾದ ಪ್ರತಿಜ್ಞಾಪಾಲನೆ, ಸತ್ಸಮಾಗಮ, ತೀರ್ಥಾಟನೆ, ಸ್ವಧರ್ಮಾಚರಣೆಗಳ ಆಖ್ಯಾಯಿಕೆಗಳು ಮತ್ತು ಭಗವಂತನ ಜಗದಂತರಾತ್ಮತ್ವವನ್ನು ತೋರಿಸುವ ದೂರ್ವಾಸೋಪಾಖ್ಯಾನ (ದ್ರೌಪದಿಯಿತ್ತ ಒಂದು ಅಗಳಿನಿಂದ ಶ್ರೀ ಕೃಷ್ಣನು ತೃಪ್ತನಾದೊಡನೆ ನಿಖಿಲ ಜಗತ್ತೇ ತೃಪ್ತವಾಯಿತೆಂದು ಇದು ಹೇಳುತ್ತದೆ)—ಇವೇ ವನಪರ್ವದ ತಿರುಳೆಂದು ಹೇಳಿದ್ದಾನೆ. [ಈ ಎರಡು ಪ್ರಸಂಗಗಳೂ ಪ್ರಕ್ಷಿಪ್ತವೆಂದು ಇಂದಿನ ಸಂಶೋಧನೆ ಸ್ಪಷ್ಟಪಡಿಸಿದೆ.] ವಿರಾಟಾದಿ ಪರ್ವಚತುಷ್ಟಯಗಳಲ್ಲಿ ಅರ್ಥಸಿದ್ಧಿಗೆ ಸೇವೆ, ನೀತಿ, ಕಪಟದಿಂದ ಮಾಡುವ ಗುರುವಧೆಗಳು ಕಾರಣವಾಗುವುವೆಂಬುದು ತಾತ್ಪರ್ಯವೆಂದರೂ ಕೃಷ್ಣನ ದೌತ್ಯ ಬರುವ ಕಾರಣ ಉದ್ಯೋಗ ಪರ್ವವೇ ಮಹಾಭಾರತದ ಸಾರವೆಂದು ಬರೆದಿದ್ದಾನೆ : —

"ಭಾರತೇ ಸಾರಮುದ್ಯೋಗಮಿತಿ ವೃದ್ಧಾನುಶಾಸನಮ್.'

ಮುಂದೆ ಧರ್ಮಾಭಾಸ, ಅರ್ಥಾಭಾಸಗಳನ್ನೂ, ಅಧರ್ಮಾಭಾಸಗಳನ್ನೂ ಕರ್ಣಾದಿ ಪರ್ವತ್ರಯಗಳಲ್ಲಿ ಹೇಳಿದೆಯಲ್ಲದೆ ಮೋಕ್ಷ ಮಾರ್ಗಗಳನ್ನೂ ರಾಜಧರ್ಮಾದಿ ಸ್ವರೂಪಗಳನ್ನೂ ಶಾಂತಿಪರ್ವವೇ ಮೊದಲಾದುವುಗಳಲ್ಲಿ ತೋರಿಸಿದೆಯೆಂದೂ ತಿಳಿಸಿ ಪುರುಷಾರ್ಥಚತುಷ್ಟಯಗಳ ವಿಭಾಗವನ್ನು ಹೀಗೆ ಸ್ಪಷ್ಟಪಡಿಸಿದ್ದಾನೆ —

**ಧರ್ಮಾದಿತ್ರಯಮರ್ಥ ಕಾಮಕರಣ ಪ್ರೀತ್ಯರ್ಥಮಿತ್ಯಲ್ಪಕಾಃ**
**ಧೀಶುದ್ಧಿಕ್ರತು ಜೀವನಾರ್ಥಕತಯಾ ಮುಕ್ತ್ಯರ್ಥ**
**ಮಿತ್ಯುತ್ತಮಾಃ**

[ಧರ್ಮಾದಿತ್ರಯವೂ ಅರ್ಥಕಾಮಗಳ ಸಲುವಾಗಿ ಎನ್ನುವವರು ಅಲ್ಪರು, ಚಿತ್ತಶುದ್ಧಿ ಮತ್ತು ಲೋಕಸಂಗ್ರಹಗಳ ಮೂಲಕ ಮುಕ್ತಿಯ ಸಲುವಾಗಿ ಎನ್ನುವವರು ಉತ್ತಮರು] ಈ ಅಧ್ಯಾಯ ಸಮನ್ವಯದಲ್ಲಿ ಮಹಾಭಾರತ ವನ್ನು ಶಾಸ್ತ್ರವೆಂದು, ಇತಿಹಾಸವೆಂದು, ಪರಿಗಣಿಸಿದೆಯೇ ಹೊರತು ಕಾವ್ಯವೆಂದಲ್ಲ.

ಸಾಂಪ್ರದಾಯಿಕವಾದ ಈ ದೃಷ್ಟಿಯನ್ನು ಮರೆಯದೆ, ಮಹಾಭಾರತ ಕೇವಲ ಕಾವ್ಯವೆಂಬ ಕೋನದಿಂದ ವಿಮರ್ಶಿಸಿದರೆ ಯಾವ ರಸಸೂತ್ರವು ದೃಗ್ಗೋಚರವಾಗುವುದೆಂಬುದನ್ನು ಆನಂದವರ್ಧನನು ಬಹಳ ಹೃದಯಂಗಮವಾಗಿ ತೋರಿಸಿದ್ದಾನೆ.[8] ಮಹಾಭಾರತದ ರಸ ಯಾವುದು? ಎಂಬ ಪ್ರಶ್ನೆಗೆ ವೀರರಸವೆಂಬ ಉತ್ತರ ಸಾಮಾನ್ಯವಾಗಿ ಎಲ್ಲರಿಗೂ ತಟ್ಟನೆ ಸ್ಫುರಿಸುವುದು ಸಹಜ. ಏಕೆಂದರೆ ಇಲ್ಲಿ ಅಸಮಸಾಹಸಿಗಳಾದ ಅತಿರಥ ಮಹಾರಥರ ಪ್ರಚಂಡ ಪರಾಕ್ರಮವೇ ಮೇಲಿಂದ ಮೇಲೆ ಪ್ರತಿಪಾದ್ಯ ವಿಷಯ. ಹಾಗೆ ಹೇಳಿದೊಡನೆ ಅರ್ಜುನನಿಗೆ ಅನ್ಯೂನನಾದ ಧೀರನಾಯಕ ಕರ್ಣನಾಗುತ್ತಾನೆ. ಭೀಮನಿಗೆ ಕಡಿಮೆಯಲ್ಲದ ಮಹಾವೀರ ದುರ್ಯೋಧನ ನಾಗುತ್ತಾನೆ. ಅಷ್ಟೇ ಅಲ್ಲ, ಕಪಟಕ್ಕೆ ಸಿಕ್ಕಿ ಮೃತರಾಗುವ ಕರ್ಣದುರ್ಯೋಧನರು ಭೀಮಾರ್ಜುನರಿಗಿಂತ ಹೆಚ್ಚಿನ ಮಹಾನುಭಾವರೂ, 'ದುರಂತ' ನಾಯಕರೂ ಆಗುತ್ತಾರೆ.

---

8. ನೋಡಿ : ಡಾ॥ ಕೆ. ಕೃಷ್ಣಮೂರ್ತಿ : ಕನ್ನಡ ಧ್ವನ್ಯಾಲೋಕ. IV.

ಇಂದಿನ ಶತಮಾನದ ಭಾರತ ವಿಮರ್ಶೆಯಲ್ಲಿ ಈ ಬಗೆಯ ಸಮೀಕ್ಷೆಗಳು ಬೇಕಾದಹಾಗೆ ಬಂದಿವೆ. ಆದರೆ ವ್ಯಾಸರ ವಿವಕ್ಷೆ ಹೀಗೆಯೇ ಎಂದು ಪ್ರತಿಜ್ಞೆ ಮಾಡುವಂತಿಲ್ಲ. ವೀರರಸ ಕಾವ್ಯದ ಪ್ರಧಾನ ರಸವೆಂದೊಡನೆಯೇ ಮುಖ್ಯವಾಗಿ ಅರ್ಥ ಪ್ರಧಾನಪುರುಷಾರ್ಥವೆಂದೊಪ್ಪಿದಂತಾಗುತ್ತದೆ. ಯುದ್ಧ ಮಾಡುವುದಕ್ಕೆ ಲಕ್ಷ್ಯ 'ಅರ್ಥ'ವೇ ಹೊರತು ಧರ್ಮವೂ ಅಲ್ಲ, ಮೋಕ್ಷವೂ ಅಲ್ಲ. ಇಂದಿನ ನಮ್ಮ ಧ್ಯೇಯ ಹೀಗಿರುವುದರಿಂದ ವ್ಯಾಸರಿಗೂ ಇದೇ ಧ್ಯೇಯವನ್ನು ಆರೋಪಿಸಿ, ನಾವು ತತ್ತ್ವದರ್ಶಿಗಳೆಂದೂ ಪ್ರಾಚೀನ ರಂತೆ ಗತಾನುಗತಿಕರಲ್ಲವೆಂದೂ ಸ್ವಪ್ರಶಂಸೆ ಮಾಡಿಕೊಳ್ಳುವುದು ಸುಲಭ. ಆದರೆ ವಸ್ತುತಃ ಇದು ದೊಡ್ಡ ಭ್ರಾಂತಿ. ಸರ್ವಪುರುಷಾರ್ಥಗಳ ಸಮನ್ವಯ ಕ್ಕಾಗಿ ಭಾರತವನ್ನು ಬರೆದ ವ್ಯಾಸರಿಗೆ,

**ಊರ್ಧ್ವಬಾಹುರ್ವಿರೌಮ್ಯೇಷ ಃ**
**ನಚ ಕಶ್ಚಿತ್ ಶೃಣೋತಿ ಮೇ ।**
**ಧರ್ಮಾದರ್ಥಶ್ಚ ಕಾಮಶ್ಚ**
**ಸ ಕಿಮರ್ಥಂ ನ ಸೇವ್ಯತೇ ॥ (ಭಾರತ ಸಾವಿತ್ರೀ)**

[ತೋಳೆತ್ತಿ ಒಂದೇ ಸಮನೆ ಕೂಗಿ ಹೇಳುತ್ತಿದ್ದೇನೆ, ಒಬ್ಬರಾದರೂ ಕೇಳುವವರಿಲ್ಲ ಧರ್ಮದಿಂದಲೇ ಅರ್ಥಕಾಮಗಳೆರಡೂ ಸಿದ್ಧಿಸಿಯಾವು ! ಆ ಧರ್ಮವನ್ನೇಕೆ ಸೇವಿಸಬಾರದು ?]

ಎಂದು ಕೈಯೆತ್ತಿ ಘೋಷಿಸುವ ವ್ಯಾಸರಿಗೆ, 'ಯೇನ ಕೇನಾಪ್ಯುಪಾಯೇನ' ಸಾಧಿಸಿದ ಅರ್ಥವು ಪರಮಲಕ್ಷ್ಯವೆಂದು ತಿಳಿಯುವುದು ಭ್ರಾಂತಿಯೇ ಸರಿ. ಅವರ ಉದ್ದೇಶ ಹಾಗೆ ಇದ್ದಿದ್ದರೆ, ಅಧರ್ಮದ ಗುರುವಧೆ, ಭ್ರಾತೃಹತ್ಯೆ, ಮುಂತಾದುವುಗಳಿಂದಲೂ ಪಾಂಡವರಿಗೆ ಸುಖ ಪ್ರಾಪ್ತಿ ಬಂತೆಂದು ಅಭ್ಯು ದಯ ಪರಂಪರೆಯನ್ನೇ ಕಾವ್ಯದ ಕಡೆಗೆ ವರ್ಣಿಸುತ್ತಿದ್ದರು. ಆದರೆ ವಸ್ತುತಃ ವರ್ಣಿಸಿರುವುದು ಅವರ ದುಃಖಪರಂಪರೆಯನ್ನೇ ಹೊರತು ಸುಖಲಾಭವ ನ್ನಲ್ಲ. 'ಅಂತೂ ಇಂತೂ ರಾಜ್ಯವಿಲ್ಲ'ವೆನ್ನುವ ಬದಲು 'ಅಂತೂ ಇಂತೂ ಸುಖವಿಲ್ಲ'ವೆಂದರೆ ಅದು ಅಕ್ಷರಶಃ ಪಾಂಡವರ ಯುದ್ಧಾನಂತರದ ಸ್ಥಿತಿಗೆ ಅನ್ವಯಿಸುತ್ತದ. ಹೀಗೆ ಕಥೆಯ ಉಪಸಂಹಾರವನ್ನು ಅನುಲಕ್ಷಿಸದೆ ಪಾಂಡವ ಕೌರವರಿಗೆ ವೀರ ನಾಯಕರ ಪಟ್ಟವನ್ನು ಕಟ್ಟುವುದು ಅನುಚಿತ.

ಅರ್ಥಲೋಭದಿಂದ ಅಧರ್ಮಾನುವೃತ್ತಿ ಉಭಯಪಕ್ಷದವರಲ್ಲಿಯೂ ಕಾಣುತ್ತದೆ. ಆದ್ದರಿಂದ ಒಂದು ಪಕ್ಷದವರನ್ನು ಮಹಾನುಭಾವರೆಂದೂ ಇನ್ನೊಂದು ಪಕ್ಷದವರನ್ನು ಖಳನಾಯಕರೆಂದೂ ಪರಿಗಣಿಸುವುದು ಸರಿಯಲ್ಲ ರಾಮಾಯಣದಲ್ಲಿ ಈ ಬಗೆಯ ವಿಕಲ್ಪಕ್ಕೆಡೆಯಿದೆ, ಮಹಾಭಾರತದಲ್ಲಿಲ್ಲ. ರಾಮಾಯಣದಲ್ಲಿ ವೀರನಾಯಕ ರಾಮ, ರಾವಣನು ಪ್ರತಿನಾಯಕನಾದುದರಿಂದ ಅವನ ಪಾತ್ರದ ವೀರ ಕೇವಲ ವೀರಾಭಾಸ, ರಾಮನ ರತಿಯು ಶೃಂಗಾರವಾದರೆ ರಾವಣನದು ಶೃಂಗಾರ ರಸದ ಆಭಾಸ ಹೇಗೋ ಹಾಗೆ. ಆದರೆ ಮಹಾಭಾರತದಲ್ಲಿ ಉಭಯ ಪಕ್ಷದವರ ವೀರವೂ ರಸಾಭಾಸವೇ ಹೊರತು ರಸವಲ್ಲ. ಅಧರ್ಮಸಂಮಿಶ್ರವೆನಿಸುವ ಅಂಶಗಳು ಸೇರಿ ಸಹೃದಯ.ರ ಶುದ್ಧರಸ ಪ್ರತೀತಿಗೆ ಬಾಧಕಗಳಾಗುವುದರಿಂದ ಸೋದರರ ರಣೋತ್ಸಾಹವು ವೀರರಸದ ಶುದ್ಧ ಪ್ರತೀತಿಗೆ ಪ್ರತಿಬಂಧಕ. ಇದು ಸಂಸ್ಕೃತ ಲಾಕ್ಷಣಿಕರ ಸಿದ್ಧಾಂತ. ಈ ಸಿದ್ಧಾಂತಕ್ಕೆ ಅನುಗುಣವಾಗಿ ಮಹಾಭಾರತವನ್ನು ಸಮಗ್ರವಾಗಿ ಮೊಟ್ಟಮೊದಲು ಸಮೀಕ್ಷಿಸಿದ ಮಹಾ ವಿಮರ್ಶಕನೇ ಆನಂದವರ್ಧನ ಅವನ ಅಭಿಪ್ರಾಯದಲ್ಲಿ ಮಹಾಭಾರತದ ಉಪಕ್ರಮ, ಮಧ್ಯಭಾಗ, ಉಪಸಂಹಾರಗಳೆಲ್ಲವೂ ನಿರ್ದೇಶಿಸುವುದು ಅರ್ಥ ಕಾಮಗಳ ನಿರುಪಯುಕ್ತತೆಯನ್ನು, ಧರ್ಮಾವಿರುದ್ಧವಾದ ಅರ್ಥ ಕಾಮಗಳ ಮೂಲಕ ಮೋಕ್ಷಪ್ರಾಪ್ತಿಯ ಅಗತ್ಯವನ್ನು, ವೈರಾಗ್ಯದ, ನಿಃಸ್ವಾರ್ಥಬುದ್ಧಿಯ, ಪ್ರಶಾಂತಚಿತ್ತದ ಆವಶ್ಯಕತೆಯನ್ನು. ಇದನ್ನು ತೋರಿಸುವ ಕಾವ್ಯರಸವೊಂದುಂಟೇ ಹಾಗಾದರೆ, ಎಂಬ ಪ್ರಶ್ನೆಯೇಳುತ್ತದೆ. ಮಹಾಭಾರತದಲ್ಲಿ ಕಾವ್ಯಾಸ್ವಾದವುಂಟೆಂದು ಒಪ್ಪುವವರೆಲ್ಲರೂ **ಶಾಂತರಸವೆಂಬ** ಕಾವ್ಯರಸ ಉಂಟೆಂದು ಈ ಒಂದು ಕಾರಣಕ್ಕಾದರೂ ಒಪ್ಪಲೇ ಬೇಕಾಗುತ್ತದೆ. ಇದನ್ನೇ ಆನಂದವರ್ಧನನು ಬಾಯಿಬಿಟ್ಟ--

**ವಾಲ್ಮೀಕಿವ್ಯಾಸಮುಖ್ಯಾಶ್ಚ ಪ್ರಖ್ಯಾತಾ ಯೇ ಕವೀಶ್ವರಾಃ**
**ತದಭಿಪ್ರಾಯಬಾಹ್ಯೋಽಯಂ ನಾಸ್ಮಾಭಿರ್ದರ್ಶಿತೋನಯಃ।**

ಎಂದಿದ್ದಾನೆ. ಶಾಂತರಸವುಂಟೆ? ಎಂಬ ಸಂದೇಹಕ್ಕೇ ಆಸ್ಪದವಿರುತ್ತಿರಲಿಲ್ಲ—ಮುಂದಿನವರು ತ್ರಿವರ್ಗಮಾತ್ರವಿಶ್ರಾಂತವಾದ ಮಹಾಸಾಹಿತ್ಯ ರಾಶಿಯನ್ನು ರಚಿಸದೆ ಇದ್ದಿದ್ದರೆ. ಶೃಂಗಾರ ವೀರಾದಿ ರಸಗಳನ್ನು ಮಾತ್ರ

ಆಶ್ರಯಿಸಿ ಲಕ್ಷಾಂತರ ಕವಿಗಳು ಬರೆದುದರ ಮೂಲಕ, ಮೋಕ್ಷ ಪರ್ಯವ ಸಾಯಿಯೂ ಶಾಂತರಸ ಪ್ರಧಾನವಾಗಿಯೂ ಇರುವ ಮಹಾಭಾರತದ ರಸ ವನ್ನೂ ಇತರ ಕಾವ್ಯಗಳಂತೆ ನಿರ್ಣಯಿಸುವ ಪರಿಪಾಠ ಬಂದಿದೆ. ಇದು ತಪ್ಪಿ ದಷ್ಟೂ ವ್ಯಾಸರ ಉದ್ದಿಷ್ಟಾರ್ಥಗ್ರಹಣೆಗೆ ಸಹಾಯವಾಗುತ್ತದೆ. ಮಹಾಭಾರತ ವನ್ನೆಲ್ಲ ಸಂಗ್ರಹಿಸಿ 'ಭಾರತ ಮಂಜರಿ'ಯನ್ನು ಬರೆದ ಕ್ಷೇಮೇಂದ್ರನಾದರೂ ಇದೇ ಮಾತನ್ನೇ ಬಿಚ್ಚುಮಾತುಗಳಿಂದ ಹೇಳಿದ್ದಾನೆ —

**ಯತ್ನೋದಾರ ಚತುಸ್ಸಮುದ್ರರಶನಾಂ ಭುಕ್ತ್ವಾ ಭುವಂ ಕೌರವೋ**
**ಭಗ್ನೋರುಃ ಪತಿತಃ ಸ ನಿಷ್ಪರಿಜನೋ ಜೀವನ್ಸೃಕೈರ್ಭಕ್ಷಿತಃ।**
**ಗೋಪೈರ್ವಿಶ್ವಜಯೀ ಜಿತಃ ಸ ವಿಜಯಃ ಕಷ್ಟೈಃ ಕ್ಷಿತಾ ವೃಷ್ಣಯಃ**
**ತಸ್ಮಾತ್ ಸರ್ವಮಿದಂ ವಿಚಾರ್ಯ ಸುಚಿರಂ ಶಾಂತ್ಯೈ ಮನೋ ದೀಯತಾಂ ॥**

"ಕೌರವನು ಚತುಸ್ಸಮುದ್ರಾಂತವಾದ ಭೂಮಿಯನ್ನು, ಆಳಿ ತೊಡೆ ಮುರಿಸಿಕೊಂಡು ಬಿದ್ದನು, ಹತ್ತಿರ ಒಬ್ಬರೂ ಇಲ್ಲದೆ, ಬದುಕಿದ್ದಾಗಲೇ ಅವನನ್ನು ತೋಳಗಳು ಕಿತ್ತುಕೊಂಡು ತಿಂದುವು. ವಿಶ್ವವನ್ನೇ ಗೆದ್ದ ಅರ್ಜುನನು ದನಕಾಯುವವರಿಗೆ ಸೋತನು. ಯಾದವರು ಜೊಂಡುಗ ಳಿಂದಲೇ ಸತ್ತರು. ಆದ್ದರಿಂದ ಇದೆಲ್ಲವನ್ನೂ ವಿಚಾರಮಾಡಿ ಶಾಂತಿಯ ಕಡೆಗೆ ಮನಸ್ಸುಕೊಡಿ." [9]

---

9. ಅನುವಾದದಲ್ಲಿ ಪ್ರೊ॥ ಎ ಆರ್ ಕೃಷ್ಣಶಾಸ್ತ್ರಿಗಳ ಮಾತುಗಳನ್ನು ಬಹು ಮಟ್ಟಿಗೆ ಬಳಸಿಕೊಂಡಿದೆ (ವಚನಭಾರತ, ಪು ೩೪) ಈ ಮಾತನ್ನೇ ಅಭಿನವ ಗುಪ್ತರೂ ತಮ್ಮ ಭಗವದ್ಗೀತಾ ಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.—

ದ್ವೈಪಾಯನೇನ ಮುನಿನಾ ಯದಿದಂ ವ್ಯಧಾಯಿ
ಶಾಸ್ತ್ರಂ ಸಹಸ್ರಶತಸಂಮಿತಮತ್ರ ಮೋಕ್ಷಃ।
ಪ್ರಾಧಾನ್ಯತಃ ಫಲತಯಾ ಪ್ರಥಿತಸ್ತದನ್ಯದ್-
ಧರ್ಮಾದಿ ತಸ್ಯ ಪರಿಪೋಷಮಿತುಂ ಪ್ರಗೀತಮ್ ॥

ಯದ್ಯಪ್ಯನ್ಯಪ್ರಸಂಗೇಷು ಮೋಕ್ಷೋ ನಾಮಾತ್ರ ಗೀಯತೇ।
ತಥಾಪಿ ಭಗವದ್ಗೀತಾಃ ಸಮ್ಯಕ್ ತತ್ಪ್ರಾಪ್ತಿದಾಯಕಾಃ॥

ಒಂದು ವೇಳೆ ಸೋದರರ ರಣೋತ್ಸಾಹ ಮುಂತಾದುವೂ ಶುದ್ಧ ವೀರರಸದ ಪ್ರತೀತಿಗೆ ಪ್ರತಿಬಂಧಕವಾಗ ವಂತಹ ಅನೌಚಿತ್ಯಗಳಲ್ಲವೆಂದು ವಾದಿಸಬಹುದು—ಅದನ್ನೇ ಒಂದು ಪಕ್ಷ ಅಂಗೀಕರಿಸಿದರೂ ಮೇಲೆ ತೋರಿಸಿದಂತೆ ವೀರರಸವು ಶಾಂತರಸಕ್ಕೆ ಅಂಗವಾದೀತೇ ಹೊರತು ತಾನೇ ಪ್ರಧಾನವೆನಿಸಲಾರದು. ವ್ಯಾಸರ ಅಭಿಪ್ರಾಯದಲ್ಲಿ ಅರ್ಥಾದಿಪುರುಷಾರ್ಥಗಳಿಗಿಂತ ಮೋಕ್ಷವೇ ಹೆಚ್ಚಿನ ಪರಮಪುರುಷಾರ್ಥವೆಂಬ ಅಂಶ ನಿರ್ವಿವಾದವಾದ್ದರಿಂದ. ಮುಂದೆ ಭಾಗವತಪುರಾಣ ರಚಿತವಾಗಿ ಭಗವದ್ಭಕ್ತಿಯೇ ಕಾವ್ಯಮಯವಾಗಿ ನಿರೂಪಿತವಾದಾಗ ನವರಸಗಳ ಸಂಖ್ಯೆಯನ್ನೂ ವಿಸ್ತರಿಸಿ ಭಕ್ತಿಯನ್ನು ಹತ್ತನೆಯ ರಸವೆಂದು ತಿಳಿಯಲಾರಂಭಿಸಿದರು.

**ನವರಸಮಿಲಿತಂ ವಾ ಕೇವಲಂ ವಾ ಪುಮರ್ಥಂ**
**ಪರಮಮಿಹ ಮುಕುಂದೇ ಭಕ್ತಿಯೋಗಂ ವದಂತಿ**

ಎಂದು ಮಧುಸೂದನ ಸರಸ್ವತಿಗಳು ತಮ್ಮ ' ಭಕ್ತಿರಸಾಯನ 'ದ ಆರಂಭದಲ್ಲಿ ಹೇಳಿದ್ದಾರೆ. ಮಹಾಭಾರತದಲ್ಲಿಯೂ ಭಕ್ತಿಯ ವರ್ಣನೆ ಬರುವ ಸನ್ನಿವೇಶಗಳು ಕೆಲವಿದ್ದರೂ, ಅಲ್ಲಿ ಭಾಗವತದಂತೆ ಭಕ್ತಿಯನ್ನೇ ಪ್ರಧಾನ ರಸವೆನ್ನುವಂತಿಲ್ಲ, ಶಾಂತವೇ ಪ್ರಧಾನರಸ. ಕೇವಲ ಭಕ್ತಿಗೆ ಪ್ರಾಶಸ್ತ್ಯ ಹೆಚ್ಚಾದ ರಚನೆಯಲ್ಲಿ ಮಿಕ್ಕ ಕಾವ್ಯಾಂಶಕ್ಕೆ ಬೆಲೆ ಕಡಿಮೆಯಾಗುವುದೂ ಉಂಟು. ಆದ್ದರಿಂದ ಭಕ್ತಿಯನ್ನು ರಸವೆಂದು ಒಪ್ಪಬಾರದೆಂದು ಹೇಳುವ ಲಾಕ್ಷಣಿಕರೂ ಉಂಟು. ಭಕ್ತಿಗಿಂತ ಭಕ್ತಿಯ ಅಭಿವ್ಯಕ್ತಿಗೆ ದ್ವಾರಗಳಾದ ಶಬ್ದಾರ್ಥಗಳ ರಮಣೀಯತೆಗೆ ಇವರು ಹೆಚ್ಚಿನ ಬೆಲೆ ಕೊಡುತ್ತಾರೆ. ಹೀಗೆ ಕಾವ್ಯದಲ್ಲಿ ನವರಸಗಳನ್ನೊಪ್ಪಿದರೆ ಮಾತ್ರ ಮಹಾಭಾರತದ ಯೋಗ್ಯ ವಿಮರ್ಶೆ ಸಾಧ್ಯ, ಶಾಂತರಸವನ್ನೊಪ್ಪದಿದ್ದರೆ ಅಶಕ್ಯ.

**ಮಹಾಭಾರತದ ಕಥೆಯಲ್ಲಿ ಶ್ರೀಕೃಷ್ಣನ ಪಾತ್ರ.**[9(a)] ನಾವು ಶ್ರೀಕೃಷ್ಣನನ್ನು ಮೊತ್ತಮೊದಲು ಕಾಣುವುದು ದ್ರುಪದರಾಜನ ಅರಮನೆಯಲ್ಲಿ, ದ್ರೌಪದಿಯ ಸ್ವಯಂವರಮಂಟಪದಲ್ಲಿ ಅಷ್ಟು ಹೊತ್ತಿಗೆ ಆಗಲೇ ದುರ್ಯೋಧನ, ಕರ್ಣಾದಿಗಳ ಕುತಂತ್ರಗಳಿಂದ ವಿಷಾನ್ನ, ಜತುಗೃಹ

9 (*a*). ಇದಕ್ಕೆ ಪೀಠಿಕೆಯಾಗಿ ಇದೇ ಲೇಖಕನ ' ಮಹಾಭಾರತ ' (ಮೈಸೂರು ವಿಶ್ವವಿದ್ಯಾನಿಲಯ) ದಲ್ಲಿ ಬರುವ ಪಾಂಡವರ ಬಾಲ್ಯಕಥಾ ಸಂಗ್ರಹವನ್ನು ಓದಿ

ಮುಂತಾದ ಕೋಟಲೆಗಳಿಗೆ ಒಳಗಾಗಿ, ದೈವದಿಂದ ಹೇಗೋ ಪಾರಾಗಿ, ಪ್ರಚ್ಛನ್ನ ವೇಷದಲ್ಲಿರುವ ಪಾಂಡವರು ಕುಂತಿಯೊಡನೆ ಅಲ್ಲಿಗೆ ಬಂದಿದ್ದಾರೆ. ವಿಪ್ರವೇಷದ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿ ಕನ್ಯೆಯನ್ನು ಪಡೆದೊಡನೆ ಅವರ ಗುರುತನ್ನು ಮೊದಲು ಹಿಡಿಯುವವನೇ ಶ್ರೀ ಕೃಷ್ಣ. ಉಳಿದ ರಾಜರೆಲ್ಲ ಕ್ಷತ್ರಿಯರಿಗೆ ಅವಮಾನವಾಯಿತೆಂದುಕೊಳ್ಳುತ್ತಾ, ಈ ವೇಷಧಾರಿಗಳಾದ ಪಾಂಡವರನ್ನು ಕೊಲ್ಲುವುದಕ್ಕೆ ಮುನ್ನುಗ್ಗುತ್ತಾರೆ. ಭೀಮಾರ್ಜುನರು ಸ್ವಲ್ಪಕಾಲ ಅವರನ್ನೆಲ್ಲ ತಡೆದರೂ, ಪರ್ಯವಸಾನ ಬಹಳ ಕಷ್ಟವಾಗಬಹುದಾಗಿತ್ತು ಸಕಾಲದಲ್ಲಿ ಕೃಷ್ಣ ನಡುವೆ ಬರದಿದ್ದರೆ ಅವನು ಎಲ್ಲರಿಗೂ ಸಮಾಧಾನ ಹೇಳಿ ರಣವನ್ನು ತಪ್ಪಿಸುತ್ತಾನೆ ಧರ್ಮದಿಂದಲೇ ಕನ್ಯೆಯನ್ನು ಗೆದ್ದಿರುವಾಗ ಯುದ್ಧವು ತಕ್ಕುದಲ್ಲವೆಂದು ಬೋಧಿಸುತ್ತಾನೆ --

**ನಿವಾರಯಾಮಾಸ ಮಹೀಪತೀಂಸ್ತಾನ್**
**ಧರ್ಮೇಣ ಲಬ್ಧೇತ್ಯನುನೀಯ ಸರ್ವಾನ್** (I 190 38.)

ಕೃಷ್ಣನ ಸೋದರತ್ತೆಯೇ ಕುಂತಿ ಅವನು ಪಾಂಡವರ ರಹಸ್ಯ ವಾಸಸ್ಥಲಕ್ಕೂ ಅಣ್ಣನ ಜತೆಯಲ್ಲಿ ಹೋಗಿ ಅವರನ್ನು ಮಾತನಾಡಿಸಿಕೊಂಡು ಬರುತ್ತಾನೆ ಅದೇ ಪಾಂಡವರ ಭಾಗ್ಯೋದಯದ ಬಾಗಿಲು ತೆರೆದಂತಾಯಿತು ಒಂದು ಕಡೆ ಶಕ್ತನಾದ ಪಾಂಚಾಲ ರಾಜನ ಸಂಬಂಧ, ಇನ್ನೊಂದು ಕಡೆ ಮಹಾ ಪುರುಷನಾದ ಕೃಷ್ಣನ ಸಹಾಯ, ಎರಡೂ ಸಿಕ್ಕಿದುವು ಕೌರವರು ನಡುಗಿದರು ಗೌರವದಿಂದ ಅವರನ್ನು ಹಸ್ತಿನಾಪುರಕ್ಕೆ ಕರೆದು ಕಳುಹಿಸಿದರು ಹೊರಡುವಾಗ ದ್ರುಪದ ಹೇಳುತ್ತಾನೆ —'ಈಗ ನಾನು ಪಾಂಡವರಿಗೆ ಎಷ್ಟು ಹಿತೈಷಿಯೋ ಕೃಷ್ಣನೂ ಅಷ್ಟೇ ಹಿತಚಿಂತಕ. ಯುಧಿಷ್ಠಿರನಿಗಿಂತಲೂ ಹೆಚ್ಚಿನ ಹಿತಚಿಂತಕನೆಂದರೂ ಸಲ್ಲುತ್ತದೆ

**ಯಥೈವ ಹಿ ಮಹಾಭಾಗಾಃ ಕೌಂತೇಯಾ ಮಮ ಸಾಂಪ್ರತಮ್।**
**ತಥೈವ ವಾಸುದೇವಸ್ಯ ಪಾಂಡುಪುತ್ರಾ ನ ಸಂಶಯಃ॥**
**ನ ತದ್ಧ್ಯಾಯತಿ ಕೌಂತೇಯಃ ಪಾಂಡುಪುತ್ರೋ ಯುಧಿಷ್ಠಿರಃ।**
**ಯಥೈಷಾಂ ಪುರುಷವ್ಯಾಘ್ರಃ ಶ್ರೇಯೋ ಧ್ಯಾಯತಿ ಕೇಶವಃ॥**
(I. 207.8-9)

ಕೃಷ್ಣನೂ ಜತೆಯಲ್ಲಿಯೇ ಹೋದುದರಲ್ಲಿ ಆಶ್ಚರ್ಯವಿಲ್ಲ. ಧೃತರಾಷ್ಟ್ರನು ಯುಧಿಷ್ಠಿರನಿಗೆ ಅರ್ಧರಾಜ್ಯವೆಂದು ಖಾಂಡವ ಪ್ರಸ್ಥವನ್ನು ಕೊಟ್ಟನು. ಅದೊಂದು ದೊಡ್ಡ ಕಾಡು. ಕೃಷ್ಣನ ಸಹಾಯದಿಂದ ಕಾಡನ್ನು ಕಡಿದು ಸ್ವರ್ಗಸದೃಶವಾದ ರಾಜಧಾನಿಯನ್ನು ಮಾಡಿಕೊಂಡರು —

**ತತಸ್ತೇ ಪಾಂಡವಾಸ್ತತ್ರ ಗತ್ವಾ ಕೃಷ್ಣಪುರೋಗಮಾಃ ।**
**ಮಂಡಯಾಂಚಕ್ರಿರೇ ತದ್ವೈ ವನಂ ಸ್ವರ್ಗವದಚ್ಯುತಾಃ ॥**

(I 207 28)

ಊರನ್ನು ಕಟ್ಟಿಸಿಕೊಟ್ಟ ನಂತರ ಕೃಷ್ಣನು ದ್ವಾರಕಿಗೆ ಅಣ್ಣನೊಡನೆ ಮರಳುತ್ತಾನೆ —

**ತಾಂ ನಿವೇಶ್ಯ ತತೋ ವೀರೋ ರಾಮೇಣ ಸಹ ಕೇಶವಃ ।**
**ಯಯೌ ದ್ವಾರವತೀಂ ರಾಜನ್ ಪಾಂಡವಾನುಮತೋ ತದಾ॥**

(I.207 52)

ಆಮೇಲೆ ತೀರ್ಥಯಾತ್ರಾಪ್ರಸಂಗದಿಂದ ಅರ್ಜುನನೇ ದ್ವಾರಕಿಗೆ ಹೋಗಿ ಕೃಷ್ಣನನ್ನು ಕಾಣುತ್ತಾನೆ. ಎಷ್ಟೋ ದಿವಸ ಸುಖವಾಗಿರುತ್ತಾನೆ - -

**ಕೃಷ್ಣಸ್ಯ ಭವನೇ ರಮ್ಯೇ ರತ್ನಭೋಜ್ಯಸಮಾವೃತೇ ।**
**ಉವಾಸ ಸಹ ಕೃಷ್ಣೇನ ಬಹುಲಾಸ್ತತ್ರ ಶರ್ವರೀಃ ॥**

(I 218.21)

ಅವನ ತಂಗಿ ಸುಭದ್ರೆಯಲ್ಲಿ ಅನುರಕ್ತನಾಗುತ್ತಾನೆ, ಕೃಷ್ಣನಿಗೆ ಮನಸ್ಸನ್ನು ತಿಳಿಸಿದಾಗ ಅವನ ಸಲಹೆ–'ಅವಳನ್ನು ಹಾರಿಸಿಕೊಂಡು ಹೋಗು, ಸ್ವಯಂವರವೆಂದರೆ ನಿನ್ನನ್ನೇ ವರಿಸುವ ನಿಶ್ಚಯವಿಲ್ಲ' ಎಂದು. ಹೇಗಾದರೂ ತನ್ನ ತಂಗಿ ಅರ್ಜುನನನ್ನೇ ಮದುವೆಯಾಗಬೇಕೆಂಬ ಅವನ ಅಭಿಲಾಷೆ ಇದರಿಂದ ವ್ಯಕ್ತವಾಗುತ್ತದೆ .—

**ಸ ತ್ವಮರ್ಜುನ ಕಲ್ಯಾಣೀಂ ಪ್ರಸಹ್ಯ ಭಗಿನೀಂ ಮಮ ।**
**ಹರ ಸ್ವಯಂವರೇ ಹ್ಯಸ್ಯಾಃ ಕೋ ವೈ ವೇದ ಚಿಕೀರ್ಷಿತಮ್ ॥**

(I.219 23)

ಹಾಗೆಯೇ ಅರ್ಜುನ ಮಾಡುತ್ತಾನೆ. ಬಲರಾಮನ ಉಕ್ಕೇರುತ್ತಿರುವ ಕೋಪವನ್ನು ಕೃಷ್ಣನೇ ಇಳಿಸಬೇಕಾಗುತ್ತದೆ. ಆಮೇಲೆ ತಂಗಿಯನ್ನು

ಬಳುವಳಿಯೊಡನೆ ಕಳಿಸಿಕೊಡಲು ಕೃಷ್ಣನೇ ಇಂದ್ರಪ್ರಸ್ಥಕ್ಕೆ ಬಂದು ಕೆಲವು ವರ್ಷಗಳನ್ನು ಕಳೆಯುತ್ತಾನೆ --

**ವಾಸುದೇವಸ್ತು ಪಾರ್ಥೇನ ತತ್ರೈವ ಸಹ ಭಾರತ।**
**ಉವಾಸ ನಗರೇ ರಮ್ಯೇ ಶಕ್ರಪ್ರಸ್ಥೇ ಮಹಾತ್ಮನಾ ॥**

(I 221 63)

ಆಗಲೇ ಅಭಿಮನ್ಯು ಹುಟ್ಟಿ ಮಾವನಿಗೆ ಮುದ್ದಿನ ಕಂದನಾಗುತ್ತಾನೆ. ಅಸ್ತ್ರ ವಿದ್ಯಾಪಾರಂಗತನಾಗುತ್ತಾನೆ. ದ್ರೌಪದಿಯ ಐದು ಮಕ್ಕಳೂ ಹುಟ್ಟಿ ದೊಡ್ಡವರಾಗುತ್ತಾರೆ. ಒಂದು ದಿನ ಮೃಗಯಾವಿಹಾರಕ್ಕೆ ಕೃಷ್ಣಾರ್ಜುನರು ಹೋದಾಗ ಅಗ್ನಿಯು ಖಾಂಡವದಹನದ ಭಿಕ್ಷೆ ಕೇಳುತ್ತಾನೆ. ಇಬ್ಬರಿಗೂ ಕಾರ್ಯಕ್ಕೆ ಸದೃಶವಾದ ಆಯುಧಗಳಿರಲಿಲ್ಲ. ಅಗ್ನಿಯೇ ವರುಣನಿಂದ ದಿವ್ಯಾಯುಧಗಳನ್ನು ಇಬ್ಬರಿಗೂ ಕೊಡಿಸುತ್ತಾನೆ-ಕೃಷ್ಣನಿಗೆ ಸುದರ್ಶನ ಚಕ್ರ, ಅರ್ಜುನನಿಗೆ ಗಾಂಡೀವ, ಅಕ್ಷಯತೂಣೀರ, ಕಪಿಕೇತನವಾದ ರಥ. ಹೀಗೆ ಮುಂದಿನ ಯುದ್ಧಕ್ಕೆ ಉಪಕರಣಗಳು ಈಗ ಸಿಕ್ಕಿದಂತಾದುವು ಕೃಷ್ಣನ ಸಹವಾಸದಿಂದ ಇಬ್ಬರೂ ಅಜೇಯರಾದರು. (I 225)

ಮುಂದೆ ಯುಧಿಷ್ಠಿರನನ್ನು ರಾಜಸೂಯಯಾಗಕ್ಕೆ ಪ್ರೇರಿಸುವವನೂ ಶ್ರೀಕೃಷ್ಣನೇ. 'ಉಳಿದವರು ಕಾಮಕ್ರೋಧಗಳಿಂದ ಹೇಳಬಹುದು, ನಿನ್ನಲ್ಲಿ ಆ ಸಂದೇಹವಿಲ್ಲ'ವೆಂದು ಯುಧಿಷ್ಠಿರನೇ ತಿಳಿಸುತ್ತಾನೆ (II.13 48-51). ಕ್ಷತ್ರಿಯರನ್ನೆಲ್ಲ ಗೆದ್ದು ಸೆರೆಯಲ್ಲಿಟ್ಟಿರುವ ಜರಾಸಂಧನೊಬ್ಬನನ್ನು ಗೆದ್ದರೆ ನೀನು ಎಲ್ಲರನ್ನೂ ಗೆದ್ದಂತಾಗುತ್ತದೆ, ಯಾಗ ಮಾಡಿ ಎಲ್ಲರಿಂದಲೂ ಗೌರವವನ್ನೂ ಪ್ರೀತಿಯನ್ನೂ ಗಳಿಸಬಹುದು ಅವನ ಭಯದಿಂದ ನಾನೇ ಮಥುರೆಯನ್ನು ಬಿಟ್ಟು ದ್ವಾರಕೆಯಲ್ಲಿರಬೇಕಾಗಿದೆ. ಅವನ ವಧೆಗೆ ಅನುಜ್ಞೆಯನ್ನು ಕೊಡು' ಎಂದು ಸಲಹೆಯೀಯುತ್ತಾನೆ. 'ನೀನು ಹೇಳಿದ್ದಕ್ಕೆ ಪ್ರತಿಯಿಲ್ಲ' ವೆಂದು ಯುಧಿಷ್ಠಿರನು ಕೃಷ್ಣನ ಜೊತೆಯಲ್ಲಿ ಭೀಮಾರ್ಜುನರನ್ನು ಕಳಿಸಿಕೊಡುತ್ತಾನೆ: -

**ತ್ವಂ ಮೇ ಪ್ರಮಾಣಭೂತೋಽಸಿ ಸರ್ವಕಾರ್ಯೇಷು**
**ಕೇಶವ** (II. 15. 10).

ಅವನಿಗೆ ಭೀಮಾರ್ಜುನರೆ ಎರಡುಕಣ್ಣು, ಕೃಷ್ಣನೇ ಮನಸ್ಸು·

**ಭೀಮಾರ್ಜುನಾವುಭೌ ನೇತ್ರೇ ಮನೋ ಮನ್ಯೇ**
**ಜನಾರ್ದನಮ್** (II 16 2)

ಕೃಷ್ಣನು ಕಪಟದಿಂದಲೇ ಜರಾಸಂಧನನ್ನು ನಿಗ್ರಹಿಸಬೇಕೆಂದು ಬೋಧಿಸುತ್ತಾನೆ·—ಸೈನ್ಯಬಲಾಧಿಕರಾದ ಹಗೆಗಳೊಡನೆ ಯುದ್ಧಕ್ಕೆ ಹೋಗಬಾರದು –

**ವ್ಯೂಢಾನೀಕೈರತಿಬಲೈರ್ನ ಯುಧ್ಯೇದರಿಭಿಃ ಸಹ ।**
**ಇತಿ ಬುದ್ಧಿಮತಾಂ ನೀತಿಸ್ತನ್ಮಮಾಪೀಹ ರೋಚತೇ ॥**
(II. 17 7)

'ನನ್ನಲ್ಲಿ ನೀತಿಬಲವಿದೆ, ಭೀಮನಲ್ಲಿ ದೇಹಬಲವಿದೆ, ನಮ್ಮಿಬ್ಬರ ರಕ್ಷಣೆಗೆ ಅರ್ಜುನ ಸಾಕು, ಮೂವರೇ ಕೆಲಸವನ್ನು ಸಾಧಿಸುತ್ತೇವೆ.' ಎಂದು ಹೊರಡುತ್ತಾನೆ —

**ಮಯಿ ನೀತಿರ್ಬಲಂ ಭೀಮೇ ರಕ್ಷಿತಾ ಚಾವಯೋರ್ಜಯಃ।**
**ಮಾಗಧಂ ಸಾಧಯಿಷ್ಯಾಮ ಇಷ್ಟಿಂ ತ್ರಯ ಇವಾಗ್ನಯಃ ॥**
(II 20 3)

ಯುದ್ಧನೀತಿಯನ್ನೊಪ್ಪುವ ಜರಾಸಂಧನಿಗೆ ಅವನ ಭಾಷೆಯಲ್ಲಿಯೇ ಕ್ಷಾತ್ರವನ್ನುದ್ದೀಪಿಸಿ ತನ್ನ ಕಾರ್ಯವನ್ನು ಸಾಧಿಸುತ್ತಾನೆ:—

**ಸ್ವರ್ಗಂ ಹ್ಯೇವ ಸಮಾಸ್ಥಾಯ ರಣಯಜ್ಞೇಷು ದೀಕ್ಷಿತಾಃ ।**
**ಜಯನ್ತಿ ಕ್ಷತ್ರಿಯಾ ಲೋಕಾಂಸ್ತದ್ವಿದ್ಧಿ ಮನುಜರ್ಷಭ ॥**
(II. 22. 17)

[ಸ್ವರ್ಗವನ್ನು ಗುರಿಯಲ್ಲಿಟ್ಟುಕೊಂಡೇ ಕ್ಷತ್ರಿಯರು ರಣಯಜ್ಞದ ದೀಕ್ಷೆಯನ್ನು ಕೈಗೊಳ್ಳುವರು, ಲೋಕಗಳೆಲ್ಲವನ್ನೂ (ಇಹ ಮತ್ತು ಪರ) ಗೆಲ್ಲುವರು.]

ಎಲ್ಲಾ ನಿರೀಕ್ಷೆಯಂತೆ ನಡೆದು ರಾಜಸೂಯಯಾಗ ಆರಂಭವಾದಾಗ ಕೃಷ್ಣನಿಗೆ ಅಗ್ರಪೂಜೆಯನ್ನು ಪಾಂಡವರು ಕೊಡಲು ಹೊರಟುದು ಸಹಜವಾಗಿಯೇ ಇದೆ. ಶ್ರೀಕೃಷ್ಣನ ಮಹತ್ವವನ್ನು ಬಾಯಾರೆ ಹೊಗಳುವವನು ಜ್ಞಾನವೃದ್ಧನೂ ವಯೋವೃದ್ಧನೂ ಶೂರಾಗ್ರೇಸರನೂ ಆದ ಭೀಷ್ಮ:—

**ಏಷ ಹ್ಯೇಷಾಂ ಸಮಸ್ತಾನಾಂ ತೇಜೋಬಲಪರಾಕ್ರಮೈಃ ।**
**ಮಧ್ಯೇ ತಪನ್ನಿವಾಭಾತಿ ಜ್ಯೋತಿಷಾಮಿವ ಭಾಸ್ಕರಃ ॥**
**ಅಸೂರ್ಯಮಿವ ಸೂರ್ಯೇಣ ನಿರ್ವಾತಮಿವ ವಾಯುನಾ ।**
**ಭಾಸಿತಂ ಹ್ಲಾದಿತಂ ಚೈವ ಕೃಷ್ಣೇನೇದಂ ಸದೋ ಹಿ ನಃ ॥**

(II 36 28 - 9)

ಗ್ರಹಗಳ ಮಧ್ಯೆ ಸೂರ್ಯನಂತೆ ಕ್ಷತ್ರಿಯರಲ್ಲೆಲ್ಲ ತೇಜಸ್ಸು ಬಲ ಪರಾಕ್ರಮಗಳಲ್ಲಿ ಅಧಿಕನಾಗಿ ನಡುವೆ ಶ್ರೀಕೃಷ್ಣ ಬೆಳಗುತ್ತಿದ್ದಾನೆ ಕತ್ತಲೆಯಲ್ಲಿ ಸೂರ್ಯ ಬಂದಂತೆ, ಗಾಳಿಯಿಲ್ಲದೆಡೆ ವಾಯುದೇವನೇ ಬಂದಂತೆ ನಮ್ಮ ಸಭೆ ಬೆಳಕಾಗಿದೆ, ಚೈತನ್ಯಮಯವಾಗಿದೆ

ಇದನ್ನು ಸಹಿಸದ ಶಿಶುಪಾಲನು ನಿಂದೆಯ ಸುರಿಮಳೆಯನ್ನೇ ಸುರಿಸುತ್ತಾನೆ. ಕೃಷ್ಣನ ದೋಷಗಳನ್ನು, ಮೋಸಗಳನ್ನು, ಒಂದೊಂದಾಗಿ ಎತ್ತಿಹಾಕುತ್ತಾನೆ. ಭೀಷ್ಮನು ತನ್ನ ಮಾತನ್ನು ಬದಲಾಯಿಸುವುದಿಲ್ಲ ಮತ್ತು ಸ್ಪಷ್ಟವಾಗಿ ಹೇಳುತ್ತಾನೆ,—ಕೃಷ್ಣನಲ್ಲಿ ಎಲ್ಲ ಗುಣಗಳೂ ಸರ್ವಾಧಿಕವಾಗಿವೆ, ಎಂದು

**ಪೂಜ್ಯತಾಯಾಂ ಚ ಗೋವಿಂದೇ ಹೇತೂ ದ್ವಾವಪಿ ಸಂಸ್ಥಿತೌ ॥**
**ವೇದವೇದಾಂಗವಿಜ್ಞಾನಂ ಬಲಂ ಚಾಭ್ಯಧಿಕಂ ತಥಾ ।**
**ನೃಣಾಂ ಲೋಕೇ ಹಿ ಕೋಽನ್ಯೋಽಸ್ತಿ ವಿಶಿಷ್ಟಃ ಕೇಶವಾದೃತೇ**
**ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿಃ ಬುದ್ಧಿರುತ್ತಮಾ ।**
**ಸಂತತಿಃ ಶ್ರೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚ ನಿಯತಾಽಚ್ಯುತೇ ॥**

(II. 38. 18-20)

[ಪೂಜಾರ್ಹತೆಗೆ ಗೋವಿಂದನಲ್ಲಿ ಎರಡೂ ಕಾರಣಗಳು ನೇರಿವೆ — ವೇದವೇದಾಂಗವಿಜ್ಞಾನ ಮತ್ತು ಸರ್ವಾಧಿಕವಾದ ಬಲ. ಭೂಮಿಯಲ್ಲಿ ಕೇಶವನನ್ನು ಬಿಟ್ಟರೆ ಮತ್ತಾವ ಗುಣೋತ್ಕೃಷ್ಟನಿರುವನು? ದಾನ, ದಾಕ್ಷಿಣ್ಯ, ವಿದ್ಯೆ, ಶೌರ್ಯ, ವಿನಯ, ಕೀರ್ತಿ, ಸದ್ಬುದ್ಧಿ, ಸಂತತಿ, ಸಂಪತ್ತು, ಧೃತಿ, ತುಷ್ಟಿ, ಪುಷ್ಟಿ—ಎಲ್ಲವೂ ಅಚ್ಯುತನಲ್ಲಿ ನೆಲೆಗೊಂಡಿವೆ.]

ಇನ್ನೊಂದು ಹೆಜ್ಜೆ ಮುಂದೆ ಹೋಗಿ ಅವನೇ ಪ್ರತ್ಯಕ್ಷ ಭಗವಂತನೆಂಬ ತನ್ನ ಭಾವನೆಯನ್ನು ವಿವರಿಸುತ್ತಾನೆ. (23-33) ಶಿಶುಪಾಲನಿಗೆ ಅದು ಪಥ್ಯವಾಗದೆ ಚಕ್ರಕ್ಕೆ ಆಹುತಿಯಾಗಬೇಕಾಗುತ್ತದೆ. ಯಜ್ಞ ಮುಗಿದಮೇಲೆ ಯುಧಿಷ್ಠಿರನಿಗೆ---

**ಅಪ್ರಮತ್ತಃ ಸ್ಥಿತೋ ನಿತ್ಯಂ ಪ್ರಜಾಃ ಪಾಹಿ ವಿಶಾಂಪತೇ ।**

(II. 45, 65)

[ಸದಾ ಎಚ್ಚರಿಕೆಯಾಗಿದ್ದುಕೊಂಡು ಪ್ರಜೆಗಳನ್ನು ಕಾಪಾಡು!]

ಎಂದು ಬುದ್ಧಿಹೇಳಿ ದ್ವಾರಕೆಗೆ ಹೋಗುತ್ತಾನೆ

ಕೃಷ್ಣನು ಹೋದೊಡನೆ ಯುಧಿಷ್ಠಿರನ ವಿವೇಕ ಮಾಯವಾಯಿತು. ಶತ್ರುಗಳ ಕಪಟಕ್ಕೆ ಸುಲಭವಾಗಿ ಬಲಿಬಿದ್ದನು. ಜೂಜಿನಲ್ಲಿ ಸರ್ವಸ್ವವನ್ನೂ, ಹೆಂಡತಿಯನ್ನೂ ಸೋತಾಯಿತು. ಜೂಜಿಗೆ ಕರೆದರೆ ಒಲ್ಲೆನೆನ್ನಬಾರದೆಂಬ 'ಕ್ಷತ್ರಿಯ ಧರ್ಮ'ದ ಪ್ರಭಾವ ಇದು. ಆ ಆಪತ್ಕಾಲದಲ್ಲಿ ದ್ರೌಪದಿಯ ಮಾನಭಂಗ ಪ್ರಸಂಗದಲ್ಲಿ, ಅವಳ ಮೊರೆಯನ್ನು ಕೇಳಿ ಕೃಷ್ಣನು ಓಡಿ ಬಂದು ಅವಳ ಮಾನವನ್ನು ಕಾಪಾಡಿದನೆಂಬುದು ಪ್ರಕ್ಷೇಪವೆಂದರೂ ಅವಳಿಗೆ ತನ್ನ ಮಾನಸಂರಕ್ಷಣೆ ಮಾಡಿಕೊಳ್ಳುವ ಶಕ್ತಿ ಆತನ ಪ್ರೇರಣೆಯಿಂದಲೇ ಬಂದಿತೆಂದು ಆಕೆ ಭಾವಿಸಿದ್ದುದು ಮುಂದಿನ ಪರ್ವದಲ್ಲಿ ಅವಳು ಕೃಷ್ಣನಿಗೆ ಹೇಳುವ ಮಾತುಗಳಿಂದ ವ್ಯಕ್ತವಾಗುತ್ತದೆ. ಮುಂದಿನ ಪರ್ವದಲ್ಲಿ

ಪಾಂಡವರು ಹೆಂಡತಿಯೊಡನೆ ಕಾಡಿಗೆ ಹೋದುದು ತಿಳಿದ ಮೇಲೆ ಕೃಷ್ಣನು ಅಲ್ಲಿಗೇ ಹೋಗುತ್ತಾನೆ. ಬಂದೊಡನೆ ಕುಪಿತನಾದ ಅವನ ಬಾಯಿಯಿಂದ ಬರುವ ಗರ್ಜನೆಯಿದು --

**ದುರ್ಯೋಧನಸ್ಯ ಕರ್ಣಸ್ಯ ಶಕುನೇಶ್ಚ ದುರಾತ್ಮನಃ ।**
**ದುಃಶಾಸನ ಚತುರ್ಥಾನಾಂ ಭೂಮಿಃ ಪಾಸ್ಯತಿ ಶೋಣಿತಮ್ ॥**

(III.12.5)

[ದುರ್ಯೋಧನ, ಕರ್ಣ, ದುರಾತ್ಮನಾದ ಶಕುನಿ, ದುಃಶಾಸನ, ಈ ನಾಲ್ವರ ರಕ್ತವನ್ನೂ ನೆಲವು ಕುಡಿಯುವುದು!]

ದ್ರೌಪದಿಯ ಕರುಳು ಕರಗುವ ಅಳಲನ್ನು ಕೇಳುವುದಕ್ಕೂ ಅಗುವಂತಿಲ್ಲ. ಅವಳು ಅಳುತ್ತಾಳೆ.—

**ನೈವ ಮೇ ಪತಯಃ ಸನ್ತಿ ನ ಪುತ್ರಾ ನ ಚ ಬಾಂಧವಾಃ ।**
**ನ ಭ್ರಾತರೋ ನ ಚ ಪಿತಾ ನೈವ ತ್ವಂ ಮಧುಸೂದನ ॥**
(III 12.25)

[ನನಗೆ ಗಂಡಂದಿರೂ ಇಲ್ಲ, ಗಂಡು ಮಕ್ಕಳೂ ಇಲ್ಲ, ಬಂಧುಗಳೂ ಇಲ್ಲ. ಸೋದರರಿಲ್ಲ, ತಂದೆಯಿಲ್ಲ ಮಧುಸೂದನ, ನೀನೂ ಇಲ್ಲ.]

ಕೃಷ್ಣನೇ ಮನಸ್ಸನ್ನು ಬಿಚ್ಚಿ ಹೇಳುತ್ತಾನೆ, 'ನಾನು ದ್ವಾರಕೆಯಲ್ಲೇ ಇದ್ದಿದ್ದರೆ ನಿಮಗೆ ಹೀಗಾಗಲು ಅವಕಾಶಕೊಡುತ್ತಲೇ ಇರಲಿಲ್ಲ ಯಾರೂ ಕರೆಯದೆ ಇದ್ದರೂ ನಾನಾಗಿ ಬಂದು ಜೂಜನ್ನು ತಪ್ಪಿಸುತ್ತಿದ್ದೆ. ನಾನು ಸೌಭವಧೆಗಾಗಿ ಹೊರಟುಹೋಗಿದ್ದಾಗ ಕೈ ಮೀರಿ ನಡೆದು ಹೋಯಿತು' ಎನ್ನುತ್ತಾನೆ.—

**ನೈತತ್ ಕೃಚ್ಛ್ರಮನುಪ್ರಾಪ್ತೋ ಭವಾನ್ ಸ್ಯಾದ್ ವಸುಧಾಧಿಪ ।**
**ಯದ್ಯಹಂ ದ್ವಾರಕಾಯಾಂ ಸ್ಯಾಂ ರಾಜನ್ ಸನ್ನಿಹಿತಃ ಪುರಾ ॥**
(III 13 1)

ಸುಭದ್ರೆ, ಅಭಿಮನ್ಯುಗಳನ್ನು ಕರೆದುಕೊಂಡು ದ್ವಾರಕೆಗೆ ಹಿಂದಿರುಗುತ್ತಾನೆ. ಇತ್ತ ವ್ಯಾಸರ ಸಲಹೆಯಂತೆ ಅರ್ಜುನನು ದಿವ್ಯಾಸ್ತ್ರಗಳ ಸಂಪಾದನೆಗಾಗಿ ತಪಸ್ಸಿಗೆ ಹೋಗುತ್ತಾನೆ. ಮುಂದೆ ಯುದ್ಧವಾಗುವುದೆಂಬ ಸೂಚನೆ ಆಗಲೇ ಉಂಟಾಗಿದೆ, ಕೃಷ್ಣ ವ್ಯಾಸರ ಸಲಹೆಗಳಿಂದ.

ಪಾಂಡವರ ವನವಾಸ ಮುಗಿದೊಡನೆ ಅಭಿಮನ್ಯು—ಉತ್ತರೆಯರ ವಿವಾಹಕ್ಕಾಗಿ ವಿರಾಟನಗರಿಗೆ ಕೃಷ್ಣ ಬಂದು ಮುಂದಿನ ಆಲೋಚನೆಗಳಲ್ಲೆಲ್ಲ ಪ್ರಧಾನ ಪಾತ್ರವನ್ನು ವಹಿಸುತ್ತಾನೆ. ಆದರೆ ಮೊದಲು ದ್ರುಪದನಿಗೆ 'ನೀನು ಒಳ್ಳೆಯ ಮಾತಿನಲ್ಲಿ ಸಂಧಿಯಾಗುವಂತಿದ್ದರೆ ಪುರೋಹಿತನನ್ನು ಕಳಿಸಿ ನೋಡು. ಆಗದಿದ್ದರೆ ನಾವೆಲ್ಲರೂ ಕೂಡಿ ನಿಶ್ಚಯಿಸೋಣ' ಎನ್ನುತ್ತಾನೆ. (IV 5.) ಮದುವೆ ಮಾಡಿಕೊಂಡು ನಂಟರೊಡನೆ ದ್ವಾರಕೆಗೆ ಹೊರಟುಹೋಗುತ್ತಾನೆ. ಅಲ್ಲಿ ಸಹಾಯಾಪೇಕ್ಷಿಯಾಗಿ ದುರ್ಯೋಧನನೂ ಕೃಷ್ಣನಲ್ಲಿಗೆ ಬರುತ್ತಾನೆ, ಅರ್ಜುನನೂ ಬರುತ್ತಾನೆ. ಕೃಷ್ಣನಿಗೆ ದೊಡ್ಡ ಸಮಸ್ಯೆಯಾಗುತ್ತದೆ. ಬುದ್ಧಿವಂತಿಕೆಯಿಂದ 'ನಾನು ಯುದ್ಧಮಾಡುವುದೇ

ಇಲ್ಲ, ಅರ್ಜುನನ ಸಾರಥಿಯಾಗಿರುತ್ತೇನೆ. ನನ್ನ ಸೈನ್ಯವೆಲ್ಲ ನಿನ್ನ ಕಡೆ ಯುದ್ಧ ಮಾಡಲಿ' ಎಂದು ದುರ್ಯೋಧನನಿಗೆ ಹೇಳಿ ಕಳುಹಿಸುತ್ತಾನೆ.

ಕಡೆಗೆ ಎರಡು ಕಡೆಗಳಲ್ಲೂ ಎಷ್ಟೆಷ್ಟೊ ಸಂದೇಶಗಳೂ ಪ್ರತಿಸಂದೇಶಗಳೂ ನಡೆಯುವುವೇ ಹೊರತು ನಿರ್ಣಯ ಬರುವುದಿಲ್ಲ. ಕೃಷ್ಣನೇ ಬರಬೇಕಾಗುತ್ತದೆ. ಧೃತರಾಷ್ಟ್ರನಿಗೆ ಯುದ್ಧ ಬೇಡ, ರಾಜ್ಯವೆಲ್ಲ ತಮಗೇ ಇರಬೇಕು, ಯುಧಿಷ್ಠಿರನಿಗೂ ಯುದ್ಧ ಬೇಡ, ಅರ್ಧರಾಜ್ಯ ಅಥವಾ ಸ್ವಲ್ಪ ರಾಜ್ಯವಾದರೂ ಬೇಕು. ಕೃಷ್ಣನು ತಾನೇ ಹೋಗಿ ಇತ್ಯರ್ಥ ಮಾಡಿಕೊಂಡು ಬರುವ ಹೊಣೆಯನ್ನು ಹೊತ್ತುಕೊಳ್ಳುತ್ತಾನೆ. ತನ್ನ ಶಾಂತಿಯ ಸಂದೇಶವನ್ನು ಅವರು ಕೇಳಿದರೆ ಕ್ಷತ್ರಿಯರ ಕ್ಷಯವು ತಪ್ಪಿ ಎಲ್ಲರಿಗೂ ಮೃತ್ಯುಪಾಶದಿಂದ ವಿಮೋಚನೆಯಾಗಬಹುದು, ತನಗೂ ಅದಕ್ಕಿಂತ ಹೆಚ್ಚಿನ ಕೀರ್ತಿಯೇ ಇಲ್ಲವೆಂದು ಸಂಜಯನ ಮೂಲಕ ತಿಳಿಸುತ್ತಾನೆ.

**ಅಹಾಪಯಿತ್ವಾ ಯದಿ ಪಾಂಡವಾರ್ಥಂ**
**ಶಮಂ ಕುರೂಣಾಮಪಿ ಚೇಚ್ಚಕೇಯಮ್ ।**
**ಪುಣ್ಯಂ ಚ ಮೇ ಸ್ಯಾಚ್ಚರಿತಂ ಮಹೋದಯಮ್**
**ಮುಚ್ಯೇರಂಶ್ಚ ಕುರವೋ ಮೃತ್ಯುಪಾಶಾತ್ ॥**

(V.29 48)

ಆದರೆ ಹೊರಡುವುದಕ್ಕೆ ಮುಂಚೆ ದ್ರೌಪದಿ ತನ್ನ ಅಳಲನ್ನು ನೋಡಿಯಾದರೂ ಯುದ್ಧವೇ ಆಗುವಂತೆ ಮಾಡಬೇಕೆಂದಾಗ ನಿಸ್ಸಂದಿಗ್ಧವಾಗಿ ವೈರಿನಾಶದ ದೃಢಪ್ರತಿಜ್ಞೆಯನ್ನು ಮಾಡುತ್ತಾನೆ —

**ಚಲೇದ್ಧಿ ಹಿಮವಾನ್ ಶೈಲೋ ಮೇದಿನೀ ಶತಧಾ ಫಲೇತ್ ।**
**ದ್ಯೌಃ ಪತೇಚ್ಚ ಸನಕ್ಷತ್ರಾ ನ ಮೇ ಮೋಘಂ ವಚೋ ಭವೇತ್॥**
**ಸತ್ಯಂ ತೇ ಪ್ರತಿಜಾನಾಮಿ ಕೃಷ್ಣೇ ಬಾಷ್ಪೋ ನಿಗೃಹ್ಯತಾಮ್ ।**
**ಹತಾಮಿತ್ರಾನ್ ಶ್ರಿಯಾ ಯುಕ್ತಾನಚಿರಾದ್ ದ್ರಕ್ಷ್ಯಸೇ ಪತೀನ್ ॥**

(V.82.48 49)

'ಹಿಮಾಚಲವು ಚಲಿಸಬಹುದು, ಭೂಮಿಯು ನೂರಾಗಿ ಸೀಳಬಹುದು. ಆಕಾಶವೇ ತಾರೆಗಳೊಡನೆ ಕೆಳಗೆ ಬೀಳಬಹುದು. ನನ್ನ ಮಾತು ಮಾತ್ರ

ಸುಳ್ಳಾಗಲಾರದು. ನಿಜವಾಗಿಯೂ ಹೇಳುತ್ತೇನೆ—ಕಣ್ಣೀರನ್ನು ತಡೆ ದುಕೊ—ಕ್ಷಿಪ್ರದಲ್ಲೇ ನಿನ್ನ ವೈರಿಗಳು ನಾಶವಾಗುವುದನ್ನೂ ಪತಿಗಳು ವಿಜಯಿಗಳಾಗುವುದನ್ನೂ ಕಾಣುವೆ,

ರಾಜಸಭೆಯಲ್ಲಿ ಕೃಷ್ಣನು ಆಡುವ ಮಾತುಗಳು ಮಹಾಭಾರತದ ಲ್ಲೆಲ್ಲ ಸಾರವಾದ ಭಾಗ. ಅವನ ಗಾಂಭೀರ್ಯ, ನಯ, ತೇಜಸ್ಸು, ಸತ್ವ, ಧರ್ಮ, ಶಾಂತಿಪರತೆ, ಎಲ್ಲವೂ-ಅವನ ಭಾಷಣಗಳಲ್ಲಿ ಬೆಳಗುತ್ತವೆ. (V 95) ಆದರೆ ದುರ್ಯೋಧನನ ಹಟ ಸಗ್ಗಲಿಲ್ಲ. ಕ್ಷತ್ರಿಯರಂತೆ ಯುದ್ಧದಲ್ಲಿ ವೀರ ಶಯನವನ್ನು ಪಡೆದೇವೇ ಹೊರತು ಪಾಂಡವರಿಗೆ ಸೂಜಿಮೊನೆಯಷ್ಟು ನೆಲವನ್ನೂ ಕೊಡುವುದಿಲ್ಲವೆನ್ನುತ್ತಾನೆ:—

**ಅಸ್ತ್ರೇಣ ನಿಧನಂ ಕಾಲೇ ಪ್ರಾಪ್ಸ್ಯಾಮಃ ಸ್ವರ್ಗ್ಯಮೇವ ತತ್ ।**
**ಮುಖ್ಯಶ್ಚೈವೈಷ ನೋ ಧರ್ಮಃ ಕ್ಷತ್ರಿಯಾಣಾಂ ಜನಾರ್ದನ ॥**
**ಯಚ್ಛಯೀಮಹಿ ಸಂಗ್ರಾಮೇ ಶರತಲ್ಪಗತಾ ವಯಮ್ ।**
**ತೇ ವಯಂ ವೀರಶಯನಂ ಪ್ರಾಪ್ಸ್ಯಾಮೋ ಯದಿ**
**ಸಂಯುಗೇ** ॥ (V 127.15-6)

**ಧ್ರಿಯಮಾಣೇ ಮಹಾಬಾಹೌ ಮಯಿ ಸಂಪ್ರತಿ ಕೇಶವ ।**
**ಯಾವದ್ಧಿ ತೀಕ್ಷ್ಣಯಾ ಸೂಚ್ಯಾ ವಿಧ್ಯೇದಗ್ರೇಣ ಕೇಶವ ॥**
**ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಂಡವಾನ್ ಪ್ರತಿ ॥**
(24-25)

ಹಾಗಾದರ ನಿನಗೆ ಅದೇ ಸಿಕ್ಕುತ್ತದೆಂದು ಕೃಷ್ಣನು ಮಾರ್ನುಡಿದು ಕೆಂಡ ವಾಗುತ್ತಾನೆ. ಅರಿಯದ ಬಾಲರು ಬಟ್ಟೆಯಲ್ಲಿ ಉರಿವ ಕೆಂಡವನ್ನು ಕಟ್ಟ ಲೆಳಸುವಂತೆ ದುರ್ಯೋಧನಾದಿಗಳು ಕೃಷ್ಣನನ್ನೇ ಕಟ್ಟಲು ಹವಣಿಸುತ್ತಾರೆ (ಪಟೇನಾಗ್ನಿಂ ಪ್ರಜ್ವಲಿತಂ ಯಥಾ ಬಾಲಾ). ಕೃಷ್ಣನೊಬ್ಬನು ಇಲ್ಲವಾದರೆ ಪಾಂಡವಾದಿಗಳ ಆಟವೆಲ್ಲಾ ಮುಗಿದಂತೆ ಎಂಬುದು ಅವರಿಗೆ ಚೆನ್ನಾಗಿ ಗೊತ್ತಿದೆ, ಅವನೇ ಪಾಂಡವಾದಿಗಳಿಗೆಲ್ಲ ಶರಣ ಮತ್ತು ಹರಣ —

**ಅಯಂ ಹ್ಯೇಷಾಂ ಮಹಾಬಾಹುಃ ಸರ್ವೇಷಾಂ ಶರ್ಮ**
**ವರ್ಮ ಚ ।**
**ಅಸ್ಮಿನ್ ಗೃಹೀತೇ ವರದೇ ಋಷಭೇ ಸರ್ವಸಾತ್ವತಾಮ್ ॥**

**ನಿರುದ್ಯಮಾ ಭವಿಷ್ಯನ್ತಿ ಪಾಂಡವಾಃ ಸೋಮಕೈಃ ಸಹ ।**
(V 130.7-8)

ಆಗ ಅವನ ದಿವ್ಯರೂಪವು ಒಮ್ಮೆ ಜಾಜ್ವಲ್ಯಮಾನವಾಗಿ ಬೆಳಗುತ್ತದೆ. ಎಲ್ಲರ ಕಣ್ಣೂ ಕುಕ್ಕಿ ಮುಚ್ಚಿಕೊಳ್ಳುತ್ತವೆ, ದ್ರೋಣ, ಭೀಷ್ಮ, ವಿದುರ, ಸಂಜಯರ ಹೊರತು. ಧೃತರಾಷ್ಟ್ರನಿಗೂ ಅದನ್ನು ನೋಡುವ ದಿವ್ಯ ಚಕ್ಷುಸ್ಸನ್ನು ಕೊಡುತ್ತಾನೆ—ಕೃಷ್ಣ. (ಈ ಪ್ರಸಂಗವು ಪ್ರಕ್ಷೇಪವಿದ್ದರೂ ಇರಬಹುದು) ಧೃತರಾಷ್ಟ್ರನ ಮಾತನ್ನು ಮಕ್ಕಳು ಕೇಳುವುದಿಲ್ಲ. ಕೃಷ್ಣನ ಸಂಧಾನ ವಿಫಲವಾಗುತ್ತದೆ. ಯುದ್ಧ ಅನಿವಾರ್ಯವಾಗುತ್ತದೆ. ಆದರೆ ಹಿಂದಿರುಗುವ ಮೊದಲು ಕೃಷ್ಣನು ಕರ್ಣನನ್ನು ಗುಪ್ತವಾಗಿ ಕಂಡು ಅವನ ಜನ್ಮರಹಸ್ಯವನ್ನು ತಿಳಿಸಿ ಭೇದದ ಬೀಜವನ್ನು ಬಿತ್ತುತ್ತಾನೆ. ಇದರಿಂದ ಕರ್ಣನು ತನ್ನ ದುರ್ಯೋಧನ—ಮೈತ್ರಿಗಾಗಿ ಯುದ್ಧಮಾಡಿದರೂ ಅವನಿಗೆ ಪಾಂಡವರನ್ನು ಕೊಲ್ಲುವ ಉತ್ಸಾಹ ತಪ್ಪಿಹೋಗುತ್ತದೆ. ಮುಖ್ಯವಾಗಿ ಕೌರವೇಂದ್ರನ ಬಲಭುಜವೇ ಬಿದ್ದಂತಾಗುತ್ತದೆ (V.140-1) ಕುಂತಿಯೂ ಇದನ್ನೇ ಸಾಧಿಸುತ್ತಾಳೆ.

ಕೃಷ್ಣನು ತಿರುಗಿ ಬಂದು ಪಾಂಡವರನ್ನು ಕಾಣುತ್ತಾನೆ. ವಿಷಯವನ್ನು ತಿಳಿಸುತ್ತಾನೆ. 'ಕಾಲೋಚಿತವಾದ್ದನ್ನು ಮಾಡು, ನೀನೇ ನಮಗೆ ಗತಿ, ದಿಕ್ಕು, ಎಲ್ಲವೂ' ಎನ್ನುತ್ತಾನೆ, ಯುಧಿಷ್ಠಿರ —

**ಯಥಾ ಚ ನಾಭಿಪದ್ಯೇತ ಕಾಲಸ್ತಾತ ತಥಾ ಕುರು ।**
**ಭವಾನ್ ಹಿ ನೋ ಗತಿಃ ಕೃಷ್ಣ ಭವಾನ್ನಾಥೋ ಭವಾನ್ ಗುರುಃ ॥** (V.147.13)

ಪಾಂಡವರ ಸೈನ್ಯವು ಸಿದ್ಧವಾಯಿತು. 'ವಾಸುದೇವೇನ ಪಾಲಿತಮ್' ಎಂದು ವ್ಯಾಸರು ಹೇಳಲು ಮರೆತಿಲ್ಲ (V.153.1). ಅತ್ತ ಕೌರವನ ಸೈನ್ಯವೂ ಸಜ್ಜಾಯಿತು.

ಇನ್ನೇನು ಯುದ್ಧ ಆರಂಭವಾಗಬೇಕು. ಭೀಷ್ಮಾದಿಗಳನ್ನು ನೋಡಿದೊಡನೆ ಅರ್ಜುನನ ರಣೋತ್ಸಾಹವೆಲ್ಲ ನಂದಿಹೋಯಿತು; ಹಿಂಸೆಯು ಮಹಾಪಾಪವೆಂಬ ಭಾವನೆಯುಂಟಾಯಿತು. ಕೈಕಾಲುಡುಗಿ ಬಿಲ್ಲು ಬಾಣಗಳನ್ನೆಸೆದು ಸುಮ್ಮನೆ ಕುಳಿತು ಬಿಡುತ್ತಾನೆ. ಯಾರನ್ನು ನಂಬಿಕೊಂಡು

ಯುದ್ಧಕ್ಕೆ ಪಾಂಡವರು ಹೊರಟರೋ ಅವನ ಸ್ಥಿತಿಯೇ ಹೀಗಾದರೆ ಗತಿಯೇನು? ಕೃಷ್ಣನು ಅವನಿಗೆ ಸುದೀರ್ಘವಾಗಿ ಗೀತೆಯ ತತ್ವ ರಹಸ್ಯವನ್ನೆಲ್ಲ ಉಪದೇಶಿಸಿ, ಅನಿವಾರ್ಯವಾಗಿ ಸ್ವಧರ್ಮವೆಂದು, ನಿಷ್ಕಾಮಬುದ್ಧಿಯಿಂದ ಯುದ್ಧಮಾಡಬೇಕೆಂದು ಪ್ರೇರಿಸುತ್ತಾನೆ, ಬರಿಯ ಮಾತೂ ಸಾಕಾಗದೆ ಅವನಿಗೆ ವಿಶ್ವರೂಪದ ಅದ್ಭುತವನ್ನು ತೋರಿಸಬೇಕಾಗುತ್ತದೆ, ದಿವ್ಯಚಕ್ಷುವನ್ನೂ ಅದಕ್ಕಾಗಿ ಅನುಗ್ರಹಿಸಿ. ಇಷ್ಟಾದಮೇಲೆ ಕಡೆಗೆ ಅರ್ಜುನ ತನ್ನ ಬುದ್ಧಿಯನ್ನು ಬದಿಗೊತ್ತಿ "ಕರಿಷ್ಯೇ ವಚನಂ ತವ" ಎಂದು ಯುದ್ಧ ಪ್ರವೃತ್ತನಾಗುತ್ತಾನೆ. ಆದರೇನು! ಭೀಷ್ಮನನ್ನು ಎರಡು ದಿನ ಎದುರಿಸುವ ಹೊತ್ತಿಗೆ ಅವನ ಧೈರ್ಯವೆಲ್ಲಾ ಮುಗಿಯಿತು. ಮೂರನೆಯ ದಿನವೇ ಭೀಷ್ಮನ ಮಹಾರಭಸದ ಮುಂದ ಅವನ ಕೈಸಾಗಲಿಲ್ಲ. ಕೃಷ್ಣನು ತಾನು ಯುದ್ಧಮಾಡುವುದಿಲ್ಲವೆಂದಿದ್ದ ಪ್ರತಿಜ್ಞಾಭಂಗವನ್ನೂ ಲೆಕ್ಕಿಸದೆ, ಚಕ್ರವನ್ನು ಹಿಡಿಯಬೇಕಾಯಿತು. ಚಕ್ರಪಾಣಿಯಾಗಿ ರಥದಿಂದ ಧುಮುಕಿ ಭೀಷ್ಮದ್ರೋಣಾದಿಗಳನ್ನೆಲ್ಲ ಸಂಹರಿಸಿಬಿಡುತ್ತೇನೆಂದು ಮುನ್ನುಗ್ಗುತ್ತಾನೆ— ಶ್ರೀಕೃಷ್ಣ. ಏನಾದರೂ ಅವನು ಪಾಂಡವರ ಸೋಲನ್ನು ನೋಡಲಾರ:—

> ಕ್ಷುರಾಂತಮುದ್ಯಮ್ಯ ಭುಜೇನ ಚಕ್ರಂ
> ರಥಾದವಪ್ಲುತ್ಯ ವಿಸೃಜ್ಯ ವಾಹಾನ್ ।
> ಸಂಕಂಪಯನ್ ಗಾಂ ಚರಣೈರ್ಮಹಾತ್ಮಾ
> ವೇಗೇನ ಕೃಷ್ಣಃ ಪ್ರಸಸಾರ ಭೀಷ್ಮಮ್ ॥ (VI 59.89)

ಆಗ ಭೀಷ್ಮನಿಗೆ ಭಗವಂತನ ಭಕ್ತಪಕ್ಷಪಾತವನ್ನು ನೋಡಿ ಆನಂದದಿಂದ ಮೈಯುಬ್ಬುತ್ತದೆ, ಸ್ತೋತ್ರ ಮಾಡುತ್ತಾನೆ, ನೀನೇ ನನ್ನನ್ನು ಕೆಡವಿದರೆ ಅದು ದೊಡ್ಡ ಅನುಗ್ರಹ ಎನ್ನುತ್ತಾನೆ.

> ಏಹ್ಯೇಹಿ ದೇವೇಶ ಜಗನ್ನಿವಾಸ
> ನಮೋಽಸ್ತು ತೇ ಮಾಧವ ಚಕ್ರಪಾಣೇ ।
> ಪ್ರಸಹ್ಯ ಮಾಂ ಪಾತಯ ಲೋಕನಾಥ
> ರಥೋತ್ತಮಾತ್ ಸರ್ವಶರಣ್ಯ ಸಂಖ್ಯೇ ॥
> ತ್ವಯಾ ಹತಸ್ಯಾಪಿ ಮಮಾದ್ಯ ಕೃಷ್ಣ
> ಶ್ರೇಯಃ ಪರಸ್ಮಿನ್ನಿಹ ಚೈವ ಲೋಕೇ ॥ (97-98)

ಅರ್ಜುನನಿಗೆ ಜ್ಞಾನೋದಯವಾಗುತ್ತದೆ. ಕೃಷ್ಣನನ್ನು ಅಷ್ಟಕ್ಕೆ ಬಿಡುವುದಿಲ್ಲ. ರಥದಿಂದಿಳಿದು ಕೃಷ್ಣನ ಕೈಹಿಡಿದು ನಿಲ್ಲಿಸುವಂತೆ ಬೇಡುತ್ತಾನೆ. ಕೃಷ್ಣನು ಜೋರಿನಲ್ಲಿ ಅರ್ಜುನನನ್ನೂ ಎಳೆದುಕೊಂಡೇ ಹೋದನಂತೆ 'ಮಹಾವಾತ ಇವೈಕವೃಕ್ಷಮ್.' ಕಡೆಗೆ ಕಷ್ಟದಿಂದ ಕಾಲುಕಟ್ಟಿಕೊಂಡು, ಕೌರವರನ್ನು ಕೊಂದೇ ತೀರುವೆನೆಂದು ಸೋದರರ ಆಣೆಯಿಟ್ಟುಕೊಂಡ ಮೇಲೆ ಕೃಷ್ಣನ ಕೋಪ ಶಾಂತವಾಗುತ್ತದೆ. (ಈ ಪ್ರಸಂಗವೂ ಪ್ರಕ್ಷಿಪ್ತವಿರಬಹುದು.) ಮುಂದಿನ ಯುದ್ಧದಲ್ಲೆಲ್ಲ ಕೃಷ್ಣನ ಸಮಯೋಚಿತ ಸಲಹೆಯೇ ಪಾಂಡವರ ವಿಜಯಕ್ಕೆ ಕಾರಣ. ಭೀಷ್ಮನ ವಧೆಗೆ ಶಿಖಂಡಿಯನ್ನು ಮುಂದೆ ಮಾಡಿದುದು ಮಾತ್ರವೇ ಕಾರಣವೆಂದು ತಿಳಿಯುವುದು ತಪ್ಪು. ಬೀಳುವುದಕ್ಕೆ ಒಂದು ಕ್ಷಣ ಮುಂಚೆ ಭೀಷ್ಮನೇ ತನ್ನ ಮನಸ್ಸಿನಲ್ಲಿ ಹೀಗೆಂದುಕೊಳ್ಳುತ್ತಾನೆ.—

**ಶಕ್ತೋಽಹಂ ಧನುಷೈಕೇನ ನಿಹಂತುಂ ಸರ್ವ**
**ಪಾಂಡವಾನ್ ।**
**ಯದ್ಯೇಷಾಂ ನ ಭವೇದ್ಗೋಪ್ತಾ ವಿಷ್ವಕ್ಸೇನೋ**
**ಮಹಾಬಲಃ ॥** ( IV 119.33 )

ಕೃಷ್ಣನೊಬ್ಬನ ರಕ್ಷಣೆಯಿಲ್ಲದಿದ್ದರೆ ಪಾಂಡವರೆಲ್ಲರನ್ನೂ ಒಂದು ಬಾಣದಿಂದಲೇ ಕೊಲ್ಲಬಲ್ಲ ಧೀರ ಭೀಷ್ಮ. ಆದರೆ ಬೀಳುತ್ತಾನೆ. ಪಾಂಡವರ ಬಲದಿಂದಲ್ಲ; ವ್ಯಕ್ತಾವ್ಯಕ್ತವಾದ ಕೃಷ್ಣನ ಬಲ್ಮೆಯಿಂದ.

ದ್ರೋಣರ ಸೈನ್ಯಾಧಿಪತ್ಯದಲ್ಲಿ ವೀರಬಾಲನಾದ ಅಭಿಮನ್ಯುವಿನ ವಧೆಯಾಗುತ್ತದೆ—ಚಕ್ರವ್ಯೂಹದಲ್ಲಿ, ಅರ್ಜುನನು ಸಂಶಪ್ತಕರೊಡನೆ ಯುದ್ಧ ಮಾಡುತ್ತಾ ಅವನಿಗೆ ಇದರ ಕಲ್ಪನೆ ಬರುವುದಿಲ್ಲ. ತಿಳಿದೊಡನೆ ಪುತ್ರಶೋಕದಿಂದ ಹುಚ್ಚನಾಗಿ ಜಯದ್ರಥನನ್ನು ಮಾರನೆಯ ದಿನ ಸೂರ್ಯಾಸ್ತವಯದೊಳಗಾಗಿ ಕೊಲ್ಲದಿದ್ದರೆ ಅಗ್ನಿಪ್ರವೇಶ ಮಾಡುವೆನೆಂದು ಕೆಟ್ಟ ಆಣೆಗಳನ್ನೆಲ್ಲ ಇಟ್ಟುಕೊಳ್ಳುತ್ತಾನೆ.—

**ಯದ್ಯಸ್ಮಿನ್ನಹತೇ ಪಾಪೇ ಸೂರ್ಯೋಽಸ್ತಮುಪಯಾಸ್ಯತಿ ।**
**ಇಹೈವ ಸಂಪ್ರವೇಷ್ಟಾಽಹಂ ಜ್ವಲಿತಂ ಜಾತವೇದಸಮ್ ॥**
(VII.73.47)

ಮೂರನೆಯದಿನ ಕೌರವವೀರರೆಲ್ಲರೂ ಶಕ್ತಿಮೀರಿ ಯುದ್ಧಮಾಡುತ್ತಾ ಜಯದ್ರಥನನ್ನು ಕಾಪಾಡಿಕೊಂಡರು. ಅರ್ಜುನನ ಪ್ರತಿಜ್ಞಾಭಂಗವಾಗುವ ಸಮಯ ಬಂದಿತು. ಆಗ ಕೃಷ್ಣನು ತನ್ನ ಮಾಯೆಯಿಂದ ಮೊದಲೇ ಸೂರ್ಯಾಸ್ತವಾದಂತೆ ಕತ್ತಲೆಯನ್ನು ತೋರಿಸಿ ಶತ್ರುಪಕ್ಷದವರು ವ್ಯಾಮೋಹಿ ಯುವಂತೆ ಮಾಡುತ್ತಾನೆ:—

**"ತತೋಽಸೃಜತ್ತಮಃ ಕೃಷ್ಣಃ ಸೂರ್ಯಸ್ಯಾವರಣಂ ಪ್ರತಿ।**
**ಯೋಗೀ ಯೋಗೇನ ಸಂಯುಕ್ತೋ ಯೋಗಿನಾಮೀಶ್ವರೋ ಹರಿಃ"॥**

(VII. 146 68)

ಜಯದ್ರಥನನ್ನು ಅರ್ಜುನನು ಸಂಹರಿಸಿದ ಮೇಲೆ ಮತ್ತೆ ಸೂರ್ಯ ಪ್ರಕಾಶ ಬರುತ್ತದೆ.

ಹಾಗೆಯೇ ದ್ರೋಣನಿಂದ ಅಪಾರವಾದ ಸ್ವಬಲಹಾನಿಯಾಗುವುದನ್ನು ಉಪೇಕ್ಷಿಸಲಾರದೆ ಕೃಷ್ಣನೇ ಧರ್ಮರಾಯನ ಬಾಯಲ್ಲಿಯೂ ಸುಳ್ಳಾಡಿ ಸುತ್ತಾನೆ —

**ಅನೃತಂ ಜೀವಿತಸ್ಯಾರ್ಥೇ**
**ವದನ್ನ ಸ್ಪೃಶ್ಯತೇಽನೃತೈಃ** (VII 190 47)

[ಪ್ರಾಣರಕ್ಷಣೆಗಾಗಿ ಸುಳ್ಳಾಡುವವನಿಗೆ ಸುಳ್ಳಾಡಿದ ದೋಷವಿಲ್ಲ]

'ಕೃಷ್ಣವಾಕ್ಯಪ್ರಚೋದಿತ' (53) ನಾಗಿ ಅವನು 'ಅಶ್ವತ್ಥಾಮಾ ಹತಃ' (ಕುಂಜರಃ) ಎನ್ನುತ್ತಾನೆ. ಇದಿಲ್ಲದಿದ್ದರೆ ದ್ರೋಣವಧೆಯಾಗುತ್ತಿರಲಿಲ್ಲ. ಆಮೇಲೆ ಅಶ್ವತ್ಥಾಮನು ದುರ್ವಾರವಾದ ನಾರಾಯಣಾಸ್ತ್ರವನ್ನು ಪ್ರಯೋಗಿಸಿದರೆ ಅದನ್ನೂ ಕೃಷ್ಣನು ತನ್ನ ಮಾಹಾತ್ಮ್ಯದಿಂದ ತಡೆಯುತ್ತಾನೆ. (VII 199. 51)

ಕರ್ಣನ ಬಳಿ ಎಂತಹ ಶತ್ರುವನ್ನಾದರೂ ಕೊಂದೇ ತೀರುವ ಇಂದ್ರದತ್ತ ಶಕ್ತಿಯಿತ್ತು. ಅದನ್ನು ಅರ್ಜುನನಿಗಾಗಿ ಕಾದಿಟ್ಟಿದ್ದನು. ಕೃಷ್ಣನು ಘಟೋತ್ಕಚನನ್ನು ಅವನೊಡನೆ ರಾತ್ರಿ ಮಾಯಾಯುದ್ಧ ಮಾಡುವಂತೆ ಪ್ರೇರಿಸಿ ಆ ಶಕ್ತಿ ತೀರುವಂತೆ ಮಾಡಿದನು. ಕಡೆಗೆ ಕರ್ಣ ನೊಡನೆ ನಡೆದ ಭೀಕರ ಯುದ್ಧದಲ್ಲಿ ಕರ್ಣನ ಸರ್ಪಾಸ್ತ್ರವು ಅರ್ಜುನನ

ತಲೆಯನ್ನು ಕಡಿದುಬಿಡಬೇಕೆಂಬ ಹೊತ್ತಿಗೆ ಕೃಷ್ಣನು ರಥವನ್ನೇ ಭೂಮಿಯೊಳಗಿಳಿಯುವಂತೆ ಅದ್ಭುತ ಚಮತ್ಕಾರ ಮಾಡಿ ಅವನ ಕಿರೀಟ ಮಾತ್ರ ಹಾರುವಂತೆ ಮಾಡುತ್ತಾನೆ:—

**ಪದಾ ವಿನಿಷ್ಪತ್ಯ ರಥೋತ್ತಮಂ ಸ**
**ಪ್ರಾವೇಶಯತ್ ಪೃಥಿವೀಂ ಕಿಂಚಿದೇವ** (VIII. 90. 29)

ಕರ್ಣನು ಹೂತುಹೋಗಿದ್ದ ರಥದ ಗಾಲಿಯನ್ನು ಎತ್ತುತ್ತಾ ಅಸಹಾಯನಾಗಿದ್ದಾಗ ಅವನನ್ನು ಅರ್ಜುನನ ಕೈಯಿಂದ ಕೊಲ್ಲಿಸುತ್ತಾನೆ. ಸೂರ್ಯಪುತ್ರನು ಅಸ್ತನಾಗುತ್ತಾನೆ.

ಕಡೆಗೆ ಕೊಳದಲ್ಲಡಗಿದ್ದ ದುರ್ಯೋಧನನನ್ನು ವಾಗ್ಬಾಣಗಳಿಂದ ಚುಚ್ಚಿ ಎಬ್ಬಿಸಿ ಗದಾಯುದ್ಧವನ್ನು ಮಾಡಿಸುವವನೂ ಕೃಷ್ಣನೇ. ಯುದ್ಧ ಕಾಲದಲ್ಲಿ ಅನ್ಯಾಯದಿಂದಲ್ಲದೆ ಕುರುಪತಿಯನ್ನು ಗೆಲ್ಲಲಾಗುವುದಿಲ್ಲವೆಂದು ತಿಳಿಸಿ, ಅರ್ಜುನನ ಮೂಲಕ ತೊಡೆಯನ್ನು ತಟ್ಟಿಸಿ ಸನ್ನೆ ಮಾಡುವವನು ಕೃಷ್ಣನೇ. ಬಲರಾಮನೇ ಊರುಭಂಗದ ಅನ್ಯಾಯವನ್ನು ಒಪ್ಪಲಿಲ್ಲ. (IX. 58-59)

ಅಶ್ವತ್ಥಾಮನ ಪ್ರಲಯಕೋಪವು ಪಂಚಪಾಂಡವರನ್ನೂ ದ್ರೌಪದಿಯನ್ನೂ ನಾಶಗೈಯದಂತೆ ನೋಡಿಕೊಂಡವನೂ ಶ್ರೀ ಕೃಷ್ಣನೇ. ಉಳಿದವರೆಲ್ಲರೂ ನಿದ್ದೆಯಲ್ಲಿಯೇ ಹತರಾದರು. ಯಾರೂ ಉಳಿಯಲಿಲ್ಲ. 'ನಿಷ್ಪಾಂಡವಾಸ್ತು' ಎಂದು ಮನುಷ್ಯರಮೇಲೆ ಪ್ರಯೋಗಿಸಬಾರದ ಇಷೀಕಾಸ್ತ್ರವನ್ನು ಅಶ್ವತ್ಥಾಮನು ಪ್ರಯೋಗಿಸಿದರೆ ಕೃಷ್ಣನ ಬಲದಿಂದ ಅರ್ಜುನನು ತತ್ಸಮಾನವಾದ ಬ್ರಹ್ಮಶಿರೋಽಸ್ತ್ರವನ್ನು ಪ್ರಯೋಗಿಸಬೇಕಾಯಿತು. ಆದರೆ ಅಶ್ವತ್ಥಾಮನು ತನ್ನ ಕೋಪಕ್ಕೆ ಉತ್ತರೆಯ ಗರ್ಭವೇ ಲಕ್ಷ್ಯವೆಂದು ಹೇಳಿದರೆ ಕೃಷ್ಣನು ತನ್ನ ಅದ್ಭುತದಿಂದ ಸತ್ತು ಹುಟ್ಟಿದ ಮಗುವಿಗೆ ಮತ್ತೆ ಜೀವವನ್ನೆರೆಯುವ ಭರವಸೆಯೀಯುತ್ತಾನೆ. (X.15-6)

ಮುಂದೆ ಧೃತರಾಷ್ಟ್ರ ಗಾಂಧಾರಿಯರಿಗೆ ಸಮಾಧಾನ ಹೇಳುವುದಕ್ಕೂ ಕೃಷ್ಣನೇ ಹೋಗುತ್ತಾನೆ. ಭೀಮನನ್ನು ತಬ್ಬಿಕೊಳ್ಳಲು ಧೃತರಾಷ್ಟ್ರ ಕರೆದರೆ ಕಬ್ಬಿಣದ ಭೀಮನ ಪ್ರತಿಮೆಯನ್ನು ಕೃಷ್ಣನು ತಳ್ಳುತ್ತಾನೆ. ಅದು ಪುಡಿಪುಡಿ

ಯಾಯಿತಂತೆ. ಅಂಥ ರೋಷ ಅವನದು. (XI.12) [ಇದು ಪ್ರಕ್ಷೇಪ ವಿರಬಹುದು.]

ಕಟ್ಟ ಕಡೆಗೆ ಗಾಂಧಾರಿಯು ಶಾಪಕೊಡುವುದು ತನ್ನ ಪುತ್ರರೆಲ್ಲರನ್ನೂ ಕೊಂದ ಪಾಂಡವರಿಗಲ್ಲ, ಕೃಷ್ಣನಿಗೆಂಬುದೂ ಗಮನಾರ್ಹ. (XI.25) ಆಕೆಯ ಮನಸ್ಸಿನಲ್ಲಿ ಈ ಅನರ್ಥಕ್ಕೆಲ್ಲ ಕೃಷ್ಣನೇ ಮೂಲವೆಂಬುದು ಸುನಿಶ್ಚಿತ ವಾಗಿತ್ತು.

ಯಾದವರೆಲ್ಲರೂ ಹೊಡೆದಾಡಿ ಸತ್ತರು. ಕೃಷ್ಣನೂ ಜರನೆಂಬ ಬೇಡನ ಬಾಣಕ್ಕೆ ತುತ್ತಾದನು. ಆಗ ಕೃಷ್ಣನ ಸ್ತ್ರೀಯರನ್ನು ಸುರಕ್ಷಿತವಾಗಿ ತರಲು ಹೋದ ಅರ್ಜುನನಿಗೆ ದಿವ್ಯಾಸ್ತ್ರಗಳೆಲ್ಲಾ ಮರೆತು ಹೋದುವಂತೆ, ವೀರ್ಯ ವೆಲ್ಲಾ ಉಡುಗಿಹೋಯಿತಂತೆ. (XVI 7 53-54) ಕಾಡುಜನರು ಎಷ್ಟೋ ಹೆಂಗಸರನ್ನೆಲ್ಲ ಹಾರಿಸಿಕೊಂಡು ಹೋಗಿಬಿಟ್ಟರು. ಇದು ಕೃಷ್ಣನಿಲ್ಲದ ಅರ್ಜುನನ ಚಿತ್ರ.

ಹೀಗೆ ಮಹಾಭಾರತದ ಕಥೆಯ ಪ್ರತಿಯೊಂದು ಮುಖ್ಯ ಘಟನೆಗೂ ಕೃಷ್ಣನ ಸಂಬಂಧವಿದೆ. ಕೃಷ್ಣನೇ ಆ ಮಹಾ ದುರಂತ ನಾಟಕದ ಸೂತ್ರ ಧಾರ. ಅರ್ಜುನಾದಿಗಳೆಲ್ಲ ಅವನ ಇಚ್ಛಾನುವರ್ತಿಗಳು ಮಾತ್ರ. ಕೆಲಸಗಳನ್ನು ಮಾಡುವುದೆಲ್ಲ ಕೃಷ್ಣನ ಅದ್ಭುತಬೆಂಬಲ, ಯೋಜಿಸುವುದೆಲ್ಲ ಕೃಷ್ಣನ ಬುದ್ಧಿ ಬಲ. ಅವನೊಂದು ಕ್ಷಣ ದೂರವಾದರೂ ಪಾಂಡವರು ಹತವೀರ್ಯರಾಗುತ್ತಾರೆ, ಗತಸತ್ತ್ವರಾಗುತ್ತಾರೆ. ಕೃಷ್ಣನ ರಾಜನೀತಿಯಲ್ಲಿ ಅರ್ಥಸಿದ್ಧಿಗಾಗಿ ಮೋಸ, ವಂಚನೆಗಳಿಗೆ ಸ್ಥಾನವಿರುವುದನ್ನು ಇಲ್ಲವೆನ್ನುವಂತಿಲ್ಲ. ಇದನ್ನೇ ಮುಂದೆ ಕೌಟಿಲ್ಯನೂ ಹೇಳಿದುದು--'ಕಂಟಕ ಶೋಧನ' ಎಂಬ ಶಬ್ದದಿಂದ. ಮುಳ್ಳನ್ನು ತೆಗೆಯಲು ಮುಳ್ಳೇ ಬೇಕಾಗುತ್ತದೆ. ಕರ್ಣ ಶಕುನಿ ದುರ್ಯೋಧ ನರು ಯಾವ ಅಧರ್ಮಕ್ಕೂ ಹೇಸದಿರುವಾಗ ಅವರನ್ನು ಸೋಲಿಸಲು ಧರ್ಮ ವೆಂದು ಕುಳಿತರೆ ಆಗುತ್ತಿರಲಿಲ್ಲ. ಆದರೆ ಕೃಷ್ಣನ ಧ್ಯೇಯ ದೊಡ್ಡದು, ತತ್ತ್ವ ದೊಡ್ಡದು, ಸಾಧನೆಯೂ ದೊಡ್ಡದು. ಶಾಂತಿಯನ್ನು ಒಪ್ಪದ ಮದೋನ್ಮತ್ತ ರಿಗೆ ಯುದ್ಧದ ಮೂಲಕ ಪಾಠ ಕಲಿಸ ಬೇಕಾಯಿತು. ಇದಕ್ಕೆ ಕೃಷ್ಣನ ಬುದ್ಧಿಬಲ, ದೇಹಬಲಗಳೆಲ್ಲಕ್ಕಿಂತ ಹೆಚ್ಚಾಗಿ ದೈವೀಬಲವನ್ನೂ ಧಾರೆಯೆರೆ ಯಬೇಕಾಯಿತು. ಅರ್ಥಸಿದ್ಧಿಗೆ ಅಧರ್ಮವೂ ಅನಿವಾರ್ಯವಾಗುವುದನ್ನು

ತೋರಿಸಿ ಅದಕ್ಕೆ ಪ್ರತಿಯಾಗಿ ಸಾರ್ವಕಾಲಿಕವೂ ಮಹೋನ್ನತವೂ ಆದ ತತ್ವಸಂದೇಶವನ್ನು ಸಾರಿದ ಮಹಾನುಭಾವ ಶ್ರೀಕೃಷ್ಣ ; ಕೇವಲ ರಾಜನೀತಿವಿಶಾರದನಲ್ಲ.

**ಅಗ್ರತಶ್ಚತುರೋ ವೇದಾಃ ಪೃಷ್ಠತಃ ಸಶರಂ ಧನುಃ ।**
**ಇದಂ ಬ್ರಾಹ್ಮಮಿದಂ ಕ್ಷಾತ್ರಂ ಶಾಪಾದಪಿ ಶರಾದಪಿ ॥**

[ಮುಂದುಗಡೆ ಚತುರ್ವೇದಗಳು ; ಹಿಂದುಗಡೆ ಬಾಣಹೂಡಿದ ಬಿಲ್ಲು ! ಇತ್ತ ಬ್ರಹ್ಮತೇಜಸ್ಸು , ಇತ್ತ ಕ್ಷಾತ್ರತೇಜಸ್ಸು ! ಶಾಪಕ್ಕೂ ಸರಿ, ಯುದ್ಧಕ್ಕೂ ಸರಿ ! ]

ಎಂಬ ವೀರಘೋಷಣೆಗೆ ಅನ್ವರ್ಥಕವಾಗಿ ಶಾಸ್ತ್ರಜ್ಞಾನ ಶಸ್ತ್ರಜ್ಞಾನಗಳೆರಡರಲ್ಲೂ ಪರಮಪ್ರಾವೀಣ್ಯವನ್ನು ಪಡೆದ ಮಹಾತ್ಮ. ಅವನ ನೀತಿ ಅವನ ಚಕ್ರದಂತೆಯೇ ಅಪ್ರತಿಹತ. ಪ್ರಪಂಚಕ್ಕೆ ದೂರನಾಗದೆ ಪರಮಾರ್ಥವನ್ನೂ ಕೈಬಿಡದ, ಅರ್ಥಕಾಮಗಳನ್ನು ಉದಾತ್ತಗೊಳಿಸಿ, ಧರ್ಮದ ಮೂಲತತ್ವಗಳನ್ನೂ ನೆಲೆಗೊಳಿಸಿದ ಅವತಾರಪುರುಷ. ಮಹಾಭಾರತದ ಧ್ಯಾನಶ್ಲೋಕದಲ್ಲಿ ಹೇಳುವಂತೆ–ಭಾರತ ಸಂಗ್ರಾಮ ವೆಂಬುದು ಒಂದು ಮಹಾನದಿ, ಭೀಷ್ಮದ್ರೋಣರೇ ಅದರ ಎರಡು ದಡಗಳು. ಜಯದ್ರಥನೇ ಹರಿವ ನೀರು, ಶಕುನಿಯೇ ನಡುವಿನ ಕಗ್ಗಲ್ಲ ಬಂಡೆ, ಶಲ್ಯನೇ ಮೊಸಳೆ, ಕೃಪನೇ ತೆಪ್ಪ, ಕರ್ಣನೇ ಅಲೆಯ ಸಾಲು, ಅಶ್ವತ್ಥಾಮವಿಕರ್ಣರು ಘೋರಮಕರಗಳು, ದುರ್ಯೋಧನನೇ ಸುಳಿ. - ಆದರೆ ಪಾಂಡವರು ಅದನ್ನು ದಾಟಿದರು– ಕೃಷ್ಣನೆಂಬ ಅಂಬಿಗನಿದ್ದುದರಿಂದ. (ಶ್ಲೇಷೆಯಿಂದ ಈ ಪದ್ಯಕ್ಕೆ 'ಭಯಂಕರವೂ ಕಡಿದೂ ಆದ ದಡಗಳು, ವಿಜಯರಥಗಳ ಓಡಾಟ, ಗಾಂಧಾರದ ನೀಲರತ್ನಗಳು, ಆಯುಧಗಳೇ ಮೊಸಳೆಗಳು ' ಮುಂತಾಗಿ ಇತರಾರ್ಥಗಳೂ ಧ್ವನಿತವಾಗುತ್ತವೆ) . – -

**ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋಪಲಾ**
**ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।**
**ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ**
**ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ ॥**

ಪ್ರೊ|| ವಿ. ಸೀತಾರಾಮಯ್ಯನವರು ಮಹಾಭಾರತದಲ್ಲಿ ಶ್ರೀಕೃಷ್ಣನ ಪಾತ್ರವನ್ನು ಕೆಳಗಿನ ಸಾರವತ್ತಾದ ವಾಕ್ಯಗಳಲ್ಲಿ ಚಿತ್ರಿಸಿದ್ದಾರೆ:—"ಆತನು ಹುಟ್ಟಿದಂದಿನಿಂದಲೂ ಕಷ್ಟಜೀವಿಯೇ. ಅಪಾಯಗಳ ದವಡೆಯಲ್ಲಿ ಸಿಕ್ಕಿಕೊಂಡಿದ್ದರೂ ಅದನ್ನು ಹಿರಿದು ಹೊರಕ್ಕೆ ಬಂದು ಪಾಂಡವರ ಮೂಲಕ ಖಳವೆಂಡಲವನ್ನೆಲ್ಲ ಮುರಿದನು. ತನ್ನ ವಂಶದಲ್ಲಿನ ಅಂತಃಕಲಹಗಳನ್ನೆಲ್ಲ ಸರಿಪಡಿಸಿದನು. ಲಂಪಟತೆಗಳನ್ನು ಭಗ್ನಮಾಡಿದನು. ಇತ್ತ ಅಕ್ರೂರ, ವಸುದೇವ, ಬಲರಾಮರ ಯಾಜಮಾನ್ಯಕ್ಕೆ ಒಳಪಟ್ಟಿದ್ದರೂ, ಅತ್ತ ಯುಧಿಷ್ಠಿರನ ಯಾಜಮಾನ್ಯವನ್ನು ಒಪ್ಪಿಕೊಂಡಿದ್ದರೂ, ಎಲ್ಲರಿಂದಲೂ ಮಾನಿತನಾಗಿ ಎಲ್ಲರಿಗೂ ತಿಳಿಯಹೇಳಿ ಎಲ್ಲರಿಂದಲೂ ಕೆಲಸ ಮಾಡಿಸಿದನು. ಎಂತಹ ವಿಪತ್ತುಗಳ ಮಧ್ಯದಲ್ಲಿಯೂ ಸರಸವಾದ, ಸಮತೆ ತಪ್ಪದ, ಸಾತ್ತ್ವಿಕ ಜೀವನವನ್ನು ನಡೆಯಿಸಿಕೊಂಡನು ಎಂದು ಹೇಳಬಹುದೇ ಹೊರತು ಮಹಾಭಾರತವನ್ನೆಲ್ಲ ಹುಡುಕಿದರೂ ಎಲ್ಲಿಯೇ ಆಗಲಿ, ಒಂದು ದುರಾಶೆಯ, ಒಂದು ಕಾಮುಕತೆಯ ಸೂಚನೆ (ಶಿಶುಪಾಲನ ಮೂದಲಿಕೆಗಳಲ್ಲಿ ಕೂಡ) ಅಧರ್ಮಕಾರ್ಯದ ಒಂದು ನೆಳಲು ಕವಿದು ಬರುವುದಿಲ್ಲ. ಆತನಿಗೆ ಬಿತ್ತಾವುದು ಹೊಟ್ಟು ಯಾವುದ, ಕಳೆಯಾವುದು ಪಯಿರಾವುದು ಎಂಬುದು ಗೊತ್ತು. ಆದದರಿಂದ ಆತನು ಆಗಿನ ಭರತಖಂಡದಲ್ಲಿ ನಾಶಯೋಗ್ಯವಾದುದನ್ನೆಲ್ಲ ನಾಶಮಾಡಿ, ಧರ್ಮವನ್ನು ಬೆಳೆದಿದ್ದಾನೆ. ಇಂಥವನನ್ನಲ್ಲದೆ ಬೇರೆ ಯಾರನ್ನು ದೇವರೆನ್ನುವುದು? ಜೀವನದ ಪ್ರತಿಯೊಂದು ರಂಗದಲ್ಲಿಯೂ ಮಾನವನ ಯೋಗ್ಯತೆಯ ಪರಮಾವಧಿಯನ್ನು ಆತನು ತೋರಿಸಿದ್ದಾನೆ. ಕೇವಲ ದೇವರು ಹೀಗೆಲ್ಲ ಮಾಡಿದನೆಂದರೆ ಹೆಚ್ಚಿಗೆಯೇನೂ ಇಲ್ಲ, ಮನುಷ್ಯನಾಗಿದ್ದವನು ಈ ಬಗೆಯ ಗರಿಮೆಯಿಂದ ದೈವತ್ತ್ವವನ್ನು ಪಡೆದನೆಂದರೆ ಮಾನವವರ್ಗಕ್ಕೇ ಗೌರವ, ಭರವಸೆ. ಎಲ್ಲ ಯತ್ನಗಳಿಗೂ ನಂಬಿಕೆ, ಉತ್ತೇಜನ ಮೇಲ್ಪಂಕ್ತಿ. ಇದ್ದುದೂ ಹಾಗೆಯೇ." (**ಕವಿಕಾವ್ಯದೃಷ್ಟಿ :** ಭಾರತಗಳ ಶ್ರೀಕೃಷ್ಣ, ಪು. ೯೭)

**ಭಾರತ ಕಥೆಯ ಬೀಜ :** ಎಷ್ಟೆಂದರೂ ಕೃಷ್ಣನು ಬಿತ್ತಿಯಾಗಿದ್ದ ಬೀಜವನ್ನು ನೀರೆರೆದು ದೊಡ್ಡದು ಮಾಡಿ, ಬಳ್ಳಿಯನ್ನು ಬೇಕಾದಂತೆ ಬೆಳೆಸಿದವನೆನ್ನಬಹುದೇ ಹೊರತು ಅವನೇ ಬೀಜವನ್ನು ಸೃಷ್ಟಿಸಿದನೆಂದು ಹೇಳು

ವಂತಿಲ್ಲ. ಕೃಷ್ಣನು ರಂಗಪ್ರವೇಶಮಾಡುವ ಮೊದಲೇ ಬೀಜಾವಾಪವಾಗಿ ಹೋಗಿತ್ತು. ಇದನ್ನೀಗ ಸ್ವಲ್ಪ ವಿಚಾರಿಸಬಹುದು. ಕಾಡಿನಲ್ಲಿ ಪಾಂಡು ಸತ್ತಮೇಲೆ ಆತನ ಮಕ್ಕಳೆಂದು ಪಾಂಡವರೈವರನ್ನೂ ಕರೆತಂದು ಋಷಿಗಳು ಧೃತರಾಷ್ಟ್ರನಿಗೆ ಒಪ್ಪಿಸಿದಾಗಲೇ ಅವರು ಆಸ್ತಿಗೆ ಯೋಗ್ಯರಾದ ಮಕ್ಕಳಲ್ಲ ವೆಂಬ ಸಂದೇಹ ಕೇಳಿಬರುತ್ತದೆ·—

**ಆಹುಃ ಕೇಚಿನ್ನ ತಸ್ಯೈತೇ ತಸ್ಯೈತ ಇತಿ ಚಾಪರೇ ।**
**ಯದಾ ಚಿರವ್ಮೃತಃ ಪಾಂಡುಃ ಕಥಂ ತಸ್ಯೇತಿ ಚಾಪರೇ ॥**
(I.1 19)

ಅವರು ದುರ್ಯೋಧನಾದಿಗಳ ಜತೆಯಲ್ಲೇ ವಿದ್ಯಾಭ್ಯಾಸ ಮಾಡಿ ಅವರಿಗಿಂತ ಹೆಚ್ಚಿನ ವಿದ್ಯೆಯನ್ನು ಪಡೆಯುತ್ತಾರೆ. ದ್ರೋಣಾಚಾರ್ಯರು ಮಾಡುವ ಶಿಷ್ಯಪರೀಕ್ಷೆಯಲ್ಲಿ ಇದು ವ್ಯಕ್ತವಾಗುತ್ತದೆ. ದುರ್ಯೋಧನನ ಅಸೂಯೆ ಉಕ್ಕುತ್ತದೆ. ಅರ್ಜುನನಿಗೆ ಸಮನಾದ ಯೋಧನಿಲ್ಲವೆಂದು ನಿರ್ಣಯಿಸುತ್ತಿರುವಾಗ ಸೂರ್ಯನಂತೆ ತೇಜಸ್ವಿಯಾಗಿದ್ದ ಕರ್ಣ ಪ್ರವೇಶಿಸಿ, ಅರ್ಜುನನು ಮಾಡಿದ್ದನ್ನೆಲ್ಲ ಮಾಡಿ ಎಲ್ಲರನ್ನೂ ನಿಬ್ಬೆರಗಾಗಿಸುತ್ತಾನೆ. ಒಂದೇ ಸಮನೆ ಪಾಂಡವರಿಗಿಂತ ಮೇಲಾಗಬೇಕೆಂದು ಹಾತೊರೆಯುತ್ತಿದ್ದ ದುರ್ಯೋಧನನಿಗೆ ಪರಮಾನಂದವಾಗುತ್ತದೆ. ಸೂತಪುತ್ರನೆಂದು ಅವಮಾನಿತನಾಗಿದ್ದ ಅವನಿಗೆ ಅಲ್ಲಿಂದಲ್ಲೇ ಅಂಗರಾಜ್ಯವನ್ನು ಕೊಟ್ಟು ಅಭಿಷೇಕ ಮಾಡಿ ಕರ್ಣನನ್ನು ತನ್ನ ಪ್ರಾಣಸ್ನೇಹಿತನನ್ನಾಗಿ ಮಾಡಿಕೊಳ್ಳುತ್ತಾನೆ. ಅರ್ಜುನನಿಗೆ ಕಡಿಮೆಯಿಲ್ಲದ ಎದುರಾಳಿ ತನ್ನವನೆಂದು ಅವನ ಆನಂದಕ್ಕೆ ಪಾರವೇ ಇಲ್ಲ. ಕರ್ಣನಿಗೂ ಇಂತಹ ಉಪಕಾರ ಪಡೆದುದನ್ನು ಹೇಗೆ ತೀರಿಸಬೇಕೆಂಬ ಒಂದೇ ಚಿಂತೆ ಕೌರವನ ಆಸೆಯ ಸೌಧಕ್ಕೆಲ್ಲ ಕರ್ಣನ ಸ್ನೇಹವೇ ನಾಂದಿಯಾಯಿತು. ಪಾಂಡವರಿಗೆ ಕೃಷ್ಣನು ಹೇಗೋ ಕೌರವನಿಗೆ ಕರ್ಣನು ಹಾಗೆಯೇ ಹಿತೈಷಿಯಾದನು ಇನ್ನೊಬ್ಬ ದುರ್ಮಂತ್ರಿ ಇವನ ಸೋದರಮಾವನಾದ ಶಕುನಿ. ಈ ಮೂವರೂ ಪಾಂಡವರನ್ನು ಕುಟಿಲನೀತಿಯಿಂದಲೇ ಧ್ವಂಸಮಾಡುವ ಯೋಜನೆಗಳನ್ನು ಕೈಕೊಂಡರು. ನಂಬಿಸಿ ಅರಗಿನ ಅರಮನೆಯಲ್ಲಿ ಸುಡಿಸಲು ಏರ್ಪಡಿಸಿದರು. ವಿದುರನು ಪಾಂಡವರಿಗೆ ಮುನ್ನೆಚ್ಚರಿಕೆ ಕೊಟ್ಟುದರಿಂದ ಬದುಕಿದರು. ಆದರೆ ಅವರೆದುರಿಗೆ ಬರುವ

ಧೈರ್ಯವಿರಲಿಲ್ಲ. ಕಾಡಿನಲ್ಲಿ ತಲೆಮರೆಸಿಕೊಂಡು ತಿರುಗುತ್ತಿದ್ದರು. ದುರ್ಯೋಧನನ ದಾಯಾದಿ ಮತ್ಸರವು ಮೊದಲಿನಿಂದಲೂ ಅದಮ್ಯವಾಗಿತ್ತು, ಕರ್ಣ ಶಕುನಿಗಳಿಂದ ಅದಕ್ಕೆ ಒತ್ತಾಸೆ ಸಿಕ್ಕಿತು. ಕೃಷ್ಣ ಪಾಂಚಾಲರ ಅಂಜಿಕೆಯಿಂದ ಅವರಿಗೆ ಖಾಂಡವಪ್ರಸ್ಥವೆಂಬ ಕಾಡನ್ನು ಕೊಟ್ಟ ನೆವ ಮಾಡಿದರೂ ಪಾಂಡವರು ಅಷ್ಟೈಶ್ವರ್ಯವನ್ನೂ ಬೇಗ ಗಳಿಸಿದ್ದನ್ನು ಕಂಡು ಅವರಿಗೆ ತಡೆಯಲಾಗಲಿಲ್ಲ. ಕೃಷ್ಣನು ಹೋಗುವುದನ್ನೇ ಕಾಯುತ್ತಿದ್ದು, ಜೂಜಿನ ಕಪಟದಿಂದ ಅವರ ಸರ್ವಸ್ವವನ್ನೂ ಸುಲಿದುಕೊಂಡರು. ಧೃತರಾಷ್ಟ್ರನಿಗೂ ಇದು ಅಪ್ರಿಯವಾಗಿರಲಿಲ್ಲ. ತಮ್ಮ ಇಷ್ಟಾರ್ಥವೆಲ್ಲ ಕೈಗೂಡಿತೆಂದು ಆನಂದದ ಭರದಲ್ಲಿ ದುರ್ಯೋಧನಾದಿಗಳು ದ್ರೌಪದಿಯನ್ನು ಭಂಗಿಸಿ ಅವಮಾನ ಮಾಡಿದ್ದೇ ಮುಂದಿನ ಅನರ್ಥಗಳಿಗೆಲ್ಲ ಮೂಲವಾಯಿತು. ನಿಜವಾಗಿಯೂ ದುರ್ಯೋಧನನ ಅಧರ್ಮದ ಪರಮಾವಧಿ ಇದು. ಅವನಿಗೆ ಎಂದೂ ಪಾಂಡವರು ಯುದ್ಧ ಮಾಡುವರೆಂಬ ಅಂಜಿಕೆಯೇ ಇರಲಿಲ್ಲ ಅಸಮಸಾಹಸಿಗಳಾದ, ದಿವ್ಯಾಸ್ತ್ರ ಸಂಪನ್ನರಾದ ಕರ್ಣ, ಭೀಷ್ಮ, ದ್ರೋಣ ಅಶ್ವತ್ಥಾಮಾದಿಗಳನ್ನು ಸೆಣಸುವ ಸಾಹಸವನ್ನೂ ಯಾರೂ ಮಾಡಲೇ ಆರರೆಂಬುದು ಅವನ ನಂಬಿಕೆ. ಕೃಷ್ಣನೂ ಯುದ್ಧ ಮಾಡುವುದಿಲ್ಲವೆಂದೊಡನೆ ಅವನಿಗೆ ಜಯದಲ್ಲಿ ಸಂಶಯವೇ ಇರಲಿಲ್ಲ. ಹೀಗೆ ಕೇವಲ ಮದಾಂಧನಾಗಿ ಅವನು ಮಾಡಬಾರದ್ದನ್ನು ಮಾಡಿ ಕನಸ್ಸಿನಲ್ಲೂ ಊಹಿಸಲಾಗದ ಸರ್ವನಾಶವನ್ನು ತಂದುಕೊಂಡನು, ಕೃಷ್ಣನ ದಿವ್ಯಪ್ರಭಾವದಿಂದ. ಹೀಗೆ ಮಹಾಭಾರತದ ಯುದ್ಧಕ್ಕೆ ನಿಜವಾದ ಬೀಜ ಪಾಂಚಾಲಿಯ ಕೇಶಪಾಶ ಪ್ರಪಂಚ. ಆ ಅಧರ್ಮವನ್ನು ನಾಶಗೈಯಲೆಂದೇ ಕೃಷ್ಣನು ತನ್ನ ಬಲವನ್ನೆಲ್ಲ ಸೂರೆಮಾಡುವುದು. ಎಂಥ ಎಡರು ಬಂದರೂ, ಸಹಿಸಿಕೊಂಡು ಧರ್ಮದಲ್ಲಿದ್ದುದೇ ಧರ್ಮರಾಯನ ಬಲ; ಅವನ ಪರಮವಿಜಯದ ನಿಮಿತ್ತ. ಹೀಗೆ ಕಥೆಯ ಜಾಲದಲ್ಲಿ ಧರ್ಮಾಧರ್ಮಗಳ ವಿಭೇದವು ನಿಸ್ಸಂದಿಗ್ಧವಾಗಿ ನಿರೂಪಿತವಾಗಿದೆ. ಭಗವಂತನ ಅಚಿಂತ್ಯ ಸಹಾಯ ದೊರೆಯುವುದು ಧರ್ಮದ ಪಕ್ಷಕ್ಕೆ ಮಾತ್ರ ಎಂಬ ಸ್ಪಷ್ಟ ನಿರ್ದೇಶನವೂ ಇದೆ.

**ಪಾತ್ರಚಿತ್ರಣ :** ಹೀಗೆ ನೀತಿಪ್ರಧಾನವಾದ ಕಥೆಯಲ್ಲಿ, ಧರ್ಮಾಧರ್ಮಗಳ ಘರ್ಷಣೆಯ ಚಿತ್ರದಲ್ಲಿ, ಭಗವಂತನ ಅದ್ಭುತ ಪ್ರದರ್ಶನದ ವಸ್ತುವಿನಲ್ಲಿ, ಕೆಲವೊಂದು ಗುಣದೋಷಗಳ ಮೂರ್ತೀಭಾವವನ್ನು ಪಾತ್ರಗಳಲ್ಲಿ ನಿರೀಕ್ಷಿಸ

ಬಹುದೇ ಹೊರತು ಪಾತ್ರಗಳ ವಿಕಾಸವನ್ನು, ವಿಭಿನ್ನಾಂಶಗಳ ಸಮಗ್ರ ಪರಿಚಯವನ್ನು, ನಿರೀಕ್ಷಿಸುವಂತಿಲ್ಲ. ಸಹಾನುಭೂತಿ ಏಕನ ಮುಖವಾಗುವುದೇ ಹೊರತು ಸರ್ವರಿಗೂ ಸಮಾನವಾಗಿರುವುದಿಲ್ಲ. ದುರ್ಯೋಧನಾದಿಗಳೆಲ್ಲರೂ ಕ್ಷತ್ರಿಯ ವೀರರೆಂಬ ಒಂದು ಗುಣವನ್ನು ಬಿಟ್ಟರೆ. ಅವರಲ್ಲಿ ನಿರ್ದೇಶ ಯೋಗ್ಯವಾದ ಸೂಕ್ಷ್ಮ ಸ್ವಭಾವ ವಿಕಾಸಕ್ಕೆ ಹೆಚ್ಚು ಆಸ್ಪದವಿಲ್ಲ. ಆದರೆ ಇದಕ್ಕೆ ಕರ್ಣನ ಪಾತ್ರವೊಂದು ಅಪವಾದವೆನ್ನಬೇಕಾಗುತ್ತದೆ. ಅವನು ಸೂರ್ಯಪುತ್ರ, ಆದರೆ ಸೂತಪುತ್ರನೆಂಬ ಅವಮಾನ ತಿರಸ್ಕಾರಗಳಿಗೆ ಗುರಿಯಾಗಬೇಕಾಯಿತು. ಅವನು ಕುಂತೀಸುತ, ಪಾಂಡವರಲ್ಲಿ ಹಿರಿಯ; ಆದರೆ ಕೌರವನ ಪ್ರಾಣಸ್ನೇಹಿತನಾಗಿ ಪಾಂಡವರ ವಿರುದ್ಧವಾಗಿಯೇ ಬಾಳಬೇಕಾಯಿತು, ಶೌರ್ಯದಲ್ಲಿ ಅರ್ಜುನನಿಗಿಂತ ಅಧಿಕ; ಆದರೆ ಎಲ್ಲ ಸಮಯದಲ್ಲಿಯೂ ಅರ್ಜುನನಿಗೆ ಕಡಿಮೆಯೆನ್ನುವಂತೆ ಅವನ ಗತಿಯಾಯಿತು. ಪರಶುರಾಮನ ಧನುರ್ವೇದವೆಲ್ಲವೂ ಗೊತ್ತಿದ್ದರೂ ಕಾಲಕ್ಕೆ ನೆನಪಾಗದಂತಹ ಗುರುಶಾಪ ಅವನಿಗೊದಗಿತ್ತು, ಅವನ ಜನ್ಮವನ್ನು ಕುಂತಿ ಮರೆಸಿಟ್ಟ ಫಲವಾಗಿ. ಹಿಂದಿನಕಾಲದಲ್ಲಿ ಕುಲಹೀನನೊಬ್ಬನಿಗೆ ವಿದ್ಯೆ, ಅಂತಸ್ತು, ಗೌರವ ಎಲ್ಲದರಲ್ಲಿಯೂ ಹೇಗೆ ಅನಾದರವೊದಗುತ್ತಿದ್ದಿತೆಂಬುದನ್ನೂ ಅವನ ಯೋಗ್ಯತೆ ಎಷ್ಟಿದ್ದರೂ ಹೇಗೆ ಮಂಕಾಗುತ್ತಿತ್ತೆಂಬುದನ್ನೂ ಈ ಸೂರ್ಯತನಯನ ಪಾತ್ರದಲ್ಲಿ ವ್ಯಾಸರು ಸುಂದರವಾಗಿ ಚಿತ್ರಿಸಿದ್ದಾರೆ. ಆದರೆ ಕರ್ಣ ಇತರರಂತೆ ತನ್ನ ಸಾಮರ್ಥ್ಯವನ್ನು ಅಡಗಿಸಿಕೊಂಡು ಕುಳಿತುಕೊಳ್ಳುವುದಿಲ್ಲ. ಶತಪ್ರಯತ್ನದಿಂದಲೂ ಮುನ್ನುಗ್ಗಿ ಎಂತಹ ವಿರುದ್ಧ ಸನ್ನಿವೇಶದಲ್ಲಿಯೂ ತನ್ನ ಯೋಗ್ಯತೆಯನ್ನು ಬೆಳಗಲು ಸಾಹಸ ಮಾಡುತ್ತಾನೆ. ಹೀಗೆ ಅವನ ಜೀವನದಲ್ಲಿ ಪರಿಸ್ಥಿತಿಯೊಡನೆ ಹೋರಾಟ ಮೊದಲಿನಿಂದಲೂ ನಡೆದು ಅವನು ಅಂಗಾಧಿಪತಿಯಾಗಿ, ಕೌರವೇಂದ್ರನೊಡನೆ ಏಕಾಸನದಲ್ಲಿ ಕುಳ್ಳಿರುವ ಗೌರವವನ್ನೂ ಪಡೆದು ವಿಜಯಿಯಾಗುತ್ತಾನೆ. ಅವನ ಸ್ವಭಾವವೇ ಉದಾರವಾದುದು. ತನ್ನ ಕೃತಿಯಿಂದ ಉಳಿದವರು ಮಾಡಲಾಗದ ಮಹಾಕಾರ್ಯಗಳನ್ನು ಮಾಡಿತೋರಿಸಬೇಕೆಂಬ ಹುಮ್ಮಸಿನವನು. ವಿಧಿಯನ್ನು ನಂಬಿ ನಿಷ್ಕ್ರಿಯನಾಗುವುದರ ಬದಲು ಸಹಜಕುಂಡಲಾದಿಗಳನ್ನೂ ದಾನಕೊಟ್ಟು ತ್ಯಾಗಶೂರನೆನಿಸುವ ವೀರ-ಕರ್ಣ. ಅವನಿಗೆ ಅನ್ಯಾಯಮಾಡಿದ ತಾಯಿಯ ಮೇಲೂ ಕೋಪವಿಲ್ಲ. ಅವಳಿಗಾಗಿ ತನ್ನ ಜೀವವನ್ನೇ ತೆರಲು ಸಿದ್ಧನಾಗು

ತ್ತಾನೆ. ಆದರೆ ಲೋಕವೇ ತನ್ನನ್ನು ತಾತ್ಸಾರಮಾಡುತ್ತಿದ್ದಾಗ ಯಾರೂ ಕಂಡುಕೇಳದ ಉಪಕಾರಮಾಡಿ ತನಗೆ ರಾಜ್ಯಕೊಟ್ಟು, ಗೌರವಕೊಟ್ಟು ಪ್ರಾಣಸ್ನೇಹಿತನಾಗಿದ್ದ ದುರ್ಯೋಧನನ ಹಿತವೊಂದೇ ಅವನ ಜೀವನ ಧ್ಯೇಯವಾಗುತ್ತದೆ. ಅವನ ಮನಸ್ಸಿಗೆ ಪ್ರಿಯವಾಗುವ ಏನನ್ನು ಬೇಕಾದರೂ ಕರ್ಣನು ಮಾಡಲು ಸಿದ್ಧ. ಕರ್ಣನು ಸ್ವತಃ ಉದಾರಭಾವನೆಯವನಾದರೂ ತನ್ನನ್ನು ಜರೆದ ಸಮಾಜದಮೇಲೆ ಅವನಿಗೆ ಕೋಪವಿದೆ. ಸಮಾಜದ ಬಾಹ್ಯ ಗೌರವಗಳಿಗೆ ಅವನು ಬೆಲೆ ಕೊಡುವದಿಲ್ಲ. ಭೀಷ್ಮನಂತಹವರೊಡನೆಯೂ ಅವನು ನಿರ್ದಾಕ್ಷಿಣ್ಯವಾಗಿ ವಾದಿಸುತ್ತಾನೆ. ಜಾತಿಯನ್ನು ಸುಡಿ, ಗುಣಕ್ಕೆ ಬೆಲೆಕೊಡಿ, ಎಂಬುದು ಅವನ ಧ್ಯೇಯ.

**ಸೂತೋ ವಾ ಸೂತಪುತ್ರೋ ವಾ ಯೋ ವಾ ಕೋ ವಾ ಭವಾಮ್ಯಹಮ್ ।**
**ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಮ್ ॥** [10]

[ನಾನು ಸೂತನೋ, ಸೂತ ಪುತ್ರನೋ, ಯಾರೋ, ಏನೋ ಆಗಿ ಕೊಳ್ಳಲಿ! ಯಾವ ಕುಲದಲ್ಲಿ ಜನ್ಮವಾಗುವವೆಂಬುದು ದೈವಾಯತ್ತ, ಆದರೆ ಪೌರುಷ ಮಾತ್ರ ಆತ್ಮಾಧೀನ!]

ಎಂದು ಗರ್ಜಿಸಬಲ್ಲ ಧೀರ ಅವನು. ಆದರೆ ಅವನ ವಿಚಾರವೂ ಅಂದಿನ ಕಾಲಕ್ಕೆ ಪೂರೋಗಾಮಿಯೇ ಆಗಿತ್ತು, ಇನ್ನೊಂದು ಕಡೆ ಕೃಷ್ಣನ ವಿಚಾರ ವಾಗಿದ್ದಂತೆ. ಹೀಗೆ ಕರ್ಣನು ಜನ್ಮಾರಭ್ಯ ಸಲ್ಲದ ಅಗೌರವಗಳಿಗೆ ಗುರಿ ಯಾಗಿ, ಕಷ್ಟದೊಡನೆ ಹೋರಾಡುವ ವೀರನಾಗಿ, ನಿಜ ತಿಳಿದರೂ ತನ್ನ ಕರ್ತವ್ಯವನ್ನು ಬಿಡದೆ ರಣದಲ್ಲಿ ವೀರನಂತೆ ಮಡಿಯುವ ಮಹಾತ್ಮನಾದ್ದ ರಿಂದ ಅವನ ಪಾತ್ರಕ್ಕೆ ಕವಿಗಳೆಲ್ಲರ ಸಹಾನುಭೂತಿಯೂ ಸಹಜವಾಗಿಯೇ ಹರಿಯುತ್ತದೆ. ಮಹಾಭಾರತದಲ್ಲಿ ನಿಜವಾಗಿಯೂ ಯಾರಾದರೂ ದುರಂತ ನಾಯಕರಿಗೆ ಸ್ಥಾನವಿದ್ದರೆ ಅದು ಕರ್ಣನಿಗೆ ಮೀಸಲು. ವ್ಯಾಸರು ಮಹಾ ಭಾರತದಲ್ಲೆಲ್ಲ ಹೃದಯವಿದ್ರಾವಕವಾದ ಚರಮಗೀತೆಯನ್ನು ಕರ್ಣನಿಗಾಗಿ ಹಾಡಿದ್ದಾರೆ, ಒಂದು ಅಧ್ಯಾಯವೆಲ್ಲ (VIII 94). ಒಂದು ಕ್ಷಣ ನದಿಗಳೂ

---

10. ವೇಣೀಸಂಹಾರ ನಾಟಕ III. 32.

ಹರಿಯಲಿಲ್ಲ ; ಸೂರ್ಯನು ನೋಡಲಾರದೆ ಮುಳುಗಿದನು ; ಆಕಾಶ ಒಡೆಯಿತು. ಭೂಮಿ ನಡುಗಿತು. ಬಿರುಗಾಳಿಗಳೂ ಬೀಸಿದವು. ದೇಶಿಗಳು ಗೋಳಿಟ್ಟರು.

**ಹತೇ ಕರ್ಣೇ ಸರಿತೋ ನ ಪ್ರಸಸ್ರುಃ ।**
**ಜಗಾಮ ಚಾಸ್ತಂ ಸವಿತಾ ದಿವಾಕರಃ ।**

..................... ....... ...... .................... .......

**ನಭಃ ಪಫಾಲೇವ ನನಾದ ಚೋರ್ವೀ**
**ವವುಶ್ಚ ವಾತಾಃ ಪರುಷಾಃ ಸುಘೋರಾಃ ।** (49-50)

.. .. ....... . .. ... .. .... .. ........ ..................

**ತದಾಂತರಿಕ್ಷೇ ಸಹಸೈವ ಶಬ್ದೋ**
**ಬಭೂವ ಹಾಹೇತಿ ಸುರೈರ್ವಿಮುಕ್ತಃ ।** (53)

**ಮಹಾಭಾರತದ ಉಪಾಖ್ಯಾನಗಳು :** ಈಗಾಗಲೇ ಪ್ರತಿಪಾದಿಸಿರುವಂತೆ ಮಹಾಭಾರತದ ಮೂಲಕಥೆಯ ಸ್ವಾರಸ್ಯಕ್ಕೆ ಕಡಿಮೆಯಿಲ್ಲದ ಸ್ವಾರಸ್ಯವಿದೆ ಆದರ ಹತ್ತಾರು ಉಪಾಖ್ಯಾನಗಳಲ್ಲಿ , ಮೂಲಕಥೆಗಿಂತ ಹೆಚ್ಚಿನ ರಸಾಭಿವ್ಯಕ್ತಿಯೂ, ಕಾವ್ಯ ಸೌಂದರ್ಯವೂ ಇವುಗಳಲ್ಲಿ ಕಾಣಬರುವುದರಿಂದ ಇವುಗಳೊಂದೊಂದನ್ನೂ ಒಂದೊಂದು ಸ್ವತಂತ್ರ ಮಹಾಕಾವ್ಯವೆಂದೇ ತಿಳಿಯುವುದು ಯೋಗ್ಯ. ಇದನ್ನರಿತ ಪ್ರಾಚೀನ ಕವಿಗಳು ನಳೋಪಾಖ್ಯಾನ, ಶಕುಂತಲೋಪಾಖ್ಯಾನ, ಸಾವಿತ್ರಿಯ ಕಥೆ ಮುಂತಾದ ಒಂದೊಂದನ್ನು ಆಶ್ರಯಿಸಿಯೇ ಒಂದೊಂದು ಸುದೀರ್ಘ ಮಹಾಕಾವ್ಯಗಳನ್ನು ರಚಿಸಿರುವುದನ್ನು ನೋಡಬಹುದು ಉಪಾಖ್ಯಾನಗಳೆಲ್ಲ ಕನ್ನಡಿಗರಿಗೆ ಚಿರಪರಿಚಿತನಾಗಿರುವ ಪ್ರಯುಕ್ತ ಅವುಗಳ ವಿಸ್ತೃತ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿಲ್ಲ. ಒಂದೊಂದು ಉಪಾಖ್ಯಾನದಲ್ಲೂ ಒಂದು ಗುಣದ ಇಲ್ಲವೆ ಒಂದು ಅವಗುಣದ ಸಂಪೂರ್ಣ ಪ್ರದರ್ಶನವಿರುತ್ತದೆ. ಪ್ರಾಚೀನ ಭಾರತದ ಜನರ ಆದರ್ಶಗಳನ್ನರಿಯಲು ಇವಕ್ಕಿಂತ ಹೆಚ್ಚಿನ ಸಾಮಗ್ರಿಗಳೇ ಇಲ್ಲ. ಮುಖ್ಯವಾಗಿ ಕರ್ಮ, ಪುಣ್ಯ, ಪಾಪ, ಜನ್ಮಾಂತರಗಳು, ಮುಂತಾದ ಭಾರತೀಯರ ಮೂಲ ನಂಬಿಕೆಗಳಿಗೆಲ್ಲ ಇವೇ ಆಧಾರ. ಇವುಗಳ ಅತಿ ಪ್ರಾಚೀನತೆಯನ್ನೂ ಹೃದಯಂಗಮಶೈಲಿಯನ್ನೂ ಪಾಶ್ಚಾತ್ಯರು ಕೂಡ

ಮೆಚ್ಚಿದ್ದಾರೆ. ಉದಾತ್ತತ್ಯಾಗ, ಧೀರಸಾಹಸಗಳಂತೆ, ಮಾನವರ ದೌರ್ಬಲ್ಯ ಗಳನ್ನೂ ದೋಷಗಳನ್ನೂ ಈ ಕಥೆಗಳು ಜನಪದ ಸಾಹಿತ್ಯದ ಸರಳ ಶೈಲಿ ಯಲ್ಲಿ ತೋರಿಸುತ್ತವೆ. ಪ್ರಾಚೀನ ಭಾರತದ ಅಕೃತ್ರಿಮ ಕಾವ್ಯ ಶೈಲಿಗೆ ನಳೋಪಾಖ್ಯಾನಕ್ಕಿಂತ ಸುಂದರವಾದ ಉದಾಹರಣೆ ಸಿಕ್ಕಲಾರದು. ಭಾರತದ ಮೂಲ ಕಥೆಯಲ್ಲಿ ಶೃಂಗಾರಕ್ಕೆ ಸ್ಥಾನವಿಲ್ಲ, ಕಡೆಯತನಕ ಅರ ಸಾಗಿದ್ದ ದುರ್ಯೋಧನನ ಹೆಂಡತಿಯ ಹೆಸರನ್ನು ಕೂಡ ಮಹಾಭಾರತದಲ್ಲಿ ಎಲ್ಲಿಯೂ ಹೇಳಿದಂತಿಲ್ಲ. ಮಧುರ ಪ್ರಣಯಕ್ಕೆ ಆ ವೈರಮಯವಾದ ವಾತಾವರಣದಲ್ಲಿ ಎಡೆಯಿಲ್ಲ. ಈ ಕೊರತೆಯನ್ನು ನಳೋಪಾಖ್ಯಾನವೇ ಮೊದಲಾದುವು ತಪ್ಪಿಸುತ್ತವೆ, ಮಹಾಭಾರತದ ಸರ್ವಾಂಗೀಣ ಸೌಂದರ್ಯ ವನ್ನು ಹೆಚ್ಚಿಸುತ್ತವೆ.

**ಕಾವ್ಯಶೈಲಿ :** ಕಥಾದಿಗಳನ್ನು ವಿಮರ್ಶಿಸುವಾಗ ಪ್ರಸಂಗವಶಾತ್ ಮೂಲ ಭಾರತದಿಂದ ಹತ್ತಾರು ಶ್ಲೋಕಗಳನ್ನಾಗಲೇ ಉದಾಹರಿಸಿದೆ. ಇದ ಕ್ಕಿಂತ ಬೇರೆಯಾದ ಉದಾಹರಣೆಗಳನ್ನು ಹುಡುಕಿಕೊಡುವ ಆವಶ್ಯಕತೆ ಯುಳಿದಿಲ್ಲ. ಏಕೆಂದರೆ ವ್ಯಾಸರ ವಾಕ್ಪ್ರವಾಹ ಒಂದು ತಿಳಿನೀರಿನ ಚಿಲುಮೆ ಯಂತೆ. ಆದರ ವೇಗ, ಗಾತ್ರ, ತಂಪು, ಯಾವಾಗಲೂ ಒಂದೇ ಸಮ ವಾಲ್ಮೀಕಿಗಳ ಶೈಲಿಯಂತೆ ಆದರಲ್ಲಿ ಏರಿಳಿತಗಳು ಸಿಕ್ಕುವುದಿಲ್ಲ. ಕಥೆಯ ವಿವರಗಳಿಗೆ, ಘಟನೆಗಳ ನಿರೂಪಣೆಗೆ, ಇಲ್ಲಿ ವರ್ಣನೆಗಿಂತ ಹೆಚ್ಚಿನ ಪ್ರಾಶಸ್ತ್ಯ ವುಂಟು. ಆದ್ದರಿಂದ ವ್ಯಾಸರಶೈಲಿ ವಾರ್ತಾವಾಹಕರ ಶೈಲಿ. ಅರ್ಥದ ಗೌರವ ವಷ್ಟೇ ಇಲ್ಲಿ ವಿವಕ್ಷಿತ, ಶಬ್ದದ ಗೌರವವಲ್ಲ. ಎಷ್ಟೋ ವೇಳೆ ಅಪಾಣಿನೀಯ ಪ್ರಯೋಗಗಳೂ ಬರುತ್ತವೆ ಭಾಷೆಯಲ್ಲಿ ಆಡುನುಡಿಯ ಸಹಜತೆ ಸಂಪೂರ್ಣವಾಗಿ ಮೈಗೂಡಿದೆ, ಅದರ ಲೋಪದೋಷಗಳೂ ಏರುಪೇರು ಗಳೂ ಇದ್ದೇ ಇವೆ. ಅವುಗಳನ್ನೆಲ್ಲ ಉಜ್ಜಿ, ನಯಮಾಡಿ, ತಳತಳನೆ ಬೆಳಗಿಸುವ ಪ್ರಯತ್ನವೆಲ್ಲೂ ಇಲ್ಲ ಇದರ ಪದ್ಯ ಬಂಧವೆಂದರೆ ಅನುಷ್ಟುಭ್ ಮತ್ತು ತ್ರಿಷ್ಟುಭ್ ಛಂದಸ್ಸುಗಳಿಂದ ಪ್ರಚುರವಾದ ಆರ್ಷಛಂದಸ್ಸು. ಇಷ್ಟಾದರೂ ಪುರಾಣಗಳ ಶೈಲಿಯಂತೆ ಮಹಾಭಾರತದ ಶೈಲಿಯೆಲ್ಲೂ ನೀರಸವೆನಿಸುವು ದಿಲ್ಲ. ಅದಕ್ಕೆ ಕಾರಣ, ಅರ್ಥಗಾಂಭೀರ್ಯ, ಮತ್ತು ಜೀವನದ ಸೂಕ್ಷ್ಮ ವಿಮರ್ಶೆ.

ಮಹಾಭಾರತವನ್ನೂ ಕಾವ್ಯವೆನ್ನಬಹುದೆ? ಎಂದು ಇಂದಿನವರು ಕೇಳುವಂತಾಗಿದೆ. ಆದರೆ ಈ ಬಗೆಯ ಕಾವ್ಯ ಇದೊಂದೇ, ಇದು ಅನ್ಯವಿಲಕ್ಷಣವಾದುದೆಂದು ಭಾರತದಲ್ಲೇ ಹೇಳಿದೆ. ವ್ಯಾಸರು ಬ್ರಹ್ಮನಿಗೆ ಹೇಳಿದ ಹಂತೆ — 'ನಾನೊಂದು ಪರಮಪೂಜಿತವಾದ ಕಾವ್ಯವನ್ನು ಬರೆದಿದ್ದೇನೆ. ವೇದ, ವೇದಾಂಗ, ಉಪನಿಷತ್ತುಗಳ ರಹಸ್ಯ, ಇತಿಹಾಸ ಪುರಾಣಗಳ ವಸ್ತು, ಧರ್ಮಗಳ ವಿವರಣೆ, ನ್ಯಾಯಾದಿ ಶಾಸ್ತ್ರಗಳ ಸಾರ, ನದಿ, ಪರ್ವತ, ಸಾಗರ, ವನ, ಮುಂತಾದುವುಗಳ ವರ್ಣನೆ, ವಾಕ್ಯವಿಶೇಷಗಳು, ಲೋಕಯಾತ್ರೆಯ ಕ್ರಮ, ಎಲ್ಲವೂ ಇದರಲ್ಲೇ ಅಡಕವಾಗಿದೆ,' ಎಂದು (I 1 61-70). ಬ್ರಹ್ಮನು ಆಗ ವರವಿತ್ತನಂತೆ — 'ಈ ಕಾವ್ಯವನ್ನು ಮಿಕ್ಕ ಕವಿಗಳಾರೂ ಮೀರಿಸಲಾರರು,' ಎಂದು (ಅಸ್ಯ ಕಾವ್ಯಸ್ಯ ಕವಯೋ ನ ಸಮರ್ಥಾ ವಿಶೇಷಣೇ: I 1 73) ಅದು ನಿಜವೆಂಬದನ್ನು ಭಾರತದ ಕಾವ್ಯಸಾಹಿತ್ಯವೇ ಪ್ರಮಾಣಿಸುತ್ತಿದೆ. ಈ ಅಂಶಗಳನ್ನೇ ಕ್ರೋಡೀಕರಿಸಿ ಲೋಕಮಾನ್ಯ ಶ್ರೀ ಬಾಳಗಂಗಾಧರ ಟಿಳಕರು ಮಹಾಭಾರತಕ್ಕೆ ಅನ್ವಯಿಸುವ ಕಾವ್ಯಲಕ್ಷಣವನ್ನು ಹೀಗೆ ಬರೆದಿದ್ದಾರೆ:—

**ಮಹತ್ಸು ರಾಜವಂಶೇಷು ಜಾತಾನಾಂ ದಿವ್ಯ ಕರ್ಮಣಾಮ್ ।**
**ಶ್ರೀ ವಿಭೂತಿಮತಾಂ ವಾಪಿ ಪ್ರಾಚೀನಾನಾಂ ಮಹಾತ್ಮನಾಮ್॥**
**ಚರಿತಂ ಕೀರ್ತ್ಯತೇ ಯತ್ರ ಪುಣ್ಯಮೇಕಾರ್ಥಸಂಗತಮ್ ।**
**ಇತಿಹಾಸ ಪ್ರಧಾನಾರ್ಥಂ ಶೀಲ ಚಾರಿತ್ರ್ಯವರ್ಧನಮ್ ॥**
**ಧೀರೋದಾತ್ತಂ ಚ ಗಹನಂ ಶ್ರವ್ಯವೃತ್ತೈರಲಂಕೃತಮ್ ।**
**ವಾಕ್ಯಜಾತಿ ವಿಶೇಷೈಶ್ಚ ರಸೋತ್ಕರ್ಷಪ್ರಪೋಷಕೈಃ ॥**
**ಅದ್ಭುತಾರ್ಥಾಃ ಕಥಾ ಯತ್ರ ಧರ್ಮಕಾಮಾರ್ಥ ಸಂಶ್ರಿತಾಃ ।**
**ಲೋಕಯಾತ್ರಾಕ್ರಮಶ್ಚಾಪಿ ಪಾವನಃ ಪ್ರತಿಪಾದ್ಯತೇ ॥**
**ವಿಚಿತ್ರಾರ್ಥ ಪದಾಖ್ಯಾನಂ ಸೂಕ್ಷ್ಮಾರ್ಥನ್ಯಾಯ ಬೃಂಹಿತಮ್ ।**
**ರೋಮಹರ್ಷಣಕೃತ್ ಕಾವ್ಯಮನೇಕ ಸಮಯಾನ್ವಿತಮ್ ॥**
**ಮಹಾಕಾವ್ಯಂ ವರಿಷ್ಠಂ ತನ್ಮಹಾರ್ಥಂ ಚಾರ್ಷಸಂಜ್ಞಿತಮ್ ॥**

[ದೊಡ್ಡ ರಾಜವಂಶಗಳಲ್ಲಿ ಹುಟ್ಟಿದವರೂ, ದಿವ್ಯಕರ್ಮಧುರೀಣರೂ, ಮಹಾವಿಭೂತಿಸಂಪನ್ನರೂ ಆದ ಪ್ರಾಚೀನ ಮಹಾತ್ಮರ ಪುಣ್ಯ ಚರಿತೆಯನ್ನು ಒಂದು ಏಕಾರ್ಥ ತಪ್ಪದಂತೆ, ಇತಿಹಾಸ ಪ್ರಧಾನವಾಗಿ ನಿಲ್ಲುವಂತೆ, ಶೀಲಸಂವರ್ಧನೆಗೆ ಸಹಕಾರಿಯಾಗುವಂತೆ, ಎಲ್ಲಿ ವರ್ಣಿಸಲಾಗುವುದೋ, ಮತ್ತು ಯಾವುದು ಧೀರೋದಾತ್ತವೂ, ಗಹನವೂ, ಶ್ರವ್ಯವೃತ್ತಬಂಧುರವೂ, ಆಗಿರುವುದೋ, ಎಲ್ಲಿ ರಸೋತ್ಕರ್ಷಕ್ಕೆ ಪೋಷಕಗಳಾಗುವಂತಹ ವಾಕ್ಯಜಾತಿಗಳೂ ಧರ್ಮಕಾಮಾರ್ಥ ಬೋಧಕಗಳಾದ ಅದ್ಭುತ ಕಥೆಗಳೂ ವಿಪುಲವಾಗಿರುವುವೋ; ಎಲ್ಲಿ ಪಾವನವಾದ ಐಹಿಕ ಜೀವನಕ್ರಮವೂ ಪ್ರತಿಪಾದ್ಯ ವಿಷಯವಾಗುವುದೋ, ವಿಚಿತ್ರಾರ್ಥಪದ ಪ್ರಯೋಗವೂ ಸೂಕ್ಷ್ಮಾರ್ಥ ನ್ಯಾಯ ನಿರೂಪಣೆಯೂ ಎಲ್ಲಿ ಸೇರುವುದೋ, ಅಂತಹ ರೋಮಾಂಚಕಾರಿಯಾದ, ಅನೇಕ ಕವಿಸಮಯಸಂಗತವಾದ ಶ್ರೇಷ್ಠವಾದ ಮಹಾಕಾವ್ಯವೇ ಆರ್ಷಕಾವ್ಯ!]

ರೋಮಾಂಚಕಾರಿಯಾದ ರಸೋತ್ಕರ್ಷಪ್ರಪೋಷಕವಾದ ಶೈಲಿ ಈ ಆರ್ಷ ಕಾವ್ಯದ ವೈಶಿಷ್ಟ್ಯ.

ಇದರ ಇನ್ನೊಂದು ವೈಶಿಷ್ಟ್ಯವೆಂದರೆ ಅರ್ಥದುರ್ಬೋಧವಾದ ಕೆಲವು **ಕೂಟಶ್ಲೋಕಗಳು:** ಲಿಪಿಕಾರನಾದ ಗಣಪತಿಗೇ ಇವು ತಿಳಿಯಲು ಕಷ್ಟ ಕೊಡುತ್ತಿದ್ದುವೆಂದು ಕಥೆ ಹೇಳುತ್ತಾರೆ. ಇವುಗಳಲ್ಲಿ ಸಂಸ್ಕೃತಕಾವ್ಯದ ಕೃತ್ರಿಮಯುಗದ ಶ್ಲೇಷೆ ಎದ್ದು ಕಾಣುತ್ತದೆ. ಅವುಗಳೆಲ್ಲವೂ ಪ್ರಕ್ಷೇಪಗಳೆಂದು ಹನ್ನೊಂದನೆಯ ಶತಮಾನದ ಭೋಜನೇ ಶೃಂಗಾರಪ್ರಕಾಶದಲ್ಲಿ ಸ್ಪಷ್ಟಪಡಿಸಿದ್ದಾನೆ — "...ವ್ಯಾಸಕಷ್ಟವತ್ ಕೈರಪಿ ವಿದಗ್ಧಮಾನಿಭಿರುಪಕ್ಷಿಪ್ತಾನೀತಿ ತದ್ವಿದೋ ಭಾಷನ್ತೆ" (Dr. V. Raghavan **The Setubandha-Hiriyanna Commemoration Volume**) ಒಂದೆರಡು ಉದಾಹರಣೆಗಳನ್ನು ಬರೆಯುತ್ತೇವೆ —

೧. **ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।**
**ಕೇಶಶೂಲಾಃ ಸ್ತ್ರಿಯೋ ರಾಜನ್ ಭವಿಷ್ಯನ್ತಿ ಯುಗಕ್ಷಯೇ ॥**

—ವನಪರ್ವ 188. 41.

ಇದರ ಅರ್ಥವಾಗಬೇಕಾದರೆ ‘ಅಟ್ಟಮನ್ನಂ ಶಿವೋ ವೇದೋ ಬ್ರಾಹ್ಮಣಾಶ್ಚ ಚತುಷ್ಪಥಾಃ । ಕೇಶೋ ಭಗಂ ಸಮಾಖ್ಯಾತಂ ಶೂಲಂ ತದ್ವಿಕ್ರಯಂ ವಿದುಃ’ ಎಂಬ ಪ್ರಾಚೀನ ವಿವರಣೆ ಅಗತ್ಯ. (ಇದನ್ನು ನೀಲಕಂಠನು ಬರೆದಿದ್ದಾನೆ) ‘ಊರು ಕೇರಿಗಳಲ್ಲೆಲ್ಲ ಅನ್ನ ವಿಕ್ರಯವಾಗುತ್ತದೆ, ಬ್ರಾಹ್ಮಣರೆಲ್ಲರೂ ವೇದ ವಿಕ್ರಯ ಮಾಡುತ್ತಾರೆ, ಸ್ತ್ರೀಯರು ಭಗವಿಕ್ರಯಕ್ಕೆ ಹೇಸುವುದಿಲ್ಲ – ಯುಗ ಕ್ಷಯ ಬಂದಾಗ’–

೨. **ನದೀಜ ಲಂಕೇಶವನಾರಿಕೇತು–**
**ರ್ನಗಾಹ್ವಯೋ ನಾಮ ನಗಾರಿಸೂನುಃ ।**
**ಏಷೋಽಙ್ಗನಾವೇಷಧರಃ ಕಿರೀಟೀ**
**ಜಿತ್ವಾಽಪ ಯಂ ನೇಷ್ಯತಿ ಚಾದ್ಯ ಗಾ ವಃ ॥**

–ವಿರಾಟಪರ್ವ, 39. 10.

‘ಭೀಷ್ಮನೇ, (ಲಂಕೇಶನ ವನಕ್ಕೆ ಶತ್ರುವಾದ ಹನುಮಂತನು ಕೇತುವಾಗಿ ಉಳ್ಳ) ಅರ್ಜುನನು (ಮತ್ತು ನಗ=ಮರದ ಆಹ್ವಯಃ=ಹೆಸರುಳ್ಳವನಾದವನು, ಸಂಸ್ಕೃತದಲ್ಲಿ ‘ಅರ್ಜುನ’ ವೆಂದು ಒಂದು ಮರಕ್ಕೂ ಹೆಸರಿದೆ) ಇಂದ್ರಪುತ್ರನಾದರೂ (ನಗಾರಿ=ಇಂದ್ರ) ಈಗ ಹೆಂಗಸಿನ ವೇಷ ಧರಿಸಿ (ಕಿರೀಟೀ=ಅರ್ಜುನ) ಯಾರನ್ನು ಗೆದ್ದು (ಯಂಜಿತ್ವಾ) ನಿಮ್ಮ (ವಃ) ಗೋವುಗಳನ್ನು(ಗಾಃ) ಅಪಹರಿಸುವನೋ ಅವನನ್ನು(=ದುರ್ಯೋಧನನನ್ನು) ಕಾಪಾಡು (ಅವ)’ ಸುಮ್ಮನೆ ಓದುವಾಗ ನದೀಜಲ, ಕೇಶವ, ನಾರಿ ಮುಂತಾಗಿ ಅನ್ವಯವಾಗಿ ಅರ್ಥ ಅಸಾಧ್ಯವಾಗುತ್ತದೆ.

ವ್ಯಾಸರ ನೀತಿನಿರೂಪಣೆಯ ಶೈಲಿಗೆ ಒಂದೆರಡು ಉದಾಹರಣೆಗಳು. —

೧. **ಯಸ್ಯ ನಾಸ್ತಿ ನಿಜಾ ಪ್ರಜ್ಞಾ ಕೇವಲಂ ತು ಬಹುಶ್ರುತಃ ।**
**ನ ಸ ಜಾನಾತಿ ಶಾಸ್ತ್ರಾರ್ಥಂ ದರ್ವೀ ಸೂಪರಸಾನಿವ ॥**

–ಸಭಾಪರ್ವ, 55. 1.

‘ಸುಮ್ಮನೆ ಬಹಳವಾಗಿ ಓದಿದ್ದರೂ, ಯಾರಿಗೆ ಸ್ವಂತ ಬುದ್ಧಿಯಿಲ್ಲವೋ ಅವನು ಶಾಸ್ತ್ರಾರ್ಥವನ್ನು ತಿಳಿಯಲಾರ, ಸೌಟಿಗೆ ಅಡಿಗೆಯ ರುಚಿ ಹೇಗೆ ತಿಳಿದೀತು ?

೨. ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶನ್ತಿ ನ ಪಂಡಿತಮ್ ॥

—ಶಾಂತಿಪರ್ವ, 25. 20.

' ಸಾವಿರಾರು ಶೋಕಕಾರಣಗಳೂ ನೂರಾರು ಹರ್ಷಕಾರಣಗಳೂ ದಿನ ದಿನವೂ ಮೂಢನಿಗೆ ತಲೆದೋರುವುವೇ ಹೊರತು ಪಂಡಿತನಿಗಲ್ಲ ' .

೩. ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ ।
ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥

—ಶಾಂತಿಪರ್ವ, 57. 3.

' ಸರ್ಪಗಳು ಬಿಲದಲ್ಲಿರುವ ಜಂತುಗಳನ್ನು ನುಂಗುವಂತೆ ಭೂಮಿಯೂ ಇಬ್ಬರನ್ನು ನುಂಗುತ್ತದೆ — ಅವರಲ್ಲಿ ಯುದ್ಧಮಾಡುವ ರಾಜ ಒಬ್ಬ, ಪ್ರವಾಸಮಾಡದ ಬ್ರಾಹ್ಮಣ ಇನ್ನೊಬ್ಬ '

ಇಂತಹ ನೀತಿವಾಕ್ಯಗಳು ಮಹಾಭಾರತದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಬರುತ್ತವೆ. ಅವೆಲ್ಲವೂ ಸಾಮಾನ್ಯವಾಗಿ ಸಂಸ್ಕೃತದಲ್ಲಿ ಗಾದೆಗಳಂತೆ ಬಳಕೆ ಮಾತುಗಳಾಗಬಿಟ್ಟವೆ.

ಅಲಂಕಾರಗಳು ಭಾರತದಲ್ಲಿ ಇಲ್ಲವೆಂದಲ್ಲ. ಉದಾಹೃತಶ್ಲೋಕಗಳಲ್ಲಿಯೇ ಉಪಮಾಲಕ್ಷ್ಮಿಯನ್ನು ಗಮನಿಸಬಹುದು. ಹಾಗೆಯೇ ರೂಪಕದ ಸಿರಿಯಾದರೂ. ಇನ್ನೊಂದೆರಡು ವೈಚಿತ್ರ್ಯಗಳನ್ನೂ ಕೆಳಗೆ ಉದಾಹರಿಸಿದೆ —

೧. ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥

ಇರುಳೆಂದು ಸರ್ವಭೂತಗ—
ಳಿರುವಂದೆಚ್ಚರದಿನಿರುವನಾ ಸಂಯಮಿ ತಾಂ ।
ಪೆರರೆಲ್ಲರ್ ಜಾಗರದಿಂ-
ದಿರುವಾಗಳ್ ರಾತ್ರಿಯದುವೆ ಕಾಣುವ ಮುನಿಗೇ ॥

ಈ ಪ್ರಸಿದ್ಧ ಗೀತಾಶ್ಲೋಕದಲ್ಲಿ ಆನಂದವರ್ಧನನು[12] ' ಇರುಳು ' , ' ಜಾಗ

12. ಕನ್ನಡ ಧ್ವನ್ಯಾಲೋಕ, ಪು. ೭೩.

ರಣೆ' ಎಂದರೆ ತತ್ತ್ವವಿಮುಖತೆ, ತತ್ತ್ವಾವಧಾನವೆಂಬ ಸೂಚ್ಯಾರ್ಥಗಳನ್ನು ರಮಣೀಯವಾಗಿ ವಿವರಿಸಿದ್ದಾನೆ.

೨. ಅತಿಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತದಾರುಣಾಃ ।
ಶ್ವಃ ಶ್ವಃ ಪಾಪೀಯದಿವಸಾಃ ಪೃಥಿವೀ ಗತಯೌವನಾ ॥
ಆದಿಪರ್ವ, 128. 6.

ವಿಗತಸುಖಂಗಳ್ ಬಹುಲೋ-
ಪಗತಮಹಾದುಃಖಸಂಘಗಳ್ ಕಾಲಂಗಳ್ ।
ಮಿಗಿಲೆನೆ ದಿನದಿನಕುಂ ಪಾ-
ಪಗಣಂ, ಗತಯೌವನಾಂಗಿ ಧಾರಿಣಿಯಿರ್ಪಳ್ ॥

ಈ ಪದ್ಯದಲ್ಲಿಯೂ ವ್ಯಂಗ್ಯಾರ್ಥಪರಂಪರೆಯ ಸೊಗಸನ್ನು ಆನಂದವರ್ಧನನೇ ವಿವರಿಸಿದ್ದಾನೆ.[13] ಇದು ಮಹಾಭಾರತದ ಆದಿಯಲ್ಲಿ ವ್ಯಾಸರೇ ಬರುವ ಕಾಲದ ಸ್ವರೂಪವನ್ನು ಕುರಿತು ಸತ್ಯವತಿಗೆ ಹೇಳುವ ಮಾತು. ಹೀಗೆ ಹೇಳಿ ಆಕೆಯನ್ನು ಮೊದಲೇ ವನವಾಸಕ್ಕೆ ಕಳಿಸಿಬಿಡುತ್ತಾರೆ. ಮಹಾಭಾರತದ ಸಾರವನ್ನೆಲ್ಲ ಈ ಒಂದೇ ಪದ್ಯ ಸೂಚಿಸುವಂತಿದೆ.

೩. ತತೋ ಜವೇನಾಭಿಸಸಾರ ರೋಷಾತ್
ದುಶ್ಶಾಸನಸ್ತಾಮಭಿಗರ್ಜಮಾನಃ ।
ದೀರ್ಘೇಷು ನೀಲೇಷ್ವಥ ಚೋರ್ಮಿಮತ್ಸು
ಜಗ್ರಾಹ ಕೇಶೇಷು ನರೇಂದ್ರಪತ್ನೀಂ ॥
–ಸಭಾಪರ್ವ, 60. 22.

ಭಾಷಾಂತರ ಮಾಡಿ ಇದರ ರಸವನ್ನು ಪ್ರೊ। ತೀ. ನಂ. ಶ್ರೀಕಂಠಯ್ಯನವರು ಹೀಗೆ ಸುಂದರವಾಗಿ ವಿವರಿಸಿದ್ದಾರೆ.—"ಆಗ ದುಶ್ಶಾಸನನು ರೋಷದಿಂದ ಅಬ್ಬರಿಸುತ್ತ ಅವಳ ಹಿಂದೆಯೇ ವೇಗವಾಗಿ ಸಾಗಿದನು, ನೀಳವಾದ ನೀಲವಾದ ಅಲೆಯಲೆಯಾದ ಕುರುಳುಗಳಿಗೆ ಕೈಹಾಕಿ ಆ ನರೇಂದ್ರಪತ್ನಿಯನ್ನು ತುಡುಕಿದನು".

"ಇಲ್ಲಿ 'ನರೇಂದ್ರಪತ್ನೀಂ' ಎಂಬ ಪದವನ್ನು ಗಮನಿಸಬೇಕು. ರಾಜಶ್ರೇಷ್ಠರ ಪತ್ನಿ ಈಕೆ; ಇವಳ ಮುಡಿಯನ್ನು ಈ ದುಷ್ಟನು ತುಡುಕಿದನೇ!

---

13. ಕನ್ನಡ ಧ್ವನ್ಯಾಲೋಕ, ಪು. ೧೦೦.

ಇವನ ಧಾರ್ಷ್ಟ್ಯವೆಷ್ಟು? ಇಂಥ ಪ್ರಭಾವಶಾಲಿಗಳಾದ ಪತಿಗಳಿದ್ದರೂ ದ್ರೌಪದಿಗೆ ಈ ದುರವಸ್ಥೆ ತಟ್ಟಬಹುದೇ! ಎಂಬ ಅರ್ಥಪರಂಪರೆಯೇ ಈ ಪದದ ಪ್ರಯೋಗದಿಂದ ಹೊಳೆಯುತ್ತದೆ. ಇನ್ನು 'ಕೇಶೇಷು' ಎಂದು ಸುಮ್ಮನೆ ಹೇಳಿಬಿಡದೆ "ನೀಳವಾದ, ನೀಲವಾದ, ಅಲೆಯಲೆಯಾದ," ಎಂದು ವರ್ಣಿಸಿ ಅಂಥ ಸೊಬಗಿನ ಕೇಶಪಾಶಕ್ಕೆ ಈಗ ಒದಗಿದ ದುರ್ಗತಿಯನ್ನು ಶ್ರೋತೃಗಳಿಗೆ ಮನಮುಟ್ಟಿಸುವುದಂತೂ ಮಹಾಕವಿಯ ಪ್ರತಿಭೆಗೆ ಮಾತ್ರ ಸಾಧ್ಯವಾಗುವ ಕಾರ್ಯ." [14]

೪. ಇವು ಅರ್ಥಪೂರ್ಣವಾದ ಗೃಧ್ರಗೋಮಾಯು ಸಂವಾದದ (ಶಾಂತಿಪರ್ವ, ೧೫೩) ಒಂದೆರಡು ಪದ್ಯಗಳು:—

ಗೃಧ್ರ:—

**ಅಲಂ ಸ್ಥಿತ್ವಾ ಶ್ಮಶಾನೇಽಸ್ಮಿನ್ ಗೃಧ್ರಗೋಮಾಯುಸಂಕುಲೇ ।**
**ಕಂಕಾಲಬಹಲೇ ಘೋರೇ ಸರ್ವಪ್ರಾಣಿಭಯಂಕರೇ ॥**
**ನ ಚೇಹ ಜೀವಿತಃ ಕಶ್ಚಿತ್ ಕಾಲಧರ್ಮಮುಪಾಗತಃ ।**
**ಪ್ರಿಯೋ ವಾ ಯದಿ ವಾ ದ್ವೇಷ್ಯಃ ಪ್ರಾಣಿನಾಂ ಗತಿರೀದೃಶೀ ॥**

ಗೋಮಾಯು —

**ಆದಿತ್ಯೋಽಯಂ ಸ್ಥಿತೋ ಮೂಢಾಃ ಸ್ನೇಹಂ ಕುರುತ ಸಾಂಪ್ರತಮ್**
**ಬಹುವಿಘ್ನೋ ಮುಹೂರ್ತೋಽಯಂ ಜೀವೇದಪಿ ಕದಾಚನ ॥**
**ಅಮುಂ ಕನಕವರ್ಣಾಭಂ ಬಾಲಮಪ್ರಾಪ್ತಯೌವನಂ ।**
**ಗೃಧ್ರವಾಕ್ಯಾತ್ ಕಥಂ ಮೂಢಾಃ ತ್ಯಜಧ್ವಮವಿಶಂಕಿತಾಃ ॥**

ಹದ್ದು —

**ಬಿಡುಬಿಡಿರಿಂ ಸುಡುಗಾಡಂ**
**ಕಡುಭೀಕರಮಪ್ಪ ಗೃಧ್ರಗೋಮಾಯುಗಳಿಂ ।**
**ದಿಡಿಕಿರಿದಿದೆ ಮೂಳೆಗಳಿಂ-**
**ದೊಡರಿಸುತುಂ ಸಕಲಜೀವಿಗಳ್ಗಂಜಿಕೆಯಂ ॥**

---

14. ಭಾರತೀಯ ಕಾವ್ಯಮೀಮಾಂಸೆ, ಪು. ೨೭೦.

ಕಾಲಂ ತೀರಿದ ಬಳಿಯಂ
ಜೀವಂ ಬಿಡಿದಿರ್ಪನಿಲ್ಲ ನೋಡಲ್ಕೆಂದುಂ ।
ಪ್ರಿಯನಕ್ಕೆಮ ಪಗೆಯಕ್ಕೆಮ
ಲೋಕಸ್ಥಿತ ಜೀವಿಜಾತಕಿದೆ ಗತಿಯಲ್ತೇ ॥

ನರಿ —

ರವಿಯಿದೊ ಪೊಳೆವಂ ಗಾಂಪರೆ
ತವೆ ನೇಹಂದೋರಿ ತಡೆವುದೈಸಲೆ ಯೋಗ್ಯಂ ।
ಬಹುವಿಘ್ನಕರಂ ಚಣಮಿದು
ಬದುಕಿದೊಡಂ ಬದುಕಲಕ್ಕುಮೆತ್ತಾನುಂ ತಾಂ ॥

ಇವನಂ ಸುವರ್ಣವರ್ಣನ-
ನಿವನಂ ಗಡ ಯೌವನಕ್ಕೆ ದಾಂಟದ ಮಗುವಂ ।
ಅವಿಶಂಕಿತರೆಂತೀಗಳ್
ತವೆ ತೊರೆವಿರಿ ಗೃಧ್ರದುಕ್ತಿಯಿಂ ಕಡುಮೂಢರ್ ॥

ಮೃತನಾದ ಬಾಲನನ್ನು ಬೇಗ ಬಿಟ್ಟು ಹೋಗಿ ಎಂದು ಹದ್ದು ಹೇಳುತ್ತದೆ, ಸೂರ್ಯ ಮುಳುಗಿದಮೇಲೆ ಅದಕ್ಕೆ ತಿನ್ನಲು ಕಣ್ಣು ಕಾಣದೆ ಹೋಗುವುದರಿಂದ. ನರಿಗೆ ಸೂರ್ಯ ಮುಳುಗಿದ ಮೇಲೆ ಶಕ್ತಿ ಹೆಚ್ಚು. ಆದ್ದರಿಂದ ಅದು ಇನ್ನೂ ತಡೆಯಿರೆನ್ನುತ್ತದೆ. ಇವು ಸ್ವಾರ್ಥವನ್ನು ಮರೆಸಿ ಆಡುವ ಅನುನಯದ ಮಾತುಗಳು, ಅತ್ಯಂತ ಮನೋಹರವಾಗಿವೆ. ಮಮ್ಮಟನು ತನ್ನ ಕಾವ್ಯಪ್ರಕಾಶದಲ್ಲಿ ಇದನ್ನುದಾಹರಿಸಿ ವಿವರಿಸಿದ್ದಾನೆ.[15] ಮಹಾಭಾರತದಲ್ಲಿ ಪ್ರತಿ ಅಧ್ಯಾಯದಲ್ಲೂ ಸ್ಪಷ್ಟವಾಗಿ ಬರುವ ಈ ನಾಟಕೀಯತೆ ಗಮನಾರ್ಹ. ರಾಮಾಯಣದಂತೆ ಕವಿ ಇಲ್ಲಿ ಪಾತ್ರಗಳ ಮಾತನ್ನು ತನ್ನ ಬಾಯಿಂದ ಹೇಳುವುದಿಲ್ಲ. ‘ಅರ್ಜುನ ಉವಾಚ, ಸೂತ ಉವಾಚ’ ಮುಂತಾದ ನಿರ್ದೇಶಗಳನ್ನು ಕೊಟ್ಟು ಪೂರ್ಣವಾಗಿ ಪಾತ್ರಗಳಿಂದಲೇ ಆಡಿಸುತ್ತಾನೆ. ಈ ದೃಷ್ಟಿಯಿಂದ ಎಷ್ಟೋ ಭಾಗಗಳನ್ನು ಪದ್ಯನಾಟಕಗಳೆಂದು ಬೇಕಾದರೆ ಪರಿಗಣಿಸಬಹುದು.

---

15. ಕನ್ನಡ ಕಾವ್ಯಪ್ರಕಾಶ, ಉಲ್ಲಾಸ ೪.

೫. ಇದು ಶಲ್ಯನು ಯುದ್ಧರಂಗದಲ್ಲಿ ಬೀಳುವ ವರ್ಣನೆ. ಕವಿಯ ಕಲ್ಪನೆ ಆ ರುದ್ರ ಸನ್ನಿವೇಶವನ್ನೂ ಮಧುರವಾಗಿ ಮಾಡುತ್ತದೆ, ಉತ್ಪ್ರೇಕ್ಷೆಯ ಚಮತ್ಕಾರದಿಂದ.

**ಸ ತಥಾ ಭಿನ್ನಸರ್ವಾಂಗೋ ರುಧಿರೇಣ ಸಮುಕ್ಷಿತಃ ।**
**ಪ್ರತ್ಯುದ್ಗತ ಇವ ಪ್ರೇಮ್ಣಾ ಭೂಮ್ಯಾ ಸ ನರಪುಂಗವಃ ।**
**ಪ್ರಿಯಯಾ ಕಾಂತಯಾ ಕಾಂತಃ ಪತಮಾನ ಇವೋರಸಿ ।**
**ಚಿರಂ ಭುಕ್ತ್ವಾ ವಸುಮತೀಂ ಪ್ರಿಯಾಂ ಕಾಂತಾಮಿವ ಪ್ರಭುಃ॥**
**ಸರ್ವೈರಂಗೈಃ ಸಮಾಶ್ಲಿಷ್ಯ ಪ್ರಸುಪ್ತ ಇವ ಚಾಭವತ್ ।**
(IX 17 55-7)

'ರಕ್ತದಲ್ಲಿ ಅದ್ದಿ ಅವನ ಅಂಗವೆಲ್ಲಾ ಕೆಂಪಾಗಿದ್ದರೆ ಪ್ರಿಯೆಯಾದ ಭೂಮಿ ಬಂದು ಪ್ರೀತಿಯಿಂದ ಸ್ವಾಗತಿಸುವಂತೆ ಕಂಡಳು. ಆಕೆಯ ಎದೆಯ ಮೇಲೆ ಅವನೊರಗಿ ಚಿರಕಾಲ ಭೋಗಿಸಿ ಎಲ್ಲ ಅಂಗಗಳಿಂದಲೂ ಅವಳನ್ನೇ ಅಪ್ಪಿಕೊಂಡು ನಿದ್ರೆಹೋದವನಂತೆ ಇದ್ದನು'

ಹೀಗೆ ವ್ಯಾಸರ ಕಾವ್ಯಶೈಲಿಯಲ್ಲಿ ರಸಿಕರಿಗೆ ಅನರ್ಘ್ಯರತ್ನಗಳು ಸಿಕ್ಕುತ್ತವೆ, ವಿರಾಮವಾಗಿ ಓದುವ ಮನಸ್ಸಾದರೆ. ಅವುಗಳಲ್ಲಿ ಭಾವದ ಗಾಂಭೀರ್ಯದಂತೆ ಅಲಂಕಾರದ ಸೌಂದರ್ಯವೂ ಅಲ್ಲಲ್ಲಿ ಹೊಳೆದು ಮಿಂಚಿ ಮಾಯವಾಗುತ್ತದೆ. ಬಾಣನು ವ್ಯಾಸರಿಗೆ ಸಲ್ಲಿಸುವ ಗೌರವ ಅತಿಶಯೋಕ್ತಿಯಲ್ಲ:- ಬ್ರಹ್ಮನು ಭಾರತವರ್ಷದಲ್ಲಿ ಸರಸ್ವತೀನದಿಯನ್ನು ಸೃಷ್ಟಿಸಿ, ಅದನ್ನು ಪಾವನವೆನಿಸಿದನು, ಈ ಕವಿಬ್ರಹ್ಮನು 'ಭಾರತ'ದಲ್ಲಿ ತನ್ನ ಸರಸ್ವತಿಯನ್ನು ಹರಿಯಿಸಿ ಅದನ್ನೂ ಪಾವನವೆನಿಸಿದನು'—

**ನಮಸ್ಸರ್ವವಿದೇ ತಸ್ಮೈ ವ್ಯಾಸಾಯ ಕವಿವೇಧಸೇ ।**
**ಚಕ್ರೇ ಪುಣ್ಯಂ ಸರಸ್ವತ್ಯಾ ಯೋ ವರ್ಷಮಿವ ಭಾರತಂ ॥**

ಮಹಾಭಾರತದ ಶಕ್ತಿರೂಪಿಣಿಯಾದ ದ್ರೌಪದಿ, ಪ್ರಬಲ ಪ್ರತಿಸ್ಪರ್ಧಿಗಳಾದ ಭೀಮ-ದುರ್ಯೋಧನರು, ನಾಯಕನಾದ ಯುಧಿಷ್ಠಿರ, ಮುಂತಾದ ಇತರ ಪಾತ್ರಗಳ ವಿಮರ್ಶೆ, ಮತ್ತು ಮಹಾಭಾರತದ ಜೀವನಸಂದೇಶ, ನೀತಿನಿರೂಪಣೆ, ಧರ್ಮಸೂಕ್ಷ್ಮಪ್ರತಿಪಾದನೆ, ಐತಿಹಾಸಿಕ ಘಟನೆಗಳ ವಿವರಗಳು ಮುಂತಾದುವು ಇಲ್ಲಿ ಪ್ರಸ್ತುತವಾದೂ ಗ್ರಂಥವಿಸ್ತರಭೀತಿಯಿಂದವಿಘರ

ಬಿಟ್ಟುಬಿಡಬೇಕಾಗಿದೆ. ಇದೇ ಲೇಖಕನ 'ಮಹಾಭಾರತ' (ಮೈಸೂರು ವಿಶ್ವವಿದ್ಯಾನಿಲಯ) ಎಂಬ ಪುಟ್ಟ ಪುಸ್ತಕದಲ್ಲಿ ಸ್ವಲ್ಪ ಹೆಚ್ಚಿನ ವಿವರಗಳನ್ನು ಕೊಡಲಾಗಿದೆ. ಮಾಸ್ತಿಯವರ 'ಭಾರತ ತೀರ್ಥ' ವೆಂಬ ಸ್ವತಂತ್ರಕೃತಿ (೧೯೫೨) ಆಧುನಿಕ ಮತ್ತು ಸಾಂಪ್ರದಾಯಿಕ ದೃಷ್ಟಿಗಳೆರಡನ್ನೂ ಸಮರಸವಾಗಿ ಕೂಡಿಸಿಕೊಂಡು ಎಲ್ಲ ವಿಚಾರಗಳನ್ನೂ ಉತ್ತಮವಾಗಿ ಪ್ರತಿಪಾದಿಸುತ್ತದೆ. ಅವರ ಕೃತಿಯ ಕಡೆಯ ವಾಕ್ಯವೃಂದವನ್ನಿಲ್ಲಿ ಉದ್ಧರಿಸಿ ಅಧ್ಯಾಯವನ್ನು ಮುಗಿಸುತ್ತೇವೆ —

**" ಸ್ನಾತವ್ಯಂ ಭಾರತೇ ತೀರ್ಥೇ**

ಅಸಂಖ್ಯಾತ ಮಹಾಪುರುಷ ತಪಸ್ವಿ ಋಷಿಗಳ ಶಾಸನ ಆಶೀರ್ವಚನ ಶುಭಾಶಯವನ್ನು ಒಳಗೊಂಡ ಭಾರತ ಗ್ರಂಥ ಅವರ ತಪಸ್ಸು ಜ್ಞಾನ ಧರ್ಮನಿಷ್ಠೆ ಸತ್ಸಂಕಲ್ಪ ಮಡುಗೂಡಿ ನಿಂತಿರುವ ಮಾನಸ ಸರೋವರ; ಪಾವನತೀರ್ಥ. ಪೂರ್ವಿಕರೊಬ್ಬರು "ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ ಕಿಂ ತಸ್ಯ ಪುಷ್ಕರ ಜಲೈಃ ಅಭಿಷೇಚನೇನ" ಎಂದರು. ಭಾರತ ಗ್ರಂಥ ಪುಷ್ಕರಕ್ಕಿಂತ ಮಿಗಿಲಾದ ಪುಣ್ಯತೀರ್ಥ ಎಂಬ ಈ ಭಾವನೆ ಯಾವ ಕಾಲಕ್ಕೂ ಒಪ್ಪತಕ್ಕದ್ದು. ಮನುಜಕುಲವೇ ಈ ತೀರ್ಥದಲ್ಲಿ ಸ್ನಾನಮಾಡಿ ಉದ್ಧಾರವಾಗಬಹುದು.

**ಅಗಾಧೇ ವಿಮಲೇ ಶುದ್ಧೇ ಕ್ಷಮಾಸತ್ಯ ಧೃತಿಹ್ರದೇ ।**
**ಸ್ನಾತವ್ಯಂ ಭಾರತೇ ತೀರ್ಥೇ ಸತ್ವಮಾಲಂಬ್ಯ ಶಾಶ್ವತಂ ॥ "**

ಮುಂದಿನ ಕವಿಗಳಿಗೆಲ್ಲ ರಾಮಾಯಣದಂತೆಯೇ ಕಾವ್ಯವಸ್ತುವನ್ನೊದಗಿಸುವ ತುಂಬಿದ ಗಣಿಯೇ ಮಹಾಭಾರತವೆಂಬುದನ್ನು ಈ ಸಮೀಕ್ಷೆಯಲ್ಲಿ ಪುನರುಚ್ಚರಿಸುವುದು ಅವಶ್ಯ (೧೯೫೭ ರಲ್ಲಿ ಅಚ್ಚಾದ ಡಾ॥ ವಿ. ಎಸ್. ಸುಕರಣಕರ ಅವರ 'The Meaning of the Mahabharata' ಎಂಬ ಗ್ರಂಥ ಮನನೀಯ).

## ಪುರಾಣಗಳು

ಪ್ರಾಚೀನ ರಾಜವಂಶಗಳ, ಲೋಕಗಳ ಸೃಷ್ಟಿ ಮತ್ತು ಭೌಗೋಲಿಕ ವಿಷಯಗಳ, ದೇವ ಕ್ಷೇತ್ರಾದಿ ಮಾಹಾತ್ಮ್ಯಗಳ, ಮತ್ತು ಜನೋಪಯೋಗಿ

ಯಾದ ಇತರ ವಿಷಯಗಳ ಸಂಗ್ರಹವನ್ನು ಮಹಾಭಾರತದ ಆರ್ಷಶೈಲಿ ಯಲ್ಲಿ ಮಾಡಿಕೊಡುವ ಅನೇಕ ಗ್ರಂಥಗಳಿಗೆ ಪುರಾಣಗಳೆನ್ನುವರು. ಇವು ಗಳಲ್ಲಿ ಸೂರ್ಯಚಂದ್ರವಂಶಗಳ ನಿರೂಪಣೆಯೊಂದಿಗೆ ದಿವ್ಯ ಕಥೆಗಳೂ ಬರುತ್ತವೆ. ಇವುಗಳ ಕಾವ್ಯಗುಣ ಅತ್ಯಲ್ಪವಾದರೂ, ಮುಂದಿನ ಪರಿಷ್ಕೃತ ಯುಗದ ಕವಿಗಳಿಗೆ ಎಷ್ಟೋ ಪುರಾಣಗಳು ಕಾವ್ಯಕಥಾವಸ್ತುವನ್ನು ಒದಗಿಸಿರುವುದರಿಂದಲೂ, ಜೈನ ಬೌದ್ಧಾದಿಗಳ ಪುರಾಣ ರಚನೆಗೂ ಪ್ರೇರಕ ವಾಗಿರುವುದರಿಂದಲೂ. ಇಲ್ಲಿ ಅವುಗಳನ್ನು ಕುರಿತು ಎರಡು ಮಾತು ಬರೆಯುವುದು ಪ್ರಸ್ತುತವಾಗಿದೆ. ವಿಶ್ವರಚನೆಯನ್ನು ಕುರಿತ ರಚನೆ ಗಳನ್ನು 'ಪುರಾಣ' ವೆಂದು ಅಥರ್ವವೇದದಲ್ಲೇ ಹೇಳಿದೆ. ಮುಂದೆ ಕ್ರಿಸ್ತ ಪೂರ್ವದ ಆಪಸ್ತಂಬ, ಗೌತಮ ಮುಂತಾದ ಧರ್ಮಶಾಸ್ತ್ರಕಾರರೂ 'ಪುರಾಣ'ಗಳನ್ನು ಉಲ್ಲೇಖಿಸುತ್ತಾರೆ ಆದರೆ ಆ ಕಾಲದಲ್ಲಿ ಈಗ ಸಿಕ್ಕುವ ಪುರಾಣಗಳಿರಲಿಲ್ಲ, ಅವಕ್ಕೆ ಮೂಲವಾಗಿರಬಹುದಾದ ಒಂದೇ ವಿಷಯರಾಶಿ ಜನಜನಿತವಾಗಿದ್ದಿತೆನ್ನಬಹುದು. ಈಗಿರುವ ಮತ್ಸ್ಯಾದಿ ಅಷ್ಟಾದಶ ಪುರಾಣ ಗಳಲ್ಲಿ ಗುಪ್ತಸಮ್ರಾಟರ ಕಾಲದಲ್ಲಿ ಉತ್ಪನ್ನವಾದುವೇ ಪ್ರಾಚೀನವಾದು ವೆನ್ನಬಹುದು ಅನಂತರವೂ ಎಷ್ಟೋ ಪುರಾಣ, ಉಪಪುರಾಣಗಳು ಹುಟ್ಟು ತ್ತಲೇ ಇದ್ದುವು. ಒಟ್ಟಿನಮೇಲೆ ಸಾಮಾನ್ಯ ಜನರಿಗೆ ಧರ್ಮ, ಮತ್ತು ಜ್ಞಾನ ಪ್ರಸಾರ ಮಾಡಲು ಬ್ರಾಹ್ಮಣ ಧರ್ಮವೂ ಕಾಲದಿಂದ ಕಾಲಕ್ಕೆ ಒದಗಿಸಿದ ಸಾಹಿತ್ಯವೇ ಪುರಾಣವೆನ್ನಬಹುದು.

ಮುಖ್ಯವಾದ ಪುರಾಣಗಳು ಹದಿನೇಂಟೆನ್ನುತ್ತಾರೆ. ಕೆಳಗಿನ ಶ್ಲೋಕ ಹೇಳುವಂತೆ :—

**ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವಚತುಷ್ಟಯಂ ।**
**ಅ-ನಾ-ಪ-ಲಿಂಗ-ಕೂ-ಸ್ಕಾನಿ ಪುರಾಣಾನಿ ಪ್ರಚಕ್ಷತೇ ॥**

ಮತ್ಸ್ಯ, ಮಾರ್ಕಂಡೇಯ (='ಮ'ದ್ವಯ), ಭಾಗವತ, ಭವಿಷ್ಯ (='ಭ'ದ್ವಯ) ಬ್ರಹ್ಮಾಂಡ, ಬ್ರಹ್ಮವೈವರ್ತ, ಬ್ರಾಹ್ಮ (='ಬ್ರ'ತ್ರಯ), ವಾಮನ, ವಾರಾಹ, ವಿಷ್ಣು, ವಾಯು ('ವ'ಚತುಷ್ಟಯ), ಅಗ್ನಿ (='ಅ') ನಾರದ (='ನಾ') ಪದ್ಮ (='ಪ'), ಲಿಂಗ (='ಲಿಂಗ'), ಕೂರ್ಮ,

(='ಕೂ'), ಸ್ಕಂದ (='ಸ್ಕ') ಇವೇ ಆ ಹದಿನೆಂಟು. ಇವುಗಳಲ್ಲಿ ಹತ್ತು ಪುರಾಣಗಳು ಶಿವನ ಮಾಹಾತ್ಮ್ಯವನ್ನೂ, ನಾಲ್ಕು ವಿಷ್ಣುವಿನ ಮಾಹಾತ್ಮ್ಯವನ್ನೂ, ಎರಡು ಶಕ್ತಿ ಮತ್ತು ಗಣಪತಿಗಳ ಮಹಾತ್ಮ್ಯವನ್ನೂ ವರ್ಣಿಸುವುವೆಂದೂ ಹೇಳುವುದುಂಟು.—

**ಅಷ್ಟಾದಶ ಪುರಾಣೇಷು ದಶಭಿರ್ಗೀಯತೇ ಶಿವಃ।**
**ಚತುರ್ಭಿರ್ಗೀಯತೇ ವಿಷ್ಣುರ್ದ್ವಾಭ್ಯಾಂ ಶಕ್ತಿಶ್ಚ ವಿಘ್ನಪಃ॥**

ಇವೆಲ್ಲವೂ ಮಹಾಭಾರತದಂತೆಯೇ ಅನೇಕ ಸಾವಿರ ಶ್ಲೋಕಗಳನ್ನುಳ್ಳ ಮಹಾಗ್ರಂಥಗಳು. ಇದರಂತೆ 'ಸನತ್ಕುಮಾರ', 'ನೃಸಿಂಹ', 'ವಾಯು', 'ಶಿವಧರ್ಮ', 'ನಂದಿಕೇಶ್ವರ', ಮುಂತಾದ **ಉಪಪುರಾಣಗಳೂ** ಹದಿನೆಂಟು ಉಪಲಬ್ಧವಿವೆ. ಎಲ್ಲವನ್ನೂ ವ್ಯಾಸರೇ ಬರೆದರೆಂದು ಹೇಳುವುದು ವಾಡಿಕೆ. ಇಂದಿನ ವಿಮರ್ಶಕರು ಇದನ್ನು ಒಪ್ಪುವುದಿಲ್ಲ.

ವಿಶಿಷ್ಟದೇವತೆಗಳ ಮಹಿಮೆಯನ್ನು ನಾನಾರೀತಿಗಳಿಂದಲೂ ತೋರಿಸುವುದು, ಉಪಾಖ್ಯಾನಗಳನ್ನೂ ದಿವ್ಯ ಮಾನುಷ ಕಥೆಗಳನ್ನೂ ಸೇರಿಸಿಕೊಳ್ಳುವುದು, ಸೃಷ್ಟಿಲಯಾದಿ ವಿಚಾರಗಳನ್ನು ವಿವರಿಸುವುದು, ವರ್ಣಾಶ್ರಮಧರ್ಮಗಳು, ತೀರ್ಥಮಾಹಾತ್ಮ್ಯಗಳು, ರಾಜ ಚರಿತ್ರೆಗಳು, ಎಲ್ಲವುಗಳನ್ನೂ ವಿಸ್ತರಿಸುವುದು-ಇದು ಪುರಾಣಗಳ ಸಾಮಾನ್ಯ ಲಕ್ಷಣ. ಸಾಹಿತ್ಯ ದೃಷ್ಟಿಯಿಂದ ಮನನೀಯವಾದ ಒಂದೇ ಪುರಾಣವೆಂದರೆ 'ಭಾಗವತ' ಪುರಾಣ. 'ವಿದ್ವಾಂಸರ ಪರೀಕ್ಷೆಯಾಗುವುದು ಭಾಗವತದಲ್ಲಿ' **(ವಿದ್ಯಾವತಾಂ ಭಾಗವತೇ ಪರೀಕ್ಷಾ)** ಎನ್ನುವುದುಂಟು. ಅದರಲ್ಲಿ ಬರುವ ಭಕ್ತಿರಸದ ಪ್ರವಾಹ ಭಾರತವರ್ಷದಲ್ಲೆಲ್ಲ ಜನಪ್ರಿಯವಾಗಿರುವುದಷ್ಟೇ ಅಲ್ಲ; ಅನೇಕ ದೇಶಭಾಷಾ ಕವಿಗಳ ರಚನೆಗಳ ಮೂಲಕ ಅನೇಕ ಮುಖವಾಗಿ ಹರಿದು ದೇಶದ ಮೂಲೆ ಮೂಲೆಯಲ್ಲಿಯೂ ತನ್ನ ಅಮರ ಸಂಜೀವಕತ್ವವನ್ನುಳಿಸಿಕೊಂಡಿದೆ. ಭಾರತದ ಭಕ್ತಿಸಂಪ್ರದಾಯದ ಉತ್ತಮೋತ್ತಮ ಕಾವ್ಯವೇ ಭಾಗವತವೆಂದರೂ ಸಲ್ಲುತ್ತದೆ. ಇದರಲ್ಲಿ ಹನ್ನೆರಡು ಸ್ಕಂಧಗಳಿವೆ. ಒಟ್ಟು ಶ್ಲೋಕಗಳ ಸಂಖ್ಯೆ 18000. ೧೩ ನೆಯ ಶತಮಾನದಲ್ಲಿ ಮಧ್ವಾಚಾರ್ಯರು ಇದಕ್ಕೆ ವ್ಯಾಖ್ಯಾನ ಮಾಡಿದ್ದಾರೆ! ಆದರೆ ೧೨ ನೆಯ ಶತಮಾನದ ರಾಮಾನುಜಾಚಾರ್ಯರು ಇದನ್ನು ಉಲ್ಲೇಖಿಸದೆಯೇ ಇರುವುದ

ರಿಂದ ಇದು ಅವರ ಕಾಲದಲ್ಲಿನ್ನೂ ರಚಿತವಾಗಿರಲಿಲ್ಲವೆನಿಸುತ್ತದೆ. ಹೀಗೆ ಭಾಗವತದ ರಚನಾಕಾಲ ಇತರ ಪುರಾಣಗಳಿಗಿಂತ ಅರ್ವಾಚೀನ. ವಿಷ್ಣು ಪುರಾಣವೇ ಅದಕ್ಕೆ ಮೂಲ. ಭಾಗವತವನ್ನು ಒಬ್ಬನೇ ಕವಿ ಬರೆದನೆಂದೂ ಅವನು ಬಹುಶಃ ದ್ರಾವಿಡದೇಶದವನೆಂದೂ ಅಂತರಿಕ ಪ್ರಮಾಣಗಳ ಮೇಲಿಂದ ವಿದ್ವಾಂಸರು ಊಹಿಸಿದ್ದಾರೆ. ಜೈನರ ಕಾವ್ಯ ಪುರಾಣಗಳು (ಇವುಗಳ ವಿವರ ಗಳು ಮುಂದೆ ಬರುತ್ತವೆ) ಜನತೆಯ ಮನಸ್ಸಿನ ಮೇಲೆ ಪರಿಣಾಮಕಾರಿ ಯಾದುದನ್ನು ನೋಡಿ ಬ್ರಾಹ್ಮಣರು ರಚಿಸಿದ ಕಾವ್ಯಪುರಾಣವೇ ಭಾಗವತ ವೆಂದು ಊಹಿಸಿದರೆ ತಪ್ಪಾಗಲಾರದು. ಇಲ್ಲಿ ಕಾವ್ಯದೃಷ್ಟಿಯಷ್ಟೇ ಧಾರ್ಮಿಕ ದೃಷ್ಟಿಯೂ ಪ್ರಧಾನವಾಗುತ್ತದೆ. ಬ್ರಾಹ್ಮಣಧರ್ಮದ ಪರಿವರ್ಧಿತ ಮತ್ತು ವಿಕಸಿತರೂಪಗಳನ್ನಿಲ್ಲಿ ಕಾಣಬಹುದು. ಶ್ರೀ ಕೃಷ್ಣನ ಬಾಲಲೀಲೆಗಳನ್ನೂ, ದೈತ್ಯ ಸಂಹಾರಗಳನ್ನೂ, ಶೃಂಗಾರ ವಿಹಾರಗಳನ್ನೂ, ಭಾಗವತದಲ್ಲಿ ಹೃದಯಂಗಮವಾಗಿ ವರ್ಣಿಸಲಾಗಿದೆ. ಇದರ ಶೈಲಿಯಲ್ಲಿಯೂ ಆರ್ಷಶೈಲಿ ಯಲ್ಲಿಲ್ಲದ ಉತ್ತರ ಕಾಲೀನ ಚಮತ್ಕಾರಗಳು ಹೇರಳವಾಗಿವೆ. (ಹೆಚ್ಚಿನ ವಿವರಗಳಿಗೆ ಓದಿ. M. Winternitz: History of Indian Literature, vol. I)



# ಅಧ್ಯಾಯ ೪

## ಅಶ್ವಘೋಷ

**ಬುದ್ಧನ ಚರಿತಾಮೃತಮಂ**
**ಸಿದ್ಧಿಯುಮಂ ಕಾವ್ಯಮಾರ್ಗದಿಂ ವರ್ಣಿಸುತುಂ ।**
**ಸದ್ಧರ್ಮದ ಸಂವೃದ್ಧಿಯ-**
**ನುದ್ಧರಿಸಿದನಶ್ವಘೋಷನಾ ಕವಿರಾಜಂ ॥**

ಭಾರತದ ಇತಿಹಾಸದಲ್ಲಿ ಭಗವಾನ್ ಬುದ್ಧನ ಜನ್ಮಯುಗವು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ಘಟನೆ. ಅಂಧಾಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುವ ಯಾವ ಸ್ವತಂತ್ರ ವಿಚಾರಪರಂಪರೆ ಉಪನಿಷತ್ತುಗಳಲ್ಲಿಯೇ ಉದ್ಭವಿಸಿ ಆರ್ಷಕಾವ್ಯಗಳಲ್ಲಿಯೂ ಪಲ್ಲವಿಸಿತೋ ಅದರ ಪರಿಣತಫಲ ಬುದ್ಧದೇವನ ಧರ್ಮವಾಣಿ. ವೇದಶಾಸ್ತ್ರಪುರಾಣಾದಿಗಳು ಹೇಳಬೇಕಾದುದನ್ನೆಲ್ಲ ತಿಳಿದ ಮೇಲೆಯೂ ತನ್ನ ಸಂದೇಹಗಳು ತೊಲಗದೆ, ಅವುಗಳ ಪರಿಹಾರಕ್ಕಾಗಿ ಜಗತ್ತಿನ ಇತಿಹಾಸದಲ್ಲಿಯೇ ಅಭೂತಪೂರ್ವವಾದ ತ್ಯಾಗವನ್ನು ಮಾಡಿ, ತಪಸ್ಸನ್ನಾಚರಿಸಿ, ಜ್ಞಾನಸಿದ್ಧಿಯಲ್ಲಿ ಕೃತಕೃತ್ಯನಾದ ಪುಣ್ಯಪುರುಷ—ಗೌತಮ ಬುದ್ಧ. ಇಕ್ಷ್ವಾಕು ಕುಲದ ಮಹಾರಾಜವಂಶದಲ್ಲಿ ಜನಿಸಿ, ರೂಪಯೌವನಸಂಪತ್ಸಮೃದ್ಧಿಗಳೆಲ್ಲ ತುಂಬಿರುವಾಗ ತಡೆಯಲಾರದ ವೈರಾಗ್ಯದಿಂದ ಕಾಡಿಗೆ ಹೋದ ತ್ಯಾಗವೀರ. ತನ್ನ ಮೋಕ್ಷದ ಸಿದ್ಧಿಯಿಂದ ತೃಪ್ತನಾಗದೆ ಲೋಕಹಿತಕ್ಕಾಗಿಯೇ ತನ್ನ ಜೀವನವನ್ನೆಲ್ಲ ಮೀಸಲಾಗಿಟ್ಟ ಮಹಾತ್ಮ. ಅವನ ದೇದೀಪ್ಯಮಾನ ಜ್ಞಾನಪ್ರಭೆಯೂ, ಪ್ರಶಾಂತ ಸೌಮ್ಯಸಂದೇಶವೂ, ದೇಶದಲ್ಲಿ ಹೊಸ ಬೆಳಕನ್ನು ತಂದುವು , ಜನರಲ್ಲಿ ಹೊಸ ಚೈತನ್ಯವನ್ನು ತುಂಬಿದುವು. ತತ್ವಜಿಜ್ಞಾಸೆಯು ವಾನಪ್ರಸ್ಥರ, ಸಂನ್ಯಾಸಿಗಳ, ಉದ್ಯೋಗವಾಗುವುದು ಹೋಗಿ, ಸಾಮಾನ್ಯ ಜನಗಳೆಲ್ಲರ ನಿತ್ಯಜೀವನದ ಪ್ರೇರಕಶಕ್ತಿಯಾಯಿತು. ಬುದ್ಧನ ಪ್ರಚಾರದ ಫಲವಾಗಿ ಒಂದು ಕಡೆ ಬೌದ್ಧವಿದ್ವಾಂಸರಲ್ಲಿ ವಿಚಾರಪ್ರಧಾನವಾದ ತತ್ವಾನ್ವೇಷಣೆಯು ಗ್ರಂಥಗಳು ಹುಟ್ಟಿದಂತೆ ಇನ್ನೊಂದು ಕಡೆ ವೈದಿಕರಲ್ಲೂ

ಷಡ್ದರ್ಶನಗಳ ನಿಷ್ಕೃಷ್ಟ ನಿರ್ಮಾಣವಾಯಿತು. (ಬುದ್ಧನಂತೆ ಈ ಯುಗದಲ್ಲಿ ಸ್ವತಂತ್ರ ಮತಪ್ರಸಾರಕನಾದ ಮಹಾವೀರನೂ ಇದ್ದುದು ವೈದಿಕರ ಸತ್ವಪರೀಕ್ಷೆಗೆ ಹೆಚ್ಚಿನ ಬಲವನ್ನು ಕೊಟ್ಟಿತ್ತು.) ಒಂದು ಕಡೆ ಜನ ಸಾಮಾನ್ಯರ ಆಡುನುಡಿ ಶುದ್ಧ ಸಂಸ್ಕೃತಕ್ಕಿಂತ ಹೆಚ್ಚು ಹೆಚ್ಚು ದೂರ ವಾಗುತ್ತಾ ಪ್ರಾಕೃತವೆನಿಸಿದ್ದರೂ ಅದರಲ್ಲಿಯೇ ಧಾರ್ಮಿಕ ಗ್ರಂಥಗಳೆಲ್ಲಾ ಬರುವ ಅವಕಾಶವೊದಗಿತು. ಇನ್ನೊಂದು ಕಡೆ, ಶುದ್ಧ ಸಂಸ್ಕೃತದಲ್ಲಿಯೂ ಈ ಹೊಸ ಉತ್ಸಾಹವನ್ನು ಕಾವ್ಯಮಯವಾಗಿ ಹರಿಯಿಸುವ ಪ್ರಯತ್ನಗಳು ನಡೆದುವು. ಸಂಸ್ಕೃತ ಮಹಾಕಾವ್ಯಕ್ಕೆ ರಾಮಾಯಣ, ಮಹಾಭಾರತಗಳಾದ ಮೇಲೆ ಸ್ಫೂರ್ತಿ ಬಂದುದು ಭಗವಾನ್ ಬುದ್ಧನ ಮಹಾ ವ್ಯಕ್ತಿತ್ವದಿಂದ. ಆ ಸ್ಫೂರ್ತಿಯನ್ನು ಅವರ ಕಾವ್ಯಗಳ ಮೂಲಕ ಚಿರಸ್ಥಾಯಿಯಾಗಿ ಮಾಡಿರುವ ಮಹಾಕವಿ-ಅಶ್ವಘೋಷ.

ಅಶ್ವಘೋಷನು ಮಹಾಕವಿಯೆಂದು ಹೇಳಿದೆವು. ಆದರೆ ಇವನ ಕಾವ್ಯ ವೊಂದೂ ಅರವತ್ತು ವರ್ಷಗಳ ಮುಂಚೆ ಸಿಕ್ಕಿರಲಿಲ್ಲ. ಬೌದ್ಧರ ಧರ್ಮಗ್ರಂಥ ಗಳಲ್ಲಿ ಈತನನ್ನು ಬಹಳ ದೊಡ್ಡ ಆಚಾರ್ಯನೆಂದೂ ಅನೇಕ ಮತಗ್ರಂಥಗಳ ಕರ್ತೃವೆಂದೂ ಗೌರವಿಸುವ ಉಲ್ಲೇಖಗಳು ಮಾತ್ರ ಗೊತ್ತಿದ್ದುವು. ಆದರೆ ಭಾರತದ ಸುದೈವದಿಂದ ಈತನ ಎರಡು ಮಹಾಕಾವ್ಯಗಳೂ, ಒಂದೆರಡು ನಾಟಕಗಳ ಭಾಗಗಳೂ ಈಚೆಗೆ ಸಿಕ್ಕಿದುವು [1] ಮಹಾಕಾವ್ಯಗಳಲ್ಲಿ ಒಂದಾದ 'ಸೌಂದರನಂದ'ವು ಸಮಗ್ರವಾಗಿ ಸಿಕ್ಕಿದೆ, ಎರಡನೆಯದಾದ 'ಬುದ್ಧಚರಿತ' ದಲ್ಲಿ ೧೪ ಸರ್ಗಗಳು ಎಂದರೆ ಅರ್ಧದಷ್ಟು ಮಾತ್ರ ಸಿಕ್ಕಿದೆ. ಕ್ರಿ. ಶ. ೫ ನೆಯ

---

[1] Cowell The Buddhacarita (Anecdota Oxoniensia) 1893.

Harapiasad Sastri · Saundara-Nanda-Kāvya, Bibliothica Indica Series, 1910; 2nd Edn. 1939

Johnston: Ed and Eng. Tr. of Buddhacarita, Punjab University Oriental Publications, No. 31 & 32, 1936.

Johnston: Ed. and Tr. of Saundarananda, Oxford University Press, 1928, 1932.

H. Lüders: Śāriputra-Prakarana, Berlin, 1911.

ಶತಮಾನದಲ್ಲಿ ಈ ಮಹಾಕಾವ್ಯದ ೨೮ ಸರ್ಗಗಳನ್ನು ಚೀಣೀ ಭಾಷೆಗೂ² ೮ನೆಯ ಶತಮಾನದಲ್ಲಿ ಟಿಬೆಟನ್ ಭಾಷೆಗೂ ಅನುವಾದ ಮಾಡಿದ್ದು, ಆ ಅನುವಾದಗಳು ಈಗಲೂ ಉಪಲಬ್ಧವಿವೆ. ಬೌದ್ಧರಿಗೆ ಅಷ್ಟು ಹಿಂದೆಯೇ ಇವು ಪೂಜ್ಯಗ್ರಂಥಗಳಾಗಿದ್ದುವು. ಅವುಗಳು ಪವಿತ್ರಗ್ರಂಥಗಳೆಂಬ ದೃಷ್ಟಿಯನ್ನು ಬಿಟ್ಟು, ಕೇವಲ ಕಾವ್ಯದೃಷ್ಟಿಯಿಂದ ಓದುವವರಿಗೂ ಅವುಗಳ ಮಹತ್ವ ಅತ್ಯಂತ ಹೆಚ್ಚಿನದು.

ಅಶ್ವಘೋಷನ ಕೃತಿಗಳ ಪರಿಶೀಲನೆ ಇನ್ನೂ ನಡೆಯುದಿದ್ದ ಕಾಲದಲ್ಲಿ ಮ್ಯಾಕ್ಸ್ ಮ್ಯುಲರ್ ಅವರಂತಹ ಮಹಾ ವಿದ್ವಾಂಸರು ಸಂಸ್ಕೃತ ಕಾವ್ಯದ ಚರಿತ್ರೆಯ ಬಗೆಗೆ Theory of Renaissance ಅಥವಾ 'ಪುನರುತ್ಥಾನ' ವೆಂಬ ವಾದವನ್ನು ಮಂಡಿಸಿದ್ದರು.[3] ಐರೋಪ್ಯ ಸಾಹಿತ್ಯಗಳಲ್ಲಿ ಕ್ರಿ. ಶ. ಹದಿನೈದನೆಯ ಶತಮಾನದಲ್ಲಿ ಗ್ರೀಕ್ ಮತ್ತು ರೋಮನ್ ವಿದ್ಯೆಗಳ ಪುನಃ ಪ್ರಚಾರಕ್ಕೆ ಮೊದಲು ಎಷ್ಟೋ ಶತಮಾನಗಳ ಕಾಲ "ಕತ್ತಲೆಯ ಯುಗ" ವೆನಿಸುವ ಮಧ್ಯಯುಗವಿತ್ತು. ಹೊಸ ಅಧ್ಯಯನದ ಸಂಪರ್ಕದಿಂದ ಒಮ್ಮೆಗೇ ನವಚೈತನ್ಯವು ಕಲೆ, ತತ್ವ, ಸಾಹಿತ್ಯ ಮುಂತಾದ ಎಲ್ಲ ಅಂಗಗಳಲ್ಲಿಯೂ ಸಂಚಾರವಾಯಿತು. ಆದರಂತೆಯೇ ಭಾರತವರ್ಷದಲ್ಲಿಯೂ ಉಪನಿಷತ್ತು, ರಾಮಾಯಣ, ಮಹಾಭಾರತಗಳ ಆರ್ಷಕಾವ್ಯಯುಗದ ನಂತರ ಕಾಳಿದಾಸ ಮಹಾಕವಿಯವರೆಗೆ ಕತ್ತಲೆಯೇ ತುಂಬಿದೆಯೆಂದೂ, ಕಾಳಿದಾಸನ ಕಾಲದಲ್ಲಿ ವಿಕ್ರಮಾದಿತ್ಯನೆಂಬ ರಾಜನ ಪ್ರೋತ್ಸಾಹದಿಂದ ಕಾವ್ಯಶಾಸ್ತ್ರಗಳಲ್ಲೆಲ್ಲ ಒಟ್ಟಿಗೇ ಕೃಷಿ ನಡೆಯಿತೆಂದೂ ಈ ವಾದದ ಸಾರಾಂಶ. ಈ ವಾದದ ಪ್ರಕಾರ ಕಾಳಿದಾಸನ ಕಾಲ ಕ್ರಿ. ಶ ೬ನೆಯ ಶತಮಾನಕ್ಕಿಂತ ಪೂರ್ವವರ್ತಿಯಲ್ಲ.[4] ಈ ವಾದಕ್ಕೆ ಪೋಷಕವಾಗಿ ಕಾವ್ಯಶೈಲಿಯ ಕೃತ್ರಿಮತೆಯನ್ನು ಪ್ರತಿವಾದಿಸಿ, ಅಲಂಕಾರಾದಿಗಳ ಅತಿರೇಕವೂ, ಸಮಾಸಾದಿಗಳ ಆಡಂಬರವೂ, ಉತ್ತರಕಾಲೀನತೆಯ ದ್ಯೋತಕವೆಂದೇ ಭಾವಿಸುತ್ತಿದ್ದರು. ಆದರೆ ಕ್ರಿ. ಶ. ಎರಡನೆಯ ಶತಮಾನದಿಂದ ಹಿಡಿದು ೬ನೆಯ ಶತಮಾನದವರೆಗೂ ರಚಿತ

---

2 ಅನುವಾದಕಾರನ ಹೆಸರು ಧರ್ಮರಕ್ಷ. ಕಾಲ ಸುಮಾರು ಕ್ರಿ.ಶ. 420.

3. India, what can it teach us ? pp 28 1-4.

4. ಇದು ಫರ್ಗುಸನರ ವಾದ.

ವಾದ ಎಷ್ಟೋ ಶಿಲಾಶಾಸನಗಳ ಪ್ರಶಸ್ತಿಕಾವ್ಯಗಳಲ್ಲಿಯೇ ಈ ಅಲಂಕೃತ ಶೈಲಿ ಕಾಣಬರುವುದನ್ನು ಸಂಶೋಧಕರು ಗಮನಿಸಿದಮೇಲೆ,[5] ಅಶ್ವಘೋಷನ ಕಾವ್ಯಗಳು ಸಿಕ್ಕಿದಮೇಲೆ, ಈ ವಾದದಲ್ಲಿ ಸ್ವಲ್ಪವೂ ಹುರುಳಿಲ್ಲವೆಂಬುದನ್ನು ಎಲ್ಲರೂ ಒಪ್ಪುವಂತಾಯಿತು.[6]

ನಿಜವಾಗಿಯೂ ಅಶ್ವಘೋಷನ ಕಾಲನಿರ್ಣಯದಲ್ಲಿ ಸಂದೇಹವಿರದೆ ಹೋಗಿದ್ದರೆ ಸಂಸ್ಕೃತ ಕಾವ್ಯಪರಂಪರೆಯ ಇತಿಹಾಸದಲ್ಲಿ ಒಂದು ಬಹು ದೊಡ್ಡ ಸಮಸ್ಯೆ ಪರಿಹಾರವಾದಂತಾಗುತ್ತಿದ್ದಿತು. ವಸ್ತುತಃ ಇನ್ನೂ ಅದು ಸಂದೇಹಗ್ರಸ್ತವಾಗಿಯೇ ಇದೆ. ಕ್ರಿ. ಶ. ಐದನೆಯ ಶತಮಾನದಲ್ಲಿ ಚೀಣೀ ಭಾಷೆಗೆ 'ಬುದ್ಧಚರಿತ'ವು ಭಾಷಾಂತರವಾಗಿರುವುದರಿಂದ ಅದಕ್ಕಿಂತ ಹಿಂದೆ ಅಶ್ವಘೋಷನಿದ್ದನೆಂಬುದು ಖಚಿತ. ಆದರೆ ಎಷ್ಟು ಹಿಂದೆ ಎಂಬುದಕ್ಕೆ ಊಹೆಯೇ ಶರಣು. ಇವನು ಕಾಳಿದಾಸನಿಗಿಂತ ಈಚಿನವನೋ ಹಿಂದಿನವನೋ ಎಂಬುದು ಬಹಳ ಮುಖ್ಯವಾದ ಪ್ರಶ್ನೆ. ಆದರೆ ಈ ಪ್ರಶ್ನೆಯೂ ಇನ್ನೂ ಇತ್ಯರ್ಥವಾಗಿಲ್ಲ. ಅಶ್ವಘೋಷನ ಕಾವ್ಯಗಳನ್ನೂ ಕಾಳಿದಾಸನ ಕಾವ್ಯಗಳನ್ನೂ ತುಲನಾತ್ಮಕವಾಗಿ ಓದಿರುವ ವಿದ್ವಾಂಸರು ಅನೇಕಾನೇಕ ಅರ್ಥ ಸಾಮ್ಯಗಳನ್ನೂ ಉಕ್ತಿಸಾಮ್ಯಗಳನ್ನೂ, ಕಂಡಿದ್ದಾರೆ.[7] ಇವುಗಳನ್ನೆಲ್ಲ ಬೇರೆ ಕಾರಣ ಹೇಳಿ ವಿವರಿಸುವಂತಿಲ್ಲ: ಒಬ್ಬರಿಂದ ಮತ್ತೊಬ್ಬರು ಪ್ರಭಾವಿತರಾಗಿದ್ದಾರೆಂದು ಹೇಳಿಯೇ ತೀರಬೇಕಾಗಿದೆ. ಈ ಸನ್ನಿವೇಶದಲ್ಲಿ ಕಾಳಿದಾಸನ ಕಾಲನಿರ್ಣಯವಿದ್ದಿದ್ದರೂ ಎಷ್ಟೋ ಸಹಾಯವಾಗುತ್ತಿತ್ತು. ಅದೂ ಇಲ್ಲ. ಅವನು ಕೂಡ ಕ್ರಿ. ಶ. ಐದನೆಯ ಶತಮಾನಕ್ಕೆ ಈಚಿನವನಲ್ಲವೆಂಬುದಷ್ಟೇ ಖಚಿತ (ಆ ಕಾಲದ ಒಂದು ಶಾಸನದಲ್ಲಿ ಅವನ ಪದ್ಯಗಳ ಅನುಕರಣೆಯಿರುವುದರಿಂದ). ಕಾಳಿದಾಸನ ಆಶ್ರಯದಾತನಾದ ವಿಕ್ರಮಾದಿತ್ಯನು ಯಾರು?

---

5 Fleet: Gupta Inscriptions; Bühler: Die Indischen Inschriften.

6. A. B. Keith: History of Sanskrit Literature; p. 39.
S. K. De: „ „ „ p. 17.

7. ನಂದರ್ಗೀಕರ ಅವರ 'ರಘುವಂಶ' ಸಂಸ್ಕರಣದ ಪೀಠಿಕೆ, ಪು. 163-96. (ಮೂರನೆ ಮುದ್ರಣ 1896)ಯಲ್ಲಿ ಇವನ್ನು ಸಮಗ್ರವಾಗಿ ತೋರಿಸಿದೆ.

ಯಾವ ಕಾಲದವನು? ಎನ್ನುವುದೂ ಚರ್ಚಾಗ್ರಸ್ತ. ಕೆಲವರು ಕ್ರಿ.ಪೂ. ೧ನೆಯ ಶತಮಾನವೆಂದರೆ ಇತರರು ಕ್ರಿ. ಶ. ೪-೫ನೆಯ ಶತಮಾನವೆನ್ನುತ್ತಾರೆ.[8] ಅಶ್ವಘೋಷನ ಜೀವನವನ್ನು ಕುರಿತು ಬೌದ್ಧರ ನಂಬಿಕೆಗಳೂ ಪರಸ್ಪರ ವಿಸಂಗತವಾಗಿವೆ. ಅವನನ್ನು ಮಹಾಯಾನ ಶಾಸ್ತ್ರಗಳ ಕರ್ತೃವೆಂದು ಕೆಲವು ಹೇಳುತ್ತವೆ, ಆದರೆ ಉಪಲಬ್ಧ ಕಾವ್ಯಗಳಲ್ಲಿ ಅಮಿತಾಭ, ಅವಲೋಕಿತೇಶ್ವರ ಮುಂತಾದ ಬೋಧಿಸತ್ವರ ಪೂಜ ಇತ್ಯಾದಿ ಮುಖ್ಯ ಮಹಾಯಾನ ಸಂಪ್ರದಾಯಗಳ ಗಂಧವೂ ಇಲ್ಲ, ವಿಜ್ಞಾನವಾದ ಶೂನ್ಯವಾದಗಳ ವಿವರಗಳೂ ಇಲ್ಲ. ಇರುವುದೆಲ್ಲವೂ ಲೇಖಕನು ಹೀನಯಾನ ಪಂಥಕ್ಕೆ ಸೇರಿರುವುದನ್ನೇ ಸೂಚಿಸುತ್ತದೆ. ಇನ್ನು ಕೆಲವು ಐತಿಹ್ಯಗಳ ಪ್ರಕಾರ ಅಶ್ವಘೋಷನು ಗಾಂಧಾರ-ಕಾಶ್ಮೀರಾದಿಗಳಿಗೆ ರಾಜನಾಗಿದ್ದ ಕನಿಷ್ಕ ಚಕ್ರವರ್ತಿಯ ರಾಜಗುರು. ಕನಿಷ್ಕನ ಕಾಲವೂ ಸಂದಿಗ್ಧ-ಕ್ರಿ.ಶ ೧ ನೆಯ ಶತಮಾನವೋ ೨ ನೆಯದೋ ವಿವಾದವಿದ್ದೇ ಇದೆ.[9] ಅದೇನೇ ಇರಲಿ ಎಂದರೂ ಕಾವ್ಯಗಳೆಲ್ಲದರಲ್ಲಿಯೂ ಗ್ರಂಥಾಂತ್ಯಗದ್ಯವು ಅಶ್ವಘೋಷನನ್ನು 'ಸಾಕೇತಕ' ಎಂದರೆ ಅಯೋಧ್ಯಾಪ್ರಾಂತದವನೆಂದಿದೆ. ಬೌದ್ಧರ ಐತಿಹ್ಯಗಳೆಲ್ಲವೂ ಸರಿಯೆನ್ನುವಂತೆಯೂ ಇಲ್ಲ-ಏಕೆಂದರೆ ಅವನದೆಂದು ಹೇಳುವ ಎಷ್ಟೋ ಗ್ರಂಥಗಳು ಇತರಕೃತವೆಂದು ಪ್ರಮಾಣಿತವಾಗಿರುವ ಉದಾಹರಣೆಗಳುಂಟು. ಮೂರು ನಾಲ್ಕು ಅಶ್ವಘೋಷರ ಉಲ್ಲೇಖಗಳೂ ಉಂಟು.[10] ಶೈಲಿಯ ನಿರ್ಣಯವಂತೂ ವಿದ್ವಾಂಸರಿಗೆ ಅನುಕೂಲಸಿಂಧುವೆನ್ನುವಂತಾಗಿದೆ. ಕಾಳಿದಾಸನ ಶೈಲಿ ಅಶ್ವಘೋಷನ ಶೈಲಿಗಿಂತ ಪರಿಷ್ಕೃತ. ಅತ ಏವ ಉತ್ತರಕಾಲೀನ ಎಂದು

---

8. ಈ ವಿವಿಧ ಚರ್ಚೆಗಳಿಗೆ ಶ್ರೀ ಎಂ. ಲಕ್ಷ್ಮೀನರಸಿಂಹಯ್ಯನವರ ಕಾಳಿದಾಸ' (ಮೈಸೂರು ವಿಶ್ವವಿದ್ಯಾಲಯ ಗ್ರಂಥಮಾಲೆ) ನೋಡಿ.

9. ವಿವರಗಳಲ್ಲಿ ಕುತೂಹಲವುಳ್ಳವರು ಡಾ॥ ಬಿ. ಸಿ. ಲಾ. ಅವರ Aśvaghosa, Royal Asiatic Society of Bengal, Monograph Series, Vol. I. (1946) ನ್ನು ನೋಡಿ.

10. ಉದಾಹರಣೆಗೆ 'ವಜ್ರಸೂಚಿ' ಯೆಂಬ ಗ್ರಂಥ ಧರ್ಮಕೀರ್ತಿಕೃತವೆಂದೂ ಬರೆದಿದೆ; ಕಲ್ಪನಾಮಂಡಿತಿಕಾ ಎಂಬ ಗ್ರಂಥ 'ಸೂತ್ರಾಲಂಕಾರ'ದ ಪೂರ್ವರೂಪ. ಇದು ಕುಮಾರಲಾತಕೃತ, ಅಶ್ವಘೋಷಕೃತವಲ್ಲವೆಂದು ಡಾ॥ ಲಾಯ್ಡರ್ಸ್‌ರ ನಿರ್ಣಯ.

ಸಾಧಾರಣವಾಗಿ ಪಾಶ್ಚಾತ್ಯರು ಸಾಧಿಸಿದರೆ,[11] ತದ್ವಿರುದ್ಧವಾಗಿ ಅಶ್ವಘೋಷನ ಶೈಲಿಯೇ ಕಾಲಿದಾಸನದಕ್ಕಿಂತ ಹೆಚ್ಚು ಪರಿಷ್ಕೃತ ಎಂದು ಸಾಧಿಸುವ ಅನೇಕ ಭಾರತೀಯ ವಿದ್ವಾಂಸರಿದ್ದಾರೆ.[12] ಅಶ್ವಘೋಷನು ಬಾಯಿಬಿಟ್ಟು ತನ್ನ ಮುಖ್ಯ ಉದ್ದೇಶ ಧರ್ಮಪ್ರಚಾರ; ಕಾವ್ಯವಲ್ಲ ಎಂದಿರುವುದರಿಂದ[13] ಕಾಳಿದಾಸನನ್ನು ಅವನು ಅನುಸರಿಸಿರಬಹುದೇ ಹೊರತು ಮುಖ್ಯವಾಗಿ ಕವಿಯಾದ ಕಾಳಿದಾಸನು ಬೌದ್ಧ ಪ್ರಚಾರಕನೊಬ್ಬನ ಶೈಲಿಯನ್ನು ಅನುಕರಣ ಮಾಡುವುದು ಅಸಂಭವವೆನ್ನುತ್ತಾರೆ. ಇಷ್ಟೆಲ್ಲ ಸಂದೇಹಗಳ ನಡುವೆ, ಮಧ್ಯ ಏಷಿಯಾದ ಮರುಭೂಮಿಯಲ್ಲಿ ಅಶ್ವಘೋಷನ ನಾಟಕಾವಶೇಷಗಳನ್ನು ಗೊತ್ತು ಹಚ್ಚಿದ ಡಾ|| ಲಾಯ್ಡರ್ಸ್ ಅವರು ಆ ಲಿಪಿಗಳು ಕನಿಷ್ಕನ ಕಾಲಕ್ಕಿಂತ ಅರ್ವಾಚೀನವಲ್ಲವೆಂದು ಹೇಳುವುದು ಗಮನೀಯವಾದ ಸಂಗತಿ. ಅಲ್ಲದೆ ಕಾಳಿದಾಸನನ್ನು ಗುಪ್ತಕಾಲೀನನೆಂಬುದೇ ಇಂದು ಬಹು ಜನಸಮ್ಮತವಾದ ಮತ. ಈ ಕಾರಣಗಳಿಂದ ಬೌದ್ಧ ಮಹಾಕವಿಯಾದ ಅಶ್ವಘೋಷನನ್ನು ಇಲ್ಲಿ ಕಾಳಿದಾಸನಿಗಿಂತ ಪೂರ್ವವರ್ತಿಯೆಂದು ಭಾವಿಸಲಾಗಿದೆ.

ಪ್ರಸ್ತುತ ಅಶ್ವಘೋಷನ ವಿಷಯವಾಗಿ ನಿಸ್ಸಂದಿಗ್ಧವಾಗಿ ಗೊತ್ತಿರುವುದಿಷ್ಟೆ · ಅವನು ಸುವರ್ಣಾಕ್ಷಿಯ ಪುತ್ರ ಮತ್ತು ಸಾಕೇತಕ; ಭಿಕ್ಷು ಮತ್ತು ಆಚಾರ್ಯ, 'ಭದಂತ' ಅಥವಾ ಬೌದ್ಧ, ಮಹಾಕವಿ ಮತ್ತು

---

11. Keith, Winternitz, Johnston ಇತ್ಯಾದಿ.

12. ಅಪ್ಪಾಶಾಸ್ತ್ರಿ ರಾಶಿವಡೆಕರ್, ಕೆ. ಚಟ್ಟೋಪಾಧ್ಯಾಯ, ಕೆ ಎಂ ಶೆಂಭವಣೇಕರ, ಡಾ|| ಸುರೇಂದ್ರನಾಥ ದಾಸಗುಪ್ತ ಇತ್ಯಾದಿ.

13. ಇತ್ಯೇಷಾ ವ್ಯುಪಶಾಂತಯೇ ನ ರತಯೇ ಮೋಕ್ಷಾರ್ಥಗರ್ಭಾ ಕೃತಿಃ
ಶ್ರೋತೄಣಾಂ ಗ್ರಹಣಾರ್ಥಮನ್ಯಮನಸಾಂ ಕಾವ್ಯೋಪಚಾರಾತ್ ಕೃತಾ।
ಯನ್ಮೋಕ್ಷಾತ್ ಕೃತಮನ್ಯದತ್ರ ಹಿ ಮಯಾ ತತ್ ಕಾವ್ಯಧರ್ಮಾತ್ ಕೃತಂ
ಪಾತುಂ ತಿಕ್ತಮಿವೌಷಧಂ ಮಧುಯುತಂ ಹೃದ್ಯಂ ಕಥಂ ಸ್ಯಾದಿತಿ ॥
(ಸೌಂದರನಂದ XVIII, 63)

. . 'ಕಾವ್ಯವ್ಯಾಜೇನ ತತ್ತ್ವಂ ಕಥಿತಮಿಹ ಮಯಾ ಮೋಕ್ಷಃ ಪರಮಿತಿ...
(XVIII, 64)

ಮಹಾವಾದಿ.[14] ಅವನ ಮಹಾಕಾವ್ಯಗಳು.—೧. ಬುದ್ಧಚರಿತ ೨. ಸೌಂದರನಂದ. **ನಾಟಕ** : ೧. ಶಾರಿಪುತ್ರ(= ಶಾರದ್ವತೀಪುತ್ರ) ಪ್ರಕರಣ. ಅವನ ಕಾಲ ಕ್ರಿ.ಶ ೫ ನೆಯ ಶತಮಾನಕ್ಕಿಂತ ಈಚೆ ಅಲ್ಲ, ಕ್ರಿ.ಪೂ, ೩ ನೆಯ ಶತಮಾನಕ್ಕಿಂತ ಹಿಂದೆ ಅಲ್ಲ(ಅಶೋಕನ ಉಲ್ಲೇಖವಿರುವುದರಿಂದ). ವೇದಶಾಸ್ತ್ರಗಳು, ಪುರಾಣೇತಿಹಾಸಗಳು, ರಾಮಾಯಣ ಮಹಾಭಾರತಗಳು, ಎಲ್ಲವುಗಳ ಸೂಕ್ಷ್ಮ ಪರಿಚಯವು ಕಾವ್ಯಗಳಲ್ಲಿ ಕಾಣುವುದರಿಂದ ಅಶ್ವಘೋಷನು ಮೊದಲು ಬ್ರಾಹ್ಮಣನಾಗಿದ್ದು ಆಮೇಲೆ ಬೌದ್ಧನಾದನೆಂಬ ಐತಿಹ್ಯ ನಿಜವಿರಬಹುದು.

**ಬುದ್ಧಚರಿತ : ಕಥಾವಸ್ತು** —

**ಭಗವತ್ಪ್ರಸೂತಿ** :—ಪ್ರಸಿದ್ಧವಾದ ಇಕ್ಷ್ವಾಕುವಂಶದ ಶಾಕ್ಯಕುಲದಲ್ಲಿ ಹುಟ್ಟಿದ ಶುದ್ಧೋದನ ರಾಜನಿಗೆ ಕಪಿಲವಸ್ತು ರಾಜಧಾನಿ, ಮಾಯಾದೇವಿ ರಾಣಿ. ರಾಣಿಗೆ ಒಂದು ದಿನ ಅದ್ಭುತ ಸ್ವಪ್ನವಾಗುತ್ತದೆ, ಬಿಳಿಯ ಗಜರಾಜನು ತನ್ನ ಹೊಟ್ಟೆಯನ್ನು ಹೊಕ್ಕಂತೆ. ಗರ್ಭವತಿಯಾಗುತ್ತಾಳೆ. ವನವಿಹಾರದ ಬಯಕೆಯಾಗಿ, ರಾಜನೊಡನೆ ಲುಂಬಿನೀವನಕ್ಕೆ ಬಂದಿರುವಾಗ ಆಕೆಯ ಪಾರ್ಶ್ವದಿಂದಲೇ ಮಗನು ಹುಟ್ಟುತ್ತಾನೆ—ಆಕೆಗೆ ವೇದನೆಯೇ ಇಲ್ಲದಂತೆ. ಅವನ ತೇಜಸ್ಸು ಬಾಲಸೂರ್ಯನಂತೆಯೂ ಚೆಲ್ವು ಬಾಲಚಂದ್ರನಂತೆಯೂ ಇದೆ. ದಿಗ್ದಿಗಂತಗಳೆಲ್ಲವೂ ಬೆಳಗಿವೆ. ಸಪ್ತರ್ಷಿ ತಾರೆಗಳಂತೆ ಅವನು ಏಳು ಹೆಜ್ಜೆಗಳನ್ನು ಹುಟ್ಟಿದವನೇ ನಡೆಯುತ್ತಾನೆ. ಸಿಂಹಗತಿಯಿಂದ ನಾಲ್ಕೂ ದಿಕ್ಕುಗಳನ್ನು ನೋಡಿ ಹೀಗೆ ನುಡಿಯುತ್ತಾನೆ :— 'ಜಗತ್ತಿನ ಹಿತಕ್ಕಾಗಿ ಜ್ಞಾನವನ್ನು ಪಡೆಯಲು ಜನಿಸಿದ್ದೇನೆ. ಇದೇ ನನಗೆ ಕಡೆಯ ಜನ್ಮ!' ಆತನ ತಲೆಯಮೇಲೆ ಆಕಾಶದಿಂದ ಒಂದು ಶೀತ, ಒಂದು ಉಷ್ಣ, ಹೀಗೆ ಎರಡು ಜಲಧಾರೆಗಳು ಸುರಿಯುತ್ತವೆ. ದೇವತೆಗಳು ಅವನ ಮೇಲೆ ಬೆಳ್ಗೊಡೆಯನ್ನು ಹಿಡಿಯುತ್ತಾರೆ, ಆಶೀರ್ವಾದ ಮಾಡುತ್ತಾರೆ. ಮಹೋರಗರು ಮಂದಾರಪುಷ್ಪಗಳನ್ನು ಎರಚುತ್ತಾರೆ. ಗಿರಿರಾಜಗಳುಳ್ಳ ಭೂಮಿಯೇ ವಾತಾಹತವಾದ ನೌಕೆಯಂತೆ ಚಲಿಸುತ್ತದೆ. ಅನಭ್ರವಾದ ಗಗನದಿಂದ ಚಂದನರಸದ ಮಳೆ ಸುರಿಯುತ್ತದೆ. ವೈಗಿಂಪಾದ

---

14. 'ಆರ್ಯಸುವರ್ಣಾಕ್ಷೀಪುತ್ರಸ್ಯ ಸಾಕೇತಕಸ್ಯ ಭಿಕ್ಷೋರಾಚಾರ್ಯಸ್ಯ ಭದಂತಾಶ್ವಘೋಷಸ್ಯ ಮಹಾಕವೇರ್ಮಹಾವಾದಿನಃ ಕೃತಿರಿಯಮ್' ಎಂಬ ಸರ್ಗಾಂತ್ಯಗದ್ಯಗಳನ್ನು ನೋಡಿ.

ಗಾಳಿಗಳು ಬೀಸಿ ದಿವ್ಯ ವಸ್ತ್ರಗಳನ್ನು ಕೊಡುತ್ತವೆ. ಸೂರ್ಯನ ಬೆಳಕು ಹೆಚ್ಚಿತಲ್ಲದೆ ಹೊತ್ತಿಸದೆಯೇ ಸೌಮ್ಯಶಿಖೆಗಳಿಂದ ಬೆಂಕಿಯುರಿಯುತ್ತದೆ. ಉತ್ತರದ ಕಡೆ ನಿರ್ಮಲೋದಕದ ಸರೋವರವು ತಾನಾಗಿ ಹುಟ್ಟುತ್ತದೆ. ಸಕಲ ದೇವದೇವತೆಗಳೂ ಆತನ ಪುಣ್ಯದರ್ಶನಕ್ಕೆಂದು ನೆರೆಯುತ್ತಾರ.

ಪ್ರಾಣಿಗಳ ವೈರವೂ ಶಾಂತವಾಗಿತ್ತು. ಮಾನವರ ರೋಗರುಜಿನಗಳು ದೂರವಾದುವು. ಮೃಗಪಕ್ಷಿಗಳು ಇಂಚರದಿಂದ ಗಾನಮಾಡುತ್ತಿದ್ದುವು. ದಿಕ್ಕುಗಳು ನಿರ್ಮಲವಾದುವು; ಮಾರ (Satan) ನಿಗೆ ಮಾತ್ರ ದುಃಖವಾಯಿತು. ಮಗನ ಈ ಅದ್ಭುತ ಜನನದಿಂದ ತಂದ ತಾಯಿಗಳಿಗೆ ಆನಂದದಂತೆ ಭಯ ವೂ ಉಂಟಾಯಿತು. ಬ್ರಾಹ್ಮಣರನ್ನು ಕರೆಸಿ ಕೇಳಿದನು ಅವರೆಂದರು:—'ಇವನು ಪುತ್ರರತ್ನವೇ ಸರಿ. ಲಕ್ಷಣಗಳನ್ನು ನೋಡಿದರೆ ಇವನು ಮಹಾ ಜ್ಞಾನಿಯಾಗುತ್ತಾನೆ ಇಲ್ಲವೆ ಚಕ್ರವರ್ತಿಯಾಗುತ್ತಾನೆ. ಸಾಮ್ರಾಜ್ಯವನ್ನು ಬಯಸಿದರೆ ರಾಜರನ್ನೆಲ್ಲ ಗೆದ್ದು ಗ್ರಹಗಳ ನಡುವೆ ಸೂರ್ಯನಂತೆ ಬೆಳಗುವನು, ಮೋಕ್ಷವನ್ನು ಬಯಸಿದರೆ ಜ್ಞಾನಸಿಧಿಯಾಗಿ ಪರ್ವತಗಳ ನಡುವೆ ಗಿರಿರಾಜನಾದ ಮೇರುವಿನಂತೆ ಸ್ಥಿರನಾಗುವನು.' ರಾಜನಿಗೆ ಇನ್ನೂ ನಂಬಿಕೆಯಿಲ್ಲ. ಪೂರ್ವದಲ್ಲೆಂದೂ ಕೇಳಿ ಕಾಣದ ಸಂಗತಿ ನಿಜವೋ ಅಲ್ಲವೋ ಎಂದು ಚಿಂತೆ. ಅವರು ಅನೇಕ ಪುರಾಣದ ನಿದರ್ಶನಗಳನ್ನು ಕೊಟ್ಟು ತಂದೆ ಕಂಡು ಕೇಳದ್ದನ್ನು ಮಗ ಮಾಡಬಹುದೆಂದು ತೋರಿಸುತ್ತಾರೆ. (ಭೃಗ, ಅಂಗಿರ ಇಬ್ಬರೂ ಮಾಡದ ರಾಜಶಾಸ್ತ್ರವನ್ನು ಅವರ ಮಕ್ಕಳಾದ ಶುಕ್ರ, ಬೃಹಸ್ಪತಿಗಳು ಬರೆದರು. ವಸಿಷ್ಠ ಮಾಡದಿದ್ದುದನ್ನು ವ್ಯಾಸ ಮಾಡಿದ, ಚ್ಯವನ ಬರೆಯದ ರಾಮಾಯಣವನ್ನು ವಾಲ್ಮೀಕಿ ಬರೆದ, ಇತ್ಯಾದಿ) ಅವರನ್ನು ಸತ್ಕರಿಸಿ ಕಳುಹಿಸಿಯಾಯಿತು. ಅಷ್ಟರಲ್ಲಿಯೇ ತನ್ನ ತಪೋಬಲದಿಂದ ಬುದ್ಧನ ಜನ್ಮವನ್ನರಿತು ಅವನಿಗೆ ಪ್ರಣಾಮಮಾಡಲು ಅಸಿತನೆಂಬ ಋಷಿ ಬರುತ್ತಾನೆ. ಅವನಿಗೆ ರಾಜನಿಂದ ಬೇಕಾದ ಆತಿಥ್ಯವಾಗುತ್ತದೆ. ಕುಶಲಪ್ರಶ್ನೆಯ ನಂತರ ಶಿಶುವನ್ನು ತೋರಿಸುತ್ತಾರೆ. ಬುದ್ಧನ ಲಕ್ಷಣಗಳೆಲ್ಲವೂ ಇವೆ ಶಿಶುವಿನಲ್ಲಿ. ದೇವಿಯ ತೊಡೆಯಮೇಲೆ ಶೋಭಿಸುವ ಷಣ್ಮುಖಸ್ವಾಮಿಯಂತೆ ಹೊಳೆಯುತ್ತಿದ್ದಾನೆ ಬುದ್ಧ ಶಿಶು. ನೋಡುತ್ತಿದ್ದಂತೆ ಋಷಿಯ ಕಣ್ಣಿನಲ್ಲಿ ನೀರು ತೊಟ್ಟುತ್ತದೆ, ಆಕಾಶದ ಕಡೆ ನೋಡುತ್ತಾ ನಿಲ್ಲುತ್ತಾನೆ.

ತಂದೆ ಭಯದಿಂದ ನಡುಗುತ್ತಾ ಏನಾದರೂ ಅಲ್ಪಾಯುಷ್ಯಯೋಗವೋ ಎಂದು ದುಃಖದಿಂದ ಋಷಿಯನ್ನು ಕೇಳುತ್ತಾನೆ. 'ಹಾಗಲ್ಲ. ನನ್ನ ಶೋಕ ನನ್ನನ್ನೇ ಕುರಿತದ್ದು. ಜನ್ಮ ಕ್ಲೇಶವನ್ನು ತಪ್ಪಿಸುವ ಸದ್ಧರ್ಮವನ್ನು ಈತ ಲೋಕಕ್ಕೆ ಸಾರುತ್ತಾನೆ, ಅದನ್ನು ಕೇಳುವ ಭಾಗ್ಯ ಈಗಲೇ ವೃದ್ಧನಾದ ನನಗೆ ಇಲ್ಲ. ಜಗತ್ತಿನ ಮೋಹತಮವನ್ನು ಸಂಹರಿಸುವ ಜ್ಞಾನಮಯ ಸೂರ್ಯನೇ ಇವನು. ವ್ಯಾಧಿಯೆಂಬ ನೊರೆ, ಜರೆಯೆಂಬ ತೆರೆ, ಮರಣವೆಂಬ ರಭಸಗಳಿಂದ ಕೂಡಿದ ದುಃಖಾರ್ಣವದಿಂದ ಜಗತ್ತನ್ನು ಜ್ಞಾನಪ್ಲವದಿಂದ ಇವನು ಪಾರಗಾಣಿಸುತ್ತಾನೆ. ಪ್ರಜ್ಞಾಸಲಿಲಮಯವೂ, ಶೀಲತಟನಿಯೂ ಸಮಾಧಿಶೀತಲವೂ, ಆದ ಈತನ ಧರ್ಮನದಿಯನ್ನು ತೃಷ್ಣಾಕುಲವಾದ ಜೀವಲೋಕವು ಕುಡಿದು ತಣಿಯುವುದು. ದಾರಿತಪ್ಪಿದವರಿಗೆ ದಾರಿ ತೋರಿಸುವಂತೆ, ದುಃಖಾತುರರೂ, ವಿಷಯಾವೃತರೂ, ಸಂಸಾರಕಾಂತಾರ ನಿಮಗ್ನರೂ ಆದವರಿಗೆ ಇವನು ಮೋಕ್ಷಮಾರ್ಗವನ್ನು ತಿಳಿಸುತ್ತಾನೆ. ರಾಗಾಗ್ನಿಯಿಂದ ಬೇಯುತ್ತಿರುವವರಿಗೆ ಧರ್ಮವೃಷ್ಟಿಯನ್ನು ಕರೆಯುತ್ತಾನೆ. ಆಸೆಯೆಂಬ ಅಗುಳಿಯುಳ್ಳ ಅಜ್ಞಾನವೆಂಬ ಬಾಗಿಲನ್ನು ಸದ್ಧರ್ಮವೆಂಬ ಬೀಗದ ಕೈಯಿಂದ ಇವನು ತೆರೆದುಕೊಡುತ್ತಾನೆ. ಲೋಕವನ್ನು ಬಂಧನದಿಂದ ಬಿಡಿಸುವ ಧರ್ಮರಾಜನಾಗುತ್ತಾನೆ. ಇವನ ಧರ್ಮವನ್ನು ಕೇಳುವ ಯೋಗವಿಲ್ಲದವನೇ ಅಧನ್ಯ. ಸ್ವರ್ಗಸುಖವೂ ಅದರ ಮುಂದೆ ವ್ಯರ್ಥ.' ಇಷ್ಟನ್ನು ಹೇಳಿ ಅಸಿತನು ಆಕಾಶಮಾರ್ಗವಾಗಿ ಹೊರಟುಹೋಗುತ್ತಾನೆ.

ಮಗನು ಋಷಿಯಾಗುವನೆಂದು ಶುದ್ಧೋದನನಿಗೆ ಚಿಂತೆಯೊದಗಿತು. ಕುಲಕ್ರಮಾನುಸಾರ ಜಾತಸಂಸ್ಕಾರಗಳನ್ನೇನೋ ಮುಗಿಸಿದನು. ಸುಮುಹೂರ್ತದಲ್ಲಿ ಪುರಪ್ರವೇಶ ಮಾಡಿದನು. ಊರಿನವರೆಲ್ಲರೂ ಆನಂದದಿಂದ ನಲಿದರು. (ಸರ್ಗ ೧)

**ಅಂತಃಪುರ ವಿಹಾರ**—ರಾಜನ ಧನಧಾನ್ಯ ಗಜಾಶ್ವಾದಿ ಸಮೃದ್ಧಿ ಅಭೂತಪೂರ್ವವಾಗಿ ಬೆಳೆಯಿತು. ಶಾಂತಿ ಸುಭಿಕ್ಷಗಳು ಸಂಪೂರ್ಣವಾಗಿ ನೆಲೆಸಿದುವು. ಶತ್ರುಗಳೆನ್ನುವವರೇ ಇರಲಿಲ್ಲ. ಯಾವಾಗಲೂ ಸುವೃಷ್ಟಿಯೇ. ಶ್ರಮವಿಲ್ಲದೆಯೇ ಬೆಳೆಗಳಾಗುತ್ತಿದ್ದವು. ಪ್ರಜೆಗಳು ಯಾವಾಗಲೂ ಆನಂದಭರಿತರಾಗಿರುತ್ತಿದ್ದರು. ಹಿಂದಿನ ಯಯಾತಿ, ನಹುಷರ ಆಳಿಕೆಯಂತೆಯೇ

ದೇಶವು ಉನ್ನತಿಯನ್ನು ಪಡೆದಿತ್ತು ಎಲ್ಲೆಲ್ಲಿಯೂ ದೇವಾಲಯ, ಉದ್ಯಾನ, ಆರಾಮಗಳು, ಕೊಳ, ಕೆರೆ, ಪುಷ್ಕರಿಣಿಗಳು. ಪ್ರತ್ಯಕ್ಷ ಸ್ವರ್ಗದಂತಿತ್ತು ಕಪಿಲವಸ್ತು. ಕಳ್ಳತನ, ವ್ಯಭಿಚಾರ, ಕೊಳ್ಳೆ, ಒಂದೂ ಇರಲಿಲ್ಲ. ಎಲ್ಲೆಲ್ಲಿಯೂ ಹರ್ಷ ಹೆಚ್ಚಿತು, ಪಾಪ ಸತ್ತಿತು, ಧರ್ಮ ಬೆಳಗಿತು; ದೋಷವಳಿಯಿತು. ಹೀಗೆ ಸರ್ವಾರ್ಥಸಿದ್ಧಿ ಬಂದುದರಿಂದ ಶುದ್ಧೋದನನು ಮಗನಿಗೆ ಸರ್ವಾರ್ಥಸಿದ್ಧನೆಂದೇ ಹೆಸರಿಟ್ಟನು. ತನ್ನ ಸಂತೋಷಾತಿರೇಕವನ್ನು ತಡೆದುಕೊಳ್ಳಲಾರದೆಯೋ ಎನ್ನುವಂತೆ ತಾಯಿ ಮಾಯಾದೇವಿ ದಿವಂಗತೆಯಾದಳು ಮಗುವನ್ನು ತಾಯಿಯ ತಂಗಿ ಮಗನಿಗಿಂತ ಹೆಚ್ಚಾಗಿ ಪಾಲಿಸುತ್ತಿದ್ದಳು.

ಶುಕ್ಲಪಕ್ಷದ ಚಂದ್ರನಂತೆ ಬಾಲಕನು ಬೆಳೆದನು. ಬಗೆಬಗೆಯ ಆಟಿಗೆಗಳನ್ನೂ ವಸ್ತುವಿಭೂಷಣಗಳನ್ನೂ ಅವನಿಗಾಗಿ ತರಿಸಿದ್ದರು. ಬಾಲ್ಯದಲ್ಲಿಯೇ ಎಲ್ಲ ವಿದ್ಯೆಗಳಲ್ಲೂ ಅವನು ಪಾರಂಗತನಾದನು. **ಅಸಿತ** ಹೇಳಿದ್ದ ಭವಿಷ್ಯ ನಿಜವಾಗದೆ ಇರಲೆಂದು ಅರಸನು ಬಾಲಕನಿಗೆ ಕಾಮವರ್ಧಕವಾದ ಸನ್ನಿವೇಶವನ್ನು ಮಾತ್ರ ಶ್ರಮಪಟ್ಟು ಕಲ್ಪಿಸಿದ್ದನು ಯಶೋಧರೆಯೆಂಬ ಸಾಧ್ವೀಮಣಿಯನ್ನು ತಂದು ವಿವಾಹ ಮಾಡಿದನು. ಅವಳೊಡನೆ ಬುದ್ಧನು ವಿಹರಿಸುತ್ತ ಕಾಲ ಕಳೆಯುತ್ತಿದ್ದನು. ಅರಮನೆಯ ಮೇಲುಪ್ಪರಿಗೆಯೇ ಅವನ ವಾಸಗೃಹ, ಕೆಳಗಿಳಿಯುವುದಕ್ಕೂ ಅವನಿಗೆ ಅವಕಾಶವಿರಲಿಲ್ಲ ಯಾವಾಗಲೂ ಸುಂದರಿಯರ ಸಂಗೀತ, ನೃತ್ಯ, ಕ್ರೀಡೆಗಳೇ ಅಲ್ಲಿ ನಡೆಯುತ್ತಿದ್ದವು, ಹೀಗಿದ್ದರೂ ಅವನು ಅಧೀರರಂತೆ ಕಾಮದಲ್ಲಿ ಮುಳುಗಲಿಲ್ಲ, ಮೋಹದಲ್ಲಿ ಮೈಮರೆಯಲಿಲ್ಲ. ಇಂದ್ರಿಯಗಳನ್ನು ಹತೋಟಿಯಲ್ಲಿಯೇ ಇಟ್ಟಿದ್ದನು ಬಂಧುಗಳಿಗೂ ಪೌರರಿಗೂ ತನ್ನ ಗುಣಗಳಿಂದ ಅಚ್ಚುಮೆಚ್ಚಾಗಿದ್ದನು. ಹಿಂಸೋಪಯೋಗಿ ವಿದ್ಯೆಯನ್ನು ಕಲಿಯಲಿಲ್ಲ, ಶುಭಕರವಾದುದನ್ನು ಬಿಡಲಿಲ್ಲ. ಸರ್ವರಿಗೂ ಕಲ್ಯಾಣವೊಂದನ್ನೇ ಚಿಂತಿಸುತ್ತಿದ್ದನು ದೇವಗುರುಪೂಜೆಯನ್ನು ಯಥಾವಿಧಿ ಮಾಡುತ್ತಿದ್ದನು ಅಪರಾಧಿಗಳನ್ನು ಕಂಡರೂ ಕರುಣೆ ತೋರುತ್ತಿದ್ದನು. ಯಾವಾಗಲೂ ಕೋಪವನ್ನು ಕಂಡಿರಲಿಲ್ಲ. ಅವನ ಮಾದರಿಯಿಂದ ಪ್ರಜೆಗಳೂ ಗುಣಾನ್ವಿತರಾಗಿದ್ದರು.

ಇಷ್ಟರಲ್ಲಿ ರಾಹುಲನೆಂಬ ಮಗನು ಹುಟ್ಟಿದನು. ಶುದ್ಧೋದನನಿಗೆ ಪರಮಾನಂದವಾಯಿತು, ಪುತ್ರಸ್ನೇಹದಿಂದಲಾದರೂ ಮಗನ ವನವಾಸ

ತಪ್ಪೇತೆಂದು. ಅನೇಕ ಮಂಗಳ ಮಹೋತ್ಸವಗಳು ಅರಮನೆಯಲ್ಲಿ ಜರುಗಿದವು. (ಸರ್ಗ ೨)

**ಸಂವೇಗೋತ್ಪತ್ತಿ**: ಹೀಗೆಯೇ ಕೆಲವು ಕಾಲ ಕಳೆಯಿತು. ಒಂದು ದಿನ ಬುದ್ಧನಿಗೆ ಯಾರೋ ವನಾಂತಗಳ ಸೌಂದರ್ಯವನ್ನು ವರ್ಣಿಸಿದರು. ನೋಡಬೇಕೆಂಬ ಇಚ್ಛೆಯಾಯಿತು. ಪುತ್ರ ಬೇರೆಯಲ್ಲ, ತನ್ನ ಮನಸ್ಸು ಬೇರೆಯಲ್ಲವೆಂಬಂತಿದ್ದ ರಾಜ ಒಡನೆಯೇ ಮಗನ ವಿಹಾರಯಾತ್ರೆಗೆ ಏರ್ಪಡಿಸಿದ. ಕುಮಾರನ ಸುಕುಮಾರ ಚಿತ್ತಕ್ಕೆ ಯಾವ ಸಂವೇಗವೂ ಬರಬಾರದೆಂದು ರಾಜಮಾರ್ಗದಲ್ಲಿ ಅಂಗಹೀನರು, ವಿಕಲೇಂದ್ರಿಯರು, ರೋಗಿಗಳು, ಮುದುಕರು ಮುಂತಾದವರು ಕಾಣಿಸದಂತೆ ವಿಶೇಷ ವ್ಯವಸ್ಥೆ ಮಾಡಿದ. ಭವ್ಯವಾಗಿ ಮೆರವಣಿಗೆಗೆ ಎಲ್ಲೆಲ್ಲೂ ಅಲಂಕಾರಗಳಾಗಿದ್ದುವು. ಮನಸ್ಸಿಲ್ಲದ ಮನಸ್ಸಿನಿಂದ ಕುಮಾರನನ್ನು ಕಳುಹಿಸಿದ. ನಾಲ್ಕು ಕುದುರೆಗಳಿಂದ ಶೃಂಗರಿಸಿದ ಸ್ವರ್ಣರಥದಲ್ಲಿ ಕುಳಿತ ಕುಮಾರನ ಮೆರವಣಿಗೆ ಹೊರಟಿತು. ಹೂಮಾಲೆಗಳಿಂದಲೂ ಬಾವುಟಗಳಿಂದಲೂ ಹೊಳೆಯುತ್ತಿದ್ದ ರಸ್ತೆಯಲ್ಲಿ ಕುಮಾರ ಹೊರಟರೆ ನಕ್ಷತ್ರಮಯವಾದ ಅಂತರಿಕ್ಷದಲ್ಲಿ ಚಂದ್ರ ಹೊರಟಂತಿತ್ತು. ನೋಡುವ ಜನ ಕಿಕ್ಕಿರಿದು ತುಂಬಿದರು. ಮುಖ ಕಾಣದವರೂ ದೇವರ ರಥದ ಬಾವುಟಕ್ಕೆ ಕೈಮುಗಿಯುವಂತೆ ಮುಗಿಯುತ್ತಿದ್ದರು. ಹೆಂಗಸರಂತೂ ಹೇಗಿದ್ದರೆ ಹಾಗೆ ಕೆಲಸವನ್ನು ಬಿಟ್ಟು ಓಡಿಬಂದರು. ಒಂದು ಅಂಗದ ಆಭರಣವನ್ನು ಇನ್ನೊಂದಕ್ಕೆ ಹಾಕಿಕೊಂಡವರೆಷ್ಟು ಜನವೋ! ಒಬ್ಬೊಬ್ಬರಮೇಲೆ ಬಿದ್ದು ಒದ್ದಾಡಿಕೊಂಡು ಬಂದವರೆಷ್ಟು ಜನವೋ! ಮೈಯ ಭಾರದಿಂದ ನಡೆಯಲಾಗದಿದ್ದರೂ ನಡೆದು ಬಂದವರೆಷ್ಟು ಜನವೋ! ಅರೆ ಬೆತ್ತಲೆಯಾದವರೂ ಅಲ್ಲಿ ಇದ್ದರು. ಅರ್ಧಾಲಂಕೃತೆಯರೂ ಇದ್ದರು. ಉಪ್ಪರಿಗೆಯ ಕಿಟಕಿಗಳಿಂದ ಚಾಚಿದ ಅವರ ಮುಖಗಳನ್ನು ನೋಡಿದರೆ ಮನೆಗಳಿಗೆ ಕಟ್ಟಿರುವ ಪದ್ಮಗಳ ತೋರಣವೇಯೋ ಎನ್ನಿಸುತ್ತಿತ್ತು. ಅಪ್ಸರೆಯರು ಬಂದಿರುವ ವಿಮಾನಗಳೇಯೋ ಎನಿಸುತ್ತಿದ್ದವು—ಉಪ್ಪರಿಗೆಗಳು. ಕುಮಾರನನ್ನೇ ನಟ್ಟ ಕಣ್ಣಿನಿಂದ ನೋಡುತ್ತಿದ್ದ ಅವರು ಭೂಮಿಗಿಳಿಯ ಬಾಶಿಸುವ ದೇವಸ್ತ್ರೀಯರಂತಿದ್ದರೆ ಕೆಳಗಿನಿಂದ ಕತ್ತೆತ್ತಿ ಕುಮಾರನನ್ನು ನೋಡುವವರು ಸ್ವರ್ಗಕ್ಕೆ ಹೋಗಲೆಳಸುವ ಜನರಂತಿದ್ದರು. ‘ಇವನು

ಹೆಂಡತಿ ಧನ್ಯೆ 'ಯೆಂದರು ಕೆಲವರು. ಉಳಿದವರು ಇಂತಹ ಮನ್ಮಥರೂಪನು ವನಕ್ಕೆ ಹೋಗುವನಲ್ಲಾ ಎಂದು ಗೌರವಿಸಿದರು. ಕುಮಾರನ ಮನಸ್ಸು ಕ್ಷಣಕಾಲ ಪ್ರಸನ್ನವಾಯಿತು.

ಆದರೆ ಶುದ್ಧಾತ್ಮರಾದ ದೇವತೆಗಳಿಗೆ ಇದು ಇಷ್ಟವಿರಲಿಲ್ಲ. ಅವರೊಬ್ಬ ಮುದುಕನನ್ನು ಕಳಿಸಿದರು. ಕುಮಾರನು ಅವನನ್ನು ನೋಡಿದೊಡನೆ ಮನಸ್ಸಿನಲ್ಲಿ ಅಂಜಿ ಸಾರಥಿಯನ್ನು ಕೇಳಿದ :—' ಬಿಳಿಯ ಕೂದಲು, ಹುಬ್ಬು ಕಣ್ಣನ್ನೇ ಮುಚ್ಚಿದೆ, ಶಿಥಿಲ ದೇಹ ; ಕೋಲೂರಿದ ಇವನಾರು ? ಇದೇನು ವಿಕಾರವೋ, ಸ್ವಭಾವವೋ, ಆಕಸ್ಮಿಕವೋ ?' ದೇವತೆಗಳು ಸಾರಥಿಯ ಮನಸ್ಸನ್ನು ಬಿಚ್ಚಿಹೇಳುವಂತೆ ಪ್ರೇರಿಸಿದರು, ಅವನೆಂದ :—' ಇದೇ ಮುಪ್ಪು ; ರೂಪದ ಹಗೆ ಮತ್ತು ಬಲದ ವೈರಿ ; ಶೋಕದ ಮೂಲ ಮತ್ತು ಸುಖದ ಕಡೆ ; ಸ್ಮರಣೆಯ ಅಂತ ಮತ್ತು ಇಂದ್ರಿಯಗಳ ಶತ್ರು. ನಮ್ಮಂತೆ ಇವನೂ ಶಿಶುವಾಗಿ ಸ್ತನ್ಯವುಂಡ, ಬಾಲನಾಗಿ ಅಂಬೆಗಾಲಿಟ್ಟ, ಯುವಕನಾಗಿ ಸುಖಿಸಿದ ; ಅದೇ ಕಾಲಕ್ರಮದಿಂದ ಈಗ ಮುದುಕನಾಗಿದ್ದಾನೆ.' ಕಾಲವಶದಿಂದ ಬರುವ ಮುಪ್ಪು ಯಾರನ್ನೂ ಬಿಡುವುದಿಲ್ಲವೆಂದು ತಿಳಿದೊಡನೆ ಅವನಿಗೆ ವೈರಾಗ್ಯ ಬಂದಿತು, ಪಕ್ಕದಲ್ಲಿ ಹೊಡೆದ ಸಿಡಿಲಿಗೆ ಬೆದರುವ ಹಸುವಿನಂತೆ ಹೆದರಿದ. ' ನನಗೆ ಉದ್ಯಾನ ವಿಹಾರ ಬೇಡ ! ರಥವನ್ನು ಮನೆಗೆ ಹಿಂತಿರುಗಿಸು ' ಎಂದು ಸಾರಥಿಗೆ ಅಪ್ಪಣೆಮಾಡಿದ. ಅಲ್ಲಿಯೂ ಅವನ ಮನಸ್ಸು ಚಡಪಡಿಸುತ್ತಲೇ ಇತ್ತು. ಮುಂದೆ ಇನ್ನೊಂದು ದಿನ ಹೀಗೆಯೇ ರಥದಲ್ಲಿ ಹೊರಟಾಗ ದೇವತೆಗಳ ಪ್ರಭಾವದಿಂದ ರೋಗಿಯ ದರ್ಶನವೂ ಆಯಿತು. ಹೊಟ್ಟೆಯುಬ್ಬಿ, ಉಸಿರಿಗೆ ಅಳ್ಳಾಡುವ, ದೇಹದ ಆ ಕೃಶಾಂಗನು ಅಮ್ಮಾ ! ಅಪ್ಪಾ ! ಎಂದು ನರಳುತ್ತಿದ್ದುದನ್ನು ಕಂಡೊಡನೆ ಸಾರಥಿ ಅವನಿಗೆ ' ಇದು ಧಾತುಪ್ರಕೋಪದಿಂದ ಬಂದು ಬೆಳೆಯುವ ಶರೀರಗತವಾದ ಪೀಡೆ. ಎಂಥ ಬಲಿಷ್ಠನನ್ನೂ ದುರ್ಬಲನನ್ನಾಗಿಸಿಬಿಡುತ್ತದೆ. ಇದು ಯಾರನ್ನೂ ಬಿಡತಕ್ಕುದಲ್ಲ, ' ಎಂದು ವಿವರಿಸಲೇಬೇಕಾಯಿತು. ಮೊದಲಿನಂತೆಯೇ ಕುಮಾರನ ಉದ್ವೇಗ ಅಸದಳವಾಯಿತು. ಈ ರೋಗಭಯವಿದ್ದರೂ ಜನರು ಹೇಗೆ ಸುಖಾಪೇಕ್ಷೆಯಲ್ಲಿ ಹೊತ್ತುಗಳೆಯುವರೆಂದು ಆಶ್ಚರ್ಯಪಡುತ್ತಾ ಅರ್ಧದಾರಿಯಿಂದಲೇ ಹಿಂದಿರುಗಿದನು.

ಅರಸನಿಗೂ ಚಿಂತೆಯಾಯಿತು. ಮೂರನೆಯ ಸಲವಾದರೂ ಹೀಗಾಗ ದಂತೆ ಮತ್ತೂ ವ್ಯವಸ್ಥೆಗಳನ್ನು ಮಾಡಿ ಕುಮಾರನನ್ನು ಕಳುಹಿಸಿದ. ಆದರೆ ದೇವತೆಗಳು ಆಗಲೂ ಬಿಡಲಿಲ್ಲ; ನಾಲ್ಕು ಜನರ ಹೊತ್ತುಕೊಂಡು ಹೋಗು ತ್ತಿದ್ದ ಮೃತದೇಹವೇ ಕುಮಾರನ ಕಣ್ಣಿಗೆ ಬಿದ್ದಿತು. 'ಬುದ್ಧಿ, ಇಂದ್ರಿಯ, ಪ್ರಾಣ, ಎಲ್ಲ ತೊಲಗಿದ ಈ ದೇಹ ಸೌದೆಗೆ ಸಮಾನ. ಪಾಲಿಸಿ, ಪೋಷಿಸಿದ ಬಾಂಧವರೇ ಇದನ್ನೀಗ ತೊರೆದು ಸುಡಲು ಹೋಗುತ್ತಿದ್ದಾರೆ' ಎಂದು ಸಾರಥಿ ವಿವರಿಸಿದ್ದೂ ಆಯಿತು. ಇದು ಸರ್ವರಿಗೂ ಬಂದೇ ತೀರತಕ್ಕ ಕಡೆ ಯೆಂಬುದು ಖಚಿತವಾಯಿತು. ಕುಮಾರನ ಮನಸ್ಸು ನೀರುನೀರಾಯಿತು. ಮರಣವೂ ಉಂಟಾದಮೇಲೆ ಅದರ ಪರಿಹಾರಕ್ಕೆ ಪ್ರಯತ್ನಿಸದೆ ಕಾರ್ಯಾಂತರ ದಲ್ಲಿ ಕಾಲಕಳೆಯುವವನಂತಹ ಮೂರ್ಖನೇ ಇಲ್ಲವೆನ್ನುತ್ತಾ ಮನೆಗೆ ಹೋಗೋಣವೆಂದ. ಆದರೂ ಸಾರಥಿ ಅರಸನ ಭಯದಿಂದ ಅವನನ್ನು ಪದ್ಮವನಕ್ಕೇ ಕರೆದುಕೊಂಡು ಹೋದ. ಇಂದ್ರನ ನಂದನವನದಂತೆ ಕುಸು ಮಿತ ಲತೆಗಳಿಂದಲೂ ಕೋಕಿಲ ಗಾನದಿಂದಲೂ, ಸುಂದರ ಸರಸಿಗಳಿಂದಲೂ ಅದು ರಮ್ಯವಾಗಿತ್ತು, ವರಾಂಗನೆಯರನೇಕರು ಅವನನ್ನು ಸ್ವಾಗತಿಸಲು ಕಾದಿದ್ದರು (ಸರ್ಗ–೩).

**ಸ್ತ್ರೀನಿವಾರಣ**: ಚೆಲುವೆಯರು ತಮ್ಮ ಪದ್ಮಕೋಶದಂತಹ ಕರಗಳಿಂದ ಅವನಿಗೆ ಉಪಚಾರ ಮಾಡಿದರು, ಹಾಡಿ ಹರಸಿದರು; ಅನಂಗನೇ ರೂಪಾಂತನೋ, ಚಂದ್ರನೇ ಧರೆಗಿಳಿದನೊ, ಎಂದು ವ್ಯೆಯುಬ್ಬಿದರು. ಕಾಮ ತಾಪದಿಂದ ಕಂಗೆಟ್ಟವರು ಕಣ್ಣುಗಳಿಂದಲೇ ಅವನ ರೂಪನ್ನು ಕುಡಿಯುತ್ತಿ ದ್ದರು. ಆಗ ಪುರೋಹಿತನ ಮಗ ಉದಾಯಿ 'ನೀವು ಭಾವಗ್ರಹಣ ಪಂಡಿತೆ ಯರು; ರೂಪಚಾತುರ್ಯಸಂಪನ್ನೆಯರು. ಇಂದ್ರ ಕುಬೇರರ ಉದ್ಯಾನಗಳಿಗೂ ಶೋಭೆ ತರಬಲ್ಲವರು. ವೀತರಾಗರಾದ ಋಷಿಗಳನ್ನೂ ಚಲಿಸುವ ಶಕ್ತಿ ಯುಳ್ಳವರು, ಅಪ್ಸರೆಯರನ್ನು ಬಿಡುವಂತೆ ದೇವತೆಗಳನ್ನಾದರೂ ಮಾಡ ಬಲ್ಲವರು. ನೀವು ಹೀಗೆ ಸುಮ್ಮನಿರುವುದು ನನಗೆ ಒಪ್ಪಲಿಲ್ಲ. ನಿಮ್ಮ ವರ್ತನೆ ನವವಧುಗಳಿಗೂ ಗೊಲ್ಲತಿಯರಿಗೂ ಅನುರೂಪವಾಗಿದೆ. ಇವನು ಮಹಾತ್ಮ ನಾದರೂ ಸ್ತ್ರೀಯರ ಸಾಮರ್ಥ್ಯದ ಮಹತ್ವವು ಏನೂ ಕಡಿಮೆಯದಲ್ಲ. ವ್ಯಾಸ, ಗೌತಮ, ಋಷ್ಯಶೃಂಗ, ವಿಶ್ವಾಮಿತ್ರ, ಮುಂತಾದ ಋಷಿಗಳು ಹೇಗೆ

ಹೆಣ್ಣುಗಳಿಗೆ ಸೋತರೆಂಬುದನ್ನು ನೆನೆದು ಇವನನ್ನು ಮೋಹಗೊಳಿಸಲು ಯತ್ನಿಸಿ. ಅರಸನ ವಂಶಲಕ್ಷ್ಮಿಯು ಅವಸಾನವಾಗದಿರಲಿ. ಎಂತಹವನ ಮನಸ್ಸನ್ನಾದರೂ ಸೆಳೆಯಬಲ್ಲವರೇ ನಿಜವಾದ ಸ್ತ್ರೀಯರು' ಎಂದು ಅವರನ್ನು ಹುರಿದುಂಬಿಸಿದನು. ಬಾಣದಿಂದ ಚುಚ್ಚಿದವರಂತೆ ಅವರೆಲ್ಲರೂ ಹಾವ, ಭಾವ, ವಿಲಾಸ, ಲೀಲೆಗಳಿಂದ ಕುಮಾರನನ್ನು ಮೈಮರೆಸಲು ಹೊರಟರು. ಸುವ, ಮದನ, ಎರಡೂ ಸೇರಿ ಅವರ ಧೈರ್ಯ ಹೆಚ್ಚಿತು. ಅವರ ಜತೆಯಲ್ಲಿ ಕುಮಾರನು ವನದಲ್ಲಿ ಸುತ್ತಾಡಬೇಕಾಯಿತು. ಕೆಲವರು ಅವನನ್ನು ಬಾಹುಗಳಿಂದ ಬಂಧಿಸಿದರು ; ಎದೆಗೆ ತಬ್ಬಿಕೊಂಡರು ; ಕಿವಿಯಲ್ಲಿ ಗುಟ್ಟು ಹೇಳುವಂತೆ ಊದಿದರು , ಹಸ್ತಸ್ಪರ್ಶ ಮಾಡಿ ಕಾಮವನ್ನು ಉದ್ದೀಪಿಸಲು ಯತ್ನಿಸಿದರು. ಸುಂದರಾಂಗಗಳನ್ನು ಪ್ರದರ್ಶಿಸಿದರು. ಪ್ರಣಯ ಚೇಷ್ಟೆಗಳೆಲ್ಲವನ್ನೂ ಮಾಡಿದರು. ಅವರ ಪರಿಹಾಸಗಳಾಗಲಿ, ಪ್ರಣಯವಚನಗಳಾಗಲಿ, ಅಂಗವಿಭ್ರಮಗಳಾಗಲಿ, ಕುಮಾರನಿಗೆ ಬೇಕಾಗಲಿಲ್ಲ. ಪ್ರಕೃತಿಯೆಲ್ಲವೂ ಪ್ರೇಮಮಯವಾಗಿದೆಯೆಂದು ಲತಾಲಿಂಗಿತವಾದ ಅಶೋಕ, ಚೂತಾಶ್ಲಿಷ್ಟವಾದ, ತಿಲಕವೃಕ್ಷ, ಫುಲ್ಲಕುರುವಕಪುಷ್ಪ, ಬಾಲಾಶೋಕ ಪಲ್ಲವ, ಸುಪ್ತಸುಂದರಿಯಂತಿರುವ ಕೊಳ, ಚಕ್ರವಾಕಗಳ ಲೀಲೆ, ಕೋಕಿಲ ಮಿಥುನಗಳ ಭೋಗ, ಮುಂತಾದುವನ್ನೆಲ್ಲ ಮನೋಹರವಾಗಿ ತೋರಿಸುತ್ತ ಬಂದರು. ಮರಣದ ಭಯ ಹತ್ತಿದ್ದ ಕುಮಾರನಿಗೆ ಒಂದೂ ರುಚಿಸಲಿಲ್ಲ. 'ಇವರು ಅರಿಯದವರು–ಸುಖ, ಯೌವನ, ಎಲ್ಲವೂ ಕ್ಷಣಿಕ , ರೋಗ, ಮುಪ್ಪು ಮರಣ, ಎಲ್ಲಕ್ಕೂ ಕೊನೆಯೆಂಬುದನ್ನಿವರು ಕಾಣರು' ಎಂದು ಅವರಲ್ಲಿ ಅವನಿಗೆ ಕನಿಕರವೇ ಉಂಟಾಯಿತು. ಆಗ ಉದಾಯಿ ಅವನಿಗೆ ನೀತಿಶಾಸ್ತ್ರವನ್ನು ಉಪದೇಶಿಸುತ್ತಾನೆ .—' ನಾನು ಮಿತ್ರ , ನನ್ನ ಕರ್ತವ್ಯ ನಿನಗೆ ಕಾಲೋಚಿತ ಸಲಹೆ ಕೊಡುವುದು. ಸ್ತ್ರೀಯರಲ್ಲಿ ದಾಕ್ಷಿಣ್ಯವನ್ನು ತೋರಿಸುವುದು ಪುರುಷನ ಗುಣ. ನೀನು ಅದನ್ನು ಬಿಡಬಾರದು. ಸ್ತ್ರೀಯರಿಗೆ ಗೌರವದಲ್ಲಿ ಆಸೆ. ಸುಳ್ಳಾಡಿಯಾದರೂ ಅದನ್ನವರಿಗೆ ಸಲಿಸಿ ಒಲಿಸಿಕೊಳ್ಳಬೇಕು ದಾಕ್ಷಿಣ್ಯವಿಲ್ಲದ ರೂಪ ಹೂವಿಲ್ಲದ ವನದಂತೆ. ವಿಷಯಗಳನ್ನು ಕೀಳೆನ್ನಬಾರದು. ಇಂದ್ರನು ಅಹಲ್ಯೆಯನ್ನೂ ಚಂದ್ರನು ಗುರುಪತ್ನಿಯನ್ನೂ ಕಾಮವೇ ಹೆಚ್ಚೆಂದು ತಿಳಿದು ತೊಡಲಿಲ್ಲವೇ ? ಇಂತಹ ಉದಾಹ

ತಣಿಗಳು ಬೇಕಾದಷ್ಟಿವೆ. ಪ್ರಪಂಚವೇ ಯಾವುದರಲ್ಲಿ ಆಸಕ್ತವಾಗಿದೆಯೋ ಆ ರತಿಯನ್ನು ನೀನು ಕಡೆಗಣಿಸುವುದು ತರವಲ್ಲ.' 'ನೀನು ಹೇಳುವುದೆಲ್ಲವೂ ಸರಿ. ಇವು ನಶ್ವರವಲ್ಲದಿದ್ದರೆ ನಾನು ಧಾರಾಳವಾಗಿ ಭೋಗಾಸಕ್ತನೇ ಆಗುತ್ತಿದ್ದೆ. ಆದರೆ ಮೃತ್ಯುವ್ಯಾಧಿ ಜರಾಭಯಗಳಿಂದ ಗ್ರಸ್ತನಾದ ಮನುಷ್ಯನೂ ಅವುಗಳ ಚಿಂತೆಯೇ ಇಲ್ಲದೆ ಭೋಗಾಸಕ್ತನಾದರೆ ಜಡವಾದ ಮೃಗಪಕ್ಷಿಗಳ ಸಮಾನನೇ ಆಗುವನಲ್ಲವೇ? ನಾನು ಸುಳ್ಳು ಹೇಳಲಾರೆ. ಇಷ್ಟವಿಲ್ಲದ್ದನ್ನು ಮಾಡಲಾರೆ. ಸ್ತ್ರೀ ಪುರುಷರು ಪರಸ್ಪರ ವಂಚನೆಗೆ ಹೊರಟರೆ ಲೋಕ ನಿಂತೀತೆ? ನಾನು ದುಃಖಾರ್ತನಾಗಿರುವಾಗ ಕಾಮದಲ್ಲಿ ಮನಸ್ಸು ಹೋಗದು.' ಅವನ ನಿಶ್ಚಯದಮುಂದೆ ಸ್ತ್ರೀಯರು ನಿರಾಶರಾದರು. ಸೂರ್ಯ ಮುಳುಗಿದ. ತಮ್ಮ ಅಲಂಕಾರ, ಪ್ರಣಯ, ಎಲ್ಲ ವಿಫಲವಾಯಿತೆಂದು ಭಗ್ನ ಮನೋರಥರಾಗಿ ಸ್ತ್ರೀಯರು ಹಿಂತಿರುಗಿದರು. ಕುಮಾರನು ಚಿಂತಿಸುತ್ತಲೇ ಮನೆಗೆ ಬಂದನು. (ಸರ್ಗ-೪)

**ಅಭಿನಿಷ್ಕ್ರಮಣ** :—ವಿಷಬಾಣವು ಎದೆಯಲ್ಲಿ ನೆಟ್ಟ ಸಿಂಹದಂತೆ ಇತ್ತು ರಾಜಕುಮಾರನ ಸ್ಥಿತಿ. ಶಾಂತಿ ಸಿಕ್ಕೀತೋ ಎಂದು ಮಿತ್ರರೊಡನೆ ವನಭೂಮಿಯ ದರ್ಶನಕ್ಕೆಂದು ಮತ್ತೊಮ್ಮೆ ಹೊರಟ— ರಾಜಾಶ್ವವಾದ ಕಂಥಕವನ್ನು ಏರಿ. ಭೂಮಿಯನ್ನು ಉಳುತ್ತಿದ್ದರು. ನೇಗಿಲ ತುದಿಗೆ ಸಿಕ್ಕಿ ಕ್ರಿಮಿಕೀಟಕಗಳು ಸಾಯುವುದನ್ನು ಕಂಡರೆ ಸ್ವಜನರು ಸತ್ತಂತೆ ಅವನಿಗೆ ಶೋಕವಾಯಿತು. ಬಿಸಿಲಿನ ಬೇಗೆಯಲ್ಲಿಯೇ ಹುಡಿಯಲ್ಲಿ ದುಡಿಯುವ ಎತ್ತುಗಳನ್ನು ನೋಡಿ ದಯೆಯುಕ್ಕಿತು. ಕುದುರೆಯಿಂದಿಳಿದವನೇ ಮೆಲ್ಲನೆ ನಡೆಯುತ್ತ, 'ಜಗತ್ತು ಶೋಚ್ಯ'ವೆಂದು ಯೋಚಿಸುತ್ತ, ಒಂದು ನೇರಳೆ ಮರದ ಬುಡಕ್ಕೆ ಬಂದು ಕುಳಿತ. ವೈಢೂರ್ಯದಂತೆ ಹೊಳೆಯುತ್ತಿದ್ದ ಆ ಹಚ್ಚಹಸಲೆಯಮೇಲೆ ಕುಳಿತು ಮನಸ್ಸನ್ನು ಸ್ಥಿರವಾಗಿಸಿಕೊಂಡು ವಿಚಾರಕ್ಕೆ ಮೊದಲು ಮಾಡಿದ. ಆ ಪ್ರಶಾಂತಧ್ಯಾನದಿಂದ ವಿವೇಕಜವಾದ ಮನಃಸಮಾಧಿಯೂ ದೊರೆಯಿತು. 'ತಾನೇ ಮರಣಾಧೀನನಾಗಿಯೂ ಇನ್ನೊಬ್ಬನ ಮರಣವನ್ನು ನೋಡಿದರೆ ಹೇಸುವ ಮನುಷ್ಯ ಎಂತಹ ಹೀನ! ತಿಳಿದವನು ಮಾಡುವ ಕೆಲಸ ಇದಲ್ಲ.' ಎಂದು ಚಿಂತಿಸುತ್ತಿರುವಾಗಲೇ ಅವನ ಪ್ರಕೃತಿಜವಾದ ಮಾದವೆಲ್ಲ ಬಿಟ್ಟುಹೋಯಿತು. ಹರ್ಷ-ತಾಪ, ರಾಗ-ದ್ವೇಷ, ನಿದ್ರೆ-ಮೋಹ,

ಗೌರವ-ಅನಾದರ, ಎಲ್ಲವನ್ನೂ ತೊರೆದುಬಿಟ್ಟು ಪ್ರಶಾಂತನಾದ. ಆಗಲೇ ಬೇರೆಯವರಿಗೆ ಅದೃಶ್ಯನಾದ ಒಬ್ಬ ಭಿಕ್ಷುವೇಷದ ಪುರುಷ ಅವನ ಹತ್ತಿರ ಬಂದು ನೀನಾರೆಂದೊಡನೆ 'ಜನ್ಮ ಮೃತ್ಯುಭಯದಿಂದ ವಿರಕ್ತನಾಗಿ ಮೋಕ್ಷಕ್ಕಾಗಿ ಶ್ರಮಿಸುವ ಒಬ್ಬ ಸನ್ಯಾಸಿ' ಎಂದ. ಹೇಳುತ್ತಲೇ ಆಕಾಶದಲ್ಲಿ ಅದೃಶ್ಯನಾದ. ಹಕ್ಕಿಯಂತೆ ಹಾರಿದ ಅವನನ್ನು ನೋಡಿದೊಡನೆ ಕುಮಾರನ ಮನಸ್ಸಿನಲ್ಲಿಯೂ ಹಾಗೆಯೇ ಮಾಡಬೇಕೆಂಬ ಬುದ್ಧಿ ಹುಟ್ಟಿತು. ಪರಿವಾರದವರಿದ್ದುದರಿಂದ ಅಲ್ಲಿಂದಲೇ ಕಾಡಿಗೆ ಹೋಗಲಿಲ್ಲ, ಮನೆಗೆ ಬಂದ. ದಾರಿಯಲ್ಲಿಯೂ ಅವನಿಗೆ ನಿರ್ವಾಣದ ಯೋಚನೆಯೇ.

ತಂದೆಯ ಹತ್ತಿರ ಬಂದು ನಾನು ಪರಿವ್ರಾಜಕನಾಗತ್ತೇನೆಂಬ ಮನೋಗತವನ್ನು ತಿಳಿಸಿದ. ಆನೆ ಮುರಿದ ಮರವಂತೆ ರಾಜ ಅಳ್ಳಾಡಿದ. ಕೈಜೋಡಿಸಿಕೊಂಡು ಕಣ್ಣೀರನ್ನು ಸುರಿಸುತ್ತ ಹೇಳಿದ:—'ಈ ಬುದ್ಧಿಯನ್ನು ಬಿಟ್ಟುಬಿಡು. ನಿನಗಿನ್ನೂ ಧರ್ಮಾಚರಣೆಗೆ ವಯಸ್ಸು ಬಂದಿಲ್ಲ. ಪೂರ್ವ ವಯಸ್ಸಿನಲ್ಲಿ ಧರ್ಮಚರ್ಯೆಗೆ ಬಹುವಿಘ್ನಗಳುಂಟೆನ್ನುತ್ತಾರೆ. ತರುಣರ ಮನಸ್ಸು ಚಂಚಲವಾಗಿರುತ್ತದೆ, ಅರಣ್ಯದಲ್ಲಿ ನಿತ್ಯಸುಖ ಬಾರದು, ವಿವೇಕವೂ ಸುಲಭವಲ್ಲ. ನಾನಿನ್ನೂ ನಿನಗೆ ರಾಜ್ಯವಿತ್ತು ವನವಾಸಮಾಡುವುದು ಧರ್ಮ; ನೀನು ವಿಕ್ರಮದಿಂದ ಧರಣಿಯನ್ನಾಳುವುದು ಧರ್ಮ, ತಂದೆಯನ್ನು ಬಿಟ್ಟು ತೆರಳುವುದು ಅಧರ್ಮ. ನಿನ್ನ ಗೃಹಸ್ಥಾಶ್ರಮದ ಕಾರ್ಯವೆಲ್ಲ ಮುಗಿದ ಮೇಲೆ ವನವಾಸ ರಮಣೀಯವೇ ಸರಿ.' 'ಆಗಲಿ, ನಾಲ್ಕೇನಾಲ್ಕು ವರಗಳನ್ನು ಕೊಡುವುದಾದರೆ ನಾನು ಕಾಡಿಗೆ ಹೋಗುವುದಿಲ್ಲ. ೧. ನನ್ನ ಜೀವನ ಮರಣದಲ್ಲಿ ಮುಗಿಯಬಾರದು. ೨. ನನ್ನ ಆರೋಗ್ಯವನ್ನು ರೋಗ ಹಾಳು ಮಾಡಬಾರದು. ೩. ನನ್ನ ಯೌವನವನ್ನು ಮುಪ್ಪು ವಶಗಿಸಬಾರದು. ೪. ನನ್ನ ಸಂಪತ್ತನ್ನು ವಿಪತ್ತು ಅಪಹರಿಸಬಾರದು,' ಎಂದು ದುರ್ಲಭವಾದ ಅರ್ಥಗಳನ್ನು ಕೇಳಿದ ಮಗನಿಗೆ ದೊರೆ ಮತ್ತೆ ಹೇಳುತ್ತಾನೆ —'ಅತ್ಯಾಶೆಯೂ ಅಪಹಾಸ್ಯಕರ ಮತ್ತು ಅಕ್ರಮ. ಈ ಬುದ್ಧಿಯನ್ನು ಬಿಡು.' ಆಗ ಕುಮಾರನು ವೃಥವಾಗಿ ಹೇಳುವ ಮಾತು—"ಕ್ರಮವಲ್ಲದಿದ್ದರೆ ಹೋಗಲಿ, ನೀನು ನನ್ನನ್ನು ತಡೆಯಲಾರೆ. ಉರಿಯುವ ಬೆಂಕಿಯಿಂದ ಆಚೆಗೆ ಹೊರಟವನು ಮತ್ತೆ ಅಲ್ಲಿಯೇ ನರಳುವುದಿಲ್ಲ. ಯಾವತ್ತೋ (ಮರಣದಿಂದಾದರೂ) ಜಗತ್ತಿ

ನಿಂದ ವಿಯೋಗವಾಗಲೇಬೇಕಾಗಿರುವಾಗ ಸ್ವಯಂ ವಿಯೋಗವೇ ಉತ್ತಮ." ರಾಜನಿಗೆ ಏನೂ ತೋರದೆ ಮತ್ತೆ ಕಾಮಭೋಗಗಳನ್ನೇ ಕುಮಾರನಿಗೆ ಹೆಚ್ಚಿಸುವಂತೆ ಅಪ್ಪಣೆ ಮಾಡಿ ಸುಮ್ಮನಾದ.

ಆದರೆ ವಾರನಾರಿಯರ ವಿವಿಧ ವಿಲಾಸಗಳೊಂದೂ ಅವನ ಮನಸ್ಸಿಗೆ ಸಂತೋಷ ತರಲಿಲ್ಲ. ಅವರೆಲ್ಲರೂ ಹಾಡಿ ಕುಣಿದು ದಣಿವಿನಿಂದ ನಿದ್ದೆ ಹೋದರು. ಅವರ ವೀಣಾದಿ ವಾದ್ಯಗಳು ಅಲ್ಲಲ್ಲಿ ಇರುವಂತೆಯೇ ನಿದ್ದೆ ಮಾಡಿ ವಿವಶರಾಗಿದ್ದರು. ಅವರ ಅಂಗಾಂಗಗಳೂ ಅಸ್ತವ್ಯಸ್ತವಾಗಿದ್ದವು. ಅವರ ಅಧೀರ ಸ್ವಪ್ನ ಚೇಷ್ಟೆಗಳನ್ನು ನೋಡಿ ಕುಮಾರನಿಗೆ ಹೇಸಿಗೆಯುಂಟಾ ಯಿತು. ರಾತ್ರಿಯೇ ಹೊರಟುಬಿಡಲು ನಿಶ್ಚಯಿಸಿದ. ದೇವತೆಗಳೇ ಬಾಗಿ ಲನ್ನು ತೆಗೆದರ . ಕೆಳಗಿಳಿದು ಬಂದು ಕುದುರೆ ಆಳಾದ ಛಂದಕನನ್ನು ಎಬ್ಬಿಸಿ ತನ್ನ ಕುದುರೆ 'ಕಂಥಕ' ವನ್ನು ತರುವಂತೆ ಅಪ್ಪಣೆ ಮಾಡಿದನು. ಅವನಿಗೆ ಅರಸನ ಭಯವಿದ್ದರೂ ಕುದುರೆಯನ್ನು ತಂದೇಬಿಟ್ಟ. ಕುದುರೆಗೆ ಕುಮಾರ ಹೇಳುತ್ತಾನೆ.—'ನೀನು ಸಾಮಾನ್ಯನಲ್ಲ, ನಿನ್ನನ್ನೇರಿ ಅರಸನು ಅದೆಷ್ಟೋ ಶತ್ರುಗಳನ್ನು ಯುದ್ಧದಲ್ಲಿ ಗೆದ್ದಿದ್ದಾನೆ. ನಾನೂ ಅಮೃತತತ್ವಪದವಿಯನ್ನು ಪಡೆಯುವಂತೆ ಕರುಣಿಸು. ಯುದ್ಧದಲ್ಲಿ ಸ್ನೇಹಿತರು ಸುಲಭವಾಗಿ ಸಿಕ್ಕ ಬಹುದು. ಆದರೆ ಆಪತ್ತಿನಲ್ಲೂ ಧರ್ಮಚರ್ಯೆಯಲ್ಲೂ ಸಿಕ್ಕುವುದು ಕಷ್ಟ. ಧರ್ಮಚರ್ಯೆಗೆ ಸಹಾಯಮಾಡಿದವರಿಗೂ ಅದರ ಭಾಗವಿದ್ದೇ ಇರುತ್ತದೆ. ಜಗದ್ಧಿತಕ್ಕಾಗಿ ನಿನ್ನ ವೇಗವಿಕ್ರಮಗಳನ್ನೆಲ್ಲ ತೋರಿಸು." ಹೀಗೆಂದು ಆ ಶ್ವೇತಾಶ್ವವನ್ನೇರಿದೊಡನೆ ಅದು ಸದ್ದಾಗದಂತೆಯೇ ಗೊರಸುಗಳನ್ನಿಡುತ್ತಾ ಕೆನೆಯದೆ ಗಂಭೀರವಾಗಿ ಹೊರಟಿತು, ನಗರದ್ವಾರಗಳು ತಾವೇ ತೆಗೆದು ಕೊಂಡವು. ಕುಮಾರನು ಪುರದ ಹೊರಗಡೆ ಬಂದವನೇ ಪ್ರತಿಜ್ಞೆಮಾಡಿದ:– ಜನನ ಮರಣಗಳ ಪಾರವನ್ನು ಕಾಣದೆ ನಾನಿನ್ನು ಕಪಿಲವಸ್ತುವಿನಲ್ಲಿ ಕಾಲಿಡುವುದಿಲ್ಲ.' ಮನೋವೇಗದಿಂದ ಕುದುರೆ ಓಡಿ ಬಹಳ ದೂರ ಅವ ನನ್ನು ಕರೆದೊಯ್ದಿತು. (ಸರ್ಗ–೫)

**ಛಂದಕ ವಿಸರ್ಜನ**:—ಸೂರ್ಯೋದಯದ ಕಾಲದಲ್ಲಿ ಭಾರ್ಗವನ ಆಶ್ರಮ ಕಾಣಿಸಿತು. ಸಿದ್ಧಾರ್ಥನು ಕುದುರೆಯಿಂದಿಳಿದು ಅದರ ಬೆನ್ನು ಸವರಿ ಮುದ್ದಿಸಿ ಛಂದಕನಿಗೆ ಹೀಗೆಂದನು:—'ನೀನು ಗರುಡನ ವೇಗದ

ಈ ಅಶ್ವವನ್ನು ಹಿಂಬಾಲಿಸಿ ಬಂದು ನಿನ್ನ ಭಕ್ತಿಯನ್ನೂ ...ತ್ತ...ನ್ನೂ ತೋರಿಸಿರುವೆ. ಸಾಮಾನ್ಯವಾಗಿ ಜಗತ್ತಿನ ಪ್ರೇಮಕ್ಕೆಲ್ಲ ಸ್ವಾರ್ಥವೇ ಮೂಲ. ಆದರೆ ನಿನ್ನದು ನಿಷ್ಕಾಮವಾದ ಪ್ರೀತಿ. ನಿನ್ನನ್ನು ಮೆಚ್ಚಿದೆ.' ಎಂದು ತನ್ನ ರತ್ನಾಭರಣಗಳೆಲ್ಲವನ್ನೂ ಅವನಿಗೆ ತೆಗೆದಿತ್ತು ತಂದೆಗೆ ಹೀಗೆ ಸಂದೇಶ ಹೇಳಿ ಕಳುಹಿಸಿದನು.--' ಜರಾಮರಣನಾಶಕ್ಕೆಂದು ತಪೋವನಕ್ಕೆ ಬಂದಿರುವೆನೇ ಹೊರತು ಸ್ವರ್ಗ, ಅಪ್ರೀತಿ, ಕೋಪಗಳ ದೆಸೆಯಿಂದಲ್ಲ. ಈ ವಿಯೋಗದಿಂದ ಶೋಕಿಸಬಾರದು, ಎಂದಾದರೂ ವಿಯೋಗ ಬರತಕ್ಕುದೇ. ಶೋಕತ್ಯಾಗಕ್ಕೆ ಮನದಂಥ ನಾನು ಖಂಡಿತವಾಗಿ ಶೋಚ್ಯನಲ್ಲ. ನಮ್ಮ ಹಿಂದಿನವರೂ ಸ್ಥಿರ ಪ್ರತಿಜ್ಞರಾಗಿಯೇ ಇದ್ದರಲ್ಲವೇ? ಮನುಷ್ಯ ಸತ್ತರೆ ಆಸ್ತಿ ಹಂಚಿಕೊಳ್ಳುವ ದಾಯಾದಿಗಳುಂಟು, ಆದರೆ ಧರ್ಮಚರ್ಯೆಯ ದಾಯಾದಿಗಳು ದುರ್ಲಭ. ಧರ್ಮಕ್ಕೆ ಅಕಾಲವೆಂಬುದೇ ಇಲ್ಲ. ನಾಳೆಯೆಂದರೆ ಬದುಕಿರುತ್ತೇವೆಯೋ ಇಲ್ಲವೋ ತಿಳಿದವರಾರು? ಎಂದು ತಂದೆಗೆ ನನ್ನ ಮಾತಿನಿಂದ ಸಮಾಧಾನ ಹೇಳು. ನಿನ್ನ ಮಾತಿನಿಂದ ನನ್ನ ನೈರ್ಗುಣ್ಯವನ್ನೇ ವಿವರಿಸು. ಅದರಿಂದ ಪ್ರೇಮ ತಪ್ಪುತ್ತದೆ. ಪ್ರೇಮ ತಪ್ಪಿದರೆ ಶೋಕ ತೊಲಗುತ್ತದೆ." ಛಂದಕನು ಗದ್ಗದಕಂಠದಿಂದ "ಇದನ್ನು ಕೇಳಿ ಅರಸನು ಕೆಸರಿನಲ್ಲಿ ಮುಳುಗಿದ ಆನೆಯಂತೆ ನೋಯುತ್ತಾನೆ. ಕಬ್ಬಿಣದ ಎದೆಯನ್ನಾದರೂ ಈ ಮಾತು ಕರಗಿಸಿ ಬಿಡುವಂತಿದೆ. ಉಪ್ಪರಿಗೆಯಲ್ಲಿ ಮಲಗಲು ಯೋಗ್ಯವಾದ ನಿನ್ನ ಸೌಕುಮಾರ್ಯವೆತ್ತ, ಈ ಒರಟು ಹುಲ್ಲುಗಳ ತಪೋಭೂಮಿಯೆತ್ತ! ನಾನು ನಿನಗಾಗಿ ಕುದುರೆ ತಂದುದು ದೈವಪ್ರೇರಣೆಯೇ ಸರಿ. ನನ್ನ ಬುದ್ಧಿ ಸ್ವಾಧೀನದಲ್ಲಿದ್ದರೆ ಊರಿಗೇ ಶೋಕದಂತೆ ಕುದುರೆಯನ್ನು ತರುತ್ತಿರಲಿಲ್ಲ. ನಾಸ್ತಿಕನು ಸದ್ಧರ್ಮವನ್ನು ಬಿಡುವಂತೆ ನೀನು ಪುತ್ರಲಾಲಸನಾದ ವೃದ್ಧರಾಜನನ್ನು ಬಿಡುವುದು ತರವಲ್ಲ. ಸಾಕಿ ಸಲಹಿದ ತಾಯನ್ನು ಬಿಟ್ಟರೆ ಕೃತಘ್ನತೆಯಲ್ಲವೆ. ಗುಣವತಿಯೂ ಪತಿವ್ರತೆಯೂ ಬಾಲಪುತ್ರಿಯೂ ಆದ ರಾಣಿಯನ್ನು ಬಿಡುವುದುಚಿತವಲ್ಲ. ಯಶಸ್ವಿಯಾದ ಬಾಲನನ್ನು ಬಿಡಬಹುದೆ? ಎಲ್ಲರನ್ನೂ ಬಿಟ್ಟು ಬಿಡುವುದೇ ನಿನ್ನ ನಿಶ್ಚಯವಾದರೂ ನನ್ನನ್ನು ತೊರೆಯಬೇಡ. ನನಗೆ ನಿನ್ನ ಪಾದವೇ ಗತಿ. ರಾಮನನ್ನು ಬಿಟ್ಟು ಹೋದ ಸುಮಂತ್ರನಂತೆ ನಾನು ನಿನ್ನನ್ನು ಬಿಟ್ಟು ಊರಿಗೆ ಹೋಗಲಾರೆ. ಅಲ್ಲಿ ನಿಮ್ಮ ತಂದೆಗೆ ಹೇಗೆ

ಮುಖ ತೋರಿಸಲಿ? ಅಂತಃಪುರದವರಿಗೇನು ಹೇಳಲಿ? ನೀನು ನಿರ್ಘೃಣ ನೆಂದರೆ ಚಂದ್ರನು ಸುಡುವನೆಂದಂತಾಗುತ್ತದೆ. ಯಾರು ನಂಬಿಯಾರು? ಸುಮ್ಮನೆ ಹಿಂದಿರುಗಿಬಿಡು' ಎಂದು ಗೋಳಿಡಲಾರಂಭಿಸಿದನು. ದೃಢನಿಶ್ಚ ಯದ ಸಿದ್ಧಾರ್ಥನು 'ಜೀವಿಗಳ ಬಾಳೇ ಹೀಗೆ. ವಿಯೋಗವೇ ಅದರ ಕಡೆ. ಅಳಬೇಡ. ನನ್ನ ಹಿತೈಷಿಗಳಿಗೆಲ್ಲ ಊರಲ್ಲಿ ಹೇಳು —'ಅವನ ಮೇಲಿನ ಪ್ರೀತಿಯನ್ನು ಬಿಡಿ....ಅವನ ದೃಢನಿಶ್ಚಯ ಹೀಗಿದೆ. ಜನ್ಮಮೃತ್ಯುಗಳನ್ನು ಜಯಿಸಿದೊಡನೆ ಹಿಂದಿರುಗುತ್ತಾನೆ; ಇಲ್ಲವೆ ವಿಫಲಯತ್ನನಾಗಿ ಸಾಯು ತ್ತಾನೆ.' ಅದನ್ನು ಕೇಳಿ ಕುದುರೆಯೂ ಕಣ್ಣೀರು ಸುರಿಸಿತು. ಸಿದ್ಧಾರ್ಥನು 'ಬೇಡ, ನಿನ್ನ ಶ್ರಮ ಬೇಗ ಸಫಲವೇ ಆಗುತ್ತದೆ' ಎಂದು ಸಮಾಧಾನ ಮಾಡಿದನು. ಒಡನೆಯೇ ಚಿನ್ನದ ಕತ್ತಿಯನ್ನು ಬರಸೆಳೆದು ತನ್ನ ಕೇಶ ಗಳನ್ನು ಕತ್ತರಿಸಿ ದೂರ ಎಸೆದನು. ಅದನ್ನು ದೇವತೆಗಳು ಆಕಾಶದಿಂದಲೇ ಹಿಡಿದು ಪೂಜೆಮಾಡಲೆಂದು ಒಯ್ದರು. ಆಗಲೇ ಅವನಿಗೆ ರಾಜವೇಷದ ಬದಲು ಕಾಷಾಯ ಬೇಕೆನಿಸಿತು. ಯೋಚಿಸುತ್ತಿರುವಾಗಲೇ ಕಾಷಾಯ ವೇಷದ ವ್ಯಾಧನೊಬ್ಬ ಅಲ್ಲಿ ಬಂದ ಅವನು ದೇವನೇ. ಅವನಿಗೆ ತನ್ನ ದಿವ್ಯಾಂಬರಗಳನ್ನು ಕೊಟ್ಟು ಕುಮಾರನು ಅವನ ಕಾವಿಯನ್ನು ಉಟ್ಟಾ ಯಿತು. ವ್ಯಾಧನೂ ದಿವ್ಯರೂಪದಿಂದ ಸ್ವರ್ಗಕ್ಕೆ ನೆಗೆದನು. ಕಾವಿಯನ್ನುಟ್ಟ ಕುಮಾರನು, ಸಂಧ್ಯಾಸಂವೀತನಾದ ಉಡುರಾಜನಂತೆ ಆಶ್ರಮದ ಕಡೆ ನಡೆದನು ಛಂದಕನು ಅಳುತ್ತಾ ಗೋಳಾಡುತ್ತಾ ನಿರಾಶನಾಗಿ ಪುರವನ್ನು ತನುವಿನಿಂದ ಹೊಕ್ಕರೂ ಮನದಿಂದ ಹೊಗಲಿಲ್ಲ. ಅವನ ಸಂತಾಪ ವರ್ಣ ನಾತೀತವಾಗಿತ್ತು. (ಸರ್ಗ ೬)

**ತಪೋವನಪ್ರವೇಶ :**

ಮೃಗರಾಜಗಮನದಿಂದ ಆ ರಾಜಸೂನು ಬರುತ್ತಿದ್ದರೆ ಆಶ್ರಮವಾಸಿ ಗಳೆಲ್ಲ ಅವನನ್ನೇ ನೋಡುತ್ತ ನಿಲ್ಲುತ್ತಾರೆ. ಸಮಿತ್ಪುಷ್ಪಪವಿತ್ರಹಸ್ತರಾದ ವಿಪ್ರರು ಮರಗಳಿಗೆ ಹೋಗದೆ ಅವನನ್ನೇ ನೋಡುತ್ತಿದ್ದರು. ಮಯೂರ ಗಳು ಕೇಕೆ ಹಾಕಿದವು. ನೀಲಾಂಬುದವನ್ನು ಕಂಡ ಹಾಗೆ. ಹುಲ್ಲುಮೇಯು ವುದನ್ನು ಬಿಟ್ಟು ಮೃಗಗಳು ನೋಡುತ್ತ ನಿಂತುವು. ಹೋಮಧೇನುಗಳು ಕೆಚ್ಚಲಿನಲ್ಲಿ ಹಾಲನ್ನು ಸೋರಿಸಿದವು. ಇವನು ಎಂಟನೆಯ ವಸುವೋ,

ಅಶ್ವಿನೀಕುಮಾರನೋ ಇರಬೇಕೆಂದು ಗಟ್ಟಿಯಾಗಿ ಮುನಿಗಳು ನುಡಿಯು ತ್ತಿದ್ದರು. ಇಂದ್ರನ ಪ್ರತಿರೂಪದಂತೆ, ಚರಾಚರ ಲೋಕದ ಧಾಮದಂತೆ, ಧರೆಗಿಳಿದ ಸೂರ್ಯನಂತೆ ಅವನು ವನವನ್ನೇ ಬೆಳಗಿಸಿದನು. ಅವರಿಂದ ಸತ್ಕೃತನಾಗಿ, ಅವರ ತಪಃಪ್ರಕಾರಗಳನ್ನೆಲ್ಲ ನೋಡಿ, 'ನಿಮ್ಮ ಗುರಿಯೇನು? ಸಾಧನೆಯ ಕ್ರಮವೇನು? ನನಗೂ ತಿಳಿಸಿಕೊಡಿ' ಎನ್ನುತ್ತಾನೆ. 'ಕಾಡಿನ ಅನ್ನ, ಹಣ್ಣು ಹಂಪಲು, ಗೆಡ್ಡೆ ಗೆಣಸು, ಇವೇ ಮುನಿಗಳ ಆಹಾರ. ತಪಸ್ಸಿನ ಪ್ರಕಾರ ಬೇರೆ ಬೇರೆ—ಹಕ್ಕಿಗಳಂತೆ ಕೆಲವರು ಉಂಛಜೀವಿಗಳು; ಮೃಗಗ ಳಂತೆ ಕೆಲವರು ಹುಲ್ಲು ತಿನ್ನುತ್ತಾರೆ. ಹಾವುಗಳಂತೆ ಹುತ್ತಗಳಲ್ಲಿರುವ ಕೆಲವರು ಗಾಳಿಯಿಂದಲೇ ಜೀವಿಸುತ್ತಾರೆ. ಕೆಲವರು ಕಲ್ಲುಕುಟ್ಟಿ ಜೀವಿಸಿದರೆ ಕೆಲವರು ತಮ್ಮ ಹಲ್ಲುಗಳಿಂದ ಕಿತ್ತದ್ದನ್ನು ಮಾತ್ರ ತಿನ್ನುತ್ತಾರೆ. ಕೆಲವರು ಅಡಿಗೆ ಕೆಲಸಮಾಡಿ ಬಾಳಿದರೆ ಉಳಿದವರು ಎಂಜಲೆತ್ತುತ್ತಾರೆ. ಕೆಲವರು ಜಟಾಧಾರಿಗಳಾಗಿ ಅಗ್ನಿಹೋತ್ರ ಮಾಡುತ್ತಾರೆ. ಕೆಲವರು ಮೀನುಗಳಂತೆ ನೀರಲ್ಲಿಯೇ ಮುಳುಗಿರುತ್ತಾರೆ. ಈ ಬಗೆಬಗೆಯ ತಪಸ್ಸು ಗಳಿಂದ ಸ್ವರ್ಗವನ್ನು ಪಡೆಯುವುದೇ ಗುರಿ. ಈಗ ಕಷ್ಟಪಟ್ಟರೂ ಮುಂದೆ ಸುಖವುಂಟು. ಸುಖಾಪೇಕ್ಷೆಯೇ ಎಲ್ಲ ತಪಸ್ಸುಗಳಿಗೂ ಮೂಲ.' ಸಿದ್ಧಾರ್ಥ ನಿಗೆ ಹರ್ಷವಾಗಲಿಲ್ಲ. ಅವನು ಮನಸ್ಸಿನಲ್ಲಿಯೇ ಹೇಳಿಕೊಂಡ—'ಇಷ್ಟೆಲ್ಲ ಕಷ್ಟದಿಂದ ಇವರಿಗೆ ದೊರೆಯುವ ಸುಖ ಅತ್ಯಲ್ಪವೇ ಸರಿ. ಒಂದು ಬಂಧನ ವನ್ನು ಹರಿದು ಅದಕ್ಕಿಂತ ದೊಡ್ಡದಾದ ಬಂಧನವನ್ನೇ ತಂದುಕೊಳ್ಳುತ್ತಿ ದ್ದಾರೆ ಜನ್ಮವನ್ನು ತಪ್ಪಿಸಿಕೊಳ್ಳುವ ಬದಲು ಅದನ್ನೇ ಬಯಸುತ್ತಾರಲ್ಲ! ಇಹಪರಗಳ ಸುಖಕ್ಕಾಗಿ ಮಾಡುವ ಶ್ರಮದಿಂದ ಅನರ್ಥವೇ ಫಲವಾಗಿ ಬರುತ್ತದೆ. ಒಮ್ಮೆ ಮಾಡಿದ ಯತ್ನದಿಂದ ತಿರುಗಿ ಅದನ್ನೇ ಮಾಡದಂತಹ ಫಲವೊದಗಬೇಕು. ಶರೀರಪೀಡೆ ಧರ್ಮವಾದರೆ ಶರೀರಸುಖ ಅಧರ್ಮ ವಾಗುತ್ತದೆ. ಧರ್ಮದಿಂದ ಅಧರ್ಮವೇ ಫಲಿಸಿದಂತಾಯಿತು. ನಿಜವಾಗಿ ಶರೀರಕ್ಕಿಂತ ಮನಸ್ಸಿಗೆ ಹೆಚ್ಚು ಮಹತ್ವ. ಅದನ್ನು ಜಯಿಸದೆ ಶರೀರವನ್ನು ಬಳಲಿಸಿದರೆ ಏನಾಯಿತು? ದುಃಖದಿಂದ (ತಪಸ್ಸಿನಿಂದ) ಪುಣ್ಯ ಬರುವು ದಾದರೆ ಸುಖದಿಂದ ಏಕೆ ಬರಬಾರದು? ಮೈತೊಳೆದರೆ ಪಾಪವನ್ನು ತೊಳೆ ದಂತಾಯಿತೆ? ನೀರು ನೀರೇ. ಗುಣವಂತನ ಸ್ಪರ್ಶದಿಂದ ಮಾತ್ರ ನೀರು

ತೀರ್ಥವಾಗಬಹುದು.' ಹೀಗೆ ವಿಚಾರಮಾಡುತ್ತಾ, ಅವರ ಆಚರಣೆಗಳನ್ನು ನೋಡುತ್ತಾ ಕೆಲವು ರಾತ್ರಿಗಳನ್ನು ಅಲ್ಲಿಯೇ ಕಳೆದ. ಆಮೇಲೆ ಅಲ್ಲಿಂದ ಹೊರಡಲು, ಆಶ್ರಮವಾಸಿಗಳು ಅವನ ಹಿಂದೆ ಹಿಂದೆಯೇ ಬಂದರು. ಅವರಮೇಲಿನ ಭಕ್ತಿಯಿಂದ ನಿಂತ. ಅವರೆಂದರು:—'ನೀನಿದ್ದುದರಿಂದ ಆಶ್ರಮ ತುಂಬಿದಂತಿತ್ತು. ಬಿಟ್ಟುಹೋಗಬಾರದು. ಇಗೋ ಪಕ್ಕದಲ್ಲಿ ಬ್ರಹ್ಮರ್ಷಿ, ರಾಜರ್ಷಿ, ಸುರರ್ಷಿಗಳೆಲ್ಲ ಸೇವಿಸುವ ಹಿಮಾಚಲವಿದೆ; ಪುಣ್ಯ ತೀರ್ಥಗಳಿವೆ. ಧರ್ಮಚರ್ಯೆಗೆ ಇಲ್ಲಿಂದ ಉತ್ತರಕ್ಕೆ ಹೋಗಬಹುದೇ ಹೊರತು ದಕ್ಷಿಣಕ್ಕೆ ಒಂದು ಹೆಜ್ಜೆಯೂ ಹೋಗಬಾರದು. ನಿನಗೇನಾದರೂ ಇಲ್ಲಿ ಕೊರತೆ ಕಂಡಿದ್ದರೆ ನಾವು ನಿವಾರಿಸುತ್ತೇವೆ. ನಿನ್ನಿಂದ ನಮಗೂ ಶ್ರೇಯಸ್ಸು ಲಭಿಸೀತು' 'ನೀವು ಪ್ರೇಮದಿಂದ ಹೇಳಿದ್ದಕ್ಕೆ ಕೃತಜ್ಞನಾಗಿದ್ದೇನೆ. ನಿಮ್ಮನ್ನು ಬಿಟ್ಟುಹೋಗಲು ನನಗೂ ದುಃಖವೇ. ಆದರೆ ನಿಮ್ಮ ಗುರಿ ಸ್ವರ್ಗ, ನನ್ನ ಗುರಿ ಅಪವರ್ಗ (=ಮೋಕ್ಷ). ನಿಮ್ಮದು ಪ್ರವೃತ್ತಿ ಧರ್ಮ, ನನ್ನದು ನಿವೃತ್ತಿಧರ್ಮ. ನೀವೆಲ್ಲರೂ ಪೂರ್ವಯುಗದ ಧರ್ಮ ಚರ್ಯೆಯಲ್ಲಿ ನಿರತರಾಗಿದ್ದೀರಿ, ನನಗೆ ಅದು ಬೇಡವಾಗಿದೆ.' ಎಂದು ವಿನಯ ಪೂರ್ವಕವಾದರೂ ಖಂಡಿತವಾಗಿ ನುಡಿದವನನ್ನು ಮೆಚ್ಚಿ ಒಬ್ಬ ಋಷಿ ಹೇಳುತ್ತಾನೆ.—'ರಾಗವಂತರು ಸ್ವರ್ಗಬಯಸಿದರೆ ಸತ್ವವಂತರು ಅಪವರ್ಗ ವನ್ನು ಕುರಿಯುತ್ತಾರೆ. ನೀನೇ ಧನ್ಯ. ನೀನು ದಕ್ಷಿಣದ ವಿಂಧ್ಯಪ್ರಾಂತಕ್ಕೆ ಹೋಗಿ ಅಲ್ಲಿ ಅರಾಡನನ್ನು ಕಾಣು. ಅವನಿಗೆ ಇದರಲ್ಲಿ ಹೆಚ್ಚಿನ ಜ್ಞಾನವುಂಟು. ಆತನಿಂದ ತತ್ತ್ವಮಾರ್ಗವನ್ನು ತಿಳಿಯಲು ನೀನೇ ಸಮರ್ಥ. ನಿಜವಾಗಿಯೂ ಹಿಂದಿನ ಋಷಿಗಳಿಗಿಂತ ಹೆಚ್ಚಿನ ಸಿದ್ಧಿಯನ್ನು ನೀನು ಪಡೆವೆ! ಅವನನ್ನು ವಂದಿಸಿ ಸಿದ್ಧಾರ್ಥನು ಹೊರಡುತ್ತಾನೆ. (ಸರ್ಗ—೭)

**ಅಂತಃಪುರವಿಲಾಸ** —ಶೋಕದಿಂದ ತೊಳಲುತ್ತ ವಾಪಸು ಹೊರಟ ಛಂದಕನಿಗೆ ಒಂದು ರಾತ್ರೆ ಮಾಡಿದ ಪ್ರಯಾಣವನ್ನು ತಿರುಗಿ ಮಾಡುವು ದಕ್ಕೆ ಎಂಟು ದಿವಸಗಳು ಹಿಡಿದುವು. ಕುದುರೆಯೂ ಸ್ವಾಮಿಯಿಲ್ಲದೆ ನಿಸ್ತೇಜ ವಾಗಿತ್ತು. ತಪೋವನದ ಕಡೆಗೆ ತಿರುತಿರುಗಿ ನೋಡುತ್ತ, ಹಸಿದಿದ್ದರೂ ಹುಲ್ಲು ನೀರುಗಳನ್ನು ಮುಟ್ಟದೆ, ಕೂಗದೆ, ಬರುತ್ತಿತ್ತು. ಸೂರ್ಯನಿಲ್ಲದ ನಭವಂತೆ, ಸಿದ್ಧಾರ್ಥನಿಲ್ಲದೆ ಶೂನ್ಯವಾಗಿದ್ದ ಕಪಿಲವಸ್ತುವನ್ನು ಅವರು ಹೊಕ್ಕರು.

ಯಾರ ಮುಖದಲ್ಲಿಯೂ ಹರ್ಷವಿರಲಿಲ್ಲ. ಊರೇ ಮೃತಸ್ನಾತವಾಗಿದ್ದಂತೆ ಕಾಣುತ್ತಿತ್ತು. ರಾಮನ ರಥ ಬರಿದಾಗಿ ಬಂದಾಗ ಅತ್ತ ಅಯೋಧ್ಯೆಯವರಂತೆ ಇವರೂ ಕಣ್ಣೀರು ಕರೆದರು. ಅವರೆಲ್ಲರಿಗೂ ಛಂದಕನು ಕುಮಾರನು ಸಂನ್ಯಾಸಿಯಾದನೆಂದು ಹೇಳುತ್ತ ಬರಬೇಕಾಯಿತು. ರಾಜಪುತ್ರನು ಬಂದನೆಂದು ಕಿಟಕಿಗಳಲ್ಲಿ ನೆರೆದ ಹೆಂಗಸರು ಹತಾಶರಾಗಿ ಕಿಟಕಿಗಳನ್ನು ಬಡಿದುಕೊಂಡು ಅತ್ತರು. ಪುತ್ರಪ್ರಾಪ್ತಿಗಾಗಿ ಅರಸನು ದೇವಕಾರ್ಯಗಳನ್ನು ಮಾಡುತ್ತಿದ್ದನು. ಅರಮನೆಗೆ ಬಂದೊಡನೆ ಕಂಥಕವು ಕೆನೆಯಿತು. ಕುಮಾರ ಬಂದನೆಂದು ಪಕ್ಷಿಗಳೂ, ಅಂತಃಪುರದವರೂ ಆತುರದಿಂದ ಓಡಿಬಂದರು–ಶರತ್ಪಯೋದದಿಂದ ಬರುವ ಚಂಚಲಮಿಂಚುಗಳಂತೆ. ಕುಮಾರನನ್ನು ಕಾಣದೆ ಎಲ್ಲರೂ ವಿಲಾಪಿಸುತ್ತ ಕುಳಿತರು. ರಾಣಿ ಗೌತಮಿ ಮೂರ್ಛೆಹೋದಳು, ಗಾಳಿಗುರುಳಿದ ಬಾಳೆಯಂತೆ. ಅವರು ಶೋಕಾವೇಗದಿಂದ ಅಂಗಾಂಗಗಳೂ ಮರವಟ್ಟು ಚಿತ್ರದಲ್ಲಿ ಬರೆದ ಪ್ರತಿಮೆಗಳಂತೆ ಕಂಡರು. ಕಣ್ಣೀರಿನ ಹೊಳೆಗಳೇ ಹರಿದುವು. ಅರಮನೆಯು ವೃಷ್ಟಿತಾಡಿತವಾದ ಪದ್ಮಸರದಂತೆ ಕಾಣುತ್ತಿತ್ತು. ಎದೆಗಳನ್ನು ಚಚ್ಚಿಕೊಂಡು ಅವರಳುವುದು ನೋಡುವಂತಿರಲಿಲ್ಲ. ಯಶೋಧರೆಯ ಗೋಳಿಗಂತೂ ಪಾರವೇ ಇಲ್ಲ. 'ರಾತ್ರಿ ನಿದ್ದೆ ಹೋದವಳನ್ನು ವಂಚಿಸಿ ಮೂವರು ಹೋದಿರಿ, ಇಬ್ಬರೇ ಬಂದಿರಲ್ಲ! ಅನಾರ್ಯವೂ, ಅಪ್ರಿಯವೂ, ಅಮಿತ್ರಕಾರ್ಯವೂ ಆದುದನ್ನು ಮಾಡಿ ಈಗೇಕಳುವೆ, ಛಂದಕ? ನಿನ್ನ ಸಹಾಯವಿಲ್ಲದೆ ಆರ್ಯಪುತ್ರನು ಹೋಗುವುದಕ್ಕಾಗುತ್ತಿತ್ತೆ? ಮಿತ್ರಮುಖನಾದ ಶತ್ರುವಿಗಿಂತ ಪ್ರತ್ಯಕ್ಷ ಶತ್ರು ಎಷ್ಟೋ ಉತ್ತಮ. ಮೂರ್ಖನಾದ ನಿನ್ನಿಂದ ಈ ಕುಲಕ್ಕೇ ಸಂಚಕಾರ ಬಂದಿತು. ಹೈಮಾಚಲಸಾರನಾದ ಗಂಡನಿದ್ದೂ ವಿಧವೆಯರಂತೆ ನಾವು ಅಳುವ ಸ್ಥಿತಿಯಾಗಿದೆ. ಅವನಿಲ್ಲದ ಈ ಉಪ್ಪರಿಗೆಗಳೇ ಪಕ್ಷಿಗಳ ಉಲಿಯಿಂದ ಅಳುವಂತಿವೆ. ಈ ಕುದುರೆಯೂ ನಮ್ಮ ಸರ್ವಸ್ವರತ್ನವನ್ನು ಕಳ್ಳನಂತೆ ಕದ್ದೊಯ್ದು ಕೇಡನ್ನೇ ಮಾಡಿದೆ. ಯುದ್ಧದಲ್ಲಿ ಬಾಣಪ್ರಹಾರವನ್ನು ತಡೆಯಬಲ್ಲ ಇದು ಚಾಟಿಗೆ ಹೆದರಿ ಹೀಗೆ ನನ್ನ ಸಿರಿ, ಹೃದಯಗಳೆರಡನ್ನೂ ಒಯ್ಯಬಹುದೆ? ಈಗ ಗಟ್ಟಿಯಾಗಿ ಕೆನೆಯುತ್ತಿದೆ. ನನಗೆ ಮೋಸವಾದಾಗ ಮೂಕವಾಗಿತ್ತು. ಸ್ವಲ್ಪ ಆಗ ಶಬ್ದ ಮಾಡಿದ್ದರೂ ಈ ಗತಿ ಬರುತ್ತಿರಲಿಲ್ಲ.' ಈ ರೋದನವನ್ನು ಕೇಳಿ ಛಂದಕ–'ನಮ್ಮಿಬ್ಬರದೂ

ಏನೂ ತಪ್ಪಿಲ್ಲ. ದೇವನಂತೆ ನರದೇವನು ಹೋದ. ದೇವತೆಗಳ ಪ್ರೇರಣೆ ಯಿಂದಲೇ ರಾಜಶಾಸನ. ತಿಳಿದೂ ನಾನು ರಥವನ್ನು ತಂದೆ. ಕುದುರೆಯು ಗೊರಸು ನೆಲಕ್ಕೆ ತಾಗದಂತೆ ಹೋದುದೂ ದೈವಿಕವೇ. ಅವನು ಹೋದೊಡನೆ ಊರ ಬಾಗಿಲು ತಾನೇ ತೆರೆದುಕೊಂಡಿತು ಊರಿನ ಇಷ್ಟು ಜನರಲ್ಲಿ ಒಬ್ಬ ರಿಗೂ ಎಚ್ಚರವಿಲ್ಲ, ದೈವವಲ್ಲವೆ? ವನವಾಸದ ವೇಷ ಸಿಕ್ಕಿದ್ದೂ, ಅವನ ಮುಕುಟವನ್ನು ಆಕಾಶದಿಂದ ಒಯ್ದುದ್ದೂ ದೇವತೆಗಳ ಕಾರ್ಯವೇ.' ಎಂದು ಅದ್ಭುತಗಳನ್ನೆಲ್ಲ ಒಂದೊಂದಾಗಿ ಹೇಳಿದ. ಅಂತಃಪುರದವರಿಗೆ ದೈವಸಹಾಯ ವಿದೆಯೆಂದು ಸ್ವಲ್ಪ ಸಮಾಧಾನವಾಯಿತು–ವಿರಕ್ತಿಯಿಂದ ದುಃಖವಾದರೂ. ಆದರೆ ಗೌತಮಿಯು ಮತ್ತೆ ಗೋಳಾಡಲಾರಂಭಿಸಿದಳು. "ಅಂತಹ ಸುಕುಮಾರ ನಿಗೆ ಆಶ್ರಮ ವಾಸವೇ! ಈ ವಸುಮತಿಯೇ ಅಭಾಗಿನಿ, ಅಂತಹ ರಮಣ ನನ್ನು ಕಳೆದುಕೊಂಡಳು. ಕಮಲ ಕೋಮಲವಾದ ಆ ಕಾಲುಗಳು ಕಾಡಿನ ಲ್ಲೆಂತು ನಡೆಯುವುವು? ಉಪ್ಪರಿಗೆಯ ಭೋಗದಲ್ಲಿದ್ದ ಆ ಓಜಸ್ವಿ ಶರೀರದ ಸ್ಥಿತಿ ಕಾಡಿನಲ್ಲೆಂತಾದೀತು? ಕುಲ, ಸತ್ವ, ಬಲ, ವರ್ಚಸ್ಸು, ಲಕ್ಷ್ಮಿಗಳಿಂದ ಕೂಡಿ ಇತರರಿಗೆ ದಾನ ಮಾಡಲು ಯೋಗ್ಯನಾದ ಅವನು ಇತರರಿಂದ ಭಿಕ್ಷೆ ಹೇಗೆ ಬೇಡುವನು? ಹಿರಣ್ಮಯವಾದ ಮೃದುಶಯನದಲ್ಲಿ ಪವಡಿಸಿ ಮಂಗಲ ಗೀತ ಕೇಳಿ ಏಳುತ್ತಿದ್ದವನು ಒಂದು ಅರಿವೆಯನ್ನು ಹಾಸಿದ ನೆಲದಮೇಲೆ ನಿದ್ದೆ ಮಾಡಬಹುದೆ?" ಎಂದು ಯಶೋಧರೆಯ ಪ್ರಲಾಪವೂ ಅತಿಯಾಯಿತು. "ಸಹಧರ್ಮಚಾರಿಣಿಯಾದ ನನ್ನನ್ನು ಬಿಟ್ಟು ಅವನಿಗೆ ಧರ್ಮವೆಂಬುದೆಂತು ಸಿಕ್ಕೀತು? ಪೂರ್ವದವರೆಲ್ಲಾ ಧರ್ಮಚರ್ಯೆಗೆ ಹೊರಟರೂ ಪತ್ನೀ ಸಮೇತ ರಾಗಿ ಹೋದದ್ದನ್ನು ಅವನು ಕೇಳಿ ಅರಿಯನೆ? ಯಜ್ಞದಲ್ಲಿಯೂ ಪತ್ನಿಗೆ ಸಮಾನ ಅಧಿಕಾರ. ಹೀಗಿರುವಾಗ ಧರ್ಮದಲ್ಲಿ ನನಗೇಕೆ ಮೋಸಮಾಡಿದ? ಬಹುಶಃ ನನಗಿಂತ ಹೆಚ್ಚಿನ ಅಪ್ಸರೆಯರನ್ನು ಆಶಿಸಿ ಹೋಗಿರಬೇಕು. ಇಲ್ಲ, ಸ್ತ್ರೀಸಂಗವನ್ನೇ ತ್ಯಜಿಸಿದ ಆ ಮಹಾತ್ಮನ ವಿಷಯದಲ್ಲಿ ಹೀಗೆನ್ನುವುದು ತಪ್ಪು. ಸ್ವರ್ಗವೂ ಅವನಿಗೆ ಅಲಭ್ಯವಲ್ಲ. ಇಹದಲ್ಲಾಗಲಿ ಪರದಲ್ಲಾಗಲಿ, ನನ್ನನ್ನು ಅವನೇಕೆ ತೊರೆದ? ಈ ಮಗುವು ಎಂತಹ ಅದೃಷ್ಟಹೀನ! ತಂದೆಯ ತೊಡೆಯಲ್ಲಾಡುವ ಯೋಗವಿಲ್ಲ. ಅಬ್ಬಾ ಅವನ ಮನಸ್ಸೆಷ್ಟು ದಾರುಣ— ಶತ್ರುಗಳಿಗೂ ಸುಖವನ್ನು ತರುವ ಕಂದನನ್ನು ಬಿಟ್ಟುಹೋಗಬೇಕಾದರೆ.

ನನ್ನ ಎದೆಯೂ ದಾರುಣವೇ – ಆರ್ಯಪುತ್ರನಿಲ್ಲದಿದ್ದರೂ ಇನ್ನೂ ಬಿರಿಯದೆ ಇದೆಯಲ್ಲಾ." ಇವರೆಲ್ಲರೂ ಹೀಗೆ ಒಂದೇ ಸಮನೆ ಪ್ರಲಾಪಿಸುತ್ತಿರುವಾಗ ಅರಸನು ಬಂದು ನೋಡಿದ, ಮೂರ್ಛೆಹೋದ. ಎದ್ದು ಕುದುರೆಗೆ ಹೇಳಿದ — 'ಎಷ್ಟೋ ಉಪಕಾರ ಮಾಡಿದ ನೀನು ಬಹಳ ದೊಡ್ಡ ಅಪಕಾರ ಮಾಡಿದೆ, ಕಂಥಕ! ನನ್ನನ್ನಾದರೂ ಈ ಕ್ಷಣ ಅಲ್ಲಿಗೆ ಮುಟ್ಟಿಸು, ಇಲ್ಲವೆ ಅವನನ್ನಾದರೂ ಮತ್ತೆ ಕರೆದು ತಾ. ಅವನಿಲ್ಲದೆ ನಾನು ಜೀವಿಸಲಾರೆ. ಹಿಂದಿನ ರಾಜರು ಕುಪುತ್ರರು ಹೋದರೂ ತಡೆಯದೆ ಇದ್ದರು. ಇಂತಹ ಸುಪುತ್ರನನ್ನು ಕಳೆದುಕೊಂಡು ನಾನೆಂತಿರಲಿ.' ಹೀಗೆ ಶೋಕವಿಹ್ವಲನಾಗಿ ಹುಚ್ಚನಾಗಿದ್ದ ರಾಜನನ್ನು ಮಂತ್ರಿ ಪುರೋಹಿತರು ಹೇಗೋ ಕಷ್ಟದಿಂದ ಸಮಾಧಾನ ಮಾಡಿದರು. ಸರ್ವ ಪ್ರಯತ್ನದಿಂದಲೂ ಅವನನ್ನು ಹುಡುಕಿತನ್ನಿರಿ ' ಎಂದು ಅಪ್ಪಣೆಮಾಡಿ ಅರಸನು ಮುಂದಿನ ಕಾರ್ಯದಲ್ಲಿ ಉದ್ಯುಕ್ತನಾದನು. (ಸರ್ಗ-೮)

**ಕುಮಾರಾನ್ವೇಷಣ** —ಮಂತ್ರಿ ಪುರೋಹಿತರು ಅದೇ ದಾರಿಯಲ್ಲಿ ಹುಡುಕುತ್ತಾ ಹೊರಟು ಭಾರ್ಗವಾಶ್ರಮಕ್ಕೆ ಬಂದರು. ಅಲ್ಲಿಂದ ಅರಾಡಾಶ್ರಮಕ್ಕೆ ಕುಮಾರನು ಹೊರಟುದನ್ನು ತಿಳಿದು ಆ ದಾರಿಯಲ್ಲಿ ಅವನನ್ನು ಒಂದು ಮರದ ಬುಡದಲ್ಲಿ ಸಂಧಿಸಿದರು. ರಾಮನನ್ನು ಸಂಧಿಸಿದ ವಸಿಷ್ಠನಂತೆ ರಾಜನ ಸಂದೇಶವನ್ನು ತಿಳಿಸಿದರು —" ನಿನ್ನ ಧರ್ಮಾಚರಣೆಯ ನಿಶ್ಚಯವನ್ನು ಬಲ್ಲೆ. ಇದು ಕಾಲಾಂತರದಲ್ಲಿ ನಡೆಯಬೇಕಾದದ್ದೇ. ಆದರೆ ಅಕಾಲದಲ್ಲಿ ಹೊರಟೆಯೆಂಬ ಶೋಕಾಗ್ನಿಯಿಂದ ನಾನು ಬೇಯುತ್ತಿದ್ದೇನೆ. ನೀನು ತಿರುಗಿ ಬಂದು ನಿನ್ನ ಧರ್ಮಕ್ಕನುಸಾರವಾಗಿ ರಾಜ್ಯವನ್ನು ವಹಿಸಿಕೊ; ಮುಪ್ಪಿನಲ್ಲಿ ಕಾಡಿಗೆ ಹೋಗುವೆಯಂತೆ. ತಂದೆಯಲ್ಲಿ ದಯೆದೋರು. ದಯೆಯೇ ಧರ್ಮ. ಕಾಡೊಳಗೇ ಧರ್ಮಾನುಷ್ಠಾನ ಸಾಧ್ಯವೆಂಬುದೇನೂ ಇಲ್ಲ. ಬುದ್ಧಿ, ಯತ್ನ, ನಿಮಿತ್ತಗಳಿಂದ ಊರಲ್ಲಿಯೂ ಸಾಧ್ಯವೇ. ಕಾಡಿಗೆ ಹೋಗುವುದು ಅಂಜುಕುಳಿಗಳ ಕೆಲಸ. ಸಕಲರಾಜಭೋಗಗಳಲ್ಲಿ ಓಲಾಡುತ್ತಿರುವಾಗಲೂ ಹಿಂದೆ ಬಲಿ, ವಜ್ರಬಾಹು, ಜನಕ ಮುಂತಾದ ಗೃಹಸ್ಥರೇ ಮೋಕ್ಷವನ್ನು ಸಾಧಿಸಿಲ್ಲವೆ? ಆದ್ದರಿಂದ ನೃಪಲಕ್ಷ್ಮಿಯ ಜತೆಗೇ ಜ್ಞಾನಾಧಿಪತ್ಯವನ್ನೂ ನೀನು ಗಳಿಸಬಹುದು. ನಿನಗೆ ಪಟ್ಟಾಭಿಷೇಕಮಾಡಿದೊಡನೆ ನಾನು ಕಾಡಿಗೆ ಹೋಗುತ್ತೇನೆ." ರಾಜನ ಶೋಕದ ಆಳವನ್ನು ವರ್ಣಿಸಿದರು.

ಪಿತೃವಾಕ್ಯಪಾಲನೆಯ ಧರ್ಮವನ್ನು ರಾಮಾದಿಗಳ ದೃಷ್ಟಾಂತದಿಂದ ಬೋಧಿಸಿದರು. ತಾಯಿ, ಪತ್ನಿ, ಮಗ, ಅಂತಃಪುರ, ಪೌರರು—ಎಲ್ಲರ ಅಳಲನ್ನೂ ವಿವರಿಸಿದರು. ಪರಿಪೂರ್ಣಸತ್ತ್ವನಾದ ಬೋಧಿಸತ್ತ್ವನ ಮನಸ್ಸು ಕದಲಲಿಲ್ಲ —'ನನಗೆ ತಂದೆಯ ಪ್ರೀತಿ ಗೊತ್ತಿದೆ. ಆದರೂ ವ್ಯಾಧಿ ಜರಾ ಮರಣಗಳ ಭಯದಿಂದ ಸ್ವಜನರನ್ನು ತೊರೆದಿದ್ದೇನೆ. ವಿಯೋಗ ಎಂದೂ ತಪ್ಪದು, ಇಂದೇ ಆಗಲೆಂದು ನಿಶ್ಚಯಿಸಿದ್ದೇನೆ. ಶೋಕಕ್ಕೆಲ್ಲ ಅಜ್ಞಾನವೇ ಕಾರಣ. ದಾರಿಹೋಕರಂತೆ ಸೇರಿದ್ದೇವೆ, ಅಗಲುತ್ತೇವೆ. ಇದು ಲೋಕದ ಸ್ವಭಾವ. ಇದಕ್ಕೆ ದುಃಖವೇಕೆ? ಕಾಲಾಕಾಲಗಳಿರುವುದು ಕಾಮೋಪಭೋಗಕ್ಕೆ ಮತ್ತು ಅರ್ಥಪ್ರಾಪ್ತಿಗೆ, ಮೋಕ್ಷಚಿಂತೆಗಲ್ಲ. ರಾಜ್ಯವನ್ನು ನನಗಾಗಿ ಅರಸ ಬಿಡುವುದು ಅವನ ಔದಾರ್ಯ, ಸ್ವೀಕರಿಸುವುದು ನನಗೆ ತಕ್ಕುದಲ್ಲ. ಮದ, ಶ್ರಮ, ಪರಹಿಂಸೆ, ಧರ್ಮಪೀಡೆಗಳಿಗೆ ಆಗರವಾದ ನೃಪತ್ವದಲ್ಲಿ ಅಜ್ಞಾನ ಹೆಚ್ಚದ ಹೋಗುವುದೆಂತು? ಉರಿಯುವ ಸ್ವರ್ಣಗೃಹದಂತೆ, ವಿಷಯುಕ್ತವಾದ ಮೃಷ್ಟಾನ್ನದಂತೆ, ಮೊಸಳೆಗಳಿರುವ ಪದ್ಮಸರದಂತೆ ರಾಜ್ಯ ರಮ್ಯವೂ ಹೌದು, ವ್ಯಸನಾಶ್ರಯವೂ ಹೌದು. ರಾಜ್ಯದಿಂದ ಸುಖವೂ ಇಲ್ಲ, ಧರ್ಮವೂ ಇಲ್ಲ. ಹಿಂದಿನವರು ಮುಪ್ಪಿನಲ್ಲಿ ಕಾಡಿಗೆ ಹೋದುದೇ ಅದರಿಂದ. ಕಾಡಿನಲ್ಲಿ ಹುಲ್ಲುತಿಂದು ಹರ್ಷವೆಂಬ ರತ್ನದೊಡನಿರುವುದು ರಾಜ್ಯಸಂಗತವಾದ ಕೃಷ್ಣಸರ್ಪಗಳೊಡನಿರುವುದಕ್ಕಿಂತ ಎಷ್ಟೋ ಮೇಲು, ಪ್ರತಿಜ್ಞಾಭಂಗಮಾಡಿ ಮನೆಗೆ ಬರುವುದು ಸರಿಯಲ್ಲ. ನನ್ನ ಕುಲಕ್ಕೆ ಇದು ಭೂಷಣವಲ್ಲ. ವಾಂತಿಮಾಡಿದ್ದನ್ನು ಮತ್ತೆ ತಿನ್ನಲಾದೀತೇ! ಕಾಮವನ್ನು ಬಿಟ್ಟು ಮತ್ತೆ ಕಟ್ಟಿಕೊಳ್ಳಲೆ, ಉರಿವ ಮನೆಯಿಂದ ತಪ್ಪಿಸಿಕೊಂಡು ಮತ್ತೆ ಅದನ್ನೇ ಪ್ರವೇಶಿಸಬಹುದೆ? ಪೂರ್ವದ ರಾಜರು ಎರಡನ್ನೂ ಸಾಧಿಸಿದರೆಂಬುದು ಸುಳ್ಳು. ಶಮಪ್ರಧಾನವಾದ ಮೋಕ್ಷಧರ್ಮವೆಲ್ಲಿ? ದಂಡಪ್ರಧಾನವಾದ ರಾಜಧರ್ಮವೆಲ್ಲಿ? ಅವೆರಡೂ ಶೀತೋಷ್ಣಗಳಂತೆ ವಿರುದ್ಧ. ರಾಜನಾಗಿದ್ದೇ ಆತ್ಯಂತಿಕ ಮೋಕ್ಷ ಸಿಕ್ಕಿತೆನ್ನುವುದು ಮಿಥ್ಯಾಭಿಮಾನ ಮಾತ್ರ.' ಮತ್ತೆ ಮಂತ್ರಿ ವಾದಿಸುತ್ತಾನೆ.—ನೀನು ಧರ್ಮಕಾಮ, ಸರಿ. ಆದರೆ ಕಾಲ ಯುಕ್ತವಾಗಿಲ್ಲ, ತಂದೆಗೆ ಶೋಕವನ್ನುಂಟುಮಾಡಿ ಧರ್ಮ ಬರುವುದಿಲ್ಲ, ಅಧರ್ಮವೇ ಬರುತ್ತದೆ.

ಪ್ರತ್ಯಕ್ಷವಾದ ಫಲವನ್ನು ಕಡೆಗಣಿಸಿ ಕಾಣದ್ದಕ್ಕೆ ಕೈ ಚಾಚುವ ನಿನಗೆ ಪುರುಷಾರ್ಥಗಳ ವಿವೇಕ ಮೊದಲೇ ಇಲ್ಲ. ಪುನರ್ಜನ್ಮವುಂಟೆಂದು ಕೆಲವರು ಹೇಳಿದರೆ ಉಳಿದವರು ಇಲ್ಲವೆನ್ನುತ್ತಾರೆ. ಹೀಗಿರುವಾಗ ಕೈಗೆ ಬಂದ ಲಕ್ಷ್ಮಿ ಯನ್ನು ಬಿಡುತ್ತಾರೆಯೆ? ಬೇರೆ ಪ್ರವೃತ್ತಿಗಳಿದ್ದುದೇ ಆದರೆ, ಅದಕ್ಕನು ಸಾರವಾಗಿಯೇ ಭೋಗಿಸೋಣ, ಇಲ್ಲದಿದ್ದರೆ ಪ್ರಯತ್ನವಿಲ್ಲದೆಯೇ ಜಗತ್ತಿಗೆ ಮೋಕ್ಷ ಸಿಕ್ಕುವುದೆಂದರ್ಥ. ಪರಲೋಕವುಂಟೆಂದು ಕೆಲವರೆನ್ನುತ್ತಾರೆ, ಆದರೆ ಮೋಕ್ಷದ ಮಾತನ್ನು ಎತ್ತುವುದಿಲ್ಲ. ಬೆಂಕಿಗೆ ಸುಡುವುದು ಹೇಗೆ ಸ್ವಭಾವವೋ ಹಾಗೆ ಪ್ರವೃತ್ತಿಗೆಲ್ಲ ಸ್ವಭಾವವೇ ಕಾರಣವೆನ್ನುವವರೂ ಇದ್ದಾರೆ. ಶುಭಾಶುಭ, ಭವಾಭವ, ಎಲ್ಲ ಸ್ವಭಾವಸಿದ್ಧವೇ ಆದರೆ ಮೋಕ್ಷ ಪ್ರಯತ್ನವೇ ವ್ಯರ್ಥ ಜರಾಮರಣಾದಿ ಸ್ವಭಾವನಿಯಮವನ್ನು ಮೀರ ಲಾರಳವು? ಗರ್ಭಪಿಂಡದಲ್ಲಿ ಅಂಗಾಂಗ ಉತ್ಪನ್ನವಾಗುವುದು ಸ್ವಭಾವ, ಪಂಚಭೂತಗಳು ದೇಹಾಕಾರವಾಗಿ ಪ್ರವೃತ್ತವಾಗುವುದೂ ಸ್ವಭಾವವೇ. ಮುಳ್ಳಿಗೆ ಮೊನೆಯನ್ನು ಮಾಡಿದವರಾರು? ಮೃಗ ಪಕ್ಷಿಗಳಲ್ಲಿ ವೈಚಿತ್ರ್ಯ ವನ್ನು ತಂದವರಾರು? ಎಲ್ಲವೂ ಸ್ವಭಾವವೇ. ಪ್ರಯತ್ನ ವ್ಯರ್ಥ. ಕೆಲವರು ಈಶ್ವರನಿಂದ ಸೃಷ್ಟಿಯಾಯಿತೆನ್ನುತ್ತಾರೆ ನಿಜವಾದರ ಪುರುಷನ ಪ್ರಯತ್ನ ದಿಂದೇನು ಫಲ? ಯಾರು ಜಗತ್ತಿಗೆಲ್ಲ ಕಾರಣನೋ, ಅವನೇ ನಿಯಾ ಮಕ, ಅವನೇ ವಿನಾಶಕನೂ. ಮನುಷ್ಯನಿಗೆ ದೇವಋಣ, ಪಿತೃಋಣ, ಋಷಿ ಋಣಗಳೆಂಬ ಮೂರು ಋಣಗಳಿವೆ. ಯಾಗಾದಿಗಳನ್ನು ಮಾಡಿ, ಸಂತತಿ ಪಡೆದು, ವೇದಾಧ್ಯಯನಮಾಡಿ ಋಣಮುಕ್ತನಾಗುತ್ತಾನೆ. ಋಣಮುಕ್ತಿಯೇ ನಿಜವಾದ ಮೋಕ್ಷ. ಮಾರ್ಗಾಂತರದಿಂದ ಮೋಕ್ಷ ಬಯಸುವವರಿಗೆ ಶ್ರಮ ದೊರೆಯುವುದೇ ಹೊರತು ಮೋಕ್ಷವಲ್ಲ. ಆದ್ದರಿಂದ ನಿನಗೆ ಮೋಕ್ಷ ಬೇಕಾ ದರ ಯಥೋಕ್ತವಿಧಿಯಂತೆ ನಡೆ, ರಾಜನ ಶೋಕವೂ ತಪ್ಪುವುದು. ಕಾಡನ್ನು ಬಿಟ್ಟು ಮನೆಗೆ ಬಂದವರ ಉದಾಹರಣೆಗಳೂ ಬೇಕಾದ ಹಾಗಿವೆ. ಅಂಬರೀಷ, ರಾಮರ ಕಥೆ ಗೊತ್ತಿಲ್ಲವೇ?" ಈ ಮಾತು ಯಾರನ್ನಾದರೂ ಮೆಚ್ಚಿಸು ವಂತಿತ್ತು, ಆದರೆ ಸಿದ್ಧಾರ್ಥ ಚಲಿತನಾಗಲಿಲ್ಲ. 'ಸಂಶಯವಿರುವುದು ನಿಜ, ಎರಡನೆಯವರ ಮಾತಿನಿಂದ ನನಗೆ ಅದರ ಪರಿಹಾರವಂತೂ ಸಾಧ್ಯವಿಲ್ಲ. ಪರಸ್ಪರ ವಿರುದ್ಧವಾದ ತತ್ವವನ್ನು ನಾನು ಪರೀಕ್ಷಿಸದೆ ಒಪ್ಪುವವನಲ್ಲ. ಅದು

ಕುರುಡರನ್ನು ನೆಚ್ಚುವ ಕುರುಡರಂತೆಯೇ ಸರಿ. ಶುಭಾತ್ಮನ ವ್ಯರ್ಥ ಶ್ರಮವೇ ಅಶುಭಾತ್ಮನ ಸುಖಕ್ಕಿಂತ ಉತ್ತಮ. ಶಾಸ್ತ್ರ ಅವ್ಯವಸ್ಥಿತವಾಗಿದೆ. ಆಪ್ತರ ಮಾತು ಸಾಧುವೆನ್ನಬೇಕು. ದೋಷವಿಲ್ಲದವರೇ ಆಪ್ತರು. ಅವರು ಸುಳ್ಳಾಡುವುದಿಲ್ಲ. ರಾಮಾದಿಗಳು ವ್ರತಭಂಗಮಾಡಿಕೊಂಡರೆ ಅದನ್ನು ನಾನೇಕೆ ಮಾಡಲಿ? ಸೂರ್ಯನು ಭೂಮಿಗೆ ಬೀಳಬಹುದು, ಹಿಮಾಚಲವು ಅಳ್ಳಾಡಬಹುದು. ನಾನು ಮಾತ್ರ ತತ್ವದರ್ಶನ ಮಾಡದೆ ಮನೆಗೆ ಬರುವುದಿಲ್ಲ. ಉರಿಯುವ ಬೆಂಕಿಯನ್ನಾದರೂ ಹೊಕ್ಕೇನು, ಕೃತಾರ್ಥನಾಗದೆ ಮನೆಗೆ ಬರಲಾರೆ.' ಎಂದು ವೀರ ಪ್ರತಿಜ್ಞೆಮಾಡಿ ನಿರ್ಮಮನಾದ ಕುಮಾರನು ಹೊರಟೇಬಿಟ್ಟನು. ನಿರುಪಾಯರಾಗಿ ಮಂತ್ರಿ ಪುರೋಹಿತರು ಬಂದ ದಾರಿ ಹಿಡಿಯಬೇಕಾಯಿತು. (ಸರ್ಗ-೯)

**ಶ್ರೇಣ್ಯನ ಆಗಮನ** —ಕುಮಾರನು ಗಂಗೆಯನ್ನು ದಾಟಿ ರಾಜಗೃಹಕ್ಕೆ ಬಂದನು. ಆ ಪಟ್ಟಣದಲ್ಲಿ ಸೂರ್ಯನಂತೆ ಬೆಳಗುತ್ತ ಇವನು ಬರುತ್ತಿದ್ದರೆ ಎಲ್ಲರೂ ವಿಸ್ಮಯದಿಂದ ನೋಡುತ್ತಿದ್ದರು; ಎಷ್ಟೋ ಜನ ವಂದಿಸಿದರು, ಗೌರವಿಸಿದರು. ರಾಜಗೃಹದ ಲಕ್ಷ್ಮಿಯೇ ಕ್ಷುಭಿತೆಯಾದಳು. ಎಲ್ಲವನ್ನೂ ತ್ಯಾಗಮಾಡಿ ಮೋಕ್ಷಾರ್ಥಿಯಾಗಿ ಹೊರಟ ಶಾಕ್ಯರಾಜಪುತ್ರನೇ ಇವನೆಂಬುದನ್ನು ಕೇಳಿದೊಡನೆ ಶ್ರೇಣ್ಯನೃಪನು (ಬಿಂಬಸಾರ) ಅವನ ದರ್ಶನಕ್ಕೆ ಎಳಸಿ ದೂತನನ್ನು ಮೊದಲು ಅಟ್ಟಿದನು. ಭೈಕ್ಷವನ್ನು ತೆಗೆದುಕೊಂಡು ನಿರ್ಜನವಾದ ಗುಡ್ಡದ ತುದಿಯಲ್ಲಿ ಬಾಲಸೂರ್ಯನಂತೆ ಬೆಳಗುವ ಕುಮಾರನನ್ನು ದೂತನು ನೋಡಿ, ಶ್ರೇಣ್ಯನನ್ನು ಕರೆದುಕೊಂಡು ಬಂದನು. ಶ್ರೇಣ್ಯಮಹಾರಾಜನು ಸಿಂಹದಂತೆ ಆ ಗುಡ್ಡವನ್ನೇರಿ ಬಂದನು. ಬೋಧಿಸತ್ವನನ್ನು ನೋಡಿದೊಡನೆ ಅವನಿಗೆ ಪ್ರೀತಿಯುಕ್ಕಿತು. 'ನಿನ್ನ ಕುಲ ದೊಡ್ಡದು; ಯೋಗ್ಯತೆಯೂ ದೊಡ್ಡದು. ರಾಜ್ಯಬಿಟ್ಟು ಭಿಕ್ಷೆ ಬೇಡುವ ಬುದ್ಧಿ ನಿನಗೆಂತು ಬಂದಿತು? ಚಂದನರಸೋಚಿತವಾದ ನಿನ್ನ ಮೈಗೆ ಕಾವಿ ಸಲ್ಲದು. ಪ್ರಜಾರಕ್ಷಣೆಗೆ ಯೋಗ್ಯವಾದ ಪಾಣಿ ಭಿಕ್ಷೆಗೆ ತಕ್ಕುದೆ? ನಿನಗೆ ತಂದೆಯ ರಾಜ್ಯ ಬೇಡಾದರೆ ನನ್ನ ರಾಜ್ಯದ ಅರ್ಧವನ್ನು ಕೊಡುತ್ತೇನೆ. ಯಾರ ಸ್ವಜನಬಾಧೆಗೂ ಅವಕಾಶವೇ ಇಲ್ಲದಂತಾಗುತ್ತದೆ. ಸತ್ಸಂಗದಿಂದ ನನಗೂ ಶ್ರೇಯೋಭಿವೃದ್ಧಿಯಾಗುತ್ತದೆ. ನಿನ್ನ ಅಭಿಮಾನಕ್ಕೆ ಇದು ಒಪ್ಪ

ದಿದ್ದರೆ, ಸೈನ್ಯಗಳನ್ನು ತೆಗೆದುಕೊಂಡು ನನ್ನ ಸಹಾಯದಿಂದ ಪರರಾಜ-ಗಳನ್ನು ಗೆದ್ದು ಬಾಳು. ಎರಡರಲ್ಲೊಂದನ್ನು ಆರಿಸಿಕೋ. ಧರ್ಮಾರ್ಥ ಕಾಮಗಳನ್ನು ಭಜಿಸು. ಇದನ್ನು ಬಿಟ್ಟರೆ ಪರದಲ್ಲಿಯೂ ಭ್ರಷ್ಟರಾಗುತ್ತಾರೆ. ಅರ್ಥಧರ್ಮಗಳನ್ನು ಉಲ್ಲಂಘಿಸಿದರೆ ಕಾಮವಿಲ್ಲ, ಧರ್ಮಕಾಮಗಳನ್ನು ಬಿಟ್ಟು ಅರ್ಥವೂ ಇಲ್ಲ. ಕಾಮಾರ್ಥಗಳೆರಡೂ ಹೋದಮೇಲೆ ಧರ್ಮಕ್ಕೆ ಮೊದಲೇ ತಾವಿಲ್ಲ. ಈ ಮೂರರ ಅಧಿಗಮವೇ ಮನುಷ್ಯರ ಪುರುಷಾರ್ಥ. ನಿನ್ನ ಪೀನಬಾಹುಗಳು ವಿಫಲವಾಗದಿರಲಿ, ಇವುಗಳಿಂದ ತ್ರಿಲೋಕಗಳನ್ನು ಬೇಕಾದರೂ ಗೆಲ್ಲಬಲ್ಲೆ, ಭೂಮಿಯ ಮಾತೇನು? ನಿನ್ನ ಯತಿವೇಷದಿಂದ ನನಗೆ ಖೇದವಾಗಿ ಹೀಗೆ ಹೇಳುತ್ತಿದ್ದೇನೆ. ಯೌವನವನ್ನು ಮುಪ್ಪಡಸುವ ಮೊದಲೇ ಕಾಮಗಳನ್ನು ಭೋಗಿಸು. ಆಮೇಲೆ ಧರ್ಮಚಿಂತೆ ಮಾಡುವೆಯಂತೆ. ಕಾಮೋಪಭೋಗದ ಮಧ್ಯೆ ಮುಪ್ಪಿಗೂ ಬರಲು ಶಕ್ತಿಯಿರುವುದಿಲ್ಲವೆನ್ನುತ್ತಾರೆ. ಧರ್ಮವೆಲ್ಲ ಮುದುಕರ ಕೆಲಸ. ಯೌವನದಲ್ಲಿ ಶಾಂತಿ ಸಿಕ್ಕುವುದು ಕಷ್ಟ, ಮುಪ್ಪಿನಲ್ಲಿ ಸುಲಭ. ಯೌವನದಲ್ಲಿ ಇಂದ್ರಿಯವಶನಾಗದೆ ಇರುವುದು ಅಶಕ್ಯ. ಈಗ ಧರ್ಮಾಸಕ್ತಿಯನ್ನು ಬಿಡು. ನಿನಗಷ್ಟು ಹಟವಿದ್ದರೆ ಕುಲಧರ್ಮದಂತೆ ಯಜ್ಞಗಳನ್ನು ಮಾಡು. ಇಂದ್ರಪದವಿಯನ್ನೂ ಪಡೆಯುವೆ. ಮಹರ್ಷಿಗಳು ದುಷ್ಕರ ತಪಸ್ಸಿನಿಂದ ಪಡೆಯುವುದನ್ನೇ ರಾಜರು ಯಜ್ಞಗಳಿಂದ ಪಡೆದಿದ್ದಾರೆ.' ಹೀಗೆ ಮಗಧರಾಜನು ಪರಿಪರಿಯಿಂದ ನುಡಿದರೂ ಕೈಲಾಸದಂತೆ ಸಿದ್ಧಾರ್ಥನು ಅಚಲನಿಶ್ಚಯನಾಗಿಯೇ ಇದ್ದನು. (ಸರ್ಗ-10)

**ಕಾಮನಿಂದೆ**.—ಮಗಧರಾಜನಿಗೆ ಕುಮಾರನು ಸರಿಯಾಗಿ ಉತ್ತರ ಹೇಳುತ್ತಾನೆ —"ಕುಲಮಿತ್ರರಾದ ನೀವು ವಿಶ್ವಾಸದಿಂದ ಹೀಗೆ ಹೇಳಿದುದು ಸಹಜವಾಗಿಯೇ ಇದೆ. ಅರ್ಥಹೀನರೊಡನೆ ತೋರುವ ಮೈತ್ರಿಯೇ ನಿಜವಾದ ಮೈತ್ರಿ. ದ್ರವ್ಯವನ್ನು ಮಿತ್ರರಿಗಾಗಿಯೂ ಧರ್ಮಕ್ಕಾಗಿಯೂ ವಿನಿಯೋಗಿಸುವವರಿಗೆ ಎಂದೂ ಪಶ್ಚಾತ್ತಾಪದ ಪ್ರಸಂಗ ಬರುವುದಿಲ್ಲ. ಆದರೆ ನಾನೂ ವಿಶ್ವಾಸದಿಂದಲೇ ಇದನ್ನು ಹೇಳಬೇಕಾಗಿದೆ—ಜರಾಮೃತ್ಯು ಭಯದಿಂದ ಮೋಕ್ಷಾರ್ಥಿಯಾಗಿ ಈ ಸಂನ್ಯಾಸಧರ್ಮವನ್ನು ಕೈಗೊಂಡಿದ್ದೇನೆ. ನಂಟರಿಷ್ಟರನ್ನೆಲ್ಲ ಬಂಧನಗಳೆಂದು ಮೊದಲೇ ತೊರೆದಾಗಿದೆ. ನನಗೆ ಹಾವುಗಳಿಂದಾಗಲಿ, ನಭದಿಂದ ಬೀಳುವ ಬರಸಿಡಿಲಿನಿಂದಾಗಲಿ, ಗಾಳಿಯುರಿಸುವ

ಬೆಂಕಿಯಿಂದಾಗಲಿ ವಿಷಯಗಳಿಂದ ಬರುವಂತೆ ಭಯ ಬರುವುದಿಲ್ಲ. ಅನಿತ್ಯವಾದ ಕಾಮಗಳು ಕುಶಲವೆಂಬ ಧನವನ್ನು ಕದಿಯುವ ಕಳ್ಳರು. ಅವುಗಳ ಚಿಂತೆಯೇ ಬಂಧಕವೆಂದಮೇಲೆ ಇದ್ದರೆ ಹೇಳುವುದೇನು? ಕಾಮಗಳಿಂದ ತೃಪ್ತಿಯೆಂಬುದೆಂದೂ ಇಲ್ಲ. ಅದೇ ಜಗತ್ತಿನಲ್ಲೆಲ್ಲ ದೊಡ್ಡ ಅನರ್ಥ. ಅಜ್ಞಾನದಿಂದ ಜನರು ಅದರಲ್ಲಿ ಆಸಕ್ತರಾಗಿದ್ದಾರೆ. ಸಮುದ್ರಾಂಬರೆಯಾದ ವಸುಮತಿಯನ್ನು ಗೆದ್ದರೂ ಕಾಮ ಶಮನವಾಗುವುದಿಲ್ಲ. ದೇವತೆಗಳು ಸುವರ್ಣವೃಷ್ಟಿ ಕರೆದರೂ, ಲೋಕಗಳನ್ನೆಲ್ಲ ಗೆದ್ದು ಇಂದ್ರನ ಅರ್ಧಾಸನ ಭಾಗಿಯಾದರೂ ಮಾಂಧಾತನಿಗೆ ವಿಷಯಗಳಲ್ಲಿ ತೃಪ್ತಿ ಬರಲಿಲ್ಲ. ಹಾಗೆಯೇ ನಹುಷ ಮುಂತಾದವರ ಕಥೆಯಾದರೂ. ವ್ರತೋಪವಾಸಾದಿಕೃಶರಾದ ಮುನಿಗಳನ್ನೇ ಕಾಮ ಬಿಡಲಿಲ್ಲ. ಅದರ ಸ್ವಾದಕ್ಕಿಂತ ಬಂಧಕತ್ವ ಹೆಚ್ಚು; ಅದು ವಿಷಕ್ಕೆ ಸಮಾನ. ದುಃಖಮಯವಾದ ಅದನ್ನು ಬಿಟ್ಟವನೇ ವಿವೇಕಿ. ಅದಕ್ಕಾಗಿ ಆಶಿಸಿ ಕುರುಕುಲದವರೂ ವೃಷ್ಣಿ ಅಂಧಕರೂ ವಿನಾಶವನ್ನು ಹೊಂದಿದರು. ದುಃಖಪ್ರತೀಕಾರದ ಸಾಧನಗಳೇ ವಸ್ತ್ರಾದಿಗಳು. ಬಾಯಾರಿಕೆಯನ್ನು ತಪ್ಪಿಸುವುದು ನೀರು, ಹಸಿವನ್ನು ತಪ್ಪಿಸುವುದು ಅನ್ನ. ಗಾಳಿ ಬಿಸಿಲುಗಳಿಂದ ತಪ್ಪಿಸುವುದು ಮನೆ; ಶೀತವನ್ನು ತಪ್ಪಿಸುವುದು ಬಟ್ಟೆ. ಇವುಗಳನ್ನು ಭೋಗಗಳೆಂದು ತಿಳಿಯುವುದು ತಪ್ಪು. ಭೋಗವನ್ನು ಆಸ್ವಾದಿಸುವೆನೆಂಬ ಮಾತೇ ಅರ್ಥಹೀನ, ದುಃಖಪ್ರತೀಕಾರವನ್ನು ಭೋಗಿಸುವುದೆಂತು? ಸುಖದುಃಖಾದಿ ದ್ವಂದ್ವಗಳು ಜಗತ್ತಿನಲ್ಲಿ ಯಾರನ್ನೂ ಬಿಡುವುದಿಲ್ಲ. ರಾಜನಿಗೂ ನೋವುಂಟು, ದಾಸನಿಗೂ ನಗೆಯುಂಟು. ರಾಜನ ಪದವಿಯಿಂದ ದುಃಖ ಹೆಚ್ಚೇ ಹೊರತು, ಸುಖವಿಲ್ಲ. ರಾಜತ್ವವಿರುವುದೇ ಪರಸೇವೆಗಾಗಿ, ಸ್ವಾರ್ಥಸಿದ್ಧಿಗಲ್ಲ. ರಾಜನೂ ಹೊಟ್ಟೆಯಷ್ಟೇ ಮೀರಿ ಉಣ್ಣುವಂತಿಲ್ಲ, ಮೈಯಷ್ಟೇ ಮೀರಿ ಉಡುವಂತಿಲ್ಲ. ಮಿಕ್ಕುದೆಲ್ಲ ಮದನಿಮಿತ್ತ ಮಾತ್ರ. ಅದರಿಂದ ತುಷ್ಟಿಬರುವುದೆಂದರೆ, ಅದಿಲ್ಲದೆಯೇ ನನಗೆ ಸಂತುಷ್ಟಿಯಿದೆ. ನೀನು ಮಿತ್ರನಾದ್ದರಿಂದ ಇಷ್ಟು ಬಿಡಿಸಿ ನುಡಿಯುತ್ತಿದ್ದೇನೆ. ಭಿಕ್ಷ ಬೇಡುವನೆಂದು ನನ್ನಲ್ಲಿ ಕನಿಕರ ಪಡಬೇಕಾಗಿಲ್ಲ; ತೃಷ್ಣಾವಶರಾದವರು ನಿಜವಾಗಿ ಶೋಚ್ಯರು. ನನ್ನ ಪ್ರತಿಜ್ಞೆಯ ಪಾಲನೆಗೆ ನೀನು ಸಹಾಯ ಮಾಡು. ಸಂಸಾರಶರದಿಂದ ವಿದ್ಧನಾಗಿ ಶಾಂತಿಪ್ರಾಪ್ತಿಗಾಗಿ ಹೊರಟ ನನಗೆ

ದೇವಲೋಕದ ರಾಜ್ಯವೂ ಬೇಡ, ತ್ರಿವರ್ಗವೂ ಕ್ಷಣಿಕವಾದ್ದರಿಂದ ಮೋಕ್ಷ ದಂತೆ ಶ್ರೇಯಸ್ಕರವಲ್ಲವೆಂದೇ ನನ್ನ ಅಭಿಪ್ರಾಯ. ಪುನಃಪುನಃ ಜನ್ಮ ಮೃತ್ಯುಮಯವಾದ ಸಂಸಾರ ಚಕ್ರ ಬಾರದಂತೆ ತಪ್ಪಿಸುವ ಮೋಕ್ಷವೊಂದೇ ಪರಮಪುರುಷಾರ್ಥ. ಮೃತ್ಯುವು ಬೆನ್ನ ಹಿಂದೆಯೇ ಆತುಕೊಂಡಿರುವಾಗ ವಯಸ್ಸಿಗೆ ಪ್ರಾಧಾನ್ಯವೇ ಇಲ್ಲ. ಆದ್ದರಿಂದ ಬಾಲನಾಗಲಿ, ವೃದ್ಧನಾಗಲಿ, ವಿರಕ್ತಿ ಬಂದೊಡನೆ ಮೋಕ್ಷಸಾಧನೆಗೆ ಶ್ರಮಿಸುವುದೇ ಸರಿ. ಯಾಗವೆಂಬ ಪರಹಿಂಸೆಯಿಂದ ನನಗೆ ಸುಖವುಂಟಾಗುವುದೂ ಬೇಡ. ಅದೇ ವಿಧಿ ಯೆಂದರೂ ಅದಕ್ಕೆ ನನ್ನ ಮನಸ್ಸು ಒಗ್ಗುವುದಿಲ್ಲ. ಹಿಂಸೆಯಿಂದ ಪ್ರತ್ಯಕ್ಷ ವಾಗಿಯೇ ಸುಖವಿಲ್ಲವೆಂದಮೇಲೆ ಅದೃಷ್ಟ ಸುಖವು ಬರುವುದನ್ನು ನಂಬುವು ದೆಂತು? ಎಲ್ಲಾ ಲೌಕಿಕಪ್ರವೃತ್ತಿಗಳೂ ಚಂಚಲವೇ ನನ್ನ ಮಾತನ್ನು ಮನ್ನಿಸು. ನಾನಿಂದೇ ಅರಾಡನನ್ನು ನೋಡಲು ಹೊರಡುತ್ತೇನೆ." ರಾಜನು 'ಹಾಗೆಯೇ ಆಗಲಿ, ಕೃತಕೃತ್ಯನಾಗಿ ಕಡೆಗೆ ನನಗೂ ಅನುಗ್ರಹಮಾಡು' ಎಂದು ಹೇಳಿ ಹಿಂತಿರುಗಿದನು. (ಸರ್ಗ-೧೧)

**ಅರಾಡದರ್ಶನ** —ಅರಾಡಮುನಿಯನ್ನು ಕಂಡು ಅವನಿಂದ ಸಾಂಖ್ಯ ತತ್ವವನ್ನು ಸಿದ್ಧಾರ್ಥನು ಅರಿತನು. " ಪಂಚಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಎಲ್ಲವೂ "ಪ್ರಕೃತಿ" ವಿಷಯಗಳು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು ಇವು "ವಿಕೃತಿ". ಈ "ಕ್ಷೇತ್ರ"ವನ್ನು ಅರಿಯುವವನೇ "ಕ್ಷೇತ್ರಜ್ಞ". ಕ್ಷೇತ್ರಜ್ಞನನ್ನು ಅಂತರಾತ್ಮನೆಂದೂ ವಿದ್ವಾಂಸರು ಹೇಳುವುದುಂಟು. ಕಪಿಲನೇ ಸಶಿಷ್ಯನಾಗಿ ಪ್ರತಿಬುದ್ಧನಾದ ಜ್ಞಾನಿ. ಜನ್ಮಜರಾಮರಣಗಳಿರುವುದೆಲ್ಲ "ವ್ಯಕ್ತ", ಹಾಗಲ್ಲದುದು "ಅವ್ಯಕ್ತ". ಅಜ್ಞಾನ, ಕರ್ಮ, ತೃಷ್ಣೆ—ಇವೇ ಸಂಸಾರಹೇತುಗಳು ಅಬುದ್ಧರು ಇವನ್ನು ದಾಟುವುದಿಲ್ಲ ದಾಟದಿರುವುದಕ್ಕೆ ವಿಪ್ರತ್ಯಯ, ಅಹಂಕಾರ, ಸಂದೇಹ, ಅಭಿಸಂಪ್ಲವ, ಅವಿಶೇಷ, ಅನುಪಾಯ, ಸಂಗ, ಅಭ್ಯವಪಾತ—ಇವು ಕಾರಣ. ಈ ಅವಿದ್ಯೆಗೆ ತಮಸ್ಸು, ಮೋಹ, ಮಹಾಮೋಹ, ಎರಡು ತಾಮಿಸ್ರಗಳು ಎಂಬ ಐದು ಗ್ರಂಥಿಗಳಿವೆ. ಆಲಸ್ಯವೇ ತಮಸ್ಸು; ಜನ್ಮಮೃತ್ಯುಗಳೇ ಮೋಹ; ಕಾಮವೇ ಮಹಾಮೋಹ. ಕ್ರೋಧವೇ ತಾಮಿಸ್ರ, ವಿಷಾದ ಅಂಧತಾಮಿಸ್ರ, ಸಂಸಾರ

ಪರಿವರ್ತನಕ್ಕೆಲ್ಲ ನಾನೇ ದ್ರಷ್ಟಾರ, ಶ್ರೋತಾರ, ಮಂತಾರ ಮುಂತಾದ ಭಾವನೆಯೇ ಕಾರಣ. ಕಾರಣನಾಶದಿಂದ ಕಾರ್ಯನಾಶವಾಗುತ್ತದೆ. ಮೋಕ್ಷ ಸಿಕ್ಕುತ್ತದೆ—ಜ್ಞಾನಿ, ಅಜ್ಞಾನಿ, ವ್ಯಕ್ತ, ಅವ್ಯಕ್ತಗಳೆಂಬ ನಾಲ್ಕರ ಸಮ್ಯಕ್ ಜ್ಞಾನದಿಂದ, ಅಪುನರ್ಭವವುಂಟಾಗುತ್ತದೆ. ಇದಕ್ಕಾಗಿ ಬ್ರಹ್ಮ ಚರ್ಯವೂ ವಿಹಿತವಾಗಿದೆ· ಸಾಧಕನು ಸಂನ್ಯಾಸಿಯಾಗಿ, ಶೀಲಸದಾ ಚಾರಗಳನ್ನು ಬೆಳೆಸಿಕೊಂಡು, ಇಂದ್ರಿಯನಿಗ್ರಹ ಪಡೆದು, ವಿತರ್ಕಯುಕ್ತ ಪೂರ್ವಧ್ಯಾನ, ಪ್ರೀತಿಯುಕ್ತಧ್ಯಾನ, ಪ್ರೀತಿವರ್ಜಿತಧ್ಯಾನ, ಸುಖದುಃಖ ವಿವರ್ಜಿತಧ್ಯಾನ, ಈ ಕ್ರಮಗಳಿಂದ ಜ್ಞಾನ ಪಡೆಯುತ್ತಾನೆ. ಇದನ್ನೇ ಮೋಕ್ಷವೆಂದು ಕೆಲವರು ತಿಳಿಯುತ್ತಾರೆ. ಇನ್ನೂ ಜ್ಞಾನಮಾರ್ಗದಲ್ಲಿ ಸಾಧನೆಯನ್ನು ಮುಂದುವರಿಸಿ ಸರ್ವವಿಕಲ್ಪಾತೀತವಾದ ಪರಮಜ್ಞಾನ ವನ್ನೂ ಪಡೆಯಬಹುದೆನ್ನುವರು. ಈ ಮಾರ್ಗಗಳಿಂದಲೇ ಹಿಂದೆ ಜನಕ, ವೃದ್ಧಪರಾಶರಾದಿಗಳು ಮುಕ್ತರಾದರು.'' 'ಕ್ಷೇತ್ರಜ್ಞ'ನ ಪರಿತ್ಯಾಗವು ಕಡೆಗೂ ಆಗದ ಪ್ರಯುಕ್ತ, ಅದು ಪೂರ್ಣ ಮೋಕ್ಷಸ್ವರೂಪವೆಂದು ಸಿದ್ಧಾರ್ಥನಿಗೆ ಎನಿಸಲಿಲ್ಲ. ಆತ್ಮನು ವಿಶುದ್ಧನಾಗಿದ್ದರೂ ಪ್ರತ್ಯಯಗಳ ಪ್ರಭಾವವು ಸರ್ವಕಾಲಕ್ಕೂ ಲುಪ್ತವಾಗುವುದು ಸಾಧ್ಯವಿಲ್ಲವೆಂದೆನಿಸಿತು. ಆತ್ಮನಿರುವಾಗ ಅಹಂಕಾರದ ಪರಿತ್ಯಾಗವೂ ಅಶಕ್ಯವೆನಿಸಿತು. ಸುಡದ ಬೆಂಕಿ ಯಿರುವುದೆಂತು? ಇವೇ ಮೊದಲಾದ ಕಾರಣಗಳಿಂದ ಅರಾಡನನ್ನು ಬಿಟ್ಟು ಉದ್ರಕನಲ್ಲಿಗೆ ಹೋದನು. ಅವನೂ ಆತ್ಮವಾದಿಯಾದ್ದರಿಂದ ಕುಮಾರನು ಆತನನ್ನೂ ಬಿಟ್ಟು ಗಯನ ಆಶ್ರಮಕ್ಕೆ ಹೋದನು. ಅಲ್ಲಿ ಕ್ರೂರ ಯೋಗಾ ಚಾರನಿರತರಾದ ಪಂಚತಪಸ್ವಿಗಳನ್ನು ಕಂಡು ತಾನೂ ಅವರಂತೆ ಮೃತ್ಯುಂ ಜಯನಾಗಲು ಯೋಗಾಭ್ಯಾಸಕ್ಕೆ ಆರಂಭಿಸಿದನು. ಆರುವರ್ಷಗಳು ಕಳೆದುವು. ದೇಹ ಕೃಶವಾಗಿ ಸೊರಗಿತು. ಮೂಳೆ ತೊಗಲು ಇಷ್ಟೇ ಉಳಿದಿತ್ತು. ಆದರೆ ಫಲ ಸಿಕ್ಕಲಿಲ್ಲ. ಎಲ್ಲ ವ್ಯರ್ಥವೆನಿಸಿತು. 'ದುರ್ಬಲನಿಂದ ಮೋಕ್ಷಜ್ಞಾನ ಲಭ್ಯ ವಲ್ಲವೆಂದು ನಾನು ನೇರಿಳೆಮರದಡಿ ಮೊದಲು ಯೋಚಿಸಿದ್ದೇ ನಿಜ'ವೆಂದು ಕೊಂಡನು. ಆಗ ದೈವಪ್ರೇರಣೆಯಿಂದ ಗೋಪರಾಜನ ಮಗಳಾದ ನಂದಬಲಾ ಎಂಬಾಕೆಯು ಪಾಯಸವನ್ನು ಮಾಡಿಕೊಂಡು ಬಂದು ಆತನಿಗೆ ಕುಡಿಸಿದಳು. ಉಳಿದ ತಪಸ್ವಿಗಳು ಇವನು ಯೋಗನಿವೃತ್ತನಾದನೆಂದು ಇವನನ್ನು ಬಿಟ್ಟು ಹೋದರು. ತನ್ನ ದೃಢನಿಶ್ಚಯವೇ ಜತೆಗಾರನಾಗಿರಲು, ಆತನು ಅರಳಿಯ

ಮರದ ಬುಡಕ್ಕೆ ಹೋಗಿ ಜ್ಞಾನಸಿದ್ಧಿಯಾಗದೆ ಏಳುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಕುಳಿತನು. ಕಾಲನೆಂಬ ಸರ್ಪನು ಆಗ ಅವನ ನಿಶ್ಚಯಕ್ಕೆ ಬೆರಗಾಗಿ ಸ್ತೋತ್ರಮಾಡಿದನು. ಪರ್ಯಂಕಾಸನದಲ್ಲಿ ನಿಶ್ಚಿತಾತ್ಮನಾಗಿ ಕುಳಿತಿದ್ದರೆ ಪಶುಪಕ್ಷಿಗಳೂ ನಿಶ್ಶಬ್ದವಾದುವು. ಮರಗಳೂ ಉಸಿರಾಡಲಿಲ್ಲ. (ಸರ್ಗ-12)

**ಮಾರಪರಾಜಯ** —ಲೋಕಗಳೆಲ್ಲ ಆನಂದಿಸಿದುವು. ಆದರೆ ಕಾಮಾಧಿಪನಾದ ಮಾರನಿಗೆ ಮಹಾಕೋಪ ಬಂದಿತು. ಅವನು ಪುತ್ರರಾದ ವಿಭ್ರಮ, ಹರ್ಷ, ದರ್ಪಗಳನ್ನೂ ಪುತ್ರಿಯರಾದ ಅರತಿ, ಪ್ರೀತಿ, ತೃಷೆಯರನ್ನೂ ಕರೆದು 'ನನ್ನ ಚಕ್ರವರ್ತಿತ್ವವನ್ನು ಸೂರೆಮಾಡಲು ಬಂದಿರುವ ಇವನನ್ನು ಜ್ಞಾನ ಚಕ್ಷುಸ್ಸನ್ನು ಪಡೆಯುವ ಮೊದಲೇ ನಾಶಮಾಡಿತೀರಬೇಕಾಗಿದೆ. ನನ್ನ ಆಯುಧಗಳನ್ನು ತನ್ನಿರಿ' ಎಂದ. ಪುಷ್ಪಶರಗಳಿಂದೊಡಗೂಡಿ ಅವನೆದುರಿಗೆ ಬಂದವನೇ 'ಮೃತ್ಯುಭೀತನಾದ ಕ್ಷತ್ರಿಯನೇ, ಏಳು. ಮೋಕ್ಷಧರ್ಮವನ್ನು ಬಿಟ್ಟು ನಿನ್ನ ಧರ್ಮವನ್ನು ಪಾಲಿಸು. ಬಾಣಗಳಿಂದಲೂ ಯಜ್ಞಗಳಿಂದಲೂ ಇಂದ್ರಪದವಿಯನ್ನು ಪಡೆ. ರಾಜರಿಗೆ ಈ ಭಿಕ್ಷಾಟನೆ ಅವಮಾನಕರ. ನೀನು ಪ್ರತಿಜ್ಞೆಯನ್ನು ಬಿಡದಿದ್ದರೆ ಹಿಂದೆ ಶೂರ್ಪಕನನ್ನು ಮರಿದ ಬಾಣವಿದನ್ನೇ ನಿನ್ನ ಮೇಲೆ ಬಿಡುತ್ತೇನೆ. ಇದರ ಸೋಂಕಿನಿಂದಲೇ ಸೋಮಪುತ್ರನಾದ ಐಲ, ಶಂತನು, ಮುಂತಾದವರೆಲ್ಲ ಉಡುಗಿಹೋದರೆಂದಮೇಲೆ ನಿನ್ನ ಮಾತೇನು? ಈಗಲೂ ಚಕ್ರವಾಕಗಳಂತೆ ಪ್ರಿಯಾನುವರ್ತಿಯಾದರೆ ಮಾತ್ರ ಬಾಣವನ್ನು ಬಿಡುವುದಿಲ್ಲ' ಎಂದು ಹೆದರಿಸಿದ. ಕುಮಾರನು ಅಳ್ಳಾಡದಿರಲು ಬಾಣವನ್ನು ಬಿಟ್ಟೇ ಬಿಟ್ಟ. ಏನೂ ಆಗಲಿಲ್ಲ. ಯಾವ ಬಾಣಕ್ಕೆ ಸಾಕ್ಷಾತ್ ಶಿವನೇ ಚಲಿಸಿದನೋ, ಅದಕ್ಕೆ ಸಗ್ಗದ ಇವನಿಗೆ ಪುಷ್ಪಬಾಣ ಸಾಲದೆಂದು ತನ್ನ ಭೂತಗಣಕ್ಕೆಲ್ಲ ಬಗೆಬಗೆಯ ಆಯುಧಗಳಿಂದ ಹಿಂಸೆಮಾಡುವಂತೆ ಅಪ್ಪಣೆ ಮಾಡಿದ. ಶೂಲ, ಗದೆ, ಕತ್ತಿ, ಈಟಿ, ಪರಶು, ಪ್ರಾಸ, ಯಾವುದರಿಂದಲೂ ಸಿದ್ಧಾರ್ಥನಿಗೆ ಯಾವ ಪೀಡೆಯೂ ಆಗಲಿಲ್ಲ. ಮಹಾನಾಗಗಳು ಮಾತ್ರ ಅವನಲ್ಲ ದಯೆದೋರಿ ನಿಟ್ಟುಸಿರುಬಿಟ್ಟವು. ಧರ್ಮಾತ್ಮರೆಲ್ಲರೂ ಆಕಾಶದಲ್ಲಿ ಹಾಹಾಕಾರಮಾಡಿದರು. ಸೈನಿಕರು ಬಗೆಬಗೆಯಿಂದ ಅವನ ಸಮಾಧಿಭಂಗಕ್ಕೆ ಯತ್ನಿಸಿ ವಿಫಲರಾದರು. ಅವರ ಶಿಲಾವೃಷ್ಟಿಯು ಪುಷ್ಪವೃಷ್ಟಿಯಾಗುತ್ತಿತ್ತು. ಮುನಿಯು ಅವಿಚಲನಾಗಿಯೇ ಇದ್ದನು. ಸೋತು ಮಾರನು ದೇವತೆಗಳ ಸಲಹೆಯಂತೆ ಹಿಂದಿರುಗಬೇಕಾಯಿತು. (ಸರ್ಗ-13)

**ಬುದ್ಧತ್ವ-ಪ್ರಾಪ್ತಿ** :—ಮಾರನನ್ನು ಗೆದ್ದು ಪರಮಾರ್ಥದ ಧ್ಯಾನದಲ್ಲಿ ಸಿದ್ಧಾರ್ಥ ಮಗ್ನನಾದ. ಮೊದಲ ಯಾಮದಲ್ಲಿ ಸಾವಿರಾರು ಪೂರ್ವಜನ್ಮ ಪರಂಪರೆಗಳನ್ನೆಲ್ಲ ಸ್ಮರಣೆಗೆ ತಂದುಕೊಂಡ. ನೆನೆನೆನೆದು ಜಂತುಗಳಲ್ಲಿ ಕಾರುಣ್ಯ ಮತ್ತೂ ಹೆಚ್ಚಿತು. ಎರಡನೆ ಯಾಮದಲ್ಲಿ ದಿವ್ಯಚಕ್ಷುವನ್ನು ಪಡೆದ. ಲೋಕವನ್ನೆಲ್ಲ ಕನ್ನಡಿಯಲ್ಲಿ ಕಾಣುವಂತೆ ಕಂಡ. ಲೋಕಕಾರುಣ್ಯ ಮತ್ತೂ ಬೆಳೆಯಿತು. ಸತ್ಕರ್ಮಿಗಳು ಸ್ವರ್ಗದಲ್ಲೂ, ದುಷ್ಕೃತ್ಯದವರು ನರಕದಲ್ಲೂ ಅನುಭವಿಸುವುದನ್ನೆಲ್ಲ ಪ್ರತ್ಯಕ್ಷವಾಗಿ ತಿಳಿದ. ನರಕದ ಘೋರಗಳನ್ನು ಕಂಡೊಡನೆ ಅವನ ಕರುಣೆ ಉಕ್ಕೇರಿತು. ಪಶು ಪಕ್ಷಿಯೋನಿಗಳಲ್ಲೂ ಪರಸ್ಪರ ವಿರೋಧ ಮತ್ತು ಪರಾಧೀನತೆಗಳಿಂದ ದುಃಖದ ಸಾಮ್ರಾಜ್ಯವೇ ಇರುವುದರ ಅರಿವಾಯಿತು. ಮೂರನೆ ಯಾಮ ದಲ್ಲಿ ಅವನು ಜಗತ್ತಿನ ಅವಿದ್ಯೆಯನ್ನು ಸಾಕ್ಷಾತ್ಕರಿಸಿದ. ಆಗ ವಿಚಾರ ಮಾಡುತ್ತಾ ಜರಾಮರಣಕ್ಕೆ ಮೂಲ ಜನ್ಮ, ಜನ್ಮಕ್ಕೆ ಪ್ರವೃತ್ತಿ (ಕರ್ಮ), ಪ್ರವೃತ್ತಿಗೆ ತೃಷ್ಣೆ, ತೃಷ್ಣೆಗೆ ವೇದನೆ, ವೇದನೆಗೆ ಸ್ಪರ್ಶ, ಸ್ಪರ್ಶಕ್ಕೆ ಷಡಾಯ ತನಗಳು (ಮನಸ್ಸು+ಪಂಚೇಂದ್ರಿಯಗಳು), ಷಡಾಯತನಗಳಿಗೆ ನಾಮ ರೂಪಗಳು, ನಾಮರೂಪಗಳಿಗೆ ಮತ್ತೆ ಷಡಾಯತನಗಳೇ (ಬೀಜವೃಕ್ಷ ನ್ಯಾಯದಂತೆ). ಅಥವಾ ತನ್ಮೂಲವಾದ ವಿಜ್ಞಾನ, ವಿಜ್ಞಾನಕ್ಕೆ ಮತ್ತೆ ನಾಮರೂಪಗಳೇ. ಹೀಗೆ ಕಾರಣದ ನಿರೋಧದಿಂದ ಕಾರ್ಯದ ನಿರೋಧ ಸಾಧ್ಯವೆಂದು ಹೊಳೆಯಿತು. ಹೊಳೆದೊಡನೆ ಭಗವಾನ್ ಬುದ್ಧನಾದನು. ಆಗ ಅರುಣೋದಯವಾಗುತ್ತಿತ್ತು.[15]

ಮುಂದಿನ 'ಬುದ್ಧಚರಿತೆ'ಯ ಮೂಲ ಸಂಸ್ಕೃತದಲ್ಲಿ ಲುಪ್ತವಾಗಿದೆ. ಆದರೆ ಕ್ರಿ.ಶ. ೪೨೦ರಲ್ಲಿ ಧರ್ಮರಕ್ಷನು ಮಾಡಿದ ಚೀಣೀ ಅನುವಾದವೂ, ಕಡೆಗೆ ಬಂದ ಟಿಬೆಟನ್ ಅನುವಾದವೂ ಸಿಕ್ಕುತ್ತವೆ. ಇವೆರಡನ್ನೂ ಉಪ ಯೋಗಿಸಿಕೊಂಡು ಜಾನ್‌ಸ್ಟನ್ ಅವರು The Buddha's Mission and Last Journey ಎಂಬ ಇಂಗ್ಲಿಷ್ ಪರಿವರ್ತನವನ್ನು ಪ್ರಕಟಿಸಿ ದ್ದಾರೆ. (Acta Orientalia, Vol. XV) ಇದನ್ನು ನೋಡಿದರೆ

---

15. ಮುದ್ರಿತ ಪುಸ್ತಕಗಳಲ್ಲಿ 7 ನೇ ಶತಮಾನದ ಅಮೃತಾನಂದನು ಬರೆದು ಸೇರಿಸಿರುವ ಮತ್ತು 3 ಸರ್ಗಗಳಿವೆ. ಅವನ್ನಿಲ್ಲಿ ಗಣಿಸಿಲ್ಲ.

ಅಶ್ವಘೋಷನ ಕಾವ್ಯ ೨೮ ಸರ್ಗಗಳವರೆಗೂ ಮುಂದುವರೆದುದು ಗೊತ್ತಾಗುತ್ತದೆ. ಬುದ್ಧನು ಅನೇಕರಿಗೆ ಮಾಡಿದ ಧರ್ಮಬೋಧೆಗಳ ವಿವರಗಳು ಇಲ್ಲಿ ಬರುತ್ತವೆ. ಕಡೆಯ ಸರ್ಗದಲ್ಲಿ ಬುದ್ಧನ ದೈಹಿಕ ಅವಶೇಷಗಳ ಬಗೆಗೆ ನಡೆದ ಕಲಹಗಳೂ, ಪ್ರಥಮ ಬೌದ್ಧಸಮ್ಮೇಳನದ ಸ್ಥಾಪನೆಯೂ, ಅಶೋಕ ಚಕ್ರವರ್ತಿಯ ಬೌದ್ಧಮತಪ್ರೇಮವೂ ವರ್ಣಿತವಾಗಿವೆ. ಮುಂದಿನ ಕಥೆಯಲ್ಲಿ ಆಸಕ್ತಿಯುಳ್ಳವರು ಜಾನ್‌ಸ್ಟನರ ಗ್ರಂಥವನ್ನೋದಬೇಕು.

## ಸೌಂದರನಂದ

ಕಥಾಸಾರಾಂಶ:—ಹದಿನೆಂಟು ಸರ್ಗಗಳ ಈ ಕಾವ್ಯದಲ್ಲಿ ಭಗವಾನ್ ಬುದ್ಧನ ಉಪದೇಶ ವಿಸ್ತಾರವಾಗಿ ಬಂದಿದೆ, ಬುದ್ಧನ ಜೀವನಚರಿತೆಯ ಮುಂದಿನ ಘಟನೆಗಳ ಪ್ರಸ್ತಾಪವೂ ಬರುತ್ತದೆ ಆದ್ದರಿಂದ ಇದನ್ನು ಬುದ್ಧ ಚರಿತಕ್ಕೆ ಪೂರಕಕಾವ್ಯವೆಂದು ಪರಿಗಣಿಸಬಹುದು.

ಸುಂದರಿ ಕಾವ್ಯನಾಯಕಿ, ನಂದ ನಾಯಕ. ಇಬ್ಬರನ್ನೂ ಕುರಿತ ಕಾವ್ಯವೇ ಸೌಂದರನಂದ. ನಂದನು ಬುದ್ಧನ ಬಲತಮ್ಮ. ಬುದ್ಧನ ದಿವ್ಯ ಸಂದೇಶವನ್ನು ತಂದೆಯಾದ ಶುದ್ಧೋದನನೇ ಆದಿಯಾಗಿ ಎಲ್ಲರೂ ಸ್ವೀಕರಿಸಿದರೂ ಸುಂದರಿಯ ಸೌಂದರ್ಯೋಪಾಸನೆಯಲ್ಲಿ ಮುಳುಗಿದ್ದ ನಂದ ಮಾತ್ರ ಗಮನಿಸಲಿಲ್ಲ. ತಮ್ಮನೇ ಹೀಗಾದರೆ ಇತರರೂ ಸಂದೇಶಪರಾಙ್ಮುಖರಾಗಬಹುದೆಂದು ಶಂಕೆ ಬುದ್ಧನಿಗೆ. ಹೇಗಾದರೂ ಮಾಡಿ ಅವನಿಗೆ ಸಂನ್ಯಾಸದೀಕ್ಷೆ ಕೊಡಬೇಕೆಂದು ಬುದ್ಧನು ಮಾಡುವ ಪ್ರಯತ್ನಗಳೇ ಈ ಕಾವ್ಯದ ಸಾರಾಂಶ. ಕಪಿಲವಸ್ತುನಗರ (ಸರ್ಗ ೧), ಶುದ್ಧೋದನ ರಾಜ (ಸರ್ಗ ೨), ಬುದ್ಧ (ಸರ್ಗ ೩) ಸುಂದರಿಯ ರೂಪರಾಶಿ, ಮತ್ತು ಸುಂದರಿ-ನಂದರ ಪ್ರೇಮಜೀವನ (ಸರ್ಗ ೪)—ಇವುಗಳ ವರ್ಣನೆಗೆ ಒಂದೊಂದು ಸರ್ಗಗಳೇ ವಿನಿಯುಕ್ತವಾಗಿವೆ. ಒಂದು ದಿನ ಮಧ್ಯಾಹ್ನ ಎಂದಿನಂತೆ ಸುಂದರಿ ಉಪ್ಪರಿಗೆಯಮೇಲೆ ಅಲಂಕಾರಮಾಡಿಕೊಳ್ಳುತ್ತಾ ಇರುವಾಗ ನಂದ ಅವಳಿಗೆ ಕನ್ನಡಿ ಹಿಡಿದಿದ್ದಾನೆ. ಸರಸಸಲ್ಲಾಪಗಳು ಸಾಗಿವೆ. ಬಾಗಿಲಿನಲ್ಲಿ ಬುದ್ಧ ಬಂದು ಭಿಕ್ಷೆ ಬೇಡುತ್ತಾನೆ. ಯಾರಿಗೂ ಕೇಳಿಸುವುದಿಲ್ಲ. ಅವನು ಭಿಕ್ಷೆಯಿಲ್ಲದೆ ತಿರುಗಿಹೋಗುತ್ತಿರುವುದನ್ನು ಕಂಡ ದಾಸಿಯೊಬ್ಬಳು ಓಡಿಬಂದು ನಂದನಿಗೆ ತಿಳಿಸುತ್ತಾಳೆ. 'ಒಂದು ಕ್ಷಣದೊಳಗೆ ನಾನೇ ಹೋಗಿ ಅಣ್ಣನನ್ನು ಮತ್ತೆ

ಮನೆಗೆ ಕರೆತಂದು ಬಿಡುತ್ತೇನೆ. ನಿನ್ನ ಗಂಧಲೇಪ ಒಣಗುವುದರೊಳಗೆ ಇಲ್ಲೇ ಇರುತ್ತೇನೆ' ಎಂದು ಸುಂದರಿಯ ಅನುಮತಿ ಪಡೆದು ಹೋಗುತ್ತಾನೆ. ಒಂದು ಕಡೆ ಧರ್ಮರಾಗ; ಇನ್ನೊಂದು ಕಡೆ ಕಾಮರಾಗ. ಎರಡೂ ಎರಡು ಕಡೆ ಎಳೆಯುತ್ತಿದ್ದುವು. ಅಂತೂ ಹೇಗೋ ನಡೆದಾಯಿತು (ಸರ್ಗ ೪)

ಬುದ್ಧ ಸಿಕ್ಕುವುದೇ ಸ್ವಲ್ಪ ತಡವಾಯಿತು. ಕಡೆಗೆ ಏಕಾಂತವಾಗಿ ಅವನು ಕಾಣಲು ಮತ್ತೂ ಸ್ವಲ್ಪ ತಡವಾಯಿತು. ಮನೆಯ ಕಡೆ ಮತ್ತೆ ಬಂದು ಭಿಕ್ಷೆ ಸ್ವೀಕರಿಸಿ ಅನುಗ್ರಹಿಸಬೇಕೆಂದು ಬೇಡಿದ. ಆದರೆ ಬುದ್ಧ ಅವನಿಗೆ ಅನ್ನದ ಯೋಚನೆ ತಪ್ಪುವಂತೆ ಮಾಡಿ ತನ್ನ ಪಾತ್ರೆಯನ್ನು ಅವನ ಕೈಲಿಟ್ಟ. ಆದರೂ ಮನೆಗೆ ಅವನು ಹೋಗಲು ಕಾತರನಾಗಿರುವುದನ್ನು ತಿಳಿದು ಆ ದಾರಿಯೇ ಕಾಣದಂತೆ ಮಾಡಿದ. ತನ್ನ ದಿವ್ಯಪ್ರಭಾವದಿಂದ ಅವನನ್ನು ಮುಗ್ಧನಾಗಿಸಿ ವಿಹಾರಕ್ಕೆ ಕರೆದುಕೊಂಡು ಬಂದು ಉಪದೇಶ ಮಾಡಿದ. ನಂದನು ದೀಕ್ಷೆಗೆ ಒಪ್ಪಿ ತನ್ನ ಸುಂದರ ಕೇಶವನ್ನು ಕತ್ತರಿಸಿ ಬಿಟ್ಟು ಕಾವಿ ಉಟ್ಟ. (ಸರ್ಗ-೫) ಇತ್ತ ಸುಂದರಿಯು ವಿರಹತಾಪವನ್ನು ತಡೆಯಲಾರದೆ ಪರಿಪರಿಯಿಂದ ಗೋಳಿಡುತ್ತಾಳೆ. (ಸರ್ಗ-೬) ಅತ್ತ ನಂದನಿಗೂ ಸಂನ್ಯಾಸದಲ್ಲಿ ಶ್ರದ್ಧೆ ತಪ್ಪಿ, ಸುಂದರಿಯ ಧ್ಯಾನ ಹೆಚ್ಚಿ, ಪರಿತಾಪ ವಿಪರೀತವಾಗುತ್ತದೆ. (ಸರ್ಗ-೭) ಮತ್ತೆ ಮನೆಗೆ ಕಣ್ಣುತಪ್ಪಿಸಿ ಹೋಗುವ ಯೋಚನೆಯಲ್ಲಿವನಿರುವುದು ಬುದ್ಧನಿಗೆ ತಿಳಿಯುತ್ತದೆ. ಮತ್ತೆ ವೈರಾಗ್ಯದ ಉಪದೇಶ ಮಾಡಿ ಕಾಮಗಳ ಅನಿತ್ಯತೆಯನ್ನು ಬಣ್ಣಿಸುತ್ತಾನೆ. ಸ್ತ್ರೀಯರ ಚಾಂಚಲ್ಯವನ್ನು ವಿವರಿಸಿ ನಿಂದಿಸುತ್ತಾನೆ (ಸರ್ಗ–೮). ಮದದ ದುಷ್ಪರಿಣಾಮಗಳನ್ನು ವರ್ಣಿಸುತ್ತಾನೆ (ಸರ್ಗ-೯). ಏನಾದರೂ ನಂದನ ಮನಸ್ಸು ಕಾಮಾಂಧವಾಗಿರುವುದನ್ನರಿತು ಬುದ್ಧನು ಅವನನ್ನು ತನ್ನ ಜತೆಯಲ್ಲಿ ಆಕಾಶಮಾರ್ಗವಾಗಿ ಸ್ವರ್ಗಕ್ಕೆ ಒಯ್ಯುತ್ತಾನೆ. ದಾರಿಯಲ್ಲಿ ಹಿಮಾಚಲದ ಕಾಡೊಂದರಲ್ಲಿ ಒಂದು ಒಕ್ಕಣ್ಣಿನ ರಕ್ತವರ್ಣದ ಹೆಣ್ಣು ಕಪಿಯನ್ನು ತೋರಿಸಿ 'ನಿನ್ನ ಸುಂದರಿಗಿಂತ ಇದರ ರೂಪ ಚೆನ್ನಾಗಿಲ್ಲವೆ?' ಎನ್ನುತ್ತಾನೆ. ನಂದನು–'ಅಯ್ಯೋ ಅವಳೆಲ್ಲಿ, ಇದಲ್ಲಿ, ಹೋಲಿಸುವಂತಿಲ್ಲ' ಎಂದುಬಿಡುತ್ತಾನೆ. ಮುಂದೆ ಇಂದ್ರನ ನಂದನವನದಲ್ಲಿ ಅಪ್ಸರೆಯರನ್ನು ತೋರಿಸಿ ಮೊದಲಿನ ಪ್ರಶ್ನೆಯನ್ನೇ ಕೇಳುತ್ತಾನೆ. ನಂದನೂ ಸುಂದರಿಗಿಂತ ಸಾವಿರ

ಪಾಲು ಹೆಚ್ಚಿನ ಸೌಂದರ್ಯ ಅವರಲ್ಲುಂಟೆಂದು ಒಪ್ಪುತ್ತಾನೆ. ಅವನಿಗೆ ಆಕ್ಷಣ ಸುಂದರಿಯ ಮೋಹ ತಪ್ಪಿ ಅದರ ಬದಲು ಅಪ್ಸರೆಯರ ಮೇಲಿನ ಮೋಹ ಹುಟ್ಟುತ್ತದೆ. 'ಇವರು ಸಿಕ್ಕಬೇಕಾದರೆ ತಪಸ್ಸು ಅಗತ್ಯ'ವೆನ್ನುತ್ತಾನೆ ಬುದ್ಧ. ನಂದನು ಸಂತೋಷದಿಂದ ಸಿದ್ಧನಾಗುತ್ತಾನೆ (ಸರ್ಗ-೧೦). ಕಾಮಚರ್ಯಾ ಕುಶಲನಾದ ಅವನು ಈಗ ಬ್ರಹ್ಮಚರ್ಯಾನಿರತನಾಗುತ್ತಾನೆ. ಆನಂದನು ಬಂದು ಸ್ವರ್ಗಸುಖವೂ ಕ್ಷಣಿಕವೆಂಬುದನ್ನು ವಿವರಿಸಿ ಹೇಳುತ್ತಾನೆ (ಸರ್ಗ-೧೧). ನಂದನಿಗೆ ಜ್ಞಾನೋದಯವಾಗುತ್ತದೆ. ಸುಂದರಿಯ ಮೋಹದಂತೆ ಸ್ವರ್ಗಸ್ತ್ರೀಯರ ಮೋಹವೂ ತೊಲಗುತ್ತದೆ. (ಸರ್ಗ-೧೨). ಶ್ರದ್ಧೆ ಹುಟ್ಟಿದ ಅವನಿಗೆ ಬುದ್ಧನು ಜ್ಞಾನೋಪದೇಶ ಮಾಡುತ್ತಾನೆ. (ಸರ್ಗ ೧೩-೧೮).

**ಕಾವ್ಯವಿಮರ್ಶೆ :**—ಈ ಎರಡು ಮಹಾಕಾವ್ಯಗಳಲ್ಲಿ ಬುದ್ಧಚರಿತೆಯು ಮುಖ್ಯವಾಗಿ ಕಾವ್ಯವಸ್ತುಪೂರ್ಣವಾದರೆ ಸೌಂದರನಂದವು ಪ್ರಧಾನವಾಗಿ ಧರ್ಮಪ್ರಚಾರದ ಸಾಧನ. ಎರಡೂ ಎರಡರಲ್ಲಿಯೂ ಅಷ್ಟಿಷ್ಟು ಉಂಟೇ ಉಂಟು, ಎಂದರೂ ಸಂಸ್ಕೃತ ಮಹಾಕಾವ್ಯಗಳ ಮಾಲೆಯಲ್ಲಿ ಬುದ್ಧಚರಿತೆಗೆ ಅಗ್ರಶ್ರೇಣಿಯಲ್ಲಿ ಸ್ಥಾನ ಸಲ್ಲಲು ಅನೇಕ ಸಾಮಗ್ರಿಗಳು ಸೇರಿವೆ — ಶ್ರೀರಾಮ, ಶ್ರೀಕೃಷ್ಣ, ಈ ಅವತಾರ ಪುರುಷರ ಭವ್ಯ ಜೀವನದ ವರ್ಣನೆಗಳಿಂದ ರಾಮಾಯಣ, ಮಹಾಭಾರತಗಳಿಗೆ ಶಾಶ್ವತ ಕೀರ್ತಿ ಬಂದಾದ ಮೇಲೆ, ಅವರ ಸಮಕಕ್ಷ್ಯೆಯಲ್ಲಿ ನಿಲ್ಲಬಲ್ಲ ಮೂರನೆಯ ಮಹಾಪುರುಷನೊಬ್ಬನನ್ನು ಕವಿಪ್ರಭೆಯು ಸಾಕ್ಷಾತ್ಕರಿಸಿದಲ್ಲದೆ ಸಂಸ್ಕೃತ ಮಹಾಕಾವ್ಯಧಾರೆಯು ಪ್ರಗತಿಪರವಾಗಿ ಪ್ರವಹಿಸುವಂತಿರಲಿಲ್ಲ ಪೂರ್ವಯುಗದ ವಿಚಾರ ಪರಂಪರೆಗಳ, ಜೀವನ ಧ್ಯೇಯಗಳ, ಪ್ರಕಟನೆಯನ್ನು ಆರ್ಷಮಹಾಕಾವ್ಯಗಳಿಗಿಂತ ಉತ್ತಮವಾಗಿ ಮಾಡುವುದು ಯಾರಿಗೂ ಎಂದೂ ಆಗದ ಮಾತಾಗಿತ್ತು. ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿಗಳ, ನಿಸ್ಸೀಮ ರಣಪಟುಗಳಾದ ಅತಿರಥಮಹಾರಥರ, ಕಾಲ ಭಾರತದಲ್ಲಿ ಮತ್ತೆ ಬರುವಂತಿರಲಿಲ್ಲ. ವಿಚಾರಕ್ರಾಂತಿಯಲ್ಲಿ, ಜೀವನರೀತಿಯಲ್ಲಿ, ಪ್ರಚಾರ ಕಾರ್ಯದಲ್ಲಿ ಗತಯುಗದ ಮಹೋನ್ನತ ವ್ಯಕ್ತಿಗಳಿಗೆ ಸರಿಸಮನಾಗಿ ನಿಲ್ಲುವಂತಹ ಯೋಗ್ಯತೆ ನೂತನ ಯುಗದಲ್ಲಿ ಯಾರಿಗಾದರೂ ಇದ್ದರೆ ಅದು ಭಗವಾನ್ ಬುದ್ಧನೊಬ್ಬನಿಗೆ

ಮಾತ್ರ ಉಂಟೆಂಬುದನ್ನು ಮೊದಲು ಗ್ರಹಿಸಿದ ಕವಿದರ್ಶನ ಅಶ್ವಘೋಷನದು. ಭಾರತದ ಪರಿಣಾಮಶೀಲವಾದ ಜೀವನಾಡಿಯನ್ನು ಮತ್ತೆ ಹಿಡಿದು ರೂಪಿಸಿದ ಮಹಾತ್ಮ ಬುದ್ಧ. ಪ್ರಚಂಡ ಪರಾಕ್ರಮಿಗಳ ಕ್ಷಾತ್ರವೂ, ವಿಪ್ರೋತ್ತಮರ ವೈದಿಕ ಯಜ್ಞಗಳೂ, ಗತಕಾಲದ ಆದರ್ಶಗಳೆಂದು ನಿಸ್ಸಂದಿಗ್ಧವಾಗಿ ಸಾರಿ ನೂತನ ಯುಗಕ್ಕೆ ಹೊಸ ಶಾಂತಿಸಂದೇಶವನ್ನು ಬೀರಿದ ಅವತಾರಪುರುಷ ಬುದ್ಧ. ಕೃಷ್ಣನ ರಾಜನೀತಿಯಾಗಲಿ, ರಾಮನ ರಾಜ್ಯರೀತಿಯಾಗಲಿ, ಮಾನವನ ಪರಮಲಕ್ಷ್ಯವಾದ ಮೋಕ್ಷಪ್ರಾಪ್ತಿಗೆ, ಸಂಸಾರನಿವೃತ್ತಿಗೆ, ಸಾಕಷ್ಟು ಪ್ರಾಮುಖ್ಯವನ್ನೀಯಲಿಲ್ಲವೆಂದು ಧೈರ್ಯವಾಗಿ ಘೋಷಿಸಿದ್ದಲ್ಲದೆ ರಾಮಕೃಷ್ಣಾದಿಗಳಾಗಲಿ, ಜನಕಾದಿ ರಾಜರಾಗಲಿ, ಯಾರೂ ಮಾಡದ ತ್ಯಾಗವನ್ನು ತಾನು ಮಾಡಿ, ಜ್ಞಾನದ ಶಿಖರಾರೋಹಣಮಾಡಿದ ಪುಣ್ಯಪುರುಷನೇ ಬುದ್ಧ. ಒಂದು ಕಡೆ, ಉಪನಿಷತ್ತುಗಳ ನಿವೃತ್ತಿಮಾರ್ಗವನ್ನೇ ಒತ್ತಿ ಹೇಳುತ್ತಿದ್ದರೂ, ಇನ್ನೊಂದು ಕಡೆ ಯಾವುದನ್ನೂ, ಸ್ವಾನುಭವದ, ಸ್ವಬುದ್ಧಿಯ, ಒರೆಗೆ ಹಚ್ಚಿನೋಡದೆ ಬರಿಯ ಶ್ರದ್ಧಾಭಕ್ತಿಗಳಿಂದ ಅಂಧಾನುಕರಣ ಮಾಡಲಾಗದೆಂದು ಸಾರುತ್ತಾ, 'ಆತ್ಮ'ವಸ್ತುವಿನ ಅಸ್ತಿತ್ವವನ್ನು ಕೂಡ ನಿರಾಕರಿಸಿದ ಧೀರ ಬುದ್ಧ. ಹಿಂದಿನ ಆದರ್ಶಪುರುಷರಲ್ಲಿ ಸ್ವಂತವಿಚಾರವಿದ್ದರೂ ಅದಕ್ಕಿಂತ ಸಂಪ್ರದಾಯಗಳಲ್ಲಿ ಶ್ರದ್ಧೆ ಹೆಚ್ಚು, ಬುದ್ಧನಲ್ಲಿ ಸಂಪ್ರದಾಯಶರಣತೆ ಶೂನ್ಯ, ಸ್ವವಿಚಾರ ಅಪ್ರತಿಹತವಾದುದು. ಹೀಗೆ ಭಾರತದಲ್ಲಿ ವಿಚಾರಯುಗಕ್ಕೆ ಆಚಾರ್ಯಪುರುಷನೆಂದರೆ ಬುದ್ಧನೊಬ್ಬನೇ. ಅವನ ಪ್ರಭಾವದಿಂದಲೇ ಒಂದು ಕಡೆ ಬೌದ್ಧರಲ್ಲಿ ವಿಚಾರಪ್ರಧಾನವಾದ ತತ್ವಶಾಸ್ತ್ರ ಬೆಳೆದರೆ ಇನ್ನೊಂದು ಕಡೆ ಆಸ್ತಿಕರಲ್ಲೂ ತತ್ವಜಿಜ್ಞಾಸಾಮೂಲವಾದ ಬರೆವಣಿಗೆ ಬರುವಂತಾಯಿತು ಅವನ ಜೀವನದ ಜ್ಯೋತಿಯನ್ನೂ, ಅವನ ವಿಚಾರದ ಕ್ರಾಂತಿಯನ್ನೂ ಪ್ರತಿಭಾವಂತನು ವರ್ಣಿಸಿದರೆ ರಾಮಾಯಣ, ಮಹಾಭಾರತಗಳಿಗೆ ಕಡಿಮೆಯಿಲ್ಲದ ಕಾವ್ಯವನ್ನು ರಚಿಸುವ ಅವಕಾಶವುಂಟೆಂಬುದನ್ನು ಮೊತ್ತಮೊದಲು ಕಂಡುಕೊಂಡ ಕೀರ್ತಿ ಅಶ್ವಘೋಷನದು. ಅವನು ಕೇವಲ ಕವಿಯಾಗಿ, ಪ್ರಚಾರಕನಾಗದೆ ಹೋಗಿದ್ದರೆ, ಬುದ್ಧನ ಉಪದೇಶಾಮೃತದ ವಿವರಣೆಗಿಂತ ಅವನ ಜೀವನದ ಒಂದೊಂದು ಘಟನೆಗೂ, ವಿಶೇಷ ಪ್ರಾಶಸ್ತ್ಯ ಕೊಡಬಹುದಾಗಿದ್ದಿತು. ಆದರೆ 'ನಾನು ಕೇವಲ ಪ್ರಚಾರಕನೇ, ಕವಿಯಲ್ಲ' ಎಂದುಕೊಳ್ಳುವ

ಅಶ್ವಘೋಷನಿಗೂ ಕವಿಹೃದಯವೇ ಮೇಲಾಗಿ ಬುದ್ಧಚರಿತೆಯಲ್ಲಿ ಪ್ರಚಾರ ಹಿಂದೆ ಸರಿದಿದೆ. ಇಷ್ಟು ಅಶ್ವಘೋಷನಾರಿಸಿಕೊಂಡ ವಸ್ತುವಿನ ಮಾಹಾತ್ಮ್ಯದ ದಿಗ್ದರ್ಶನ.

ಅಶ್ವಘೋಷನು ರಾಮಾಯಣವನ್ನೂ ಮಹಾಭಾರತದ ಉಪಾಖ್ಯಾನ ಗಳನ್ನೂ ಓದಿ ಆನಂದಿಸಿದ್ದನೆಂಬುದು ಅವನ ಪ್ರತಿಯೊಂದು ಸಾಲಿನಲ್ಲಿಯೂ ವ್ಯಕ್ತವಾಗುತ್ತದೆ. ಯಾವ ಕಾರಣಗಳಿಗಾಗಿ ತಾನು ಕಾವ್ಯವನ್ನು ಮೆಚ್ಚು ತ್ತಿದ್ದನೋ ಅವನ್ನೆಲ್ಲ ತನ್ನ ಧಾರ್ಮಿಕಕಾರ್ಯಕ್ಕೆ ಅಳವಡಿಸಿಕೊಳ್ಳಲು ಅವನು ಬಹಳ ಶ್ರಮಿಸಿದ್ದಾನೆ. ರಾಮಾಯಣದಲ್ಲಿ ನಾಯಕ–ಅವನ ಸತ್ತ್ವಪರೀಕ್ಷೆ–ಒದಗಿದ ದೈವಸಹಾಯ–ಪ್ರತಿನಾಯಕನ ಸಂಹಾರ–ಕಾರ್ಯಸಿದ್ಧಿ ಇವುಗಳು ವರ್ಣಿತವಾಗಿರುವ ಕ್ರಮದಲ್ಲಿಯೇ ಬೌದ್ಧರ ಪಾಳೀ ಸಾಹಿತ್ಯದಲ್ಲಿದ್ದ ಬುದ್ಧನ ಜೀವನದ ಸಂಗತಿಗಳನ್ನು ಏಕಸೂತ್ರದಿಂದ ನೆಯ್ದಿದ್ದಾನೆ—ಬುದ್ಧ ಚರಿತೆಯಲ್ಲಿ, ರಾಮಾಯಣದಲ್ಲಿರುವಂತೆ ನಾಯಕನ ಜನ್ಮ, ಸಿದ್ಧಿ ಮುಂತಾ ದುವುಗಳ ನಿರೂಪಣೆಯಲ್ಲಿ ಅದ್ಭುತಾಂಶಗಳನ್ನೂ ಸೇರಿಸಿಕೊಂಡು ವಸ್ತುವಿನ ಭವ್ಯತೆಯನ್ನು ಕಾಪಾಡಿಕೊಂಡಿದ್ದಾನೆ. ರಾಮಾಯಣದಲ್ಲಿರುವಷ್ಟು ಘಟನಾ ಬಾಹುಲ್ಯವು ಬುದ್ಧ ಜೀವನದಲ್ಲಿಲ್ಲವೆಂಬುದನ್ನು ಮನಗಂಡು, ಇರುವ ಘಟನೆ ಗಳನ್ನೇ ವಿಸ್ತಾರವಾಗಿ ವರ್ಣಿಸಿ ರಸಸಾಂದ್ರವಾಗುವಂತೆ ಮಾಡಿದ್ದಾನೆ. ಪಟ್ಟಣದ ವರ್ಣನೆ, ರಾಜನ ವರ್ಣನೆ, ಜನ್ಮದ ವರ್ಣನೆ, ಇವುಗಳಿಗೆ ರಾಮಾ ಯಣದ ಪರಿಮಾಣದ ಕಾವ್ಯದಲ್ಲಿ ಒಂದೊಂದು ಸರ್ಗ ಬಂದರೆ ಹೆಚ್ಚೆನಿಸುವು ದಿಲ್ಲ. ಅದೇ ಪ್ರಮಾಣದಿಂದ ಅಶ್ವಘೋಷ ಬರೆದಿದ್ದರೆ ನಾಲ್ಕಾರು ಪದ್ಯಗಳಲ್ಲಿ ಇದನ್ನು ಮುಗಿಸಬಹುದಾಗಿತ್ತು. ಆದರೆ ಕಥೆ ಸಣ್ಣದಾದರೂ ವರ್ಣನೆಯ ವೈಶಾಲ್ಯದಿಂದ ಕಾವ್ಯದ ಸೊಗಸು ಸಂಪನ್ನವಾಗುವುದೆಂಬುದನ್ನು ಸ್ವಬುದ್ಧಿ ಯಿಂದ ತಿಳಿದು ತಾನೂ ಒಂದೊಂದು ಸರ್ಗವನ್ನೇ ಬರೆದು ರಾಮಾಯಣದ ವರ್ಣನೆಗಳಿಗೆ ಕಡಿಮೆಯಿಲ್ಲದ ಸ್ವಾರಸ್ಯವನ್ನು ಸಂಪಾದಿಸಿದ್ದಾನೆ—ಅಶ್ವ ಘೋಷ. ಅವನ ವರ್ಣನಾಶಕ್ತಿಗೆ ಇದೇ ದೊಡ್ಡ ಸಾಕ್ಷ್ಯ. ಪುನರುಕ್ತಿ ಬಾರ ದಂತೆ, ಒಂದೊಂದು ಶ್ಲೋಕದಲ್ಲೂ ಒಂದೊಂದು ಹೊಸ ಚಮತ್ಕಾರ ತಪ್ಪ ದಂತೆ, ನೋಡಿಕೊಂಡಿದ್ದಾನೆ. ಮುಂದಿನ ಕಾಳಿದಾಸನಿಗೆ ಈ ವರ್ಣನಾ ಬಾಹುಲ್ಯದ ಸಂಪ್ರದಾಯವನ್ನು ಹಾಕಿದ ಕೀರ್ತಿ ಅಶ್ವಘೋಷನಿಗೆ ಸಲ್ಲ ಬೇಕು. ರಾಮಾಯಣವನ್ನೇ ಅನುಸರಿಸಿ ಕರುಣರಸಮಯವಾದ ಸನ್ನಿ

ವೇಶಗಳನ್ನು ಕೂಡ ವಿಸ್ತರಿಸಿ ವರ್ಣಿಸಿದ್ದಾನೆ. ಬುದ್ಧನ ದೃಢನಿಶ್ಚಯವು ರಾಮನ ನಿಶ್ಚಯವನ್ನೂ, ಶುದ್ಧೋದನನ ಪುತ್ರಶೋಕವು ದಶರಥನ ಪುತ್ರ ಶೋಕವನ್ನೂ, ಯಶೋಧರೆ ಮುಂತಾದವರ ವಿಲಾಪವು ಅಯೋಧ್ಯೆಯ ಅಂತಃಪುರದವರ ವಿಲಾಪವನ್ನೂ, ಛಂದಕನ ಪುನರಾಗಮನವು ಶೂನ್ಯರಥದಲ್ಲಿ ಬಂದ ಸುಮಂತ್ರನ ಪುನರಾಗಮನವನ್ನೂ, ಸ್ಮರಣೆಗೆ ತರುವುವಷ್ಟೇ ಅಲ್ಲ, ಅನುಸರಿಸಿಯೇ ಲಿಖಿತವೆಂಬುದನ್ನು ಅಶ್ವಘೋಷನ ಉಕ್ತಿಗಳೇ ತೋರಿಸು ತ್ತವೆ. ಇದರಂತೆ ನಾಟಕೀಯವಾದ ಸಂಭಾಷಣಾರೂಪದಲ್ಲಿ ಪಾತ್ರಗಳ ಅಂತ ರಂಗವನ್ನು ಸ್ಫುಟೀಕರಿಸುವ ತಂತ್ರದಲ್ಲಿ ರಾಮಾಯಣಕ್ಕಿಂತ ಕಡಿಮೆಯಲ್ಲದ ಸಿದ್ಧಿಯನ್ನೇ ಅಶ್ವಘೋಷನು ಸಂಪಾದಿಸಿದ್ದಾನೆ. ಶುದ್ಧೋದನನ ಸಂದೇಶ, ಬುದ್ಧನ ಉತ್ತರ, ಮಂತ್ರಿಯ ವಾದ, ಮಗಧೇಶನ ವಚನ, ಇವು ಸಂಸ್ಕೃತ ಸಾಹಿತ್ಯದಲ್ಲಿಯೇ ಸುಂದರವೆನಿಸುವ ಭಾಗಗಳಲ್ಲಿ ಕೆಲವು. ಈ ತಂತ್ರವನ್ನು ಮುಂದಿನ ಮಹಾಕವಿಗಳೆಲ್ಲ ತಪ್ಪದೆ ಅನುಸರಿಸಿದ್ದಾರೆ. ಬುದ್ಧನ ಮೇಲೆ ಮಾರನು ಬಂದು ಮಾಡುವ ಯುದ್ಧವರ್ಣನೆಗೆ ಕಾಮನು ಶಿವನ ಸಮಾಧಿ ಭಂಗಕ್ಕಾಗಿ ಮಾಡಿದ ಸಾಹಸದ ಪ್ರೇರಣೆಯಿದೆ. ಮಾರವಿಜಯದ ಈ ಭಾಗ ವನ್ನು ಮೆಚ್ಚಿಯೇ ಕಾಳಿದಾಸನು ಮುಂದೆ ಕುಮಾರ-ಸಂಭವವನ್ನು ಬರೆದಿರ ಬಹುದೋ ಎಂದು ಊಹಿಸುವ ಮಟ್ಟಿಗೆ ಸಾದೃಶ್ಯಗಳಿವೆ. ಹೀಗೆ ಕಥೆಯ ಆರಿಕೆಯಲ್ಲಿ ಮತ್ತು ಯೋಜನೆಯಲ್ಲಿ, ವರ್ಣನೆಯ ಪ್ರಕಾರದಲ್ಲಿ ಮತ್ತು ಪ್ರಸಾರದಲ್ಲಿ, ಜೀವನ ವಿಮರ್ಶೆಯ ಪ್ರತಿಪಾದನೆಯಲ್ಲಿ ಮತ್ತು ಉಪಪಾದನೆ ಯಲ್ಲಿ ಅಶ್ವಘೋಷನು ತನ್ನದೇ ಆದ ಒಂದು ಹೊಸಮಾರ್ಗವನ್ನು ಕಂಡು ಕೊಂಡನಷ್ಟೇ ಅಲ್ಲ, ಮುಂದಿನವರಿಗೆಲ್ಲ ಆ ಮಾರ್ಗವೇ ಮೇಲ್ಪಂಕ್ತಿ ಯಾಯಿತು. ಸೌಂದರನಂದದ ಕಾವ್ಯಭಾಗದಲ್ಲಿಯೂ ಪಟ್ಟಣ, ರಾಜ, ಪ್ರಣಯ, ಇಷ್ಟನ್ನೇ ಎಷ್ಟು ರಸಮಯವಾಗಿ ಚಿತ್ರಿಸಬಹುದೆಂಬುದನ್ನು ಮಾಡಿ ತೋರಿಸುವ ಸರ್ಗಗಳಿವೆ. ಶಾಂತರಸಪ್ರಧಾನವಾದ ಎರಡು ಕಥೆಗಳ ಲ್ಲಿಯೂ ಸಹಜವಾಗಿ ಕಾಣುವಂತೆ ಶೃಂಗಾರವನ್ನೂ, ವೀರವನ್ನೂ, ಕಡೆಗೆ ಹಾಸ್ಯವನ್ನೂ ಸೇರಿಸಿ ವೈವಿಧ್ಯವನ್ನು ತಂದಿರುವ ಕಲೆ ಮಹಾಕವಿಯ ಕಲೆ. ಬೌದ್ಧದರ್ಶನವನ್ನೆಲ್ಲ ವಿವರಿಸಿದರೂ ಅತಿಯಾಗಿ ವಿಸ್ತರಿಸದೆ ಹಿತಮಿತವಾಗಿ ವರ್ಣಿಸಿರುವುದರಲ್ಲಿ ಅವನ ಔಚಿತ್ಯದ ದೃಷ್ಟಿಯೂ ಕಾಣುತ್ತದೆ.

ಅಶ್ವಘೋಷನ ಶೈಲಿ ಆರ್ಷಕಾವ್ಯಗಳಿಗೂ ಕಾಳಿದಾಸಾದಿಗಳ ಮಹಾ ಕಾವ್ಯಗಳಿಗೂ ಮಧ್ಯವರ್ತಿಯಾದ ಶೈಲಿ. ವ್ಯಾಸ ವಾಲ್ಮೀಕಿಗಳ ಶ್ಲೋಕ ಸಂಗೀತ, ಕಾಳಿದಾಸಾದಿಗಳ ಉಕ್ತಿವೈಚಿತ್ರ್ಯ–ಎರಡೂ ಸಂಗಮವಾಗಿ, ರಮ ಣೀಯವಾಗಿವೆ ಅಶ್ವಘೋಷನಲ್ಲಿ. ವಾಲ್ಮೀಕಿಗಳ ಸುಂದರ ವಾಙ್ಮಯದ ಪರಿ ಷ್ಕೃತರೂಪ ಮತ್ತು ಭಟ್ಟಬಾಣಾದಿಗಳ ಪ್ರೌಢಿಮೆಯ ಪೂರ್ವರೂಪ ಎರಡೂ ಸೇರಿರುವ ಒಂದು ರಸಮಯ ಪಾಕ ಅಶ್ವಘೋಷನದು. ವಾಲ್ಮೀಕಿಪ್ರಯೋಗ ಗಳಿಗಿಂತಲೂ ಚಾರುತರವಾದ ಅಲಂಕಾರಗಳಿವೆ, ಆದರೆ ಕೃತಕತೆಯಿಲ್ಲ ಅಪಾಣಿನೀಯ ಪ್ರಯೋಗಗಳು ಒಂದೆರಡಿವೆ ; ಆದರೆ ಪಾಣಿನಿ ವ್ಯಾಕರಣದ ಸೂಕ್ಷ್ಮಾಂಶಗಳ ಪ್ರದರ್ಶನವೂ ಇದೆ ಛಂದಸ್ಸುಗಳಲ್ಲೂ ಹಾಗೆಯೇ-ಆರ್ಷ ಶೈಲಿಯ ಶ್ಲೋಕ ಉಪಜಾತಿಗಳೇ ಪ್ರಚುರವಾದರೂ ಅಲ್ಲಲ್ಲಿ 'ಸುವದನಾ' 'ಉದ್ಗತಾ' ಮುಂತಾದುವುಗಳ ಹೊಸಪ್ರಯೋಗವೂ ನಡೆದಿದೆ. ವರ್ಣ್ಯವಿಷ ಯದಲ್ಲಿ ಕವಿಯ ಉತ್ಸಾಹ ಹೆಚ್ಚಾಗಿರುವುದರಿಂದ ಭಾವದಲ್ಲಿ ತೊಡಕಾಗಲಿ ಭಾಷೆಯಲ್ಲಿ ಬಿಗಿಯಾಗಲಿ ಇಲ್ಲ ಆದರೆ ಒಮ್ಮೊಮ್ಮೆ ಶಬ್ದಾರ್ಥಗಳ ಪುನರುಕ್ತಿ ಗಳು ಆರ್ಷಶೈಲಿಯ ಮಾದರಿಯಲ್ಲಿಯೇ ಬರುತ್ತವೆ. ಸಾಂಖ್ಯಾದಿ ಶಾಸ್ತ್ರ ಪ್ರಕ್ರಿಯೆಗಳು ನೀರಸವಾಗಿಯೂ ತೋರಬಹುದು. ಹೀಗೆ ಪ್ರಚಾರ–ಕಾವ್ಯ ಎರಡನ್ನೂ ಗಂಟುಮಾಡಲು ಹೋದುದೇ ಅವನ ತಪ್ಪು. ಒಂದು ಏರಿದಾಗ ಇನ್ನೊಂದು ಇಳಿಯುತ್ತದೆ. ಅದು ಅನಿವಾರ್ಯ. ಲೋಕರಂಜಕವಾಗ ಬೇಕಾದ ಕಾವ್ಯದಲ್ಲಿ ವೈರಾಗ್ಯಕ್ಕೆ ಹೆಚ್ಚಿನಸ್ಥಾನ ಸಾಧ್ಯವಿಲ್ಲವೆಂಬುದು ಅವನಿಗೆ ಗೊತ್ತಿದ್ದರೂ ವೈರಾಗ್ಯದ ಬೋಧೆಗಾಗಿ ಕಾವ್ಯಮಾರ್ಗವನ್ನು ಅವನು ಅನು ಸರಿಸಬೇಕಾಯಿತು. ಆದರೆ ಅವನು ಉತ್ತಮ ಕವಿಯೂ ಆದುದರಿಂದ ಅಸಾಧ್ಯವಾದುದನ್ನೂ ಸಾಧಿಸಿ ತೋರಿಸಿದ್ದಾನೆನ್ನಬೇಕಾಗಿದೆ. ಬುದ್ಧ ಚರಿತೆಯ ಪರಿಚಯವನ್ನು ವಿವರವಾಗಿ ಅಶ್ವಘೋಷನ ಮಾತುಗಳಲ್ಲಿಯೇ ಮಾಡಿಕೊಟ್ಟಿರುವುದರಿಂದ ಅವನ ಕಲ್ಪನಾಶಕ್ತಿಗೆ ಬೇರೆ ಇನ್ನು ಉದಾಹರಿಸ ಬೇಕಾದ ಪ್ರಮೇಯವಿಲ್ಲ. ಆದರೆ ಅವನ ಸಂಸ್ಕೃತದ ಶಬ್ದಸಂಗೀತಕ್ಕೂ ಉಕ್ತಿಚಮತ್ಕಾರಗಳಿಗೂ ಒಂದೆರಡು ನಿದರ್ಶನಗಳಿವು.—

1. **ಚಲತ್ಕದಂಬೇ ಹಿಮವನ್ನಿತಂಬೇ**
   **ತರೌ ಪ್ರಲಂಬೇ ಚಮರೋ ಲಲಂಬೇ**

(ಸೌಂದರನಂದ X. 11)

'ಕದಂಬತರು ಅಳ್ಳಾಡುತ್ತಿದ್ದ ಹಿಮಾಚಲದ ನಿತಂಬದಲ್ಲಿ ಎತ್ತರದ ಮರದ ಮೇಲೊಂದು ಚಮರೀ ಮೃಗ ಸಿಕ್ಕಿಕೊಂಡು ನೇತಾಡುತ್ತಿತ್ತು.'

ಇಲ್ಲಿ ಸಮಾನಶ್ರುತಿಯ ಪದವಿನ್ಯಾಸದಿಂದಲೇ ಶಬ್ದಚಮತ್ಕಾರವುಂಟಾಗಿದೆ. ವಾಲ್ಮೀಕಿಯಲ್ಲಿ ಈ ಸೌಂದರ್ಯ ವಿರಲ.

2. ನಂದ-ಸುಂದರಿಯರ ರೇಖಾಚಿತ್ರವಿದು:—

**ಸಾ ಹಾಸಹಂಸಾ ನಯನದ್ವಿರೇಫಾ**
**ಪೀನಸ್ತನಾತ್ಯುನ್ನತ ಪದ್ಮಕೋಶಾ ।**
**ಭೂಯೋ ಬಭಾಸೇ ಸ್ವಕುಲೋದಿತೇನ**
**ಸ್ತ್ರೀಪದ್ಮಿನೀ ನಂದದಿವಾಕರೇಣ ॥** (IV 4)

[ನಗೆಯೇ ಹಂಸೆ, ಕಣ್ಣೇ ದುಂಬಿ, ಉನ್ನತ ಕುಚವೇ ಮೇಲಿದ್ದ ತಾವರೆಮೊಗ್ಗು, ಎನ್ನುವಂತಿದ್ದ ಆ ಸ್ತ್ರೀಪದ್ಮಿನಿಯು ಸ್ವಗೃಹದಲ್ಲಿ ಉದಿಸಿದ ನಂದದಿವಾಕರನೊಡನೆ ಸೊಬಗನ್ನು ಪಡೆದಳು.]

ಇಲ್ಲಿಯ ಸಮಸ್ತವಸ್ತುವಿಷಯ ರೂಪಕಾಲಂಕಾರವು ಮನೋರಮವಾಗಿದೆ.

3. ಆರ್ಷಶೈಲಿಯ ಪದಪೌನರುಕ್ತ್ಯದಿಂದ ಬರುವ ಸೊಗಸನ್ನೂ ಉಪಮೆಯ ಔಚಿತ್ಯವನ್ನೂ ನೋಡಿ:—

**ಸಾ ಪದ್ಮರಾಗಂ ವಸನಂ ವಸಾನಾ**
**ಪದ್ಮಾನನಾ ಪದ್ಮದಲಾಯತಾಕ್ಷೀ ।**
**ಪದ್ಮಾ ವಿಪದ್ಮಾ ಪತಿತೇವ ಲಕ್ಷ್ಮೀಃ**
**ಶುಶೋಷ ಪದ್ಮಸ್ರಗಿವಾತಪೇನ ॥** (VI. 26)

[ಬಿಸಿಲಿನಲ್ಲಿ ಬಾಡಿದ ಪದ್ಮಮಾಲೆಯಂತೆ, ಪದ್ಮಹಸ್ತೆಯಾದ ಲಕ್ಷ್ಮಿ ಪದ್ಮವನ್ನು ಕಳೆದುಕೊಂಡು ಕೆಳಗುರುಳಿದಂತೆ, ಪದ್ಮರಾಗವಸನೆಯಾದ ಆ ಸುಂದರಿ ಕಂಡಳು.]

4. ಒಗಟೆಯಂತಿರುವ ಪದ್ಯವೊಂದನ್ನು ನೋಡಿ.—

**ಏಕಂ ವಿನಿನ್ಯೇ ಸ ಜುಗೋಪ ಸಪ್ತ**
**ಸಪ್ತೈವ ತತ್ಯಾಜ, ರರಕ್ಷ ಪಂಚ ।**

**ಪ್ರಾಪ ತ್ರಿವರ್ಗಂ ಬುಬುಧೇ ತ್ರಿವರ್ಗಂ**
**ಜಜ್ಞೇ ದ್ವಿವರ್ಗಂ ಪ್ರಜಹೌ ದ್ವಿವರ್ಗವ್ ||**
(ಬು. ಚ. II 41)

[ಒಂದನ್ನು ಕಲಿತನು, ಏಳನ್ನು ಕಾಪಾಡಿಕೊಂಡನು, ಹಾಗೆಯೇ ಏಳನ್ನು ತೊರೆದು ಮತ್ತೆ ಐದನ್ನು ಪಾಲಿಸಿದನು. ತ್ರಿವರ್ಗವನ್ನು ಸಾಧಿಸಿದನು, ತ್ರಿವರ್ಗವನ್ನೇ ಅರಿತನು. ಎರಡನ್ನು ತಿಳಿದನು, ಎರಡನ್ನೇ ಬಿಟ್ಟನು.]

5. ಕಿಟಕಿಗಳಿಂದ ರಾಜಕುಮಾರನನ್ನು ನೋಡುವ ಸ್ತ್ರೀಯರ ಮುಖಗಳನ್ನು ಕವಿ ಪದ್ಮಮಾಲೆಯೆಂದು ಉತ್ಪ್ರೇಕ್ಷಿಸುವ ಚಿತ್ರ, ಅಂತ್ಯಪ್ರಾಸವೂ ಸೇರಿದೆ --

**ವಾತಾಯನೇಭ್ಯಸ್ತು ವಿನಿಃಸೃತಾನಿ**
**ಪರಸ್ಪರಾಯಾಸಿತ ಕುಂಡಲಾನಿ ।**
**ಸ್ತ್ರೀಣಾಂ ವಿರೇಜುರ್ಮುಖಪಂಕಜಾನಿ**
**ಸಕ್ತಾನಿ ಹರ್ಮ್ಯೇಷ್ವಿವ ಪಂಕಜಾನಿ ||** (III. 19)

[ಒಬ್ಬರೊಬ್ಬರ ಓಲೆಗಳು ತಾಗಿ ನೋಯಿಸುವಂತೆ ಕಿಟಕಿಗಳಿಂದ ಹೊರಗೆ ಸೀಡಿದ ಆ ನಾರಿಯರ ಮುಖಪದ್ಮಗಳು ಆ ಸೌಧಗಳಿಗೆ ಸಿಂಗರಿಸಿದ್ದ ಪದ್ಮಮಾಲೆಗಳಂತೆಯೇ ಹೊಳೆದುವು!]

6 ಉದ್ಯಾನವನದ ಸಹಜಸುಂದರ ವರ್ಣನೆ—

**ತತಃ ಶಿವಂ ಕುಸುಮಿತಬಾಲಪಾದಪಂ**
**ಪರಿಭ್ರಮತ್ ಪ್ರಮುದಿತಮತ್ತಕೋಕಿಲಮ್ ।**
**ವಿಮಾನವತ್ ಸ ಕಮಲಚಾರುದೀರ್ಘಿಕಂ**
**ದದರ್ಶ ತದ್ ವನಮಿವ ನಂದನಂ ವನಮ್ ||**
(III. 64)

[ಕುಸುಮಿತವಾದ ಎಳೆಯ ಗಿಡಗಳಿಂದಲೂ ಸುಳಿದಾಡುವ ಮತ್ತ ಕೋಕಿಲಗಳಿಂದಲೂ ತುಂಬಿ, ಅನೇಕ ಉನ್ನತಾಸನಗಳಿಂದಲೂ ಪದ್ಮಸರೋವರಗಳಿಂದಲೂ ಕೂಡಿದ ಆ ಮಂಗಳಕರವಾದ ವನವನ್ನು ನಂದನವನವೋ ಎನ್ನುವಂತೆ ಕಂಡನು.]

7. ಮನಸ್ಸು ತೂಗುಯ್ಯಾಲೆಯಾದ ನಂದನ ಸ್ಥಿತಿಯ ವರ್ಣನೆ.—

**ತಂ ಗೌರವಂ ಬುದ್ಧಗತಂ ಚಕರ್ಷ**
**ಭಾರ್ಯಾನುರಾಗಃ ಪುನರಾಚಕರ್ಷ ।**
**ಸೋಽನಿಶ್ಚಯಾನ್ನಾಪಿ ಯಯೌ ನ ತಸ್ಥೌ**
**ತರಂಸ್ತರಂಗೇಷ್ವಿವ ರಾಜಹಂಸಃ ॥** (IV. 42)

[ಬುದ್ಧನ ವಿಷಯದಲ್ಲಿದ್ದ ಗೌರವ ಅವನನ್ನು ಅತ್ತ ಎಳೆಯಿತು, ಇನಿಯಳ ಮೇಲಿದ್ದ ಅನುರಾಗ ಮತ್ತೆ ಇತ್ತ ಸೆಳೆಯಿತು. ಆ ಅನಿಶ್ಚಯದಲ್ಲಿ ಅವನು ನೀರಿನಲೆಗಳ ಮೇಲೆ ತೇಲುವ ರಾಜಹಂಸದಂತೆ ಮುಂದೆ ಹೋಗಲೂ ಇಲ್ಲ, ಇದ್ದಲ್ಲಿಯೇ ನಿಲ್ಲಲೂ ಇಲ್ಲ!]

ಕಾಳಿದಾಸನು ಪಾರ್ವತಿಯನ್ನೂ ಹೀಗೆಯೇ ವರ್ಣಿಸಿದ್ದಾನೆ.

8. ವ್ಯಾಕರಣ ಧಾತುರೂಪಗಳ ಮೆರವಣಿಗೆ —

**ನ ಚಾಜಿಹೀರ್ಷೀತ್ ಬಲಿಮಪ್ರವೃತ್ತಂ**
**ನ ಚಾಚಿಕೀರ್ಷೀತ್ ಪರವಸ್ತ್ವಭಿಧ್ಯಾಮ್ ।**
**ನ ಚಾವಿವಕ್ಷೀತ್ ದ್ವಿಷತಾಮಧರ್ಮಂ**
**ನ ಚಾವಿವಕ್ಷೀತ್ ಹೃದಯೇನ ಮನ್ಯುಮ್ ॥** (II. 44)

[ಆತನು ಸಹಜವಾಗಿ ಬಾರದ ಕಾಣಿಕೆಯನ್ನು ಕೊಳ್ಳುವಾಸೆಮಾಡಲಿಲ್ಲ, ಪರರ ಸೊತ್ತಿಗೆ ಎಂದೂ ಆಶಿಸಲಿಲ್ಲ; ವೈರಿಗಳ ಅಧರ್ಮವನ್ನೆಂದೂ ಹೇಳಲು ಇಚ್ಛಿಸಲಿಲ್ಲ, ಹೃದಯದಲ್ಲೆಂದೂ ಕೋಪವನ್ನಿಟ್ಟುಕೊಳ್ಳುವುದಕ್ಕೂ ಬಯಸಲಿಲ್ಲ.]

ಹೀಗೆ ಅಶ್ವಘೋಷನ ಕಾವ್ಯಶೈಲಿ ಸತ್ತ್ವಸಹಜತೆಗಳನ್ನು ಕಳೆದುಕೊಳ್ಳದೆ ಕೃತ್ರಿಮತೆಯ ಅತಿಗೂ ಹೋಗದೆ, ರಸವನ್ನು ಅಗಲದೆ ಅಲಂಕಾರವನ್ನೂ ತೊರೆಯದೆ, ಕಥೆಯನ್ನು ಕುಗ್ಗಿಸಿ ವರ್ಣನೆಯನ್ನು ಹಿಗ್ಗಿಸಿ, ಆರ್ಷಕಾವ್ಯದ ಔನ್ನತ್ಯವನ್ನೂ ಪರಿಷ್ಕೃತಕಾವ್ಯದ ಪ್ರೌಢಿಮೆಯನ್ನೂ ಕೂಡಿಸಿಕೊಂಡು, ಮುಂದಿನವರಿಗೆಲ್ಲ ಮಾರ್ಗದರ್ಶಕವಾಯಿತು, ಸ್ಫೂರ್ತಿದಾಯಕವೂ ಆಯಿತು. ಅವನ ಪ್ರಚಾರದ ಫಲವಾಗಿ ಬೌದ್ಧರ ಪೂಜೆಪುರಸ್ಕಾರ ಸಿಕ್ಕಿದರೆ, ಆಸ್ತಿಕರ ತಿರಸ್ಕಾರವೂ ಪ್ರಾಪ್ತಿಯಾಯಿತು. ಅವನ ಕಾವ್ಯಗಳೇ

ಭಾರತವರ್ಷದಲ್ಲಿ ಲುಪ್ತಪ್ರಾಯವಾದುವು. ಅಶ್ವಘೋಷನ ಒಂದು ಸುಭಾಷಿತವನ್ನು ವಲ್ಲಭದೇವನು ಉದಾಹರಿಸಿದ್ದಾನೆ. ಅದರಲ್ಲಿ ಅವನು ಆಶಿಸುವುದು 'ಜಿತಮತ್ಸರ'ರಾದ 'ಮಹಾಪುರುಷ ಸತ್ಕಥಾಶ್ರವಣಜಾತಕೌತೂಹಲರಾದ' ಸಾಧುಜನಗಳನ್ನು. ಅವನ ಆಶೆ ಇನ್ನು ಮುಂದಾದರೂ ಫಲಿಸಲೆಂದು ಹಾರೈಸುತ್ತೇವೆ, ಫಲಿಸಿದರೆ, ಜ್ಞಾನಸೂರ್ಯನಾದ ಬುದ್ಧದೇವನ ಒಂದೆರಡು ಕಿರಣಗಳ ಸ್ಪರ್ಶದಿಂದಲೇ ಇಂದೂ ಹೊಸ ಮಹಾಕಾವ್ಯಗಳು ಹುಟ್ಟಬಹುದು.—

**ಜಯಂತಿ ಜಿತಮತ್ಸರಾ ಪರಹಿತಾರ್ಥಮಭ್ಯುದ್ಯತಾಃ**
**ಪರಾಭ್ಯುದಯಸುಸ್ಥಿತಾಃ ಪರವಿಪತ್ತಿಖೇದಾಕುಲಾಃ ।**
**ಮಹಾಪುರುಷಸತ್ಕಥಾಶ್ರವಣಜಾತಕೌತೂಹಲಾಃ**
**ಸಮಸ್ತದುರಿತಾರ್ಣವಪ್ರಕಟಸೇತವಃ ಸಾಧವಃ ॥**

ಇದುವರೆಗೆ ಭರ್ತೃಹರಿಯದೆಂದು ನಮಗೆ ಪರಿಚಿತವಾಗಿರುವ ಒಂದು ಸುಂದರ ಶ್ಲೋಕವು ಅಶ್ವಘೋಷನ ಬುದ್ಧಚರಿತೆಯ ೨೨ನೆಯ ಸರ್ಗದ್ದೆಂದೂ, ಹಾಗೆಯೇ ಅಷ್ಟೇ ಸುಂದರವಾದ ಮತ್ತೊಂದು ಸುಭಾಷಿತವೂ ಅಲ್ಲಿಯದೇ ಎಂದೂ ಪ್ರೊ॥ ತೀ. ನಂ. ಶ್ರೀಕಂಠಯ್ಯನವರು ಸಪ್ರಮಾಣವಾಗಿ ತೋರಿಸಿ ಸಂಸ್ಕೃತ ವಿಮರ್ಶಕರ ಆದರಾಭಿಮಾನಗಳಿಗೆ ಪಾತ್ರರಾಗಿದ್ದಾರೆ. [A few unrecognised stanzas of Aśvaghosa, Hiriyanna Commemoration Volume, p 203] ಶ್ಲೋಕಗಳಿವು:—

**೧. ಸ್ಮಿತೇನ ಹಾವೇನ ಚ ಲಜ್ಜಯಾ ಭಿಯಾ**
**ಪರಾಙ್ಮುಖೈರರ್ಧಕಟಾಕ್ಷವೀಕ್ಷಿತೈಃ ।**
**ವಚೋಭಿರೀರ್ಷ್ಯಾಕಲಹೇನ ಲೀಲಯಾ**
**ಸಮಸ್ತಭಾವೈಃ ಖಲು ಬಂಧನಂ ಸ್ತ್ರಿಯಃ ॥**

[ಮುಗುಳ್ನಗೆ, ಲೀಲೆ, ನಾಚಿಕೆ, ಅಂಜಿಕೆ, ತಿರುಗಿಸಿದ ಮುಖ, ಕಡೆಗಣ್ ನೋಟ, ಲಲ್ಲೆ, ಪ್ರಣಯಕಲಹ, ವಿಲಾಸ—ಹೀಗೆ ಯಾವ ಸ್ಥಿತಿಯಲ್ಲಿ ಇದ್ದರೂ ಸ್ತ್ರೀಯರು (ಪುರುಷರಿಗೆ) ಬಂಧನದಂತೆಯೇ!]

೨. ಸ್ಥಿತಾಸನಸ್ಥಾ ಶಯಿತಾ ಪರಾಙ್ಮುಖೀ
ಸ್ವಲಂಕೃತಾ ವಾಪ್ಯನಲಂಕೃತಾಥ ವಾ ।
ನಿರೀಕ್ಷ್ಯಮಾಣಾ ಪ್ರಮದಾ ಸುದುರ್ಬಲಂ
ಮನುಷ್ಯಮಾಲೇಖ್ಯಗತಾಪಿ ಕರ್ಷತಿ ॥

[ಆಸನದಲ್ಲಿ ಕುಳಿತಿರಲಿ, ಮೊಗದಿರುಹಿ ಮಲಗಿರಲಿ, ಸಿಂಗರಿಸಿಕೊಂಡಿರಲಿ, ಸಿಂಗರವಿಲ್ಲದಿರಲಿ, ಪ್ರಮದೆಯು ಚಿತ್ರಿತಳಿದ್ದರೂ, ಕಂಡರೆ ಸಾಕು ಪುರುಷನನ್ನು ದುರ್ಬಲಗೊಳಿಸಿ ತನ್ನೆಡೆ ಸೆಳೆಯುವಳು ! ]

ಕೇವಲ ಕಾವ್ಯದೃಷ್ಟಿಯಿಂದ ಅಭ್ಯಾಸಮಾಡುವವರಿಗೆ ಅಶ್ವಘೋಷನ ಅನಂತರ ಗಮನಾರ್ಹವಾದ ಬೌದ್ಧಕಾವ್ಯವೆಂದರೆ—ಆರ್ಯಶೂರನ ' ಜಾತಕ ಮಾಲಾ ', ಅಥವಾ ' ಬೋಧಿಸತ್ತ್ವಾವದಾನಮಾಲಾ.' ೧೯೧೪ ರಲ್ಲಿ ಎಚ್, ಕೆರ್ನ್ ಅವರು ಇದನ್ನು ಹಾರ್ವರ್ಡ್ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಬೋಧಿಸತ್ತ್ವರ ಪ್ರಸಿದ್ಧ ಜನ್ಮಾಂತರ ಕಥೆಗಳನ್ನೇ ಕಾವ್ಯಮಯವಾದ ಗದ್ಯ ಪದ್ಯಗಳ ಮೂಲಕ ರಚಿಸಿದುದು ಆರ್ಯಶೂರನ ಕಾಣಿಕೆ. ಉಳಿದ ಬೌದ್ಧ ಕಥಾಸಂಗ್ರಹಗಳಲ್ಲಿಲ್ಲದ ಕಲೆಗಾರಿಕೆ ಆರ್ಯಶೂರನ ಕೃತಿಯಲ್ಲಿ ಕಾಣಿಸುತ್ತದೆ. ಇಲ್ಲಿ ಒಟ್ಟು ೩೫ ಜಾತಕಕಥೆಗಳು ಸಮಾವೇಶವಾಗಿವೆ. ಭಾರತದಲ್ಲೆಲ್ಲ ಈ ಗ್ರಂಥವು ಜನಪ್ರಿಯವಾಗಿತ್ತೆಂದು ಚೀಣೀ ಯಾತ್ರಿಕನಾದ ಇತ್ಸಿಂಗನು ಉಲ್ಲೇಖಿಸಿದ್ದಾನೆ. ಅಜಂತದ ಗುಹಾಂತರ್ದೇವಾಲಯಗಳಲ್ಲಿರುವ ಭಿತ್ತಿ ಚಿತ್ರಗಳಲ್ಲಿ ಜಾತಕಮಾಲೆಯ ಕಥಾಸನ್ನಿವೇಶಗಳು ಚಿತ್ರಿತವಾಗಿರುವುವಷ್ಟೇ ಅಲ್ಲ, ಜಾತಕಮಾಲಾಗ್ರಂಥದ ಶ್ಲೋಕಗಳನ್ನೂ ಕಲ್ಲಿನಲ್ಲಿ ಕೊರೆಯಲಾಗಿದೆ. ಇದು ಗಮನೀಯವಾದ ಅಂಶ, ಈ ಶಿಲಾಲೇಖಗಳ ಕಾಲ ಕ್ರಿ. ಶ. ೬ ನೆಯ ಶತಮಾನ. ಆರ್ಯಶೂರನ ಮತ್ತೊಂದು ಕೃತಿ ಕ್ರಿ. ಶ. ೪೩೪ ರಲ್ಲಿಯೇ ಚೀಣೀಭಾಷೆಗೆ ಅನುವಾದಿತವಾಗಿದ್ದುದರಿಂದ ಪ್ರಾಯಶಃ ಅವನ ಕಾಲ ಕ್ರಿ. ಶ. ೪ ನೆಯ ಶತಮಾನ. ಸುಂದರವಾದ ಗದ್ಯಪದ್ಯ ಮಿಶ್ರಣವನ್ನಷ್ಟೇ ಚಂಪೂಲಕ್ಷಣವೆನ್ನುವುದಾದರೆ ಜಾತಕಮಾಲಾಗ್ರಂಥವನ್ನೇ ಚಂಪೂಕಾವ್ಯವೆನ್ನುವಂತಿದೆ.

ಆರ್ಯಶೂರನ ಲಲಿತ ಪದಾವಲಿಯ ಉದಾಹರಣೆಗೆ ಗ್ರಂಥಾರಂಭದಲ್ಲಿಯೇ ಬರುವ ಈ ವೃತ್ತಗಳನ್ನು ನೋಡಿ —

ಶ್ರೀಮನ್ತಿ ಸದ್ಗುಣಪರಿಗ್ರಹಮಂಗಲಾನಿ
ಕೀರ್ತ್ಯಾಸ್ಪದಾನ್ಯನವಗೀತಮನೋಹರಾಣಿ ।
ಪೂರ್ವಪ್ರಜನ್ಮಸು ಮುನೇಶ್ಚರಿತಾದ್ಭುತಾನಿ
ಭಕ್ತ್ಯಾ ಸ್ವಕಾವ್ಯಕುಸುಮಾಂಜಲಿನಾರ್ಚಯಿಷ್ಯೇ ॥ (1)

[ಮಂಗಳಕರ, ಸದ್ಗುಣಪೂರ್ಣ, ಕೀರ್ತಿಗೆ ಕಾರಣ, ಅನಿಂದಿತ, ಮನೋಹರ—ಹೀಗೆ ಸರ್ವಗುಣವಿಶಿಷ್ಟವಾದ ಬುದ್ಧನ ಅದ್ಭುತ ಪೂರ್ವ ಕಥೆಗಳನ್ನು ಭಕ್ತಿಪುರಸ್ಸರವಾಗಿ ನನ್ನ ಕಾವ್ಯಕುಸುಮಾಂಜಲಿಯಿಂದ ಪೂಜಿಸುವೆನು!]

ಶ್ಲಾಘ್ಯೈರಮೀಭಿರಭಿಲಕ್ಷಿತ ಚಿಹ್ನಭೂತೈ-
ರಾದೇಶಿತೋ ಭವತಿ ಯತ್ಸುಗತತ್ವಮಾರ್ಗಃ ।
ಸ್ಯಾದೇವ ರೂಕ್ಷಮನಸಾಮಪಿ ಚ ಪ್ರಸಾದೋ
ಧರ್ಮ್ಯಾಃ ಕಥಾಶ್ಚ ರಮಣೀಯತರತ್ವಮೀಯುಃ ॥ (2)

[ಈ ಶ್ಲಾಘನೀಯವಾದ ಚಿಹ್ನೆಗಳಿಂದ ಬೌದ್ಧಮಾರ್ಗವು ನಿರ್ದೇಶಿತವಾಗುತ್ತದೆ. ಆದ್ದರಿಂದ ಒರಟುಮನಸ್ಸಿನವರಿಗೂ ಮನಃಪ್ರಸಾದವಾದೀತು, ಧರ್ಮಕಥೆಗಳೇ ರಮಣೀಯತರವಾಗಿ ಪರಿಣಮಿಸಿಯಾವು! ]

ಲೋಕಾರ್ಥಮಿತ್ಯಭಿಸಮೀಕ್ಷ್ಯ ಕರಿಷ್ಯತೇಽಯಂ
ಶ್ರುತ್ಯಾರ್ಷಯುಕ್ತ್ಯವಿಗುಣೇನ ತಥಾ ಪ್ರಯತ್ನಃ ।
ಲೋಕೋತ್ತಮಸ್ಯ ಚರಿತಾತಿಶಯಪ್ರದೇಶೈಃ
ಸ್ವಂ ಪ್ರಾತಿಭಂ ಗಮಯಿತುಂ ಶ್ರುತಿವಲ್ಲಭತ್ವಮ್ ॥ (3)

[ಹೀಗೆಂದುಕೊಂಡು ಲೋಕಹಿತಕ್ಕಾಗಿ, ಶಾಸ್ತ್ರಯುಕ್ತಿಗನುಸಾರವಾಗಿ, ಲೋಕೋತ್ತಮನ ಪೂರ್ವ ಚರಿತೆಯನ್ನು ಪ್ರತಿಭೆಯಿಂದ ರೂಪಿಸಿ ಕಿವಿಗಿಂಪಾಗುವಂತೆ ಮಾಡಲು ಯತ್ನಿಸಿದೆ.]

ಆರ್ಯಶೂರನ ಧರ್ಮಪ್ರಚಾರದೃಷ್ಟಿಯಂತೆ, ಕಾವ್ಯಸೌಂದರ್ಯ ದೃಷ್ಟಿಯೂ ಈ ಆರಂಭಪದ್ಯಗಳಲ್ಲೇ ವ್ಯಕ್ತವಾಗಿದೆ.

ಈತನ ಗದ್ಯಶೈಲಿಗೆ ಒಂದು ಮಾದರಿ·—

**ದ್ವಿಷತಾಮಪಿ ಮಾನಸಾನ್ಯಾವರ್ಜಯನ್ತಿ ಸದ್ವೃತ್ತಾನುವರ್ತಿನಃ. ತದ್ಯಥಾನುಶ್ರೂಯತೇ. ಬೋಧಿಸತ್ತ್ವಃ ಕಿಲ ಶ್ರೀಮತಿ ಹಿಮವತ್ಕುಕ್ಷೌ ವಿವಿಧರಸವೀರ್ಯವಿಪಾಕ ಗುಣೈರ್ಬಹುಭಿರೋಷಧಿವಿಶೇಷೈಃ ಪರಿಗೃಹೀತ ಭೂಮಿಭಾಗೇ ನಾನಾವಿಧ ಪುಷ್ಪಫಲ ಪಲ್ಲವ ಪತ್ರವಿಟಪರಚನೈರ್ಮಹೀರುಹಶತೈರಾಕೀರ್ಣೇ ಸ್ಫಟಿಕದಲಾಮಲಸಲಿಲ ಪ್ರಸ್ರವಣೇ ವಿವಿಧಪಕ್ಷಿಗಣನಾದನಾದಿತೇ ವಾನರ ಯೂಥಾಧಿಪತಿರ್ಬಭೂವ.**

(ಪು. ೧೭೫. ಮಹಾಕಪಿಜಾತಕ)

[ಸದ್ಗುಣಶಾಲಿಗಳು ವೈರಿಗಳ ಮನಸ್ಸಿಗೂ ಸಂತೋಷವನ್ನೇ ಉಂಟು ಮಾಡುವರು. ಹೇಗೆಂದರೆ ಇದಕ್ಕೆ ಒಂದು ಹಿಂದಿನ ಕಥೆಯಿದೆ–ಹಿಂದೆ ಬೋಧಿಸತ್ತ್ವನೇ ಸುಂದರವಾದ ಹಿಮವತ್ಪರ್ವತದ ತಪ್ಪಲಿನ ಕಾಡಿನಲ್ಲಿ ಕಪಿಗಳ ಹಿಂಡಿಗೊಡೆಯನಾಗಿದ್ದನು· ಆ ವನಪ್ರದೇಶವು ವಿವಿಧ ರಸಭರಿತವಾದ ಮತ್ತು ವಿವಿಧ ಗುಣಸಂಪನ್ನವಾದ ಗಿಡಮೂಲಿಕೆಗಳಿಂದ ತುಂಬಿದ್ದಿತು. ಬಗೆಬಗೆಯ ಹೂಹಣ್ಣುತಳಿರೆಲೆಕೊಂಬೆಗಳಿಂದ ತುಂಬಿದ ನೂರಾರು ಮರಗಳಿಂದ ಕೂಡಿದ್ದಿತು. ಪಕ್ಕದಲ್ಲಿಯೇ ಸ್ಫಟಿಕಶಿಲಾಖಂಡದಂತೆ ಸ್ವಚ್ಛವಾಗಿ ಜಳಜಳನೆ ಹರಿಯುತ್ತಿದ್ದ ಝರಿಯಿದ್ದಿತು. ಹಲವಾರು ಹಕ್ಕಿಗಳು ಯಾವಾಗಲೂ ಅಲ್ಲಿ ದನಿಗೈಯುತ್ತಿದ್ದುವು.]

ಮುಂದಿನ ಸಂಸ್ಕೃತ ಗದ್ಯಶೈಲಿಯ ವೈಶಿಷ್ಟ್ಯಗಳಾದ ಉದ್ದುದ್ದ ಸಮಾಸಗಳೂ, ಪ್ರಾಸಮಯವಾಗಿ ಕರ್ಣಮನೋಹರವಾದ ಲಲಿತ ಪದಪುಂಜಗಳೂ ಆಗಲೇ ಆರ್ಯಶೂರನಲ್ಲಿ ಕಂಗೊಳಿಸುತ್ತಿವೆ!

# ಅಧ್ಯಾಯ ೫

## ಕಾಳಿದಾಸ

" ಸುಕವಿಜನಗಣನೆಯೊಳ್ ದ
ತ್ತಕನಿಷ್ಠಿಕನಾಗೆ ಕಾಳಿದಾಸಂ ಮೊದಲೆಂ- ।
ದು ಕರಂ ಬಣ್ಣಿಪರದಱಿಂ-
ದೆ ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ ॥ "

—ರುದ್ರಭಟ್ಟ

" ಆಹ ವಿರಿಂಚಿಜಾಯೆ, ಕವಿ ದಂಡಿ ಗಡಾನುಸುರಾರೆನಲ್ ತ್ವಮೇ-
ವಾಹಮಸಂಶಯಂ ದಲೆನುತುಂ ನುಡಿದಳ್ಗಡ ವಾಣಿಯೆಂದೆನ-
ಲ್ಕೂಹಿಸಲಪ್ಪುದೇನವನ ವಾಕ್ಪರಿಪಾಟಿಯುದಾರ ಸಾಟಿ ಪುಂ-
ದೇಹದ ವಾಣಿಯುಂ ನುತಿಸದಿರ್ಪರದಾರ್ ಕವಿಕಾಳಿದಾಸನಂ "

—ಬಸವಪ್ಪಶಾಸ್ತ್ರಿ

ಕಾಳಿದಾಸನು ಸಂಸ್ಕೃತ ಕಾವ್ಯದ ಅತ್ಯುನ್ನತ ಶಿಖರ ಅವನಿಗೆ ಕೈಮುಗಿಯದ ಕವಿಯಿಲ್ಲ, ಅವನನ್ನು ಮೆಚ್ಚದ ವಿಮರ್ಶಕನಿಲ್ಲ, ಅವನ ಹೆಸರನ್ನು ಗೌರವಿಸದ ಭಾರತೀಯನಿಲ್ಲ. ಅವನ ಕಲ್ಪನಾದೃಷ್ಟಿ ಉದಗ್ರವೂ ಹೌದು, ಸಮಗ್ರವೂ ಹೌದು. ಅವನ ಕಾವ್ಯಸೃಷ್ಟಿ ಅಭಿನವವಷ್ಟೇ ಅಲ್ಲ, ಅಭಿರಾಮವೂ ಹೌದು. ಅವನ ರಸವೃಷ್ಟಿ ಬಗೆಮುಗುಳನ್ನು ಅರಳಿಸುತ್ತದೆ, ಆನಂದಲತೆಯನ್ನು ಕೊನರಿಸುತ್ತದೆ. ವಸಂತ ಸಮಯದ ಕುಸುಮಿತ ವನರಾಜಿಯಂತೆ, ಬೇಸಗೆಯ ಬಿರುಬಿಸಿಲಿನಲ್ಲಿ ಜುಳುಜುಳು ರವದಿಂದ ಮರೆಯಲ್ಲಿ ಹರಿಯುವ ಗಿರಿತೊರೆಗಳ ಮಂಜುಳ ಮನೋಹರ ಸಂಗೀತ ದಂತೆ, ಶಾರದ ಶರ್ವರಿಯ ಶಶಿಮಯೂಖಮಾಲೆಯಂತೆ, ಹೈಮಾಚಲ ಸಾನುಗಳಲ್ಲಿ ಸೊಗಯಿಸುವ ಪ್ರಶಾಂತ ರಮಣೀಯ ಸಂಧ್ಯಾರಾಗದಂತೆ ಕಾಳಿದಾಸನಕಾವ್ಯವು ಮನಸ್ಸನ್ನು ಸೂರೆಗೊಳ್ಳುತ್ತದೆ; ಮುಗ್ಧಗೊಳಿಸುತ್ತದೆ. ಸುರಲೋಕದ ಅಪ್ಸರೆಯರೂ, ವಿದ್ಯಾಧರಲೋಕದ ಕನಕಾಂಗಿಯರೂ,

ಸ್ವಪ್ನಲೋಕದ ಲಲನೆಯರೂ, ಭೂಮಿಗಿಳಿದು ಬಂದು ಮುಗುದೆಯರ, ಬಿಂಕಗಾರ್ತಿಯರ, ಪಂಕಜಮುಖಿಯರ, ವಾರಾಂಗನೆಯರ, ಮಾಲೆಕಾರ್ತಿಯರ, ರಾಜಪುತ್ರಿಯರ, ಜತೆಯಲ್ಲಿ ಸರಸವಾಡುತ್ತಾರೆ— ಕಾಳಿದಾಸನ ಕಾವ್ಯಗಳಲ್ಲಿ. ಪ್ರಕೃತಿದೇವಿಯು ತನ್ನ ವಿಲಾಸಲೀಲೆಗಳನ್ನೂ, ವೇಷವಿನ್ಯಾಸಗಳನ್ನೂ, ಭಾವಭಂಗಿಗಳನ್ನೂ ಅಭಿನಯಿಸುತ್ತಾ ಪ್ರತಿಕ್ಷಣವೂ ನಾಟ್ಯವಾಡುತ್ತಾಳೆ— ಆತನ ಕಾವ್ಯರಂಗದಲ್ಲಿ. ಸೂರ್ಯಚಂದ್ರರ ನೇತೃತ್ವದಲ್ಲಿ, ಕಾಮದೇವನ ರಾಜ್ಯಭಾರದಲ್ಲಿ, ಚಕೋರ ಚಕ್ರವಾಕಗಳೂ ಅಶೋಕ ಮಾಲತಿಗಳೂ ಶಿರೀಷಕುಮುದಿನಿಗಳೂ ಸ್ವೇಚ್ಛೆಯಿಂದ ವಿಹರಿಸುತ್ತವೆ, ನಕ್ಕು ನಲಿಯುತ್ತವೆ, ಮೈಮರೆಯುತ್ತವೆ. ಸುಖವಾಗಿ ಸುಳಿವ ಸಾಯಂತನ ವಾಯುಗಳಲ್ಲಿ ಮಧುಕರಗಳ ನಿತ್ಯಯಾತ್ರೆ ನಡೆಯುತ್ತದೆ. ಕೆಂದಾವರೆಯ ಕೊಳಗಳಲ್ಲಿ ಕಲಹಂಸಗಳ ಮಂದಯಾನದಂತೆ, ತಮಾಲನೀಲ ವನಾಂತಗಳಲ್ಲಿ ಮತಂಗಜಗಳ ಮತ್ತಗಮನವೂ ಆರಂಭವಾಗುತ್ತದೆ. ಪ್ರಮದವನಗಳ, ಕ್ರೀಡಾಶೈಲಗಳ, ಕಾಂಚನಸರಸಿಗಳ, ಗುಹಾವಿಹಾರಗಳ, ಪರಿಸರಣದಲ್ಲಿ ನಾಗರಿಕರ ವಿನೋದಗೋಷ್ಠಿಗಳೂ ವಿಲಾಸಕ್ರೀಡೆಗಳೂ ನಿರಂತರವಾಗಿ ಸಾಗುತ್ತವೆ. ಪ್ರಣಯದ ಪ್ರಶಾಂತ ಪ್ರಕಾಶದಲ್ಲಿ ಉದಾತ್ತಪುರುಷರ ಬಹುಮುಖವಾದ ಮಹಾಸಾಧನೆಗಳು ಮಸಕಾಗುವುದಿಲ್ಲ. ಅವಕ್ಕೊಂದು ಅಪೂರ್ವವಾದ ಪ್ರಭೆ ತುಂಬಿಕೊಳ್ಳುತ್ತದೆ. ಹೆಜ್ಜೆ ಹೆಜ್ಜೆಗೂ ವಾಸ್ತವ ಜೀವನದ ಉಸಿರು ಕವಿಯ ಮಾತುಗಳಿಂದ ಸೂಸುತ್ತದೆ. ಅನ್ಯವಿಲಕ್ಷಣವಾದ ವಾಗ್ವಿಲಾಸವು ಪ್ರತಿ ಪದದಲ್ಲಿಯೂ ಉಕ್ಕುತ್ತದೆ. ಆತನ ಕಲೆಯ ನೆಲೆಯನ್ನು ಅರಿಯಲೆಳಸದ ಲಾಕ್ಷಣಿಕನಿಲ್ಲ; ಅನುಕರಿಸಲೆಳಸದ ಕವಿಯಿಲ್ಲ, ಶೋಧಿಸಲೆಳಸದ ಪಂಡಿತನಿಲ್ಲ. ಆದರೆ ಅದರ ಬಲೆಯಿಂದ ಬಿಡಿಸಿಕೊಂಡು ಬಂದವರು ಮಾತ್ರ ಇನ್ನೂ ಇಲ್ಲ. ಕವಿತೆಗೆ ಗುಣವೇ ಪ್ರಾಣವೆಂದು ನಿರ್ಣಯಿಸಿ ಹೊರಟ ದಂಡಿ–ತಾನೇ ಸ್ವತಃ ಮಹಾಕವಿ–ತಾನು ಊಹಿಸಬಲ್ಲ ಗುಣಗಳೆಲ್ಲ (ಹತ್ತೂ) ಕಾಳಿದಾಸನ ರಚನೆಯಲ್ಲಿ ತುಂಬಿದೆಯೆಂದು ಸುಮ್ಮನಾಗಬೇಕಾಯಿತು. ಅಲಂಕಾರಗಳಲ್ಲಿ ಉಪಮೆಯೇ ಜೀವಾಳವೆಂದು ವಿಮರ್ಶಿಸತೊಡಗಿದ ಆಲಂಕಾರಿಕರು "ಉಪಮಾ ಕಾಳಿದಾಸಸ್ಯ" ಎಂದು ಅವನಿಗೆ ಆದರ ಸರ್ವಮಾನ್ಯ ವಹಿಸಿ ಮೂಕರಾಗಬೇಕಾಯಿತು. ರಸಧ್ವನಿಯೇ ಕಾವ್ಯದ ಅಂತರಾತ್ಮವೆಂದು ಪರೀಕ್ಷಿಸಹೊರಟ ಆನಂದವರ್ಧನಾದಿಗಳು

ಮಹಾಕವಿಯೆಂದರೆ ಋಷಿಗಳಾದಮೇಲೆ ಕಾಳಿದಾಸನೊಬ್ಬನೇ ಎಂದು ನಿರ್ಣಯಿಸಿ ನಿವೃತ್ತರಾಗಬೇಕಾಯಿತು. ತಮ್ಮ ತಮ್ಮ ದೃಷ್ಟಿಕೋನಗಳಿಂದ ವಿಮರ್ಶಿಸಿದ ಪಾಶ್ಚಾತ್ಯ ರಸಿಕಾಗ್ರಣಿಗಳೂ ಕಾಳಿದಾಸನ ಘನತೆ ಅಮೇಯ ವಾಗಿದೆಯೆಂದು ಮುಕ್ತಕಂಠದಿಂದ ಘೋಷಿಸಿ ವಿಶ್ವಕವಿಗಳ ಮಾಲೆಯಲ್ಲಿ ಆತನಿಗೊಂದು ಶಾಶ್ವತಸ್ಥಾನವನ್ನಂಗೀಕರಿಸಬೇಕಾಯಿತು. ಕಾಳಿದಾಸನು ವಾಲ್ಮೀಕಿ ಅಶ್ವಘೋಷಾದಿಗಳ ಕಾವ್ಯಕಲೆಯ ಮರ್ಮವನ್ನೆಲ್ಲ ತನ್ನದಾಗಿಸಿ ಕೊಂಡರೂ 'ಪರಪ್ರತ್ಯಯನೇಯ ಬುದ್ಧಿ'ಯಾಗದೆ ಒಂದು ಅಭೂತಪೂರ್ವ ವಾದ ರಸಮಯಜಗತ್ತನ್ನು ಸೃಷ್ಟಿಸಿದ ಕವಿವಿರಿಂಚಿ. ಮಹಾಕಾವ್ಯದ ಪರಂಪರೆಯನ್ನು ಮಹೋನ್ನತಿಯ ಶಿಖರಾಗ್ರಕ್ಕೆ ಮುಟ್ಟಿಸಿದ್ದಲ್ಲದೆ, ಲಘು ಕಾವ್ಯದ ವಿವಿಧ ಪ್ರಕಾರಗಳ ಪ್ರಥಮ ಪ್ರದರ್ಶನವನ್ನೂ ನಾಟಕ ಕ್ಷೇತ್ರದ ಬಹುಮುಖ ವಿಸ್ತಾರವನ್ನೂ ಸಾಧಿಸಿದ ಅಪೂರ್ವ ಪ್ರತಿಭಾಶಾಲಿ. ಪ್ರಾಚೀನರು ಆತನನ್ನು ಸರಸ್ವತಿಯ ಅವತಾರವೆಂದೇ ಪೂಜಿಸಿದರೆ ಆಶ್ಚರ್ಯ ಪಡುವ ಕಾರಣವಿಲ್ಲ. ಆದರೆ ಆತನ ಸರ್ವತೋಮುಖವಾದ ಕಾವ್ಯ ಜ್ಯೋತಿಯನ್ನು ಪರಿಚಯಮಾಡಿಕೊಡುವ ಕೆಲಸ ಮಾತ್ರ ಅವನ ಉಪಮೆ ಗಳಲ್ಲೇ ಹೇಳುವುದಾದರೆ ಹರಿಗೋಲಿನಿಂದ ಸಾಗರವನ್ನು ದಾಟುವಂತೆ ಸಾಹಸಕಾರ್ಯ, ಎತ್ತರವಾದ ಹಣ್ಣಿಗೆ ಆಸೆಯಿಂದ ಕೈನೀಡುವ ಕುಳ್ಳನ ವರ್ತನೆಯಂತೆ ಹಾಸ್ಯಾಸ್ಪದ. ಕನ್ನಡಿಗರಿಗೆ ಕಾಳಿದಾಸನ ಕೃತಿಗಳು ಅನುವಾದಗಳ ಮೂಲಕ ಪರಿಚಿತವಾಗಿರುವುದಲ್ಲದೆ, ಎಷ್ಟೋ ಉತ್ತಮ ವಿಮರ್ಶೆಗಳೂ ಬಂದಾಗಿರುವುದರಿಂದ,[1] ಪಿಷ್ಟಪೇಷಣಕ್ಕಿಲ್ಲಿ ಹೊರಡದೆ ಸಾರಭೂತವಾದ ವಿಷಯಗಳನ್ನು ಮಾತ್ರ ಯಥಾಶಕ್ತಿ ವಿವೇಚಿಸಲಾಗಿದೆ.

---

1. ಶ್ರೀ ಎಸ್. ವಿ ಪರಮೇಶ್ವರಭಟ್ಟರು ಕಾಳಿದಾಸನ ಕಾವ್ಯಗಳನ್ನೆಲ್ಲ ಅನುವಾದ ಮಾಡಿದ್ದಾರೆ ಶ್ರೀ ದ. ರಾ ಬೇಂದ್ರೆಯವರೂ, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳೂ ಬರೆದಿರುವ ಮೇಘದೂತದ ಅನುವಾದಗಳುಂಟು ಬಸವಪ್ಪಶಾಸ್ತ್ರಿಗಳ ಶಾಕುಂತಲ ನಾಟಕದ ಅನುವಾದ ಸುಪ್ರಸಿದ್ಧ

ವಿಮರ್ಶೆಗಳಲ್ಲಿ ಶ್ರೀ ಸಿ ಕೆ ವೆಂಕಟರಾಮಯ್ಯನವರ 'ಕಾಳಿದಾಸನು ಶೃಂಗಾರರಸವನ್ನು ಚಿತ್ರಿಸಿರುವ ಬಗೆ', ಮಾಸ್ತಿ ವೆಂಕಟೇಶಯ್ಯಂಗಾರ್ಯರ 'ವಿಮರ್ಶೆ, ಭಾಗ ೧, ೨, ೩', ಟಾಗೋರರ 'ಪ್ರಾಚೀನ ಸಾಹಿತ್ಯ'ದ ಅನುವಾದ, ಕುವೆಂಪು ಅವರ ಲೇಖನಗಳು, ಮುಂತಾದುವನ್ನು ಗಮನಿಸಬಹುದು.

ಕಾಳಿದಾಸನ ಕಾಲದೇಶಾದಿಗಳನ್ನು ಕುರಿತು ಕೆಲವೊಂದು ಜನಪ್ರಿಯ ವಾದ ದಂತಕಥೆಗಳಿವೆಯೇ ಹೊರತು ನಿಶ್ಚಿತವಾದ ಅಂಶಗಳಾವುವೂ ಇಲ್ಲ. ಭಾರತದಲ್ಲೆಲ್ಲ ಉತ್ತಮನಾದ ಕವಿಗೆ ಭಾರತದಲ್ಲೆಲ್ಲ ಉತ್ತಮನಾದ ಪ್ರಾಚೀನ ವಿಕ್ರಮಾದಿತ್ಯನೇ ಆಶ್ರಯದಾತನಾಗಿರಬೇಕೆಂದು ಜನಗಳು ಕಲ್ಪಿಸಿರಬೇಕು. ಕಾಳಿದಾಸ ಮಾತ್ರ ತನ್ನ ಪೋಷಕನಾದ ರಾಜನನ್ನು ಎಲ್ಲಿಯೂ ಸ್ಪಷ್ಟವಾಗಿ ನಿರ್ದೇಶಿಸಿಲ್ಲ. ದಂತಕಥೆಯ ನವಮಣಿಗಳಲ್ಲಿ ಒಬ್ಬೊಬ್ಬರೂ ಒಂದೊಂದು ಕಾಲದವರೆಂಬುದನ್ನು ಯಾರೂ ಇಲ್ಲವೆನ್ನುವಂತಿಲ್ಲ. ಸ್ಪಷ್ಟವಾಗಿ ಗೊತ್ತಿರುವು ದಿಷ್ಟೆ. ಕ್ರಿ. ಶ. ೭ ನೆಯ ಶತಮಾನದ ಐಹೊಳೆಯ ಶಾಸನದಲ್ಲಿ ಶಾಸನ ಕಾರನಾದ ರವಿಕೀರ್ತಿ ಕಾಳಿದಾಸನನ್ನು ಹೊಗಳಿದ್ದಾನೆ, ಅದೇ ಕಾಲದ ಬಾಣನೂ ಸ್ತುತಿಸಿದ್ದಾನೆ. ಆದ್ದರಿಂದ ಅದಕ್ಕಿಂತ ಹಿಂದಿನವನಾಗಿರಬೇಕು. ಶುಂಗರ ರಾಜನಾದ ಅಗ್ನಿಮಿತ್ರನು ಕಾಳಿದಾಸನ ನಾಟಕವೊಂದಕ್ಕೆ ನಾಯಕ ನಾಗಿರುವುದರಿಂದ ಕ್ರಿ. ಪೂ. ೨ನೆಯ ಶತಮಾನಕ್ಕಿಂತ ಹಿಂದಿನವನಾಗುವುದು ಸಾಧ್ಯವಿಲ್ಲ. ಕಾಳಿದಾಸನನ್ನು ವಿಕ್ರಮಾದಿತ್ಯನ ಸಭಾಕವಿಯೆಂದು ನಂಬುವು ದಾದರೆ ಆತನು ಶಕಸ್ಥಾಪಕನ ಕಾಲವಾದ ಕ್ರಿ. ಪೂ. ೧ನೆಯ ಶತಮಾನ ದಲ್ಲಾಗಲಿ, ಆ ಬಿರುದನ್ನು ತಳೆದ ಗುಪ್ತವಂಶದ ಪ್ರಮುಖ ರಾಜನಾದ ಎರಡ ನೆಯ ಚಂದ್ರಗುಪ್ತನ ಕಾಲದಲ್ಲಾಗಲಿ (ಕ್ರಿ. ಶ. ೪ನೆಯ ಶತಮಾನದ ಕಡೆ ಮತ್ತು ೫ನೆಯ ಶತಮಾನದ ಆದಿ) ಇದ್ದಿರಬೇಕು. ಕಾಳಿದಾಸನ ಗ್ರಂಥಗಳಲ್ಲಿ ಅಭಿವ್ಯಕ್ತವಾಗುವ ಶಾಂತಿ, ಸುಖ, ಸಮೃದ್ಧಿಗಳೂ, ಮೂರ್ತಿಪೂಜೆಯೇ ಮುಂತಾದ ಪೌರಾಣಿಕ ಆಚಾರಗಳೂ, ನಾಗರಿಕರ ಕಾಮೋಪಚಾರಗಳೂ, ನೃತ್ಯ, ಗೀತ, ಚಿತ್ರ, ಶಿಲ್ಪ ಮುಂತಾದ ಲಲಿತಕಲೆಗಳ ಪರಿಷ್ಕೃತ ರೂಪವೂ ಜ್ಯೋತಿಷ, ಆಯುರ್ವೇದ ಮುಂತಾದ ಶಾಸ್ತ್ರಗಳ ವಿಕಸಿತ ಸ್ವರೂಪವೂ ತೀರ್ಥಕ್ಷೇತ್ರಾದಿಗಳ ಮಾಹಾತ್ಮ್ಯಶ್ರದ್ಧೆಯೂ, ಒಂದೇ ಮಾತಿನಲ್ಲಿ ಹೇಳುವು ದಾದರೆ, ಸಂಸ್ಕೃತಿಯ ಚಿತ್ರವು ಕ್ರಿಸ್ತಪೂರ್ವಕ್ಕೆ ಅನ್ವಿತವಾಗದೆ ಗುಪ್ತರ ಕಾಲಕ್ಕೇ ಹೆಚ್ಚು ಸಮರ್ಪಕವಾಗಿ ಅನ್ವಿತವಾಗುತ್ತದೆ.[2] ಕಾಳಿದಾಸನ ಶೈಲಿಯೂ ಅಶ್ವಘೋಷನ ಶೈಲಿಗಿಂತ ಮುಂದಿನ ಹೆಜ್ಜೆಯನ್ನೇ ಸೂಚಿಸು

---

2. 1947 ರಲ್ಲಿ **ಪ್ರಕಟವಾದ** India in Kalidasa **ಎಂಬ ಬೃಹದ್** ಗ್ರಂಥವನ್ನು ನೋಡಿ. **(ಲೇಖಕರು : ಶ್ರೀ ಬಿ. ಎಸ್. ಉಪಾಧ್ಯಾಯ)**

ತ್ತದೆ.[3] ಕಾಳಿದಾಸನು ಭಾರತದಲ್ಲೆಲ್ಲ ಪರ್ಯಟನ ಮಾಡಿದವನಾಗಿದ್ದರೂ ಉಜ್ಜಯಿನಿಯಲ್ಲಿ ಅವನು ಸ್ವಲ್ಪಕಾಲವಾದರೂ ವಾಸಮಾಡಿರಬೇಕು, ಅವನಿಗೆ ಆದರಲ್ಲಿ ವಿಶೇಷ ಪ್ರೇಮವಿದೆ; ರಾಮಗಿರಿಯಿರುವ ವಿದರ್ಭದೇಶದ ಪರಿಚಯವೂ ನಿಕಟವಾಗಿರುವುದರಿಂದ ಅಲ್ಲಿಯೂ ಸ್ವಲ್ಪ ಕಾಲ ವಾಸ ಮಾಡಿರಬೇಕು. ಆತನಿಗೆ ಶ್ರುತಿ, ಸ್ಮೃತಿ, ಧರ್ಮಶಾಸ್ತ್ರ, ರಾಜನೀತಿ, ವೇದಾಂಗಗಳು, ಜ್ಯೋತಿಷ, ಆಯುರ್ವೇದಗಳ ಪರಿಚಯವಿತ್ತು; ಆದರೆ ಮುಖ್ಯವಾಗಿ ಅವನ ಮನೋಧರ್ಮ ಲಲಿತಕಲೆಗಳಿಂದ ಆಕೃಷ್ಟವಾಗಿ ರೂಪುಗೊಂಡಿತ್ತು. ಅವನು ಅಶ್ವಘೋಷನಂತೆ ವೀತರಾಗನಲ್ಲ; ಶೃಂಗಾರಿ. ಧರ್ಮವಿರೋಧಿಯಲ್ಲ, ಆದರೆ ಧರ್ಮಾಂಧನೂ ಅಲ್ಲ. ಪ್ರಚಾರಕನಲ್ಲ; ವರಕವಿ. ಇಷ್ಟನ್ನು ಆತನ ಕಾವ್ಯಗಳ ಆಂತರ ಪ್ರಮಾಣದಿಂದ ಸ್ಥೂಲವಾಗಿ ನಿರ್ಧರಿಸಬಹುದಾಗಿದೆ.

ಕಾಳಿಕಾದೇವಿಯು ಪ್ರಸನ್ನಳಾಗಿ ಆತನ ನಾಲಿಗೆಯ ಮೇಲೆ ಬೀಜಾಕ್ಷರವನ್ನು ಬರೆದಳೆಂದು ಮುಂತಾದ ಕಥೆಗಳು ಕಲ್ಪಿತವೆನ್ನುವುದು ಸ್ವತಸ್ಸಿದ್ಧ. ಅದಕ್ಕೆ ಸಂಸ್ಕೃತವ್ಯಾಕರಣನಿಯಮವೇ ಪ್ರಮಾಣವೊದಗಿಸುತ್ತದೆ, ಅಗತ್ಯವಾದರೆ. 'ಕಾಳೀ' ಎಂಬ ದೀರ್ಘಾಂತವಾದ ದೇವಿಯ ಹೆಸರು ಸಂಸ್ಕೃತದಲ್ಲುಂಟೇ ಹೊರತು 'ಕಾಳಿ' ಎಂಬ ಹ್ರಸ್ವಾಂತ ಶಬ್ದವೇ ಇಲ್ಲ. 'ಕಾಳೀ' ದೇವಿಯ ದಾಸ ಎಂಬರ್ಥದಲ್ಲಿ ಬರುವ ಷಷ್ಠೀತತ್ಪುರುಷ ಸಮಾಸದ ರೂಪವು "ಕಾಳೀದಾಸ" ಎಂದಾಗಬೇಕೇ ಹೊರತು 'ಕಾಳಿದಾಸ' ಎಂದಾಗುವಂತಿಲ್ಲ ತನ್ನ ಗ್ರಂಥಗಳಲ್ಲೆಲ್ಲ ಕವಿ ಈ ಹ್ರಸ್ವಯುಕ್ತರೂಪವನ್ನೇ ಬಳಸಿದ್ದಾನೆ. ಪಾಣಿನಿಸೂತ್ರದ ಪ್ರಕಾರ, ಅರ್ಥವಿವಕ್ಷೆಯಿಲ್ಲದೆ ಒಬ್ಬನಿಗೆ ಹೆಸರಿಡುವಾಗ 'ರೇವತಿಪುತ್ರ' ಎಂಬಂತೆ ಹ್ರಸ್ವಯುಕ್ತರೂಪ ಸಾಧುವಾಗುತ್ತದೆ.[4] ಆದ್ದರಿಂದ "ಕಾಳಿದಾಸ" ಎಂಬುದು ಅವನಿಗೆ ಹುಟ್ಟುವಾಗಲೇ ಇಟ್ಟ 'ಸಂಜ್ಞೆ'(Proper name) ಅಥವಾ ಹೆಸರಾಗಿರಬೇಕೇ ಹೊರತು ಕಾಳೀದೇವಿಯ ಭಕ್ತನಾದಮೇಲೆ ಅವನಿಗೆ ಬಂದ ಬಿರುದೆಂದು ತಿಳಿಯುವದಕ್ಕೆ ಅವಕಾಶವಿಲ್ಲ. ಇದರಿಂದ 'ಶ್ಯಾಮಲಾದಂಡಕ' 'ಅಂಬಾಸ್ತುತಿ' ಮುಂತಾದ ಸ್ತೋತ್ರಕೃತಿಗಳು ಆದಿಕಾಳಿದಾಸರಚಿತವಲ್ಲವೆಂಬುದೂ ವ್ಯಕ್ತವಾಗುತ್ತದೆ.

---

3 ಹಿಂದಿನ ಅಧ್ಯಾಯವನ್ನು ನೋಡಿ.

4 ಙ್ಯಾಪೋ . ಸಂಜ್ಞಾಛಂದಸೋರ್ಬಹುಲಮ್ VI iii 63— ಪಾಣಿನಿ. ಸಿದ್ಧಾಂತಕೌಮುದೀ, ಸಮಾಸಾಶ್ರಯಪ್ರಕರಣ.

ನಾಟಕಗಳನ್ನು ಬಿಟ್ಟರೆ ಕಾಳಿದಾಸನ ಅಮರ ಕಾವ್ಯಗಳು ನಾಲ್ಕೇ. ಎರಡು ಮಹಾಕಾವ್ಯಗಳು- ರಘುವಂಶ ಮತ್ತು ಕುಮಾರಸಂಭವ ; ಎರಡು ಲಘು (=ಖಂಡ) ಕಾವ್ಯಗಳು—ಋತುಸಂಹಾರ ಮತ್ತು ಮೇಘದೂತ. ಆದರೆ ಒಂದೊಂದೂ ಒಂದೊಂದು ಅನರ್ಘ್ಯ ರತ್ನ.

ಹಿಂದಿನ ಮಹಾಕವಿಗಳು ಒಂದೊಂದೇ ಬೃಹದಾಕಾರದ ಕಾವ್ಯದಲ್ಲಿ ತಮ್ಮ ಅನುಭವ, ಕಲೆ, ಉಪದೇಶಗಳೆಲ್ಲವನ್ನೂ ತುಂಬಿಸಿಡುವ ಸಾಹಸದಲ್ಲಿ ಏಕಮುಖವಾದ ರಸದೃಷ್ಟಿಗೆ ಅಲ್ಲಲ್ಲಿ ಅಪೋಹವನ್ನು ತಂದುಕೊಂಡರೆಂಬು ದನ್ನು ಕಾಳಿದಾಸನು ಗಮನಿಸಿದಂತೆ ಕಾಣುತ್ತದೆ. ಸರ್ವಜನಾವರ್ಜಕವಾದ, ಸಕಲಹೃದಯರಂಜಕವಾದ, ಶೃಂಗಾರವನ್ನು ಅನ್ಯರಸಮಿಶ್ರಣವಿಲ್ಲದೆ, ಪ್ರಸಿದ್ಧ ಕಥಾವಸ್ತುವಿನ ನಿಯಂತ್ರಣವೂ ಇಲ್ಲದೆ, ಸಂಪೂರ್ಣವಾಗಿಯೂ ಸುಮಧುರ ವಾಗಿಯೂ ಸ್ವತಂತ್ರ ಕಾವ್ಯಗಳಲ್ಲಿ ಅಭಿವ್ಯಕ್ತಿಗೊಳಿಸಲು ನಡೆದ ಮೊದಲ ಯಶಸ್ವೀ ಪ್ರಯತ್ನ ಕಾಳಿದಾಸನದು. ಪ್ರಣಯಿಗಳ ಪ್ರೇಮಮಧುರ ಸಂಯೋಗದಲ್ಲಿ ಸೂಸುವ ಸುಖಾತಿಶಯವನ್ನು, 'ಋತುಸಂಹಾರ' ಕನ್ನಡಿ ಸಿದರೆ ಅದರ ಸವಿನೆನಪೇ ವಿರಹದಲ್ಲಿಯೂ ತರುವ ಭಾವಪಾರವಶ್ಯವನ್ನು 'ಮೇಘದೂತ'ವು ಮಧುರವಾಗಿ ಬಿತ್ತರಿಸುತ್ತದೆ. ಒಂದರ ವಸ್ತು 'ಸಂಭೋಗ ಶೃಂಗಾರ', ಇನ್ನೊಂದರದು 'ವಿಪ್ರಲಂಭ ಶೃಂಗಾರ'. ಕವಿಯ ಕಲ್ಪನಾಕಲ್ಲೋಲಗಳೂ, ಭಾವಲಹರಿಗಳೂ ಅನುಭವಲವಗಳೂ ಇಲ್ಲಿ ತಮ್ಮ ಅಭಿವ್ಯಕ್ತಿಗನುಗುಣವಾದ ಹೊಸದೊಂದು ಲೋಕವನ್ನೇ ಸೃಷ್ಟಿಸಿ ಕೊಳ್ಳುತ್ತವೆ. ಇಲ್ಲಿ ಕವಿಗೆ ಕಥಾನಿರೂಪಣೆಯ ಬಂಧನವಾಗಲಿ, ಪಾತ್ರ ಚಿತ್ರಣದ ಸಂಕಲೆಯಾಗಲಿ, ಜೀವನಮೀಮಾಂಸೆಯ ನಿರ್ದಿಷ್ಟವಿವಕ್ಷೆ ಯಾಗಲಿ ಯಾವುದೂ ಇರುವುದಿಲ್ಲ. ಪ್ರಕೃತಿಯಲ್ಲಿ, ಜೀವನದಲ್ಲಿ, ತನ್ನ ತೀವ್ರಾನುಭವಕ್ಕೆ ವಿಷಯವಾದ ಸೌಂದರ್ಯಾನುಭೂತಿಯನ್ನು ಸ್ವಲ್ಪವೂ ಮಾಸದಂತೆ, ಮುಚ್ಚುಮರೆಯಿಲ್ಲದೆ ಪ್ರಕಟಿಸುವ ಒಂದೇ ಉದ್ದೇಶ ಅವನದು. ಈ ಉದ್ದೇಶವನ್ನು ಅವನು ಒಂದೇ ಶ್ಲೋಕದಿಂದ ಸಾಧಿಸಬಹುದು ; ಅಥವಾ ನೂರು ಶ್ಲೋಕಗಳಿಂದ ಸಾಧಿಸಬಹುದು. ಅವನ ಕಾವ್ಯ ಸಣ್ಣದಾಯಿತೆಂದು ಅವನ ಕೀರ್ತಿಗೇನೂ ಕೊರತೆ ಬರುವುದಿಲ್ಲ. ಹೀಗೆ ಬಹು ಪರಿಮಿತವಾದ ವ್ಯಾಪ್ತಿಯಲ್ಲಿಯೇ ಅಪರಿಮಿತವಾದ ಕಾವ್ಯಕಲೆಯ ಸಿದ್ಧಿ ಶಕ್ಯವಿರುವುದರಿಂದ ವಿಶ್ವಸಾಹಿತ್ಯದಲ್ಲೆಲ್ಲ ಈ ಭಾವಗೀತೆಯೆಂಬ ಸಾಹಿತ್ಯರೂಪ ಕವಿಗಳಿಗೆಲ್ಲ

ಬಹಳ ಪ್ರಿಯವಾದುದು. ಕವಿಯೆನಿಸಿಕೊಳ್ಳಬೇಕೆಂಬ ಆಸೆಯುಳ್ಳ ಪ್ರತಿಯೊಬ್ಬನೂ ಮೊದಲು ಪ್ರಯೋಗವನ್ನಾರಂಭಿಸುವ ಮಾರ್ಗವೇ ಭಾವಗೀತೆ. ಆದರೆ ವಿಶ್ವಸಾಹಿತ್ಯದ ಲಕ್ಷಾಂತರ ಭಾವಗೀತೆಗಳಲ್ಲಿ ಪೂರ್ಣಸಿದ್ಧಿಪಡೆದ ಭಾವಗೀತೆಗಳ ಸಂಖ್ಯೆ ಬಹಳ ಸಣ್ಣದು. ಆ ಸಣ್ಣ ಸಂಖ್ಯೆಯಲ್ಲಿ ಕಾಳಿದಾಸನ ಋತುಸಂಹಾರ, ಮೇಘದೂತಗಳೆರಡಕ್ಕೂ ಸ್ಥಾನವುಂಟೆಂದು ವಿಶ್ವದ ಮಹಾ ವಿಮರ್ಶಕರೆಲ್ಲ ಒಪ್ಪುತ್ತಾರೆ. ಕಾಳಿದಾಸನು ಉತ್ತಮೋತ್ತಮ ಕವಿಯೆನ್ನಲು ಆತನ ಮಹಾಕಾವ್ಯಗಳಷ್ಟೇ ಖಂಡಕಾವ್ಯಗಳೂ ಕಾರಣವಾಗಿವೆ.

**ಋತುಸಂಹಾರ** ನೂತನ ಪ್ರಣಯಿಗಳಿಗೆ ಪ್ರಕೃತಿಯು ಕ್ಷಣಕ್ಕೊಂದು ಹೊಸ ಪರಿಯಿಂದ ಸುರಿಸುವ ಸೌಂದರ್ಯವೃಷ್ಟಿ, ಬಗೆಬಗೆಯಾಗಿ ಉಕ್ಕಿಸುವ ಉಲ್ಲಾಸ, ಈ ಭಾವಗೀತಾರತ್ನದ ಪ್ರತಿಪಾದ್ಯ ವಿಷಯ. ಋತುಗಳ 'ಸಂಹಾರ' ವೆಂದರೆ ಸಾಲ್ಗೊಂಡ ಸಂಚಾರವೆಂದು ತಾತ್ಪರ್ಯ. ಭಾರತ ಭೂಮಿಯಮೇಲೆ ಸೃಷ್ಟಿಕರ್ತನು ತನ್ನ ಉತ್ತಮೋತ್ತಮ ಅನುಗ್ರಹಗಳನ್ನೆಲ್ಲ ವರ್ಷಿಸಿದ್ದಾನೆಂಬುದನ್ನು ಅರಿತು ಆನಂದಿಸಬೇಕಾದರೆ ತಾಪತ್ರಯ ವಿನಿರ್ಮುಕ್ತರಾದ, ನವಯೌವನಭರಿತರಾದ, ಪ್ರಣಯರಾಜ್ಯದ ಸಾರ್ವಭೌಮರಾದ, ನೂತನ ದಂಪತಿಗಳಿಗೆ ಮಾತ್ರ ಸಾಧ್ಯ. ಉರಿಬಿಸಿಲಿನ ಬೇಗೆಯಂತೆ ನಡುಗಿಸುವ ಮಾಗಿಯ ಚಳಿಯೂ, ಜಡಿಮಳೆಯ ಹೊಡೆತದಂತೆ ನಿರ್ಮಲ ಶರತ್ಕಾಲದ ಆಗಮನವೂ, ಮುಮ್ಮಾಗಿಯ ಮಹಿಮೆಯಂತೆ ವಸಂತದ ಫಲ ಪುಷ್ಪಸಮೃದ್ಧಿಯೂ, ಎಲ್ಲವೂ ಭಿನ್ನರೀತಿಗಳಿಂದ ಪ್ರೇಮಿಗಳ ಪ್ರಣಯೋದ್ದೀಪಕಗಳಾಗಿಯೇ ಪರಿಣಮಿಸುವ ಸಮಾನಾಂಶವನ್ನು ಕುರಿತು ಇಲ್ಲಿ ಕವಿ ಸ್ವಚ್ಛಂದವಾಗಿ ಹಾಡಿದ್ದಾನೆ. ಹಾಡುತ್ತ ಮೈಮರೆತಿದ್ದಾನೆ. ಒಂದೊಂದು ಹೂ, ಒಂದೊಂದು ಗಿಡ, ಒಂದೊಂದು ಬಳ್ಳಿ, ಒಂದೊಂದು ಮೃಗ, ಒಂದೊಂದು ಹಕ್ಕಿ ಒಂದೊಂದು ಹೆಣ್ಣುಗಳನ್ನೂ ಆತ್ಮೀಯತೆಯಿಂದ ವರ್ಣಿಸುವಾಗ ಕವಿಯ ಕಲ್ಪನೆ ಒಂದೊಂದಕ್ಕೂ ಅಪೂರ್ವ ಚೇತನವನ್ನಿತ್ತು, ಅವನ್ನೂ ಪ್ರಣಯಲೋಕದ ಪ್ರಜೆಗಳನ್ನಾಗಿ ಮಾರ್ಪಡಿಸುತ್ತದೆ, ಒಂದೊಂದರ ಸೊಬಗನ್ನೂ ತಣಿಯದ ಉತ್ಸಾಹದಿಂದ ಬಣ್ಣಿಸಿ ಕುಣಿದಾಡುತ್ತದೆ. ಹೀಗೆ ಋತುಸಂಹಾರವು ಪ್ರಣಯಿಗಳ ಕಣ್ಣಿಗೆ ಕಾಣುವ ಪ್ರಕೃತಿರಮಣೀಯತೆಯ ಮೋಹನ ಪ್ರತಿಬಿಂಬ, ಕಾಳಿದಾಸನ ಮಧುರ ಮನೋಧರ್ಮದ

ಮಣಿಮಯ ಮುಕುರ, ಪ್ರಣಯಸಾಗರದಲ್ಲಿ ಮುಳುಗಿ ತೇಲುತ್ತಿರ ಪ ಪ್ರಣ
ಯಿಗಳಿಗೆ ತಮ್ಮ ಪ್ರಣಯಕ್ಕೆ ಹೊರತಾದ ವಿಷಯವೊಂದೂ ಕಾಣುವುದಿಲ್ಲ.
ಅವರನ್ನು ಕುರುಡರೆನ್ನಬಹುದು, ಹುಚ್ಚರೆನ್ನಬಹುದು. ಆದರೆ ಆ ಕುರುಡಿ
ನಲ್ಲಿ ಜೀವನದ ಒಂದು ಅದ್ವಿತೀಯವಾದ ಆನಂದಪ್ರಕಾಶವಿದೆ. ಆ ಹುಚ್ಚಿ
ನಲ್ಲೇ ಅನ್ಯವಿಲಕ್ಷಣವಾದ ಒಂದು ಸತ್ಯಸಾಕ್ಷಾತ್ಕಾರವಿದೆ. ಈ ಸೌಂದರ್ಯ–
ಸತ್ಯದ ಕನ್ನಡಿಯೇ ಕಾವ್ಯ. ಕವಿಯ ಬುದ್ಧಿಕೋಶವು ಸುಪ್ತವಾಗಿ ಭಾವ
ಕೋಶವು ತಟ್ಟನೆ ತೆರೆದಾಗ ಆನಂದಕೋಶದ ತೆರೆಗಳೂ ತೇರೈಸಿ ಬರುವು
ದನ್ನು ಋತುಸಂಹಾರದಲ್ಲಿ ಆಸ್ವಾದಿಸಿ ಅನುಭವಿಸಬೇಕು.

ಆದರ್ಶಪ್ರಣಯಿಯೊಬ್ಬನು ಇನ್ನೂ ನಾಚುತ್ತಿರುವ ತನ್ನ ಪ್ರೇಯಸಿಗೆ
ಪ್ರಕೃತಿಯನ್ನು ತೋರಿಸುವ ನೆವದಲ್ಲಿ ತನ್ನ ಹೃದಯವನ್ನೆಲ್ಲ ಬಿಚ್ಚಿ ಆನಂದ
ವನ್ನೆಲ್ಲ ಕೋಡಿಹರಿಸುತ್ತಾನೆ. ಮೇಲ್ನೋಟಕ್ಕೆ ಅದು ಒಬ್ಬ ಕವಿಯ ವೈಯ
ಕ್ತಿಕ ಆತ್ಮಾನುಭವವೆಂದು ತೋರಬಹುದು. ವಸ್ತುತಃ ಅದು ಸಾರ್ವತ್ರಿಕವಾದ
ಸರ್ವಮಾನವ ಸಾಧಾರಣವಾದ ರತಿಯ ಕಾವ್ಯರೂಪ. ಬೆಳುದಿಂಗಳಿನ ಗಾಳಿ
ಯಲ್ಲಿ ಅರಳಿದ ಹೂಗಳ ಕಂಪು ತಾರಾಪಥಕ್ಕೆ ಪ್ರಣಯಿಯ ಮನಸ್ಸನ್ನು
ಹಾರಿಸಿಬಿಡುತ್ತದೆ. ಒಂದೊಂದು ಋತುವೂ ಒಂದೊಂದು ಆನಂದದ ಬೀಡು.
ಎಲ್ಲವೂ ನವದಂಪತಿಗಳ ವಿಲಾಸಕ್ಕಾಗಿ, ವಿಹಾರಕ್ಕಾಗಿ, ಪ್ರಕೃತಿವನಿತೆಯು
ಅಭಿನಯಿಸುತ್ತಿರುವ ನಾಟ್ಯವೇ. ಈ ನಾಟ್ಯದ ಪ್ರೇಕ್ಷಕನಾಗಿ ಬಾಳುವುದು
ಅಥವಾ ಬದುಕಿರುವುದೇ ಒಂದು ದೊಡ್ಡ ಪುಣ್ಯ. ಈ ಕಣ್ಣನ್ನು ಕಳೆದು
ಕೊಂಡ ಜೀವನ ಶೂನ್ಯ, ಅಧನ್ಯ. ಪಕ್ಷಿಗಳ ದಿವ್ಯಗಾನ, ವೃಕ್ಷಗಳ ಭವ್ಯ ತಾನ,
ಪುಷ್ಪಗಳ ವರ್ಣವಿತಾನಗಳು ಸೂರ್ಯಚಂದ್ರರ ಮಂದಯಾನವನ್ನು ಹೇಗೆ
ಅನುವರ್ತಿಸುವದೆಂಬುದನ್ನು ಕವಿಗೆ ಧ್ಯಾನಮಾಡಿದಷ್ಟೂ ಕಲ್ಪನಾಸ್ಫೂರ್ತಿ
ಹೆಚ್ಚುತ್ತದೆ, ಹಾಡಾಗಿ ಹರಿಯುತ್ತದೆ–ಸುಂದರತರವಾದ ಛಂದಸ್ಸುಗಳಲ್ಲಿ.
ಮಾತು ಮೋಹಕವಾಗುತ್ತದೆ, ಅರ್ಥ ಸಾರ್ಥಕವಾಗುತ್ತದೆ ಕವಿ ಮುಚ್ಚಿದ
ಮನೆಯ ಕದಗಳನ್ನೆಲ್ಲ ತೆರೆದುಕೊಂಡು ಹೊರಗಿನ ವಿಶಾಲವಾದ ಬಯಲಿನಲ್ಲಿ
ಬರುತ್ತಾನೆ, ನಕ್ಷತ್ರಗಳೇ ಅವನ ಒಡನಾಡಿಗಳು, ಸೂರ್ಯಚಂದ್ರರೇ ಅವನ
ದೀಪಗಳು, ಮೃಗಪಕ್ಷಿಗಳೇ ನಂಟರು ಹಾಗೆ ಬಂದಾಗ ಮನಸ್ಸಿನ ಕದಗಳಾದ
ಜೀವನದ ಜಂಜಡಗಳೂ ಒಮ್ಮೆಗೇ ತೆರೆದುಕೊಳ್ಳುತ್ತವೆ. ಪರಮಾನಂದದ
ದರ್ಶನವಾಗುತ್ತದೆ. ಇತರರು ಕರ್ಮ, ಜ್ಞಾನ, ಭಕ್ತಿಗಳಿಂದ ಪಡೆಯುವ

ಬ್ರಹ್ಮಾನಂದವನ್ನೇ ಕವಿ ಶೃಂಗಾರದಲ್ಲಿ ತಲ್ಲೀನನಾಗಿ ಸೌಂದರ್ಯ ದ್ವಾರದಿಂದ ಪಡೆಯುತ್ತಾನೆ.

ಪ್ರಕೃತಿಯ ಚಿತ್ರಶಾಲೆಯನ್ನು ಕಾಳಿದಾಸನು ತೋರಿಸುತ್ತಾ ಹೊರಟರೆ, ಬಗೆಬಗೆಯ ಹಣ್ಣುಗಳನ್ನು ಸಾಲುಸಾಲಾಗಟ್ಟಾಗ ಆರಿಸಿಕೊಳ್ಳಲು ಬಿಟ್ಟ ಮಗುವಿನಂತೆ ನಮ್ಮ ಸ್ಥಿತಿಯಾಗುತ್ತದೆ. ಒಂದೊಂದು ಹೂವಿನ ಎಸಳಲ್ಲೂ, ಒಂದೊಂದು ಹಕ್ಕಿಯ ರೆಕ್ಕೆಯಲ್ಲಿಯೂ, ಒಂದೊಂದು ಮೃಗದ ವರ್ತನೆಯಲ್ಲಿಯೂ ಅಡಗಿರುವ ಕಲೆಯನ್ನು ಕಂಡು ಬೆರಗಾಗುತ್ತೇವೆ. ಶ್ಯಾಮಲ ವನರಾಜಿಯನ್ನು ಪ್ರವೇಶಿಸಿ ಕೋಗಿಲೆಯ ಪ್ರೇಮಗಾನದಲ್ಲಿ ಮೈಮರೆಯುತ್ತೇವೆ. ಗಿರಿಸರಗಳ ಸ್ವರವನ್ನು ಆಲಿಸುತ್ತೇವೆ, ತಿಳಿಗೊಳಗಳ ಕೆಂದಾವರೆಗಳನ್ನು ಮನಸಾರೆ ನೋಡಿ ನಲಿಯುತ್ತೇವೆ. ಅವುಗಳಲ್ಲಿ ಮಾರ್ಪೊಳೆವ ನೀಲಗಗನಗಳಿಂದ ಮುಗ್ಧರಾಗುತ್ತೇವೆ. ಕಾವ್ಯ ಪ್ರಾರಂಭವಾಗುವುದು ಬೇಸಗೆಯ ವರ್ಣನೆಯಿಂದ, ಮನುಷ್ಯ ಮತ್ತು ಮೃಗಗಳ ಮೇಲೆ ಆಗುವ ಅದರ ಪರಿಣಾಮದ ಶಬ್ದ ಚಿತ್ರಗಳಿಂದ. ಬೇಗೆಯೇರುತ್ತಾ ಏರುತ್ತಾ ಕಾಡುಗಿಚ್ಚಿನ ದಳ್ಳುರಿಗಳು ಹಬ್ಬುತ್ತವೆ ಕಾಡುಕಿಚ್ಚುಗಳ ಈ ತುಮುಲದಲ್ಲಿ ಗಾಳಿಯ ಉದ್ರೇಕ ಕೂಡುತ್ತದೆ. ಪೊದೆಮೆಳೆಗಳಲ್ಲೆಲ್ಲ ವನಮೃಗಗಳ ಗಾಬರಿಯ ಕಲಕಲ ಇತ್ತ ಬಿಸಿಲಿನ ಬೇಗೆಗೆ ನವಿಲುಗರಿಯ ನೆರಳಿನಲ್ಲಿ ಹಾವು ಹೆಡೆಯೆತ್ತಿ ಮರವಟ್ಟರೆ ಹೆಡೆಯ ನೆರಳಿನಲ್ಲಿ ಕಪ್ಪೆ ನಿದ್ರಿಸುತ್ತದೆ ಬೇಸಗೆ ಮುಗಿದೊಡನೆ ಧಾರಾಕಾರವಾಗಿ ಮಳೆಸುರಿಯುವ ವರ್ಷಋತು ಬರುತ್ತದೆ. ಮೇಘಾಗಮನವು ಎಲ್ಲರ ಮನಸ್ಸನ್ನೂ ಕೆರಳಿಸಿ ಉತ್ಕಂಠೆಯಿಂದ ತುಂಬಿಸುತ್ತದೆ. ಪ್ರತಿಯೊಂದು ಗಿಡಮರಕ್ಕೂ ನವಜೀವನದ ಚೈತನ್ಯವಂಕುರಿಸುತ್ತದೆ. ಎಲ್ಲೆಲ್ಲೂ ಹಸಿರಿನ ಹೊಸ ವಸನವು ಭೂದೇವಿಯನ್ನು ಮುಸುಕುತ್ತದೆ. ಮಳೆಮೋಡಗಳೂ, ಸುಂಟರಗಾಳಿಗಳೂ ಕಳೆದು ಶರತ್ಕಾಲದ ಶುಭ್ರ ದಿಗಂತಗಳು ಹೊಳೆಯುತ್ತವೆ. ಹೊಂಬೆಳೆಗಳು ಕೈಗೆ ಬರುತ್ತವೆ., ತಾರೆಗಳು ಬೆಳಗುತ್ತವೆ. ರಾತ್ರಿಗಳು ರಮಣೀಯವಾಗುತ್ತವೆ, ತಾವರೆಗಳು ಕೊಳದಲ್ಲಿ ಅರಳುತ್ತವೆ. ಹಿಂಜಿದ ಅರಳೆಯಂತೆ ಬೆಳ್ಮುಗಿಲುಗಳು ಆಗಸದಲ್ಲಾಡಿದರೆ ರಾಜಹಂಸಗಳು ತಿಳಿಗೊಳದಲ್ಲಿ ಸುಳಿಯುತ್ತವೆ; ಮಾನಸ ಯಾತ್ರೆಯನ್ನಾರಂಭಿಸುತ್ತವೆ. ಮುಂದೆ ಚಳಿಗಾಲದಲ್ಲಿ ಪ್ರಣಯಿನಿಯ ಸಾನ್ನಿಧ್ಯವೇ ಸುಖ. ಅದಾದ ಮೇಲೆ ಋತುಗಳ ರಾಜ ವಸಂತನೇ

ಬರುತ್ತಾನೆ. ಸೂರ್ಯನ ನಿರ್ಮಲ ರಶ್ಮಿಗೆ ಗಿಡಮರಗಳಲ್ಲೆಲ್ಲ ಬಣ್ಣ ಬಣ್ಣದ ಚಿಗುರು, ಹೂಗಳು ಚೆಲುವಾಗುತ್ತವೆ. ಸುಳಿವ ತಂಗಾಳಿಯಲ್ಲಿ, ತೊರೆಯ ತೆರೆಯಲ್ಲಿ, ಭರ್ರನೆ ಹಾರುವ ಹಕ್ಕಿಯಲ್ಲಿ, ಸುಯ್ಯೆನ್ನುವ ಎಲೆಯಲ್ಲಿ, ಎಲ್ಲೆಲ್ಲೂ ಹೊಸದೊಂದು ಪ್ರಣಯದ ಸಂಚಾರವಾಗುತ್ತದೆ. ಪುಷ್ಪಸಖಿಯರ ಮಂದ ಹಾಸವು ಮನವನ್ನು ಸೂರೆಗೊಳ್ಳುತ್ತದೆ ಹೀಗೆ ಋತುಗಳ ನಿರಂತರ ಯಾತ್ರೋತ್ಸವವು ನಿತ್ಯವೂ ಸಾಗುತ್ತದೆ, ಪ್ರಣಯಿಗಳ ಜೀವನವು ಅಮೃತ ಮಯವಾಗುತ್ತದೆ.

ಪ್ರಕೃತಿಯ ಈ ಮಧುರಮೋಹನ ಪರಿಸ್ತರಣದಲ್ಲಿ ಆಕೆಯ ಮೆಚ್ಚಿನ ಮಗಳಾದ ಹೆಣ್ಣು ಕವಿಯ ಹೆಚ್ಚಿನ ಗಮನವನ್ನು ಸೆಳೆಯುತ್ತಾಳೆ. ಹೆಣ್ಣಿಗಿಲ್ಲಿ ಕೃತಕವಾದ ಗಂಧಲೇಪಗಳ ಅಗತ್ಯವಾಗಲಿ, ಬಟ್ಟೆಬರೆಗಳ ಆಡಂಬರವಾಗಲಿ, ಒಡವೆವಸ್ತುಗಳ ಹೊರೆಯಾಗಲಿ ಯಾವುದೂ ಇಲ್ಲ. ಜಾತಿಕುಲಗಳ ಭೇದ ವಾಗಲಿ, ಭಾಷೆ ದೇಶಗಳ ವೈಗುಣ್ಯವಾಗಲಿ ಒಂದೂ ಇಲ್ಲ. ಎಲ್ಲ ಭೇದ ಗಳನ್ನೂ ಅಳಿಸಿಕೊಂಡು ಪುರುಷನನ್ನು ಪ್ರಕೃತಿಸಹಜವಾಗಿ ಪರವಶಗೈವ ಪ್ರಕೃತಿಕನ್ಯೆಯಷ್ಟೇ ಅವಳು. ಅವಳ ಲಾವಣ್ಯದ ಪರಿ ಒಂದಲ್ಲ, ಪ್ರಕೃತಿ ಯಷ್ಟೇ ಅನಂತ ಒಮ್ಮೆ ಶೃಂಗಾರದಲ್ಲಿ ಮಗ್ನಳಾದ ಸುಂದರಿಯ ದರ್ಶನ ವಾದರೆ ಇನ್ನೊಮ್ಮೆ ಮೋಡದ ಗುಡುಗಿಗೆ ಬೆದರಿ ನಲ್ಲನನ್ನು ಬಿಗಿಯಪ್ಪುವ ಮುಗುದೆಯು ಬರುತ್ತಾಳೆ. ಎಲ್ಲರಲ್ಲೂ ಹೆಣ್ಣುತನ ಮಾತ್ರ ತುಂಬಿ ತುಳು ಕುತ್ತದೆ. ಅವಳ ಪ್ರಪಂಚವೆಲ್ಲಾ ಪುರುಷನನ್ನು ಮೋಹಿಸುವ ಒಂದೇ ಕಾರ್ಯದಲ್ಲಿ ನಿರತ. ಅವಳ ನಗೆ ಅವನನ್ನು ಕುರಿತದ್ದು, ಅವಳ ಭಯವೂ ಅಷ್ಟೆ, ಕೋಪವೂ ಅಷ್ಟೆ. ಎಲ್ಲಕ್ಕೂ ಗುರಿ ಒಂದೆ. ಇಷ್ಟಾದರೂ ಈ ಶೃಂಗಾರಸಾಗರದಲ್ಲಿ ಅನೀತಿಯ ಬಿಂದುವಿಗೂ ಪ್ರವೇಶವಿಲ್ಲ ಕಾಳಿದಾಸನ ಚಿತ್ರ ವಿಧಿಪೂರ್ವಕವಾಗಿ ವಿವಾಹವಾದ ನವದಂಪತಿಗಳ ಶೃಂಗಾರದ ಚಿತ್ರ, ವ್ಯಭಿಚಾರಿಗಳ ಕಾಮಾತಿರೇಕದ ಅತಿರಂಜಿತ ಚಿತ್ರವಲ್ಲ. ಇಲ್ಲಿ ಅಭಿಸಾರಿಕೆ ಯರು ಬರಬಹುದು, ಅಭಿಸಾರಕರು ಮಾತ್ರ ಬರುವುದಿಲ್ಲ

**ಮೇಘದೂತ :** ಋತುಸಂಹಾರವು ನೂತನ ಪ್ರಣಯಿಗಳ ಪ್ರೇಮ ಪಂಚಾಂಗವಾದರೆ ಮೇಘದೂತವು ಪ್ರೇಮದ ಪ್ರತಿಮುಖವಾದ ವಿಪ್ರಲಂಭದ ಸುಕುಮಾರ ಭಾವಗೀತೆ. ಈ ಮೊದಲೇ ಸೂಚಿಸಿದಂತೆ ಭಾವಗೀತೆಯಲ್ಲಿ

ಕಥೆಗೆ ಸ್ಥಾನವಿಲ್ಲ. ಮಾನವನ ಹೃದಯರಂಗವೇ ಭಾವಗೀತೆಯ ಭಿತ್ತಿ-ರಸಾವೇಶದಿಂದ ಉಕ್ಕಿ ಹರಿಯುವ ಅಂತರಂಗಸಾಗರದ ಭಾವತರಂಗಗಳೇ ಅದರ ಜೀವಜೀವಾಳ. ಭಾವಗೀತೆಗಳಲ್ಲಿ ರಸವೊಂದಕ್ಕೇ ಪರಮಪಟ್ಟವಾದ್ದರಿಂದ ಅವನ್ನು ರಸಘಟ್ಟಿಗಳೆಂಬುದು ಅನ್ವರ್ಥಕವಾಗುತ್ತದೆ, ಅವೇ ಕಾವ್ಯದ ಪರಿಶುದ್ಧತೆಯ ಪರಮಾವಧಿ. ಶುಷ್ಕವಾದ ಮಾನವಹೃದಯದಲ್ಲಿ ಪ್ರೇಮದ ಅಮೃತಸೇಚನೆಯಿಂದಾಗುವ ಆಹ್ಲಾದವನ್ನು ಋತುಸಂಹಾರದಲ್ಲಿ ತೋರಿಸಿಯಾದಮೇಲೆ ಕಾಳಿದಾಸನು ವಿರಹದಲ್ಲಿ ಶೃಂಗಾರದ ಪ್ರಶಾಂತಪ್ರಭೆಯು ಹೇಗೆ ಹೊಂಬೆಳಗನ್ನು ಸೂಸುವುದೆಂಬುದನ್ನು ಮೃದುಮನೋಹರವಾದ ಮಂದಾಕ್ರಾಂತಾವೃತ್ತಗಳಲ್ಲಿ ಮೇಘದೂತದ ತುಂಬ ಹಾಡಿದ್ದಾನೆ. ಕೆಲವೊಮ್ಮೆ ಸಂಭೋಗಶೃಂಗಾರದಲ್ಲಿ ಪರಿಶುದ್ಧವಾದ ಪ್ರೇಮದ ಸ್ಥಾನದಲ್ಲಿ ಕಾಮಕಲುಷಿತವಾದ ಲೋಲುಪತೆಯೂ ಇರಬಹುದು. ಆದುದರಿಂದ ಪ್ರೇಮದ ಸತ್ತ್ವಪರೀಕ್ಷೆಗೆ ವಿರಹವೆಂಬ ಅಗ್ನಿಪರೀಕ್ಷೆ ಅಗತ್ಯವಾಗುತ್ತದೆ. ವಿರಹದಲ್ಲಿ ಬತ್ತಿಹೋಗುವ ಅನುರಾಗವು ಆದರ್ಶಪ್ರೇಮವಾಗಲಾರದು. ಬತ್ತುವ ಬದಲು ಮೊದಲಿಗಿಂತ ನೂರ್ಮಡಿಯಾದ ಪ್ರಭಾಮಂಡಲವನ್ನು ಯಾವುದು ತಳೆಯಬಲ್ಲುದೋ ಅದೇ ಆದರ್ಶಪ್ರೇಮ, ವಿಪ್ರಲಂಭಶೃಂಗಾರ. ಮೋಹವು ಮರ್ತ್ಯ ಮತ್ತು ಮನುಷ್ಯಸಹಜ, ಆದರೆ ಆದರ್ಶಪ್ರೇಮವು ಅಮರ ಮತ್ತು ದೇವಸದೃಶ ಮೋಹವು ಪರಿಣಾಮದಲ್ಲಿ ಮನುಷ್ಯನನ್ನು ಪಾತಾಳಕ್ಕೆಸೆಯುತ್ತದೆ, ಆದರೆ ಪವಿತ್ರಪ್ರೇಮವು ಪರ್ಯವಸಾನದಲ್ಲಿ ಅವನಿಗೆ ಅಮರತ್ವವನ್ನು ಸಂಪಾದಿಸಿಕೊಡುತ್ತದೆ. ಕಾಳಿದಾಸನು ಹಾಡುವುದು ಈ ಅಮರಪ್ರೇಮದ ಸ್ವರೂಪವನ್ನು. ದಿವ್ಯಪ್ರೇಮದ ಮಧುರಸಂದೇಶವೇ ಮೇಘಸಂದೇಶ.

'ಮೇಘದೂತ'ದಲ್ಲಿ ಎರಡು ಸರ್ಗಗಳಿವೆ, ಇವೆರಡೂ ಪರಸ್ಪರ ಪೂರಕಗಳಾದ ಎರಡು ಬೇರೆ ಬೇರೆ ಚಿತ್ರಗಳು. ಪ್ರೇಮದೃಷ್ಟಿಗೆ ವಿಶ್ವಸೃಷ್ಟಿಯ ಸೌಂದರ್ಯರಹಸ್ಯವು ಪ್ರಕಟವಾಗುತ್ತದೆ. ಜಡ-ಚೇತನ, ಕ್ಷುದ್ರ-ಭವ್ಯ, ಇವೇ ಮೊದಲಾದ ಭೇದಭಾವಗಳೆಲ್ಲವೂ ಪ್ರೇಮಮಂದಾಕಿನಿಯ ಸ್ವಚ್ಛಸಲಿಲದಲ್ಲಿ ಅಳಿಸಿಹೋಗುತ್ತವೆ. ತನ್ನ ಹೃದಯಮಂದಿರದಲ್ಲಿ ಪ್ರತಿಷ್ಠಿತವಾಗಿರುವ ಪ್ರೇಮವೇ ವಿಶ್ವದ ಒಂದೊಂದು ವಸ್ತುವಿನಲ್ಲಿಯೂ ಪ್ರತಿಬಿಂಬಿತವಾಗಿರುವಂತೆ ಭಾಸವಾಗುತ್ತದೆ. ಆಗ ಮೋಡವು ಹೊಗೆ ನೀರು ಗಾಳಿಗಳ

ಒಂದು ನಿರ್ಜೀವ ಮುದ್ದೆಯೆನಿಸುವುದಿಲ್ಲ; ಮನುಷ್ಯನ ಸುಖದುಃಖಗಳಲ್ಲಿ ಸಮಭಾಗಿಯಾಗುವ ಪರಮಮಿತ್ರನಾಗಿ ಪರಿಣಮಿಸುತ್ತಾನೆ. ಬೆಟ್ಟಗಳು ಬಂಡೆಗಳ ಒಂದು ಜಡರಾಶಿಯೆನಿಸುವುದಿಲ್ಲ, ಮನೆಗೆ ಬಂದ ಮೇಘರೂಪೀ ಮಿತ್ರನನ್ನು ಆದರದಿಂದಾಲಿಂಗಿಸಿ ಉಪಚರಿಸುವ ಮಹಾತ್ಮರಾಗಿ ಕಾಣುತ್ತಾರೆ. ತೊರೆಗಳು ಹರಿಯುವ ನೀರಾಗಿ ತೋರುವುದಿಲ್ಲ; ಮೆಚ್ಚಿನ ನಲ್ಲನಾದ ಮೇಘನ ಆಗಮನದಿಂದ ಮನ ವುಬ್ಬಿದ ಕೋಮಲೆಯರಾಗಿ ಕಾಣುತ್ತಾರೆ. 'ಮೇಘದೂತ' ದ ಮೊದಲನೆಯ ಸರ್ಗವೆಲ್ಲ ಈ ಪ್ರೇಮನಿರ್ಭರವಾದ ಪ್ರಕೃತಿಮಾಧುರ್ಯದ ವರ್ಣನೆಗೆ ಮೀಸಲಾಗಿದೆ. ಎರಡನೆಯ ಸರ್ಗದ ತುಂಬ ಆದರ್ಶಪ್ರೇಮವು ಪ್ರಕಟವಾಗುವ ಪ್ರಣಾಲಿಗಳ ವರ್ಣನೆಯಿದೆ. ಹೀಗೆ ಶೃಂಗಾರನಿರೂಪಣೆಯಲ್ಲಿಯೇ ಕಾಳಿದಾಸನ ಪ್ರತಿಭೆ ಋತುಸಂಹಾರಕ್ಕಿಂತ ಮುಂದಿನ ಹೆಜ್ಜೆಯನ್ನಿಟ್ಟು ಆ ರಸದ ಜೀವಾಳವನ್ನು ಕರತಲಾಮಲಕವಾಗಿ ಮಾಡಿಕೊಡುತ್ತದೆ ಮೇಘದೂತದಲ್ಲಿ ಕವಿಯ ಅನುಭವವಲಯವು ಇಲ್ಲಿ ಇನ್ನೂ ಅಗಲವಾಗಿದೆ, ಆಳವಾಗಿದೆ. ಕಾವ್ಯಸಿದ್ಧಿಯೂ ಹೆಚ್ಚಿನ ಪ್ರಮಾಣ ದಲ್ಲಿ ಹೊರಹೊಮ್ಮಿದೆ.

'ಮೇಘದೂತ'ದ ಮೊದಲಿನಿಂದ ಕಡೆಯವರೆಗೂ ಪ್ರಕೃತಿವರ್ಣನೆ ಮತ್ತು ಪ್ರೇಮನಿರೂಪಣೆಗಳು ಹಾಸುಹೊಕ್ಕಾಗಿ ಹೆಣೆದುಕೊಂಡು ಕಾಳಿ ದಾಸನ ಮಧುರ ಮನೋಧರ್ಮಕ್ಕೂ ಕವಿತ್ವಕೌಶಲಕ್ಕೂ ಕೈದೀವಿಗೆಗಳಾ ಗುತ್ತವೆ. 'ಮೇಘದೂತ'ವು ನಮ್ಮನ್ನು ಒಂದು ಸ್ವಪ್ನಸುಂದರ ಮಾಯಾ ಲೋಕಕ್ಕೆ ಕರೆದೊಯ್ಯುತ್ತದೆ. ಅಲ್ಲಿ ಪ್ರೇಮದ ಹೊಂಬೆಳಗಿನಿಂದ ಅಣು ರೇಣು ತೃಣಕಾಷ್ಠಗಳೂ ಪುಲಕಿತವಾಗುತ್ತವೆ. ಪ್ರಕೃತಿಯ ಪ್ರೇಮದ ತಾಳಕ್ಕೆ ಮೃಗಪಕ್ಷಿಗಳು ಮೇಳವಿಸುತ್ತವೆ, ಗಿಡಬಳ್ಳಿಗಳು ದನಿಗೂಡಿಸುತ್ತವೆ, ಗಿರಿನದಿಗಳು ಓಗೊಡುತ್ತವೆ. ಪಾರ್ವತೀಪರಮೇಶ್ವರರೇ ಈ ಪ್ರೇಮದ ಪಾವಿತ್ರ್ಯಕ್ಕೆ ಪ್ರತೀಕಗಳಾಗುತ್ತಾರೆ. ಇಂತಹ ವಿಶ್ವವಿಶಾಲವಾದ ರಮಣೀಯ ಲೋಕದಲ್ಲಿ ಪಾತ್ರಧಾರಿಗಳಾಗಿ ಪ್ರಾತಿನಿಧ್ಯವನ್ನು ವಹಿಸುವುದು ಹುಲ್ಲು ಮನುಜರಿಂದಾದೀತೆ? ಆದುದರಿಂದಲೇ ಕವಿ ಯಕ್ಷನೊಬ್ಬನನ್ನು ಈ ಶೃಂಗಾರಕಾವ್ಯಕ್ಕೆ ನಾಯಕನನ್ನಾಗಿಯೂ ಅವನ ಪತ್ನಿಯಾದ ವಿರಹಿಣಿ ಯನ್ನು ನಾಯಿಕೆಯನ್ನಾಗಿಯೂ ನಿರ್ಮಿಸಿದ್ದಾನೆ. ಯಕ್ಷನ ಊರು

ಕುಬೇರನ ರಾಜಧಾನಿಯಾದ ಅಲಕಾಪಟ್ಟಣ. ಅಲ್ಲಿಯ ಭೋಗಗಳನ್ನು ಬಣ್ಣಿಸಲು ಯಾರಿಂದಾದೀತು? ಅಂತಹ ದಿವ್ಯಭೋಗಗಳ ಮಡಿಲಿನಲ್ಲಿ ಮೈಮರೆತಿದ್ದ ಯಕ್ಷನೊಬ್ಬನು ಪ್ರಭುವಿನ ಶಾಪದಿಂದ ದಕ್ಷಿಣದ ರಾಮಗಿರಿಯಲ್ಲಿ ಅಜ್ಞಾತವಾಸಮಾಡುವ ಗತಿಯೊದಗಿತು. ಒಂದು ವರ್ಷಕಾಲ ಪ್ರಿಯೆಯನ್ನಗಲಿರಬೇಕೆಂಬುದು ಶಾಪವೇ ಹೊರತು ಅವನ ಪೂರ್ವಸ್ಮರಣೆಗಳನ್ನೆಲ್ಲ ಮರೆಯಬೇಕೆಂದಲ್ಲ. ಯಕ್ಷನು ರಾಮಗಿರಿಗೆ ಬಂದ ಮೇಲೆ ತನ್ನ ಮಹಿಮೆ ಮಾಯವಾಗಿ ಮಾನವನಂತಾದರೂ ಅವನ ದಿವ್ಯವಾಸನೆಯು ದೂರವಾಗಿಲ್ಲ. ಹೀಗೆ ದಿವ್ಯಸಂಸ್ಕಾರಸಂಪನ್ನನಾದ ಎಂದರೆ ಸಂಪೂರ್ಣ ಸೌಂದರ್ಯೋಪಾಸಕನಾದ ಆದರ್ಶ ಭಾರತೀಯನ ಪ್ರತಿನಿಧಿಯೇ ರಾಮಗಿರಿಯ ಯಕ್ಷ. ಅಂತಹವನಿಗೆ ತನ್ನ ದೇಶದ ಪ್ರಕೃತಿವೈಭವದ ಕಲ್ಪನೆ ಹೇಗಾದೀತೆಂಬುದನ್ನು ತೋರಿಸಲು ಕಾಳಿದಾಸ ಮೊದಲನೆಯ ಸರ್ಗದಲ್ಲಿ ಯತ್ನಿಸಿದ್ದಾನೆ. ಅದಕ್ಕೆ ತಕ್ಕಂತೆ ಒಂದು ಸಣ್ಣ ಕಥಾಸೂತ್ರವನ್ನು ಸೂಚಿಸಿದ್ದಾನೆ

ಯಕ್ಷನಿಗೆ ಕುಬೇರನಿಂದ ಶಾಪ ಬಂದಿತು, ರಾಮಗಿರಿಯಲ್ಲಿ ಒಂದು ವರ್ಷಕಾಲ ಪ್ರಿಯಾವಿರಹವನ್ನನುಭವಿಸಬೇಕಾಯಿತು ಹೇಗೋ ಎರಡು ಮೂರು ತಿಂಗಳುಗಳನ್ನು ಕಳೆದ. ಆದರೆ ಆಷಾಢಮಾಸದ ಮೊದಲ ಮೋಡವನ್ನು ಕಂಡನೋ ಇಲ್ಲವೋ ಅಲ್ಲಿಯವರೆಗೆ ತಡೆದು ಹಿಡಿದಿದ್ದ ವಿರಹವ್ಯಥೆಯೆಲ್ಲ ಒಟ್ಟಿಗೆ ಕಟ್ಟೆಯೊಡೆದು ಚಿಮ್ಮಿತು. ದೂರದ ಅಲಕೆಯಲ್ಲಿ ಬಿಟ್ಟು ಬಂದಿದ್ದ ಪ್ರಿಯೆಯನ್ನು ನೆನೆನೆನೆದು ಕಣ್ಣೀರು ಸುರಿಯಿತು. ಆಕೆಗೆ ಒಂದು ಕ್ಷೇಮಸಮಾಚಾರವನ್ನಾದರೂ ಕಳುಹಿಸಿಕೊಟ್ಟಲ್ಲದೆ ಅವನ ಮನಸ್ಸಿಗೆ ಸಮಾಧಾನವಿಲ್ಲ. ಸಂದೇಶವನ್ನು ಕಳುಹಿಸಲು ಅವನಿಗೆ ಆ ನಿರ್ಜನಪ್ರದೇಶದಲ್ಲಿ ದೂತರೆಲ್ಲಿಂದ ದೊರಯಬೇಕು? ಉತ್ತರಾಭಿಮುಖವಾಗಿ ಹೋಗುತ್ತಿದ್ದ ಮೋಡವೇ ಯಾಚಿಸಿದರೆ ದೂತನಾದಾನೆಂದು ಅವನ ತಳಮಳಿಸುತ್ತಿದ್ದ ಮನಸ್ಸಿಗೆ ತೋರುತ್ತದೆ. ಕಾಡುಹೂಗಳಿಂದ ಆತನನ್ನು ಸ್ವಾಗತಿಸಿ ಇಷ್ಟೊಂದು ಉಪಕಾರಮಾಡಬೇಕೆಂದು ಕೇಳಿಕೊಳ್ಳುತ್ತಾನೆ ರಾಮಗಿರಿಯಿಂದ ಅಲಕಾಪುರಿಯವರೆಗೂ ಅವನಿಗೆ ದಾರಿಯಲ್ಲಿ ಸಿಕ್ಕುವ ದರ್ಶನೀಯ ವಸ್ತುಗಳನ್ನೆಲ್ಲ ವಿವರಿಸುತ್ತಾನೆ. ಅವನಿಗೆ ಒದಗಬಹುದಾದ ಸುಖಾನುಭವ

ಗಳನ್ನೆಲ್ಲ ಬಣ್ಣಿಸುತ್ತಾನೆ. ಮೇಘದೂತನಿಗೆ ಮಾರ್ಗದಲ್ಲಿ ರಾಜಹಂಸಗಳು ಸಹಯಾತ್ರಿಕರಾಗುತ್ತಾರೆ, ಸಾರಂಗಗಳೇ ದಾರಿ ತೋರಿಸುವವರು. ಭೂಮಿಯು ಸುರಭಿಯಾಗಿ ಹರ್ಷದಿಂದ ಹಸಿರಾಗುತ್ತದೆ, ಆಮ್ರಕೂಟ ಮುಂತಾದ ಬೆಟ್ಟಗಳು ಗೃಹಸ್ಥರಂತೆ ಅವನನ್ನು ತಲೆಯಮೇಲಿಟ್ಟುಕೊಂಡು ಉಪಚರಿಸುತ್ತಾರೆ. ಒಂದೊಂದು ನದಿಯೂ ಅವನ ಬರವಿಗಾಗಿ ಎದುರು ನೋಡುತ್ತ ಬಡವಾಗಿರುವ ಪ್ರೇಯಸಿಯೇ ವಿಂಧ್ಯಪಾದದಲ್ಲಿ ಭಿನ್ನಭಿನ್ನ ವಾಗಿ ಭೋರ್ಗರೆಯುವ ನರ್ಮದೆ, ಮುಂದೆ ದಶಾರ್ಣದೇಶದಲ್ಲಿ ವೇತ್ರವತಿ, ಅನಂತರ ವಿದಿಶಾಪಟ್ಟಣ, ಇನ್ನು ಮುಂದೆ ಬಂದರೆ ನಿರ್ವಿಂಧ್ಯಾ ನದಿ - ಆ ಮೇಲೆ ಸಿಪ್ರಾತೀರದಲ್ಲಿ ಉಜ್ಜಯಿನೀಪಟ್ಟಣ. ಕೇಳಬೇಕೆ? ಅದು ಸ್ವರ್ಗದ ಒಂದು ಭಾಗವೇ ಭೂಮಿಗಿಳಿದಂತಿದೆ. ಅಲ್ಲಿ ಮಹಾಕಾಲನ ಸಂದ ರ್ಶನವೂ ಲಭಿಸುತ್ತದೆ ಎಲ್ಲಕ್ಕಿಂತಲೂ ಹೆಚ್ಚಾಗಿ ವಿಲಾಸಿನಿಯರ ಬೀಡೇ ಅದು ಹಾಗೆಯೇ ಮುಂದೆ ಮುಂದೆ ಗಂಭೀರಾ, ಚರ್ಮಣ್ವತೀ, ಸರಸ್ವತೀ, ಗಂಗಾ ಮೊದಲಾದ ದಿವ್ಯನದಿಗಳೂ, ದೇವಗಿರಿ, ಕುರುಕ್ಷೇತ್ರ, ಕೈಲಾಸ— ಮೊದಲಾದ ದಿವ್ಯ, ಭವ್ಯ ದೃಶ್ಯಗಳೂ ಕಂಗೊಳಿಸುತ್ತವೆ ಕೈಲಾಸದ ತುದಿ ಯಲ್ಲಿಯೇ ಅಲಕಾಪಟ್ಟಣ ಎಲ್ಲೆಲ್ಲೂ ಸರಿಸರಿಯ ಚೆಲುವೆಯರ ವಿಳಾಸವು ಮಿಂಚಿ ಮಾಯವಾಗುತ್ತದ. ಇದು ಪೂರ್ವಮೇಘದ ಸಂಗ್ರಹ

ಭೂಲೋಕದಿಂದ ಮೇಘವು ಅಲಕಾಪುರಿಯನ್ನು ಸೇರುವಂತೆಯೇ ಕಾಳಿದಾಸನ ಕಲ್ಪನೆಯೂ ಭೂಮಿಯನ್ನು ಬಿಟ್ಟು ಸ್ವರ್ಗಚುಂಬಿಯಾಗು ತ್ತದ ಅಲಕೆಯ ಅಪ್ಸರೆಯರೂ ಯಕ್ಷರೂ ಶೃಂಗಾರಸಾಗರದಲ್ಲಿ ಸದಾ ಓಲಾಡುವವರು ಅಲ್ಲಿ ಎಲ್ಲ ಋತುಗಳೂ ಎಲ್ಲ ಹೂಗಳನ್ನೂ ಒದಗಿಸುತ್ತವೆ. ದುಃಖವೆಂಬುದನ್ನು ಯಕ್ಷರೆಂದೂ ಕಂಡರಿಯರು, ಪ್ರಣಯ ಕಲಹವನ್ನಲ್ಲದೆ ಬೇರೆ ಕೋಪವನ್ನೇ ಕಾಣರ ರತ್ನಗಳೇ ಅಲ್ಲಿಯ ದೀಪಗಳು. ಚಂದ್ರ ಕಾಂತಶಿಲೆಗಳೇ ಹಾಸುಗಲ್ಲುಗಳು, ಕಿನ್ನರರೇ ಗಾಯಕರು. ಅಪ್ಸರಸ್ತ್ರೀಯ ರೊಡನೆ ರತಿಫಲವನ್ನು ಸವಿಯುವುದೊಂದೇ ಯಕ್ಷರ ಜೀವನ. ಬೇಕಾದ್ದ ನ್ನೆಲ್ಲ ಒದಗಿಸಲು ಕಲ್ಪವೃಕ್ಷವೇ ಇದೆ ಅವರ ಕನ್ಯೆಯರು ಆಡುವುದು ಮಂದಾಕಿನಿಯ ಮರಳಿನಲ್ಲಿ, ರತ್ನಗಳನ್ನು ಮುಚ್ಚಿ ಹುಡುಕುವ ಆಟವನ್ನು.

ಮುಂದೆ ಕಾಳಿದಾಸನು ಯಕ್ಷನ ಮನೋಹರವಾದ ಮನೆಯ

ಪರಿಚಯವನ್ನು ಮಾಡಿಕೊಡುತ್ತಾನೆ ಕಾಮನ ಬಿಲ್ಲಿನ ಕಮಾನಿರುವ ತೋರಣ, ಮನೆಯ ಸುತ್ತ ಮಂದಾರ, ಅಶೋಕ ಮೊದಲಾದ ಮರಗಳು, ಚಿನ್ನದ ಕಮಲಗಳು ಅರಳುವ ರತ್ನಸೋಪಾನದ ಪುಷ್ಕರಿಣಿ, ಅದರ ಅಂಚಿನಲ್ಲಿ ಹೊನ್ನಿನ ಬಾಳೆಗಳ ಸಾಲು, ಮಾಧವೀಲತಾಮಂಟಪ, ನವಿಲು ನರ್ತಿಸುವ ಸುವರ್ಣದಂಡ, ಬಾಗಿಲಿನ ಮೇಲೆ ಶಂಖಪದ್ಮಗಳ ಚಿತ್ರ – ಇತ್ಯಾದಿ. ಇವುಗಳಲ್ಲಿ ಒಂದೊಂದು ಪದ್ಯವನ್ನೂ ಒಂದೊಂದು ಚಿತ್ರವಾಗಿ ಬರೆಯಬಹುದು ಬರೆದಿದ್ದಾರೆ ಅಷ್ಟು ಸೊಗಸಾಗಿದೆ ಕಾಳಿದಾಸನ ವರ್ಣನೆ

ಇಷ್ಟೆಲ್ಲ ಹಿನ್ನೆಲೆಯನ್ನು ಕಲ್ಪಿಸಿದ ಮೇಲೆ ಕಡೆಗೆ ವಿರಹಿಣಿಯಾದ ಯಕ್ಷಪತ್ನಿಯ ಚಿತ್ರವು ಬರುತ್ತದೆ. ಅವಳ ಮೊದಲಿನ ರೂಪವರ್ಣನೆಯನ್ನೂ ಶಿಶಿರಮಥಿತವಾದ ಪದ್ಮಿನಿಯಂತೆ ಅವಳ ಈಗಿನ ಶೋಚ್ಯಾವಸ್ಥೆಯನ್ನೂ ಕವಿಯು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಈಗ ಆಕೆಯು ವಿರಹತಾಪವನ್ನು ಮರೆಯಬಹುದೋ ಎಂದು ಪಂಜರದ ಶಾರಿಕೆಯೊಡನೆ ಮಾತನಾಡುತ್ತಲೋ, ಇಲ್ಲವೆ ಕಾಂತನ ಚಿತ್ರವನ್ನು ಬರೆಯುತ್ತಲೋ, ಇಲ್ಲವೆ ಒಂದು ಪ್ರಣಯಗೀತವನ್ನು ಹಾಡಿಕೊಂಡು ವೀಣೆಯನ್ನು ಬಾರಿಸುತ್ತಲೋ, ಇಲ್ಲವೆ ಉಳಿದ ವಿರಹದಿನಗಳನ್ನು ಹೊಸ್ತಿಲ ಮೇಲಿನ ಹೂಗಳಿಂದ ಲೆಕ್ಕಮಾಡುತ್ತಲೋ ಇರುತ್ತಾಳೆ. ಆದರೆ ಆ ಶೋಕಾವೇಗವೇ ಇಮ್ಮಡಿಸುವುದರಿಂದ ಯಾವುದೂ ನಿಜವಾಗಿ ಅವಳ ಉದ್ದೇಶವನ್ನು ಕೈಗೂಡಿಸುವುದಿಲ್ಲ. ಸ್ವಪ್ನದಲ್ಲಿಯೂ ಕೂಡ ಅವಳಿಗೆ ಸಮಾಗಮದ ಸುಖಕ್ಕಿಂತ ಹೆಚ್ಚಾಗಿ ವಿರಹದ ನಿರಾಶೆಯೇ ಅಧಿಕವಾಗುತ್ತದೆ.

ಮೇಘವು ಆ ವಿರಹಿಣಿಯ ಸಮಯವನ್ನು ಕಾಯುತ್ತಿದ್ದು ಕೊನೆಗೆ ಹೇಳಬೇಕಾದ ಸಂದೇಶವಿಷ್ಟೆ. ನಿನ್ನ ಕಾಂತನೂ ಹೀಗೆಯೇ ವಿರಹಾಗ್ನಿಯಲ್ಲಿ ಬೇಯುತ್ತಿದ್ದಾನೆ, ಕೊರಗಿ ಸೊರಗಿದ್ದಾನೆ ಆದರೆ ಸಮಾಗಮದ ಆಸೆಯಿಂದ ಹೇಗೋ ಜೀವವನ್ನು ಬಿಗಿಹಿಡಿದುಕೊಂಡು ನಿನ್ನ ಕುಶಲವನ್ನು ಕೇಳುತ್ತಾನೆ. ವಿರಹದಲ್ಲಿ ಪ್ರೇಮವು ಅಳಿಯುವುದಿಲ್ಲ, ಮೊದಲಿಗಿಂತ ನೂರ್ಮಡಿ ಉಜ್ವಲವಾಗುತ್ತದೆ.—ಹೀಗೆ ಉಪಕಾರಿಯಾದ ಮೇಘನಿಗೆಂದೂ ಪ್ರಿಯೆಯಾದ ವಿದ್ಯುತ್ತಿನಿಂದ ವಿಯೋಗ ಬಾರದಿರಲೆಂಬ ಹಾರೈಕೆಯಿಂದ ಕಾವ್ಯ ಮುಗಿಯುತ್ತದೆ.

ಮೇಘದೂತದಲ್ಲೆಲ್ಲ ಒಟ್ಟು ಇರುವ ಪದ್ಯಗಳು ನೂರಿಪ್ಪತ್ತೇ. ಆದರೆ ಒಂದೊಂದೂ ಒಂದು ಮುಕ್ತಾಫಲ. ಇಷ್ಟು ಸಣ್ಣ ಪರಿಮಿತಿಯಲ್ಲೇ ಉಳಿದ ಸಂಸ್ಕೃತ ಕವಿಗಳಾರೂ ಊಹಿಸಲಾರದಷ್ಟು ಸೌಂದರ್ಯವನ್ನು ಕಾಳಿದಾಸನು ಘನಿಯಾಗಿ ತಂದುಕೊಟ್ಟಿದ್ದಾನೆ. ಅವನ ಪದಸಂಗೀತದ ಕಲೆ, ವರ್ಣನೆಯ ಜಾಣ್ಮೆ, ಶೈಲಿಯ ಪ್ರಸನ್ನತೆ, ಛಂದಸ್ಸಿನ ಔಚಿತ್ಯ, ಇವುಗಳನ್ನು ಕೊಂಡಾಡಿ ರಸಿಕರು ದಣಿಯಲಾರರು. ಒಂದು ಆಯುಷ್ಯವೆಲ್ಲ ಆಸ್ವಾದಿಸಿದರೂ ಕುಗ್ಗದ ಸವಿ ಈ ಕಾವ್ಯರತ್ನದಲ್ಲುಂಟೆಂದು ಮಲ್ಲಿನಾಥನು ಇಳಿವಯಸ್ಸಿನಲ್ಲಿ ಉದ್ಗರಿಸಿದ 'ಮಾಘೇ ಮೇಘೇ ಗತಂ ವಯಃ' ಎಂಬ ಸೂಕ್ತಿ ಸೂಚಿಸುತ್ತದೆ.

'ಋತುಸಂಹಾರ'ದ ಸೌಂದರ್ಯ ಏಕಮುಖ, ಸಿದ್ಧಿ ಸಂಕುಚಿತ, ಅದು ಕಾಳಿದಾಸನ ಕೃತಿಯೇ ಅಲ್ಲವೆನ್ನುವವರೂ ಇದ್ದಾರೆ. ಆದರೆ ಮೇಘದೂತದ ಮೋಹಕತ್ವ ಸರ್ವಾಂಗೀಣ, ಸಿದ್ಧಿ ಸಂಪೂರ್ಣ, ಕಾಳಿದಾಸನ ಪರಿಪಕ್ವಹೃದಯದ ಅನುಭವ ಇಲ್ಲಿ ಪ್ರತಿಪದ್ಯದಲ್ಲೂ ಉಂಟಾಗುತ್ತದೆ. 'ಋತುಸಂಹಾರ'ದಲ್ಲಿ ಮಾನವನಿಗಾಗಿ ಪ್ರಕೃತಿಯೆಂಬ ಭಾವನೆ ಪ್ರಧಾನವಾದರೆ, ಮೇಘದೂತದಲ್ಲಿ ಮಾನವನಿಗಿಂತ ಹೆಚ್ಚಿನ ಮಹತ್ವ ಮಾನವೇತರರ ಜೀವನಕ್ಕೆ ಪ್ರಾಪ್ತವಾಗುತ್ತದೆ ತನಗಿಂತ ಹೆಚ್ಚಿನ ಭವ್ಯತೆಯನ್ನು ಪ್ರಕೃತಿಯ ಇತರ ವಸ್ತುಗಳಲ್ಲಿ ಕಾಣುವ ಶಕ್ತಿಯೇ ಮಾನವನ ಮನೋವಿಕಾಸಕ್ಕೆ ಕೈಗಂಬ. ಲಲಿತ ಛಂದೋಬಂಧಗಳ ಆಧಿಪತ್ಯದ ಜತೆಗೆ ಈ ಪರಿಪಕ್ವ ಬುದ್ಧಿ ಪ್ರತಿಭಾಶಾಲಿಯಾದ ಕವಿಯೊಬ್ಬನಲ್ಲಿ ಕೂಡಿಕೊಳ್ಳುವುದು ವಿಶ್ವಸಾಹಿತ್ಯದಲ್ಲೇ ವಿರಳ. ಈ ಸುಂದರ ಸಮಾವೇಶವಿರುವುದರಿಂದ ಕಾಳಿದಾಸನ ಸ್ಥಾನ ಅನಾಕ್ರಿಯಾನ್, ಹೊರೇಸ್, ಶೆಲ್ಲಿಗಳ ಜತೆಯಲ್ಲಲ್ಲ, ಸೋಫೋಕ್ಲಿಸ್, ವರ್ಜಿಲ್, ಮಿಲ್ಟನ್‌ಗಳೊಡನೆ.[5]

---

5. **ಹೋಲಿಸಿ** —Kālidāsa understood in the Fifth Century (A D.) what Europe did not learn until the Nineteenth, and even now comprehends only imperfectly: that the world was not made for man; that man reaches his full stature only as he realizes the dignity and worth of life that is not human. That Kalidasa seized this truth is a

ಪ್ರೇಮದ ಪರಮರಹಸ್ಯವೆಂದರೆ ಅದರಲ್ಲಿರುವ ಸುಖದುಃಖಗಳ ವಿಚಿತ್ರ ಪರಿಪಾಕ. ಸಿಹಿಕಹಿಗಳ ಒಂದು ಅಪೂರ್ವ ಸಂಮಿಶ್ರಣದಿಂದ ಎರಡಕ್ಕೂ ಹೆಚ್ಚಿನ ಆಸ್ವಾದ್ಯತೆಯುಂಟಾಗುವುದು ಅದರ ಮರ್ಮ. ಜೀವನದಲ್ಲಿ ಬರಿಯ ಸಿಹಿಯಾಗಲಿ ಬರಿಯ ಕಹಿಯಾಗಲಿ ಇರುವುದಿಲ್ಲ ಒಂದು ವೇಳೆ ಹಾಗಿದ್ದಿದ್ದರೆ ವೈವಿಧ್ಯವಿಲ್ಲದ ಬರಿಯ ಸಿಹಿಯೂ ಕಹಿಗಿಂತ ವಿರಸವೇ ಆಗುತ್ತಿದ್ದಿತೆಂದು ಊಹಿಸಬಹುದು. ಅತಿಪರಿಚಯಕ್ಕಿಂತ ಹೆಚ್ಚಿನ ವೈರಸ್ಯನಿಮಿತ್ತವೇ ಇಲ್ಲ. ಆದ್ದರಿಂದ ಪ್ರಣಯಿಗಳ ಶಾಶ್ವತಪ್ರೇಮದ ಮರ್ಮ 'ಸುಖದುಃಖಗಳಲ್ಲಿ ಅದ್ವೈತಭಾವ,' 'ಸರ್ವಾವಸ್ಥೆಗಳಲ್ಲೂ ಅಗಲದ ಸ್ವರಂತರ್ಯ', ರಸ-ವಿರಸಗಳ ಸಮರಸ ದೇಹವು ಅಗಲಿದಾಗ ಮನಸ್ಸು ಅಗಲುವುದಿಲ್ಲ, ಅದರ ಬದಲು ಕಲ್ಪನಾಶಕ್ತಿಗೆ ಸರ್ವ ಸ್ವಾತಂತ್ರ್ಯ ಬರುವುದರಿಂದ ಆ ಕಲ್ಪನಾಲೋಕದ ಚಿತ್ತವೃತ್ತಿಯ ವೇಗ ಮಿಂಚಿನ ವೇಗಕ್ಕಿಂತಲೂ ಮಿಗಿಲಾದುದು ಇಂದ್ರಿಯಗಳು ಉದ್ದೀಪಿತವಾದಾಗ ಕಲ್ಪನಾಶಕ್ತಿ ಹಿಂದೆ ಸರಿಯುತ್ತದೆ ಆದರೆ ಇಂದ್ರಿಯಗಳು ಹಿಂದೆ ಸರಿದಾಗ ಕಲ್ಪನಾಶಕ್ತಿಯು ಕೆರಳಿ ಹೆಚ್ಚಿನ ಭಾವದೀಪ್ತಿಯನ್ನು ತರುತ್ತದೆ ಹೀಗೆ ಸಂಭೋಗಶೃಂಗಾರಕ್ಕಿಂತ ಹೆಚ್ಚಿನ ಕಾವ್ಯಸತ್ಯ ವಿಪ್ರಲಂಭಶೃಂಗಾರ. ಏಕೆಂದರೆ ವಿಪ್ರಲಂಭ ಶೃಂಗಾರದ ಪ್ರೇಮ ಇಂದ್ರಿಯಗಳನ್ನು ಮಾತ್ರ ಕುರಿತ ಅಥವಾ ಮನಸ್ಸನ್ನು ಮಾತ್ರ ಕುರಿತ ಪರಿಮಿತ ಭಾವವಲ್ಲ, ಕಲ್ಪನಾಪರಿಸ್ಪಂದಬಂಧುರವಾದ ಅಪರಿಮಿತ ರಾಜ್ಯ. ಈ ಯಕ್ಷಲೋಕದ ಉದಾತ್ತ ಪ್ರೇಮದ ಸವಿಯನ್ನು ಮಾನವಲೋಕಕ್ಕೆ ಕವಿ ತಂದಿಳಿಸಿದ್ದಾನೆ. ಹೀಗೆ ಕಾಳಿದಾಸನ ಕಾವ್ಯ ವಿಷಯವು ಅವನ ಕಲ್ಪನೆಯ ಬೆಳೆವಣಿಗೆಗನುಗುಣವಾಗಿ ಸಂಕುಚಿತತೆಯನ್ನು

---

magnificent tribute to his intellectual power, a quality quite as necessary to great poetry as perfection of form Poetical fluency is not rare; intellectual grasp is not very uncommon; but the combination has not been found perhaps more than a dozen times since the world began. Because he possessed this harmonious combination, Kālidāsa ranks not with Anacreon and Horace and Shelley but with Sophocles, Virgil, Milton.

—Ryder, 'Kalidasa.'

ಕಳೆದುಕೊಂಡು ಅನಂತ ಭವ್ಯತೆಯನ್ನು ಪಡೆಯುತ್ತಿದ್ದುದಕ್ಕೆ 'ಮೇಘದೂತ'ವು ಸಾಕ್ಷಿಯಾಗಿದೆ.[6]

ಈ ಅದ್ಭುತ ಪ್ರತಿಭಾಗುಣ ನ್ಯೂನವಾದರೆ, ಈ ಕಲ್ಪನಾಸತ್ಯದ ಆತ್ಮಸಾಕ್ಷಾತ್ಕಾರ ತಪ್ಪಿದರೆ, ಉಳಿದೆಲ್ಲ ಬಾಹ್ಯಗುಣಗಳೂ ಇದ್ದರೂ ಕಾವ್ಯಸಿದ್ಧಿಯಾಗಲಾರದೆಂಬುದನ್ನು ಮನಗಾಣಲು ಸಂಸ್ಕೃತ ಸಾಹಿತ್ಯದಲ್ಲಿ ಬಂದಿರುವ ಹತ್ತಾರು ಅನುಕರಣಗಳನ್ನು ನೋಡಬೇಕು.[7] ಪ್ರಸಿದ್ಧ ಜೈನ ಮಹಾಕವಿಯೂ ಪುರಾಣಕಾರನೂ ಆದ ಜಿನಸೇನನು ಕ್ರಿ. ಶ. ೮ ನೆಯ ಶತಮಾನದಲ್ಲಿ ಮೇಘದೂತದ ಒಂದೊಂದು ಪದ್ಯಚರಣವನ್ನೂ ತೆಗೆದುಕೊಂಡು ಅದಕ್ಕೆ ತನ್ನ ಮೂರು ಸಾಲುಗಳನ್ನು ಸೇರಿಸಿ 'ಪಾರ್ಶ್ವಾಭ್ಯುದಯ'ವೆಂಬ ಶಾಂತರಸಪ್ರಧಾನವಾದ ಕಾವ್ಯವನ್ನು ಬರೆದನು.[8] ಉದ್ಧವ, ಶುಕ, ಕೋಕಿಲ, ಚಾತಕ, ಚಕ್ರವಾಕ, ಕಾಕ, ಚಂದ್ರ, ವಾಯು, ಮನಸ್ಸು, ಭಕ್ತಿ, ಭೃಂಗ, ಹಂಸ ಮುಂತಾದುವನ್ನು ಕುರಿತು ಮುಂದಿನ ಕವಿಗಳೆಲ್ಲರೂ ಒಂದೊಂದು ದೂತಕಾವ್ಯವನ್ನು 'ಮೇಘದೂತ'ದ ಅನುಕರಣೆಯಲ್ಲಿ ಬರೆದರೂ, ಛಂದಸ್ಸು ಕಥೆ ವರ್ಣನೆಗಳು ಮುಂತಾದುವನ್ನೆಲ್ಲ ಎಷ್ಟೇ ಯಶಸ್ವಿಯಾಗಿ ಅನುಸರಿಸಿದರೂ ಒಂದಾದರೂ ಕಾಳಿದಾಸನ ಮೂಲದೊಡನೆ ಸ್ಪರ್ಧಿಸಬಲ್ಲ ಸಿದ್ಧಿಯನ್ನು ಪಡೆಯಲಿಲ್ಲ. ಹೀಗೆ ಒಂದು ಹೊಸ ಸಾಹಿತ್ಯಸಂಪ್ರದಾಯವೇ ಹುಟ್ಟಿರುವುದು ಕಾಳಿದಾಸನ ಮಹಾ ಪ್ರತಿಭೆಗೆ ಮುಂದಿನ ಕವಿಗಳು ಸಲ್ಲಿಸಿರುವ ಅಗ್ರಪೂಜೆ, ಕಾಳಿದಾಸನ ಲೋಕಪ್ರಿಯತೆಗೆ ಅದ್ವಿತೀಯ ನಿದರ್ಶನ.

---

6. Cf R. S Pandit, Ritusamhara, (1947) p. 24.

7. Chintaharan Chakravarti—The Origin and Dovelopment of Dutakavya Literature in Sanskrit, I. H. Q. Vol. III. pp. 273-293.

8 ಹೋಲಿಸಿ. ಪಾರ್ಶ್ವಾಭ್ಯುದಯದ ಅಂತ್ಯಶ್ಲೋಕ:—

ಶ್ರೀವೀರಸೇನ ಮುನಿಪಾದಪಯೋಜಭೃಂಗಃ
ಶ್ರೀಮಾನಭೂದ್ವಿನಯಸೇನಮುನಿರ್ಗರೀಯಾನ್ ।
ತಚ್ಚೋದಿತೇನ ಜಿನಸೇನಮುನೀಶ್ವರೇಣ
ಕಾವ್ಯಂ ವ್ಯಧಾಯಿ ಪರಿವೇಷ್ಟಿತಮೇಘದೂತಮ್ ॥

**ಕುಮಾರಸಂಭವ :** ಶೃಂಗಾರದ ಉಭಯಮುಖಗಳನ್ನೂ ಲಘು ಕಾವ್ಯಗಳಲ್ಲಿ ಅಮರವಾಗಿಸಿದ ಮಹಾಕವಿಯ ಪ್ರತಿಭೆ ಅದರ ಮೀಮಾಂಸೆಯನ್ನು ಒಂದು ಮಹಾಕಾವ್ಯದಲ್ಲಿ ಮೂಡಿಸಿದಲ್ಲದೆ ತೃಪ್ತವಾಗುವಂತಿರಲಿಲ್ಲ. ಕಾಳಿದಾಸನ ಕಾಲಕ್ಕೆ ಆಗಲೇ ನೂರಾರು ಪೌರಾಣಿಕ ಕಥೆಗಳು ಜನರ ಭಕ್ತಿಶ್ರದ್ಧೆಗಳಿಗೆ ಪಾತ್ರವಾಗಿದ್ದರೂ ಅವುಗಳ ಅಡಿಯಲ್ಲಡಗಿರುವ ಶಾಶ್ವತ ಸತ್ಯಗಳ ಕಲ್ಪನೆ ಮಾತ್ರ ಜನರಿಗೆ ದೂರವಾಗಿಯೇ ಇದ್ದಿತೆಂದು ತೋರುತ್ತದೆ. ಅಶ್ವಘೋಷನು ಮೋಕ್ಷಸಾಧನೆಯ ಮಹಾಸಿದ್ಧಿಯು ಭಗವಾನ್ ಬುದ್ಧನಿಂದಲೇ ಮೊದಲಾಯಿತೋ ಎಂಬಂತೆ ಬಣ್ಣಿಸಿ ಆತನ ಮಾರವಿಜಯವನ್ನು ವಿಸ್ತಾರವಾಗಿ ವಿವರಿಸಿದ್ದನು. ಆತನಿಗೆ ಪ್ರೇಮದ ರಹಸ್ಯದ ಸಾಕ್ಷಾತ್ಕಾರವಾಗಿತ್ತೆಂದಾಗಲಿ, ಜೀವನದಲ್ಲಿ ಅದರ ಸ್ಥಾನವೇನೆಂಬ ಬಗೆಗೆ ಯೋಗ್ಯ ವಿಚಾರವಿತ್ತೆಂದಾಗಲಿ ಕಾಳಿದಾಸನಿಗೆ ಕಾಣಲಿಲ್ಲವೆಂದು ಊಹಿಸಬಹುದು. ವೈರಾಗ್ಯದ ಶತ್ರು ಶೃಂಗಾರವೆಂದು ಎರಡಕ್ಕೂ ಕಪ್ಪು ಬಿಳುಪುಗಳಂತೆ ವಿಭೇದ ಮಾಡಿದುದು ಬೌದ್ಧರ ಧಾರ್ಮಿಕ ಸಂಪ್ರದಾಯಕ್ಕೆ ಅನುಗುಣವಾಗಿದ್ದಿರಬಹುದಾದರೂ ಆರ್ಯರ ಪೂರ್ಣದೃಷ್ಟಿಯ ವಿಪರ್ಯಾಸವೇ ಆಗಿದ್ದಿತು. ಆರ್ಯಋಷಿಗಳ ದರ್ಶನದಲ್ಲಿ ತ್ರಿವರ್ಗದ ಜತೆಗೆ ಮೋಕ್ಷವೂ ಒಂದು ಪುರುಷಾರ್ಥವೇ ಹೊರತು, ಮೋಕ್ಷವೊಂದೇ ಪುರುಷಾರ್ಥವಲ್ಲ ವೈರಾಗ್ಯದಿಂದ, ಇಂದ್ರಿಯನಿಗ್ರಹದಿಂದ, ಚಿತ್ತಶುದ್ಧಿಯಿಂದ, ಚತುರ್ವಿಧ ಪುರುಷಾರ್ಥಗಳನ್ನೂ ಸಾಧಿಸಬೇಕೆಂಬುದೇ ಸಿದ್ಧಾಂತ, ತ್ರಿವರ್ಗವಿಮುಖರಾಗಬೇಕೆಂದಲ್ಲ ಪುನರ್ಜನ್ಮನಿವೃತ್ತಿಗೆ ಮೋಕ್ಷವೊಂದೇ ಸಾಧಕವಾದರೂ, ಈ ಜನ್ಮದಲ್ಲಿ ಲೋಕಸಂಗ್ರಹಕ್ಕಾಗಿರುವ ಧರ್ಮಾರ್ಥಕಾಮಗಳನ್ನು ಆಶ್ರಯಿಸದೆ ಮೋಕ್ಷಾವಕಾಶವು ಒಮ್ಮೆಗೇ ಬರುವುದೆಂದು ಭಾವಿಸುವುದಿಲ್ಲ. ಹೀಗೆ ಮೂಲಭೂತವಾದ ಪ್ರಶ್ನೆಯನ್ನು ಬೌದ್ಧಮತವು ಮತ್ತೆ ಮುಂದೆತ್ತಿದಂತಾಯಿತು. ಜೀವನದಲ್ಲಿ ಶೃಂಗಾರದ ಸ್ಥಾನವೇನು? ಗುರಿಯೇನು? ಅದಕ್ಕೂ ಮೋಕ್ಷಕ್ಕೂ ಇರುವ ಸಂಬಂಧವೇನು? ಪರಿಣತಪ್ರಜ್ಞನಾಗಿದ್ದ ಕಾಳಿದಾಸನು ಈ ಮಹಾಸಮಸ್ಯೆಯನ್ನು ತನ್ನ ಪ್ರತಿಭಾಬಲದಿಂದ ಬಿಡಿಸಲು ಬರೆದ ಮಹಾಕಾವ್ಯವೇ ಕುಮಾರಸಂಭವ ಅದರಲ್ಲಿ ಮುಖ್ಯವಾದ ಪ್ರತಿಪಾದ್ಯಾಂಶ ಪ್ರೇಮಮೀಮಾಂಸೆ. ಇಲ್ಲಿ ಕಾಳಿದಾಸನ ಕಲ್ಪನೆಯ ಜತೆಜತೆಗೆ ಬುದ್ಧಿವಿಮರ್ಶೆಯೂ

ಕೆಲಸಮಾಡುತ್ತದೆ. ಬೌದ್ಧರ ಆಕ್ಷೇಪಗಳಿಗೆಲ್ಲ ಸಮಾಧಾನ ಸಿಕ್ಕುವಂತೆ ಆರ್ಯಸಂಸ್ಕೃತಿಯ ಪುನರವಲೋಕನವನ್ನಿಲ್ಲಿ ನೋಡಬಹುದಾಗಿದೆ.

ಕಾಳಿದಾಸನ ಮೆಚ್ಚಿನ ದೇವತೆ ಶಿವ. ಅವನ ನಾಟಕರತ್ನಗಳೆಲ್ಲ ಶಿವನ ಸ್ತೋತ್ರದಿಂದಲೇ ಆರಂಭವಾಗುತ್ತವೆ. ಕಾಳಿದಾಸನ ಜೀವನಾದರ್ಶಗಳೆಲ್ಲವೂ ಶಿವನಲ್ಲಿ ಮೂರ್ತಿಗೊಂಡಿರುವುದೇ ಅದಕ್ಕೆ ಕಾರಣ. ಅವನು ಪರಮೇಶ್ವರ ನಾದರೂ ಹೊದೆಯುವುದು ಆನೆಯ ಚರ್ಮ. ಕಾಂತಾಸಮ್ಮಿಶ್ರದೇಹ ನಾದರೂ ವಿಷಯವಿಮುಖರಾದ ತಪಸ್ವಿಗಳನ್ನು ಮೀರಿಸಿದ ವಿರಕ್ತಶಿರೋ ಮಣಿ. ಚಂದ್ರ, ಸೂರ್ಯ, ಜಲ, ವಾಯು, ಭೂಮಿ, ಅಗ್ನಿ ಮುಂತಾದ ಮಹಾ ಭೂತಗಳೇ ಅವನ ಅಂಗಗಳಾಗಿರುವುದರಿಂದ ಲೋಕಕ್ಕೆಲ್ಲ ಅಷ್ಟಮೂರ್ತಿ ಯಾದರೂ ನಿರಭಿಮಾನಿ. ಅವನು ಭುಕ್ತಿಪ್ರದನೂ ಹೌದು, ಮುಕ್ತಿ ದಾಯಕನೂ ಹೌದು, ಭಕ್ತಿಯೋಗ ಸುಲಭನೂ ಹೌದು. ಆದರೆ ಆ ಪರಂಜ್ಯೋತಿಯ ಪ್ರಭಾವಸಮೃದ್ಧಿಯ ಕಲ್ಪನೆ ಹರಿವಿರಿಂಚಿಗಳಿಗೂ ಆಗುವಂತಿಲ್ಲ. ಅವನಿಗೆ ಬೇಕಾದುದು ಏನೂ ಇಲ್ಲ, ಆದರೆ ಯಾವಾಗಲೂ ಲೋಕಾನುಗ್ರಹನಿರತ. ತ್ರಿಮೂರ್ತಿಗಳಲ್ಲಿ ವಾಸ್ತವವಾದ ಭೇದವಿಲ್ಲ; ಸೃಷ್ಟಿ, ಸ್ಥಿತಿ, ವಿಲಯಗಳೆಂಬ ಕಾರ್ಯಭೇದದಿಂದ ಒಬ್ಬನೇ ಸರ್ವಾತ್ಮಕನಾದ ಭಗವಂತನಿಗೆ ಬ್ರಹ್ಮ, ವಿಷ್ಣು, ಶಿವರೆಂಬ ಹೆಸರುಗಳು ರೂಢವಾಗಿವೆಯೆಂಬು ದನ್ನೂ ಕಾಳಿದಾಸ ಬಲ್ಲ. ಆದರೆ ಕಾವ್ಯದಲ್ಲಿ ಉಪಯುಕ್ತವಾದುದು ತತ್ತ್ವ ಜ್ಞಾನವಲ್ಲ, ಭಾವಪೂರ್ಣವಾದ, ಮಾನವೀಯವಾದ, ದೇವತಾಕಲ್ಪನೆ. ಈ ದೃಷ್ಟಿಯಿಂದ ಕಾಳಿದಾಸನು ಮಾನವನಿಗೆ ಪರಮೇಶ್ವರನ ಮಾದರಿಗಿಂತ ಹೆಚ್ಚಿನ ಮಾರ್ಗದರ್ಶನ ಸಾಧ್ಯವಿಲ್ಲವೆಂಬುದನ್ನು ಕಾವ್ಯದ ಮೂಲಕ ಧ್ವನಿ ಮಾರ್ಗದಿಂದ ತೋರಿಸಿದ್ದಾನೆ. ಪ್ರೇಮಮೀಮಾಂಸೆಗೆ ಪೌರಾಣಿಕ ಕಥೆಯು ಭಿತ್ತಿಯೇ ಹೊರತು, ಕಥಾನಿರೂಪಣೆಯು ಕಾಳಿದಾಸನ ಮುಖ್ಯೋದ್ದೇಶ ವಲ್ಲ. ಭವ್ಯವಾದ ಜೀವನದರ್ಶನವು ಗರ್ಭೀಕೃತವಾಗಿರುವುದರಿಂದ ವರ್ಣನೆ ಗಳಿಗೂ ಅನ್ಯಾದೃಶ್ಯವಾದ ಮಹೋನ್ನತಿಯುಂಟಾಗುತ್ತದೆ.

ಹಿಂದಿನ ಮಹಾಕಾವ್ಯಗಳ ನಾಯಕರೆಲ್ಲರೂ– ರಾಮ, ಕೃಷ್ಣ, ಬುದ್ಧ ಮನುಷ್ಯರೂಪಿನ ದೇವತೆಗಳಾದರೆ, ಕುಮಾರಸಂಭವದ ನಾಯಕ ನಾಯಿಕೆ ಯರು ಸಾಕ್ಷಾತ್ ಶಿವಪಾರ್ವತಿಯರು, ಜಗತ್ತಿನ ತಂದೆತಾಯಿಗಳು. ಇವರ

ಜೀವನದಲ್ಲಿ ಮಾನವೋಚಿತವಾದ ನ್ಯೂನತೆಗಳಿಗೆ ಅವಕಾಶವೇ ಇಲ್ಲ. ಸಾಕ್ಷಾತ್ ಸರ್ವಜ್ಞನೂ, ಸರ್ವೇಶ್ವರನೂ, ಸರ್ವಾಂತರ್ಯಾಮಿಯೂ ಆಗಿದ್ದರೂ ಪರಮೇಶ್ವರನು ಜಗತ್ತಿನ ಆಡಳಿತವನ್ನು ದೇವತೆಗಳಲ್ಲಿ ಹಂಚಿ ಕೊಟ್ಟಿದ್ದಾನೆ. ಬ್ರಹ್ಮನೇ ಸೃಷ್ಟಿಕರ್ತ, ವಿಷ್ಣು ಲೋಕಪಾಲಕ, ಮನು ಷ್ಯಾದಿಗಳಿಗೂ, ತ್ರಿಮೂರ್ತಿಗಳಿಗೂ ನಡುವೆ ಇಂದ್ರಾದಿ ದೇವತೆಗಳು ಎಂಟು ದಿಕ್ಕುಗಳನ್ನೂ ಹಂಚಿಕೊಂಡು ಆಡಳಿತ ಮಾಡುತ್ತಾರೆ, ಇವರ ಲೋಕವೇ ಸ್ವರ್ಗ. ಮನುಷ್ಯಾದಿಗಳ ಸತ್ಕರ್ಮದ ಫಲ ದೇವತೆಗಳ ಪರಿಪುಷ್ಟಿ ಮತ್ತು ಅವರ ಪ್ರಸಾದದಿಂದ ಸ್ವರ್ಗಪ್ರಾಪ್ತಿ ಸಾಧಾರಣವಾಗಿ ದೇವತೆಗಳ ಶಕ್ತಿ ಅಪ್ರತಿಹತ. ಆದರೆ ತಪಶ್ಚರ್ಯದ ಪ್ರಭಾವದಿಂದ ಮೇಲಿನ ತ್ರಿಮೂರ್ತಿಗಳ ನ್ನೊಲಿಸಿಕೊಂಡು ಕೆಲವರು ದೇವತೆಗಳಿಗಿಂತಲೂ ಹೆಚ್ಚಿನ ಶಕ್ತಿಸಾಮರ್ಥ್ಯ ಗಳನ್ನು ಪಡೆಯುವುದು ಸಾಧ್ಯ. ಇವರು ದೇವತೆಗಳಿಗೆ ನೆರವಾಗಿ ಲೋಕ ಪಾಲನೆಯಲ್ಲಿ ತಮ್ಮ ಶಕ್ತಿಯನ್ನು ವಿನಿಯೋಗಿಸಿ ಕೃತಕೃತ್ಯರಾಗಬಹುದು, ಇಲ್ಲವೆ ಲೋಕಕಂಟಕರಾಗಿ ದೇವತೆಗಳ ವೈರಿಗಳಾಗಬಹುದು. ಇಂತಹ ದೇವ ಶತ್ರುಗಳೇ ರಾಕ್ಷಸರು. ಪುರಾಣಗಳ ಪ್ರಧಾನಕಥೆಗಳೆಲ್ಲ ದೇವಾಸುರರ ಸಂಗ್ರಾಮಗಳನ್ನು ವರ್ಣಿಸತಕ್ಕವುಗಳೇ ಇದು ಧರ್ಮಮೂಲವಾದ ಸಾತ್ವಿಕ ಶಕ್ತಿಗಳಿಗೂ ಅಧರ್ಮನಿರತವಾದ ಪಾಶವೀಶಕ್ತಿಗಳಿಗೂ ಜಗತ್ತಿನಲ್ಲಿ ನಿರಂತರ ವಾಗಿ ಸಾಗಿರುವ ಘರ್ಷಣ. ಜಗನ್ನಿಯಾಮಕನು ಬೇಕೆಂದೇ ವಿಧಿಸಿರುವ ನಿಯಮ ಇದು ಪಕ್ಷ-ಪ್ರತಿಪಕ್ಷಗಳಿಲ್ಲದೆ ಸಮನ್ವಯ ಸಾಧ್ಯವಿಲ್ಲ ಆದರೆ ಜಗ ತ್ತೆಂಬ ಮಹಾಸಮನ್ವಯಕ್ಕೆ ದೇವಾಸುರ ಯುದ್ಧಗಳು ಅನಿವಾರ್ಯ ಸ್ಥಿತಿಗೆ ನಿಯಾಮಕನಾದ ವಿಷ್ಣು ಈ ಯುದ್ಧಗಳಲ್ಲಿ ನೇರವಾದ ಭಾಗವಹಿಸುವು ದುಂಟು, ದೇವತೆಗಳ ಸಹಾಯಕನಾಗಿ ಆದರೆ ಬ್ರಹ್ಮಶಿವರು ಹಾಗೆ ಭಾಗವಹಿ ಸುವುದು ವಿರಳ. ಸೃಷ್ಟಿನಿಯಾಮಕನೂ ವಿಲಯಕಾರಕನೂ ಏಕಕಾಲದಲ್ಲಿ ಪ್ರವೃತ್ತರಾಗುವದಾದರೆ ಪ್ರಪಂಚ ಸ್ಥಿತಿಯೇ ಸಾಧ್ಯವಾಗಲಾರದು ಇಂತಹ ಪ್ರಸಂಗಗಳಲ್ಲಿ ದೇವತೆಗಳು ಶಕ್ತಿಯಿಂದ ಆಗದುದನ್ನು ಯುಕ್ತಿಯಿಂದ ನಿರ್ವಹಿಸುತ್ತಾರೆ. ಹೇಗೋ ಕಡೆಗೆ ದೈತ್ಯರನ್ನು ದಮನಮಾಡಿ ಲೋಕ ವ್ಯವಸ್ಥೆಯನ್ನು ಕಾಪಾಡಿಕೊಳ್ಳುತ್ತಾರೆ ಇದು ಸಂಕ್ಷೇಪವಾಗಿ ಪೌರಾಣಿಕ ಸಿದ್ಧಾಂತಗಳ ಸಾರ. ಕಾಳಿದಾಸನು ಈ ಪೌರಾಣಿಕಲೋಕಕ್ಕೆ ನಮ್ಮನ್ನು ಕುಮಾರಸಂಭವದಲ್ಲಿ ಕರೆದೊಯ್ಯುತ್ತಾನೆ.

ತಾರಕಾಸುರನೆಂಬ ಲೋಕಕಂಟಕ ಹುಟ್ಟಿ ದೇವತೆಗಳನ್ನೆಲ್ಲ ಸೋಲಿಸಿ ಯಾಗಿದೆ. ವಿಷ್ಣುಚಕ್ರವೂ ವಿಫಲವಾಗಿದೆ, ಅಷ್ಟದಿಕ್ಪಾಲರೂ ನಿಸ್ತೇಜರಾಗಿ ತಮ್ಮ ಅಧಿಕಾರಗಳನ್ನು ಕಳೆದುಕೊಂಡಿದ್ದಾರೆ. ಏನು ಮಾಡುವುದಕ್ಕೂ ದಿಕ್ಕುಗಾಣದೆ ಬ್ರಹಸ್ಪತಿಯ ನೇತೃತ್ವದಲ್ಲಿ ಬ್ರಹ್ಮನನ್ನು ಹೋಗಿ ಕಂಡು ಸ್ತೋತ್ರ ಮಾಡುತ್ತಾರೆ ಬ್ರಹ್ಮನ ವರದಿಂದಲೇ ಅಸುರನಿಗೆ ಆ ಪ್ರಾಬಲ್ಯ ಬಂದಿರುವಾಗ ತನ್ನ ಗಿಡವನ್ನು-ಅದು ವಿಷವೃಕ್ಷವೇ ಏಕಾಗಬಾರದು-ತಾನೇ ಅವನು ಕಡಿಯುವಂತಿಲ್ಲ. 'ದಕ್ಷಯಜ್ಞದಲ್ಲಿ ಸತಿಯು ಸತ್ತಮೇಲೆ ಶಿವನು ತಪಸ್ಸಮಾಧಿಯಲ್ಲಿ ಮುಳುಗಿದ್ದಾನೆ. ಅವನು ಮತ್ತೆ ಮದುವೆಯಾಗಿ ಮಗ ನನ್ನು ಪಡೆದರೆ ಆ ಮಗನ ಸೇನಾಧಿಪತ್ಯದಲ್ಲಿ ನೀವು ಮತ್ತೆ ಗೆಲ್ಲಬಹುದು' ಎಂದು ದಾರಿಯನ್ನು ಹೇಳಿ ಕಳುಹಿಸುತ್ತಾನೆ

ನಿಷ್ಕಾಮನಾದ ಪರಮೇಶ್ವರನಿಗೆ ಮದುವೆ ಮಾಡಿಸುವುದೆಂತು ? ವಧು ವನ್ನೆಲ್ಲಿಂದ ಹುಡುಕಬೇಕು ? ಆ ಯಜ್ಞಾಧಗ್ಧಳಾದ ಸತಿಯೇ ಮತ್ತೆ ಹಿಮವಂತ ಮೇನಾದೇವಿಯರ ಪುತ್ರಿಯಾಗಿ ಶಿವನ ಕೈಹಿಡಿಯಲು ಸಿದ್ಧ ಳಾಗಿದ್ದಾಳೆ ಸಾಕ್ಷಾತ್ ಪರಮೇಶ್ವರನಿಗೆ ಪತ್ನಿಯಾಗುವಂತಹ ಕುಲೋನ್ನ ತಿಯೂ ಅವಳಲ್ಲಿದೆ, ರೂಪಸಂಪತ್ತೂ ಇದೆ, ಭಾವಾನುಬಂಧವೂ ಇದೆ. ಎಂದ ಮೇಲೆ ಸುಲಭವಾಗಿಯೇ ದೇವತೆಗಳು ಬ್ರಹ್ಮನನ್ನು ಹೋಗಿ ಕಂಡಂತೆ ಶಿವ ನನ್ನೇ ಕಂಡು ತಮ್ಮ ಮನೋಗತವನ್ನು ತಿಳಿಸಿ ಕಾರ್ಯಸಿದ್ಧಿ ಮಾಡಿಕೊಳ್ಳ ಬಹುದಲ್ಲಾ ಎನ್ನಬಹುದು. ಆದರೆ ಶಿವ ಸಂಹಾರಕರ್ತನೇ ಹೊರತು ಸೃಷ್ಟಿ ಕರ್ತನಲ್ಲ. ಅವನ ಇಷ್ಟವಿಲ್ಲದೆ ಅವನನ್ನು ಕಂಡು ಬದುಕಿ ಬರುವ ಧೈರ್ಯ ಯಾವ ದೇವತೆಗೂ ಇಲ್ಲ ಪಾರ್ವತಿಗೆ ಮಾತ್ರ ಆ ಧೈರ್ಯವಿದೆ ಅವಳು ಶಿವನು ತಪಶ್ಚರ್ಯೆಯಲ್ಲಿರುವಾಗ ಸೇವೆಮಾಡುತ್ತ ಸಮೀಪದಲ್ಲಿದ್ದಾಳೆ. ಶಿವನ ಅನು ಗ್ರಹವನ್ನೇ ನಿರೀಕ್ಷಿಸುತ್ತಿದ್ದಾಳೆ ಆದರೆ ದೇವತೆಗಳು ಕಾಲ ನಿರೀಕ್ಷ ಮಾಡ ಬೇಕಾಗಿತ್ತು ತಮ್ಮ ಇಷ್ಟಾರ್ಥಸಿದ್ಧಿಗೆ. ಸ್ವರ್ಗಭ್ರಷ್ಟರಾಗಿ ತಾರಕನ ಕಿಂಕರ ರಾದ ಅವರಿಗೆ ಒಂದೊಂದು ಕ್ಷಣವೂ ಒಂದೊಂದು ಯುಗವಾಗಿ ಹೇಗಾದರೂ ಮಾಡಿ ಶಿವ ಪಾರ್ವತಿಯರ ಸಂಗಮ ಬೇಗ ನಡೆಯುವಂತೆ ಮಾಡಲು ಯುಕ್ತಿಗೆ ಹೊರಟರು. ಎಂತೆಂತಹ ಋಷಿಗಳನ್ನೂ ಲೀಲಾಜಾಲವಾಗಿ ಹೂ ಬಾಣಗಳಿಂದಲೇ ವಶವರ್ತಿಗಳನ್ನಾಗಿ ಮಾಡಿದ್ದ ಮನ್ಮಥ ತನಗೆ ಶಿವನನ್ನೂ

ಸೋಲಿಸುವುದು ಶಕ್ಯವೆಂದು ತನ್ನ ಪರಾಕ್ರಮವನ್ನು ಇಂದ್ರನ ಮುಂದೆ ಕೊಚ್ಚಿಕೊಂಡನು. ದೇವತೆಗಳೆಲ್ಲರೂ ಅವನ ಮನೋನ್ಮಾದವನ್ನೇ ಹರಿ ದುಂಬಿಸಿ ಅವನನ್ನು ಕಳುಹಿಸಿಕೊಟ್ಟರು. ತನ್ನ ಮಿತ್ರನಾದ ವಸಂತನ ಸಹಾಯ ದಿಂದ ಜಗತ್ತಿಗೆ ಜಗತ್ತನ್ನೇ ಕಾಮೋದ್ರಿಕ್ತವಾಗಿ ಮಾಡುತ್ತ ಶಿವನ ತಪೋ ವನಕ್ಕೆ ಬಂದನು. ಶಿವನು ಸಮಾಧಿಯಿಂದ ಎದ್ದು ಪಾರ್ವತಿಯ ಪುಷ್ಪಗಳನ್ನು ಸ್ವೀಕರಿಸುವ ಸುಸಂಧಿಯನ್ನು ಕಾದು ತನ್ನ ಪುಷ್ಪದ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿಯೇ ಬಿಟ್ಟನು. ಪರಮೇಶ್ವರನ ಎದೆ ಒಂದು ಸಲ ಅದುರಿತು. ಹಣೆಗಣ್ಣು ಒಡನೆಯೇ ತೆರೆಯಿತು. ಮನ್ಮಥನ ಸುಂದರ ಶರೀರವು ಒಂದು ಹಿಡಿ ಬೂದಿಯಾಯಿತು. ರತಿಯು ಗೋಳಿಡುತ್ತ ವೈಧವ್ಯವನ್ನು ತಾಳಲಾರದೆ ತಾನೂ ಜೀವಬಿಡುವ ಯೋಚನೆ ಮಾಡುವಾಗ ಮನ್ಮಥನು ಮತ್ತೆ ಶಿವ ಪಾರ್ವತಿಯರ ವಿವಾಹಕಾಲದಲ್ಲಿ ಬದುಕುವನೆಂಬ ಆಶ್ವಾಸನೆಯನ್ನು ಅಶರೀರ ವಾಣಿ ಕೊಡುತ್ತದೆ. ಇತ್ತ ಪಾರ್ವತಿಯು ತನ್ನ ರೂಪ ಸೌಭಾಗ್ಯವನ್ನೆಲ್ಲ ತೃಣೀಕರಿಸಿ ದೃಢಮನಸ್ಸಿನಿಂದ ತಪಶ್ಚರ್ಯೆಗೆ ತೊಡಗುತ್ತಾಳೆ. ಕಡೆಗೆ ಬ್ರಹ್ಮ ಚಾರಿಯ ವೇಷದಲ್ಲಿ ಪರಶಿವನು ಬಂದು ಶಿವನ ದೋಷಗಳನ್ನೆಲ್ಲ ಒಂದೊಂ ದಾಗಿ ಎತ್ತಿ ತೋರಿಸಿದರೂ ಅವಳ ದೃಢಚಲಿತವಾಗದಿರುವುದನ್ನು ಕಂಡು ಆಕೆಯನ್ನು ಮೆಚ್ಚುತ್ತಾನೆ. ತಾನೇ ಸಪ್ತರ್ಷಿಗಳನ್ನೂ ಅರುಂಧತಿಯನ್ನೂ ಕರೆಸಿ ಹಿಮವಂತನ ಬಳಿಗೆ ಕಳುಹಿಸಿ ಕನ್ಯಾಯಾಚನೆ ಮಾಡುತ್ತಾನೆ ವಿಧಿ ವತ್ತಾಗಿ ವಿವಾಹವಾಗಿ ಎಷ್ಟೋ ಕಾಲ ಭೋಗಲೋಲನಾಗುತ್ತಾನೆ ಆ ಯೋಗೀಶ್ವರ. ಇಲ್ಲಿಗೆ ಕಾಳಿದಾಸನು ಹೇಳಬೇಕಾದ ಮುಖ್ಯ ಸಂದೇಶ ಮುಗಿಯುತ್ತದೆ, ಕಾಳಿದಾಸನ ಪ್ರತಿಭೆ ಕಾವ್ಯವನ್ನು ಅಲ್ಲಿಗೆ ಎಂಟು ಸರ್ಗ ಗಳಿಗೇ ನಿಲ್ಲಿಸುತ್ತದೆ. ಕಥೆ ಇನ್ನೂ ಎಷ್ಟೋ ಉಳಿದಿದ್ದರೂ ಮುಂದಿನ ಕಥಾ ಪ್ರೇಮಿಗಳು ಉಳಿದ ಭಾಗವನ್ನೂ ಸೇರಿಸಿ ಕೊಂಡಿದ್ದಾರೆ.

ಜಗತ್ತಿನ ತಂದೆಯಾದ ಪರಮೇಶ್ವರನಿಗೂ ತನಗೆ ಅನುರೂಪಳಾದ ಪತ್ನಿ ಬೇಕು ಲೋಕಕ್ಕೆ ಮಾತೆಯನ್ನು ಕರುಣಿಸುವುದೂ ಅವನ ಕರ್ತ ವ್ಯಾಂಶದಲ್ಲಿಯೇ ಸೇರುತ್ತದೆ. ಜಗತ್ತಿನ ತಾಯ್ತಂದೆಗಳ ಸಮಾಗಮದ ಫಲ– ಕುಮಾರಸಂಭವ, ದೇವತೆಗಳ ಸೇನಾನಿಯ ಜನನ ವಿವಾಹದ ಗುರಿ ಸಂತಾನವೆಂಬ ಸೂತ್ರವನ್ನು ಕವಿ ಸೂಚಿಸುತ್ತಿರುವಂತೆಯೇ ವಿವಾಹವಿಲ್ಲದ

ಸ್ತ್ರೀಪುರುಷರ ಜೀವನ ಆರಕೆಯಾಗಿಯೇ ಉಳಿಯುವುದೆಂಬುದನ್ನೂ ಇಲ್ಲಿ ತೋರಿಸುತ್ತಿದ್ದಾನೆ. ಆದರೆ ಎಲ್ಲಕ್ಕಿಂತ ಹೆಚ್ಚಿನ ಪಾರ ಕಾಮ-ಪ್ರೇಮಗಳ ವಿವೇಕವನ್ನು ಕುರಿತದ್ದು. ರೂಪರಾಶಿಯ ಪ್ರಥಮದರ್ಶನದಿಂದ ಚಪಲೇಂದ್ರಿಯಗಳು ಮುಗ್ಧವಾದಾಗ ಉಕ್ಕುವ ವಿಕಾರವು ಕಾಮವೇ ಹೊರತು ಪ್ರೇಮವಲ್ಲ. ಇಂತಹ ಕಾಮೋದ್ರೇಕಕ್ಕೆ ಪ್ರೇಮವೆಂಬ ಪವಿತ್ರ ನಾಮಕರಣವೆಂದೂ ಸಲ್ಲದು, ಸತ್ಸಂತಾನದ ಗುರಿ ಅದಕ್ಕೆಂದೂ ಇರದು. ಆದ್ದರಿಂದ ಆತುರದಲ್ಲಿ ಉದ್ರೇಕಕ್ಕೆ ಪರವಶರಾಗದೆ ಮನೋದಾರ್ಢ್ಯವನ್ನು ಬೆಳೆಸಿಕೊಂಡ ಸ್ತ್ರೀಪುರುಷರ ಪರಸ್ಪರ ಮನೋನಿರ್ಧಾರವೇ ಮಾದರಿಯ ವಿವಾಹದ ಸ್ವರೂಪ. ಕಾಮವನ್ನು ದಹಿಸಬಲ್ಲವರೇ ಪ್ರೇಮಾಮೃತವನ್ನು ಸವಿದಾರು. ಹೀಗೆ ಜಿತೇಂದ್ರಿಯತ್ವವು ಬಂದಮೇಲೆ ಧರ್ಮ, ಅರ್ಥ, ಕಾಮ, ಗಳೆಂಬ ಪುರುಷಾರ್ಥಗಳನ್ನು ಸಾಧಿಸುವ ಅಧಿಕಾರ ಬರುತ್ತದೆ, ಚಪಲೇಂದ್ರಿಯರ ಕಾಮೋದ್ರೇಕವನ್ನು ಕಾಮಪುರುಷಾರ್ಥಸಿದ್ಧಿಯೆಂದು ಭ್ರಮಿಸಬಾರದು. ಒಂದೊಂದು ಪುರುಷಾರ್ಥಕ್ಕೂ ಲೋಕವ್ಯವಸ್ಥೆಯಲ್ಲಿ ಒಂದೊಂದು ಮುಖ್ಯವಾದ ಅಂಗವಿದೆ. ಯಾವುದನ್ನು ಬಿಟ್ಟರೂ ಮನುಷ್ಯನ ಜೀವನ ಪೂರ್ಣವಾಗುವುದಿಲ್ಲ, ನಾಲ್ಕು ಪುರುಷಾರ್ಥಗಳೂ ಪ್ರಾಣಿಯ ನಾಲ್ಕು ಕಾಲುಗಳಂತೆ. ಯಾವ ಕಾಲು ಕುಂಟಾದರೂ ಪ್ರಾಣಿ ಕುಂಟೇ. ಹೀಗೆ ಚಾಂಚಲ್ಯಕ್ಕಿಂತ ಚಿತ್ತಸಂಯಮವನ್ನೂ, ರೂಪಬಾಹುಲ್ಯಕ್ಕಿಂತ ಗುಣಸಾಮಗ್ರ್ಯವನ್ನೂ, ಬ್ರಹ್ಮಚರ್ಯಕ್ಕಿಂತ ಗಾರ್ಹಸ್ಥ್ಯವನ್ನೂ ಕವಿ ಹೆಚ್ಚಿನದೆಂದು ಸೂಚಿಸಿದ್ದಾನೆ. ಭಗವಂತನಿಂದ ಕಾಮಧ್ವಂಸವಾಯಿತೆಂದರೆ ಅದು ಅನಂಗನಾಗಿ ಅವನ ಪುನರುತ್ಪತ್ತಿಗೆಂಬುದನ್ನು ಮರೆಯಬಾರದು. ಕಾಮವೇ ಲೋಕದಲ್ಲಿ ನಿಶ್ಶೇಷವಾದರೆ ಲೋಕಯಾತ್ರೆಯೇ ನಿಂತೀತು. ಆದರೆ ಕಾಮವನ್ನು ಹದ್ದಿನಲ್ಲಿಟ್ಟುಕೊಳ್ಳಲು ತಪಸ್ಸೊಂದೇ ಸಾಧನ. ಅಂತಹ ಪಾರ್ವತಿಯೂ ತಪಸ್ಸಿನ ಮೂಲಕ ಮಾತ್ರ ಶಿವನನ್ನೇ ಒಲಿಸಿಕೊಳ್ಳಲು ಶಕ್ತಳಾದಳು. ಸರ್ವೇಶ್ವರನಾಗಿದ್ದರೂ ಶಿವನೇ ತಪಸ್ಸನ್ನು ಬಿಟ್ಟಿಲ್ಲ. ಹೀಗೆ ಮನುಷ್ಯಜೀವನದಲ್ಲಿ ಸಂಯಮತಪಸ್ಸುಗಳಿಗಿರುವ ಅಗ್ರಸ್ಥಾನವನ್ನು ಕವಿ ಬಹಳ ಮಾರ್ಮಿಕವಾಗಿ ಪ್ರತಿಪಾದಿಸಿದ್ದಾನೆ. ಭಾರತೀಯ ಸಂಸ್ಕೃತಿಯ ತಿರುಳೇ ಇದು.

ಈ ಭವ್ಯ ಸಂದೇಶವನ್ನು ಸಾರಲು ಕವಿಯು ತನ್ನ ಕಲಾಕೌಶಲವನ್ನೆಲ್ಲ ಸೂರೆಮಾಡಿದ್ದಾನೆ. ಕುಮಾರಸಂಭವದ ಪ್ರಕೃತಿವರ್ಣನೆಯ ಭವ್ಯತೆ, ಪಾತ್ರ

ಗಳ ದಿವ್ಯತೆ, ಮತ್ತಾವ ಕಾವ್ಯದಲ್ಲಿಯೂ ದೊರೆಯಲಾರದು. ಪುರಾಣದ ಶೈಲಿಗೂ ಕಾಳಿದಾಸನ ಕಲ್ಪನಾತರಂಗಿತವಾದ ಕಾವ್ಯಶೈಲಿಗೂ ಇರುವ ಅಜ ಗಜಾಂತರವನ್ನು ಇಲ್ಲಿ ಸ್ಪಷ್ಟವಾಗಿ ತಿಳಿಯಬಹುದು. ಪೂರ್ವಾಪರ ತೋಯ ನಿಧಿಗಳ ಅಂತರವನ್ನಳೆಯುವ ಭೂಮಿಯ ಅಳತೆ ಗೋಲಿನಂತಿರುವ ಹಿಮಾಚಲವು ಇಲ್ಲಿ ಪರ್ವತಾತ್ಮನೂ ಹೌದು, ದೇವತಾತ್ಮನೂ ಹೌದು. ಪರ್ವತಾತ್ಮನಾಗಿ ಅವನು ದೇವಯಕ್ಷಗಂಧರ್ವಾದಿಗಳ ವಿಹಾರ ಭೂಮಿ ಯಾದರೆ ದೇವಾತ್ಮನಾಗಿ ಹೆಂಡತಿ ಮಕ್ಕಳೊಡನೆ ಸುಖಿಯಾಗಿರುವ ಮಹಾ ಗೃಹಸ್ಥ. ಅವನ ಮಹಿಮೋನ್ನತಿಯನ್ನೂ ಪಾರ್ವತಿಯ ಯೌವನಾರಂಭದ ಲಾವಣ್ಯಲೀಲೆಯನ್ನೂ ಕವಿ ತನ್ನದೇ ಆದ ಹೃದಯಂಗಮವಾದ ಉಪಮೆ ಉತ್ಪ್ರೇಕ್ಷಗಳಿಂದ ಬಣ್ಣಿಸಿದ್ದಾನೆ ಬ್ರಹ್ಮಸ್ತುತಿಯು ವೇದಾಂತಸಾರವಾದರೆ, ದೇವತೆಗಳ ಭಗ್ನಕಾಂತಿಯ ವರ್ಣನೆಯು ಚಿತ್ರಮಯ ಸೌಂದರ್ಯದಿಂದ ತುಂಬಿದೆ. ವಸಂತಾಗಮನದ ವರ್ಣನೆಯಂತೂ ಕವಿಯ ಪರಿಪಕ್ವ ಕಾವ್ಯ ಕಲೆಯ ನಿದರ್ಶನ. ಮನ್ಮಥನ ಮೊದಲಿನ ಅಹಂಕಾರವೂ ಅವನಿಗೆ ಒದಗಿದ ಶಿಕ್ಷೆಯೂ ಹೃದಯವೇಧಕವಾಗಿದೆ. ರತಿವಿಲಾಪವಂತೂ ಕರುಣರಸದ ಒಂದು ನಿರರ್ಗಳ ಪ್ರವಾಹ. ಪಾರ್ವತಿಯ ತಪೋವರ್ಣನೆಯಲ್ಲಿ ಶಾಂತರಸದ ಹೊಂಬೆಳಗು ಮಿಂಚಿದರೆ ಶಿವ-ಪಾರ್ವತಿಯರ ಸಂವಾದದಲ್ಲಿ ಕಥನಕಲೆಯ ಚಾತುರ್ಯವು ಮನಸ್ಸನ್ನು ಸೆರೆವಿಡಿಯುತ್ತದೆ ಶೃಂಗಾರಿಯಾದ ಕಾಳಿದಾಸನ ಮನಸ್ಸು ಶಿವ-ಪಾರ್ವತಿಯರ ಕಾಮಕೇಳಿಯನ್ನೂ ಕಾಮಶಾಸ್ತ್ರಕ್ಕನುಗುಣ ವಾಗಿ ತಡೆಬಡೆಯಿಲ್ಲದೆ ವರ್ಣಿಸಿಬಿಡುತ್ತದೆ. ಶಾಸ್ತ್ರದೃಷ್ಟಿಯಿಂದ ಇದು ಅನೌಚಿತ್ಯದೋಷವೆಂದು ಆನಂದವರ್ಧನಾದಿಗಳು ಹೇಳಬೇಕಾಯಿತಾದರೂ, ಕವಿಪ್ರತಿಭೆಯ ಪ್ರಭೆಯು ದೋಷತ್ವವನ್ನು ಮರೆಮಾಚಿದೆಯೆಂದು ಅವರೂ ಒಪ್ಪಲೇಬೇಕಾಗಿದೆ

**ರಘುವಂಶ :** ಭೂಮಿಯಿಂದ ವ್ಯೋಮಕ್ಕೆ ಲೀಲೆಯಿಂದ ಲಂಘಿಸಬಲ್ಲ ಕಾಳಿದಾಸನ ಪ್ರತಿಭಾಪಕ್ಷಿ ಶೃಂಗಾರದ ಕಾರಾಗಾರವನ್ನು ತಾನೇ ಬಿಡಿಸಿ ಕೊಂಡು ಬಂದು ಜೀವನದ ಸಕಲಾರ್ಥಸಂಗ್ರಾಹಕವೂ ಭಾರತದ ಸರ್ವಾಂಗ ಸುಂದರಸಂಸ್ಕೃತಿಯ ಪ್ರತಿರೂಪವೂ, 'ಸರ್ವರಸೋತ್ಪಾದನವೀನಸೃಷ್ಟಿ'ಯೂ ಆದ ರಘುವಂಶವೆಂಬ ದ್ವಿತೀಯ ಮಹಾಕಾವ್ಯದ ವಿಶಾಲಪ್ರಾಂಗಣದಲ್ಲಿ

ನಿರಾತಂಕವಾಗಿ ವಿಹರಿಸಿ ಕಾಳಿದಾಸನಿಗೆ ಕವಿಸಾರ್ವಭೌಮ ಪಟ್ಟವು ತ್ರಿಕಾಲಾಬಾಧಿತವಾಗಿ ಸ್ಥಿರವಾಗುವಂತೆ ಮಾಡಿತು. ಕಾಳಿದಾಸನ ಪರಿಪೂರ್ಣ ಪ್ರಜ್ಞೆಯ, ಪರಿಣತ ಕಾವ್ಯಕಲೆಯ, ಪರಿಪಕ್ವ ಲೋಕಾನುಭವದ, ಮೂರ್ತ ರೂಪವೇ 'ರಘುವಂಶ' ಮಹಾಕಾವ್ಯ. ವೇದಶಾಸ್ತ್ರಗಳ ಮತ್ತು ಪೂರ್ವಾಚಾರಗಳ, ಆರ್ಷಕಾವ್ಯಗಳ ಮತ್ತು ಪೌರಾಣಿಕ ಭಾವನೆಗಳ, ಸಾರಸರ್ವಸ್ವವನ್ನೂ ಪರಿಶುದ್ಧಮಹಾಕಾವ್ಯಮಾರ್ಗದಿಂದ ಸಾರುವ ನಿರುಪಮಕೃತಿಯೇ ಅದು. ಕಾವ್ಯದ ಗಾತ್ರದಲ್ಲಿ, ಪ್ರತಿಪಾದ್ಯವಿಷಯಗಳ ವೈವಿಧ್ಯ ವಿಸ್ತಾರಗಳಲ್ಲಿ, ವರ್ಣನೆಯ ಸಹಜವಿಲಾಸದಲ್ಲಿ, ರಸದ ಸ್ಥೈರಂತರ್ಯದಲ್ಲಿ, ಸಂಸ್ಕೃತಿಸಾರದ ಪ್ರತಿಬಿಂಬನ ಸಾಮರ್ಥ್ಯದಲ್ಲಿ, ಎಲ್ಲದರಲ್ಲಿಯೂ ಅದು ಮುಂದಿನವರಿಗೆಲ್ಲ ಮುಟ್ಟಲಾಗದ ಮಾದರಿಯಾಗಿ ಇಂದಿನವರೆಗೂ ನಿಂತಿದೆ. ಅದೇ ಸಮಯದಲ್ಲಿ ಅದರ ಲಾಲಿತ್ಯವೆಷ್ಟೆಂದರೆ ಸಂಸ್ಕೃತ ಕಾವ್ಯಾಭ್ಯಾಸಿಗಳಾದ ಬಾಲರಿಗೆಲ್ಲ ಅದೇ ಇಂದಿನವರೆಗೂ ಸರ್ವಸಮಾದೃತವಾದ ಪ್ರಥಮ ಪಠ್ಯಪುಸ್ತಕ. ಬಾಲಪಾಠ ಪ್ರಾಯಃ ನೀರಸವೆನಿಸುವುದರಿಂದ, ಆ ಸಂಸ್ಕಾರದ ನೆನಪೇ ಉಳಿದು, ಒಮ್ಮೊಮ್ಮೆ ಪ್ರೌಢರೂ ಅದರ ಕಾವ್ಯಗುಣವನ್ನು ಕಡೆಗಣಿಸುವುದನ್ನು ಕಾಣಬಹುದು. ಆದರೆ ಸಂಸ್ಕೃತದ ಹಿರಿಯ ಲಾಕ್ಷಣಿಕರು ಯಾರೂ ಅದಕ್ಕಿಂತ ಉತ್ತಮವಾದ ಮಹಾಕಾವ್ಯದ ಉದಾಹರಣೆಯನ್ನೆಲ್ಲಿಯೂ ಹೇಳಿಲ್ಲ ರಸಿಕರಿಗೆ ಸಂಸ್ಕೃತಸಾಹಿತ್ಯವು ಈಯಬಲ್ಲ ರಸವತ್ಕೃತಿಗಳಲ್ಲೆಲ್ಲ ರಘುವಂಶವೇ ಉತ್ತಮೋತ್ತಮವಾದುದು.

ವಿಷಯದ ಆರಿಕೆಯಲ್ಲಿಯೇ ಕಾಳಿದಾಸನ ಪ್ರತಿಭಾತಿಶಯವನ್ನು ಕಾಣಬಹುದು. ವ್ಯಾಸ–ವಾಲ್ಮೀಕಿಗಳ ಆರ್ಷಮಾರ್ಗವೂ, ಪುರಾಣಗಳ ನೀರಸನಿರೂಪಣಕ್ರಮವೂ ಎರಡೂ ತಪ್ಪಿ ಅವುಗಳ ಸ್ಥಾನದಲ್ಲಿ ಮಹಾಕವಿಗಳು ವರ್ಣನಾಪ್ರಧಾನವಾದ, ರಸಸ್ಯಂದಿಗಳಾದ, ಉದಾತ್ತ ಪಾತ್ರಗಳ ಸ್ವಭಾವಾಭಿವ್ಯಕ್ತಿಗೆ ಅನುಗುಣವಾದ, ಕಥಾಸೂತ್ರವನ್ನೇ ಆರಿಸಬೇಕಾಗಿತ್ತು. ಆದರೆ ಅನುಲ್ಲಿಖಿತಪೂರ್ವವಾದ ಇಂತಹ ಯಾವುದೇ ಒಂದು ಕಥೆ ಸಿಕ್ಕುವುದೂ ಅಶಕ್ಯಪ್ರಾಯವಾಗಿತ್ತು. ಆದ್ದರಿಂದ ಇತಿಹಾಸ ಪುರಾಣಗಳ ಮುಖ್ಯ ಕಥೆಗಳ ಬದಲಾಗಿ ಉಪಾಖ್ಯಾನಗಳನ್ನಾರಿಸಿಕೊಂಡರೆ ಪಾತ್ರಗಳಲ್ಲಿ ಕೆಲವೊಂದು ಆದರ್ಶಗಳ ನಿರೂಪಣೆಗೆ ಅವಕಾಶವಿರುತ್ತಿದ್ದಿತೇ ಹೊರತು

ಭಾರತದ ಆದರ್ಶಗಳ ಸರ್ವಸ್ವವನ್ನೂ ನಿರೂಪಿಸುವುದು ಅಶಕ್ಯವೇ ಆಗುತ್ತಿದ್ದಿತು. ಕಾಳಿದಾಸನ ಸುಕುಮಾರ ಮನೋಧರ್ಮ ಶೃಂಗಾರಕರುಣ ಗಳಿಂದ ಇದುವರೆಗೂ ಆಪ್ಲಾವಿತವಾಗಿದ್ದುದು ಈಗ ಅವುಗಳನ್ನು ಬಿಡದೆ ಅವುಗಳ ಸುತ್ತ ವೀರಾದ್ಭುತಾದಿಗಳನ್ನೂ ಯಥೋಚಿತವಾಗಿ ಅಳವಡಿಸಿ ಕೊಂಡು ಸರ್ವಾಂಗಸುಂದರವಾಗುವಂತೆ ಕಾವ್ಯರಚನೆಗೆ ಪ್ರವೃತ್ತವಾಗಿತ್ತು. ನಿರುಪಾಯವೆನಿಸುವಂತಹ ಈ ಪರಿಸ್ಥಿತಿಯಲ್ಲಿ ಕವಿಯ ಪ್ರತಿಭೆ ತೋರಿಸಿದ ದಾರಿಯೆಂದರೆ ಒಬ್ಬ ನಾಯಕನ ಬದಲು ಅನೇಕ ನಾಯಕರ ವರ್ಣನೆ. ಪೂರ್ವಪ್ರಸಿದ್ಧರಾದ ರಾಜರಲ್ಲಿ ರಾಮನೊಬ್ಬನ, ದಶರಥನೊಬ್ಬನ, ವಿಸ್ತೃತ ವರ್ಣನೆಯಿಂದಲೇ ರಾಮಾಯಣವು ಅನಂತ ಕೀರ್ತಿಯನ್ನು ಪಡೆದಿತ್ತು. ಅಂತಹ ಇಪ್ಪತ್ತು ಧೀರೋದಾತ್ತರನ್ನು ನಾಯಕರನ್ನಾಗಿ ಮಾಡಿದರೆ, ವಾಲ್ಮೀಕಿಯೂ ತೋರಿಸದೆ ಬಿಟ್ಟ ಮುಖ್ಯ ಜೀವನತತ್ವಗಳನ್ನು ಪ್ರತಿಪಾದಿ ಸುವುದು ಸತ್ಯವೆಂದು ಕಾಳಿದಾಸನು ಭಾವಿಸಿರಬೇಕು. ವಸ್ತುತಃ ಇದು ಸುಲಭಕಾರ್ಯವಾಗಿರಲಿಲ್ಲ, ಒಂದು ಅಸಿಧಾರಾವ್ರತವೇ ಆಗಿತ್ತು. ಏಕೆಂದರೆ ಕಥಾಪ್ರಧಾನವಾದ ವಿಶಾಲ ಆರ್ಷಸರಣಿಗೆ ಒಬ್ಬರಿಬ್ಬರ ಕಥೆಯೇ ನೂರಾರು ಸರ್ಗಗಳನ್ನು ತುಂಬಿಸಿ ಆನಂದಸ್ಯಂದಿಯಾಗುವುದು ಸಾಧ್ಯ, ಆದರೆ ಪರಿಷ್ಕೃತ ಮಹಾಕಾವ್ಯದ ನೂತನ ಮಾರ್ಗದಲ್ಲಿ ಒಂದೇ ಒಂದು ನಿರರ್ಥಕ ಘಟನೆಗೂ ಎಡೆಯಿರಲಿಲ್ಲ, ಅನೇಕ ಘಟನೆಗಳಿಂದ ವರ್ಣನಾಂಶ ಕುಂಠಿತವೇ ಆಗುವ ಸಂಭವವಿದ್ದಿತು. ಎಲ್ಲಕ್ಕಿಂತ ಮೇಲಾಗಿ, ಹತ್ತಾರು ಜನರ ಅನನ್ವಿತ ವರ್ಣನೆಯಲ್ಲಿ ಕಾವ್ಯದ ಮೂಲನಿಯಮವಾದ ಕಾರ್ಯೈಕ್ಯಕ್ಕೇ ಲೋಪ ಬರುವ ಪ್ರಸಂಗವಿದ್ದಿತು. ಕಾಳಿದಾಸನ ಪರಿಪೂರ್ಣ ಪ್ರತಿಭೆಗೆ ಇದೊಂದೂ ತೊಡಕಾಗಲಿಲ್ಲ. ಆತನು ಕಾವ್ಯರಸದ ಗುರಿಯನ್ನು ನಿಚ್ಚಳವಾಗಿ ನೆನಪಿನ ಲ್ಲಿಟ್ಟು ಸೂರ್ಯವಂಶದ ಪೂರ್ವರಾಜರೆಲ್ಲರೂ ಒಂದೇ ಭಾರತಸಂಸ್ಕೃತಿಯ ನಿರಂತರಪ್ರವಾಹಧಾರೆಯ ಕರ್ಣಧಾರರೆಂದು ಮೊದಲು ಕಲ್ಪಿಸಿಕೊಂಡನು. ಒಬ್ಬೊಬ್ಬರಿಗೆ ಒಂದೊಂದು ರೀತಿಯಿಂದ ಸತ್ವಪರೀಕ್ಷೆಯ ಪ್ರಸಂಗಗಳು ಬಂದುವು. ಆದರೆ ಒಬ್ಬೊಬ್ಬರೂ ಒಂದೇ ಆದರ್ಶದ ಪ್ರಭಾವದಿಂದ ಆ ಪರೀಕ್ಷೆಯಲ್ಲಿ ಉಜ್ಜ್ವಲರೀತಿಯಿಂದ ಪಾರಾದರು. ಹೀಗೆ ಮೇಲ್ನೋಟಕ್ಕೆ ಹೆಸರುಗಳು ಭಿನ್ನವಾದರೂ ಅವರ ಆತ್ಮವೆಲ್ಲ ಒಂದೆ, ಆದರ್ಶ ಒಂದೆ;

ಕೃತಿಯ ವಿಧಾನವೂ ಒಂದೆ. "ಆತ್ಮಾ ವೈ ಪುತ್ರನಾಮಾಸಿ" ಎಂಬ ಸೂತ್ರ ದಂತೆ ಸೂರ್ಯವಂಶದ ಚರಿತೆಯಲ್ಲಿ ಹೀಗೆ ಒಂದು ಐಕ್ಯವನ್ನು ಕವಿ ಕಲ್ಪಿಸಿ ಕೊಂಡೊಡನೆಯೇ, ಅನೇಕ ನಾಯಕರ ತೊಡಕನ್ನು ಹರಿದುಹಾಕಿದಂತಾಯಿತು. ಎಲ್ಲರ ಜೀವನವೂ ಸೇರಿ ಒಂದು ಪೂರ್ಣಜೀವನದ ಚಿತ್ರ ಬರುವಂತಾಯಿತು. ಆದಿಕವಿಯ ವರ್ಣನೆಯಲ್ಲಿ ಶ್ರೀರಾಮನ ಪಾತ್ರಚಿತ್ರಣ ಸರ್ವಾಂಗಸುಂದರವಾಗಿ ಒಂದಾಗಿದ್ದುದರಿಂದ ಆ ಚಿತ್ರವನ್ನು ಕಾವ್ಯದ ಕೇಂದ್ರದಲ್ಲಿಟ್ಟುಕೊಂಡು ಅದಕ್ಕೆ ಪೂರಕವಾಗುವಂತೆ ಹಿಂದಕ್ಕೆ ದಿಲೀಪ, ರಘು, ಅಜ, ದಶರಥರ ಚರಿತ್ರೆಯನ್ನೂ ಮುಂದಕ್ಕೆ, ಕುಶ ಮುಂತಾದವರ ಚರಿತ್ರೆಯನ್ನೂ ಕಾಳಿದಾಸನು ಒಂದೇ ಸೂತ್ರದಿಂದ ಸಂಯೋಜಿಸಿದ್ದಾನೆ. ಆದರೆ ರಾಮನವರೆಗೆ ಹರಿದ ಸೂರ್ಯವಂಶದ ಆದರ್ಶಗಳು ಕ್ರಮಕ್ರಮವಾಗಿ ಶಿಥಿಲವಾಗುತ್ತ ಬಂದು ಕಡೆಗೆ ಅಗ್ನಿವರ್ಣನ ತಲೆಗೆ ಶೂನ್ಯಾವಸ್ಥೆಗೆ ಬಂದಿತೆಂದು ಕವಿ ತನ್ನ ರಘುವಂಶವನ್ನು ಮುಗಿಸುತ್ತಾನೆ. ಅಗ್ನಿವರ್ಣನ ಹಿಂದಿನವರಾದ ಅತಿಥಿ, ಮುಂತಾದ ರಾಜರ ಕಥೆಯನ್ನೆಲ್ಲಾ ಬಹಳ ಚುರುಕಾಗಿ ಓಡಿಸಿಬಿಡುತ್ತಾನೆ. ಇದರ ಕಾವ್ಯಸಾರ್ಥಕತೆಯನ್ನು ಊಹಿಸುವುದು ಕಷ್ಟವಲ್ಲ. ಕವಿಗೆ ಪ್ರಾಚೀನ ಸಂಸ್ಕೃತಿಯ ಪರಿಪೂರ್ಣ ಚಿತ್ರವು ರಾಮನ ಚರಿತ್ರೆಯಲ್ಲಿಯೇ ಮುಗಿಯಿತೆನಿಸಿರಬೇಕು. (ಇಲ್ಲಿಗೆ 15 ಸರ್ಗಗಳು ಮುಗಿಯುತ್ತವೆ.) ಅವನಿಗೆ ಉದಾತ್ತ ಧ್ಯೇಯಗಳ ಲೋಪವನ್ನು ಅತಿ ವಿಸ್ತಾರವಾಗಿ ವರ್ಣಿಸುವ ಉದ್ದೇಶವೇ ಇಲ್ಲ. ಒಂದೇ ತಲೆಗೆ ಇದ್ದಕ್ಕಿದ್ದಂತೆ ಧ್ಯೇಯ ಬುಡ ಮೇಲಾಗಲಿಲ್ಲವೆಂದು ಸೂಚಿಸಲು ಒಂದೇ ಸರ್ಗದಲ್ಲಿ (18) ಇಪ್ಪತ್ತೊಂದು ಜನರ ಹೆಸರನ್ನು ಮುಗಿಸಿಬಿಡುತ್ತಾನೆ, ಕಾವ್ಯ ಸ್ವಾರಸ್ಯ ಕುಂದಿದರೂ ಸಹ. ಅನಂತರ ಕಡೆಯ ಒಂದು ಸರ್ಗದಲ್ಲಿ ಅವನತಿಯ ಸ್ಪಷ್ಟ ಚಿತ್ರವನ್ನು ಕೊಟ್ಟು ಭಾರತವು ಬಾಳಬೇಕಾದರೆ ಪೂರ್ವದ ಉಜ್ಜ್ವಲಪರಂಪರೆಯ ಪುನರುತ್ಥಾನವೊಂದೇ ಔಷಧವೆಂಬ ಸೂಚನೆಯಿಂದ ಕಾವ್ಯವನ್ನು ನಿಲ್ಲಿಸಿಬಿಡುತ್ತಾನೆ. ಅಗ್ನಿವರ್ಣನ ಕಾಮಚಾಪಲದ ವರ್ಣನೆಯನ್ನೋದಿ ಕಾವ್ಯವನ್ನು ಮುಗಿಸುವಾಗ ರಾಮಾಯಣದ (ಉತ್ತರಕಾಂಡವೂ ಸೇರಿದ) ಕಡೆಯ ಹಾಗೆ ದುಃಖವಾಗುವುದಿಲ್ಲ; ಮಹಾಭಾರತದ ಕೊನೆಯ ಹಾಗೆ ವಿರಕ್ತಿಯೂ ಬರುವುದಿಲ್ಲ. ಅದಕ್ಕೆ ಬದಲು ದಿಲೀಪಾದಿಗಳ ದಿವ್ಯಜೀವನದ

ಕೃತಕೃತ್ಯತೆಯೂ ಧನ್ಯತೆಯೂ ಆ ವೈಷಮ್ಯದ ಮೂಲಕ ಮತ್ತಷ್ಟು ಉಜ್ಜ್ವಲತರವಾಗುತ್ತದೆ. ಐತಿಹಾಸಿಕಯುಗದ ಭಾರತಸಂಸ್ಕೃತಿಯ ಏಕಮೇವ ಪ್ರತಿನಿಧಿ ಕಾಳಿದಾಸ; ಅವನು ಕೇವಲ ಕೇಳೀಲೋಲನಾದ ವಿಲಾಸಿಯಲ್ಲ, ಬರಿಯ ಶೃಂಗಾರಕವಿಯೂ ಅಲ್ಲ. ನಿಜವಾಗಿಯೂ ರಾಷ್ಟ್ರೀಯ ಕವಿ. ಅವನನ್ನು ಈ ಅಂಶದಲ್ಲಿ ಮೀರಿಸುವ ಸಂಸ್ಕೃತ ಕವಿ ಇನ್ನೂ ಭಾರತದಲ್ಲಿ ಹುಟ್ಟಿಲ್ಲ. ಕಾಲಪ್ರವಾಹವುರುಳಿದಂತೆಲ್ಲ ಕಾಳಿದಾಸನ ನಿರ್ಮಲ ಯಶಃಪ್ರಕಾಶವು ವಿಶ್ವದ ದಿಗ್ದಿಗಂತಗಳಲ್ಲಿಯೂ ನೀರಾಜಿತವಾಗಿದೆ, ಅವನ ಕಾವ್ಯ ಸಂದೇಶವು ವಿಶ್ವದ ಭಾಷೆಭಾಷೆಗಳಲ್ಲಿಯೂ ಪ್ರತಿಧ್ವನಿತವಾಗಿ ಪುನರುಜ್ಜೀವಿತವಾಗಿದೆ.

ಕಾಳಿದಾಸನಿಗೆ ಶ್ರೀರಾಮನು ಮಹಾವಿಷ್ಣುವಿನ ಅವತಾರವೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ ಆತನ ಚರಿತ್ರೆ ಪಾವನಚರಿತ್ರೆಯೆಂಬುದರಲ್ಲಿ ಸಂದೇಹವಿಲ್ಲ. ರಾಮಾಯಣದ ಬಾಲಕಾಂಡ ಉತ್ತರಕಾಂಡಗಳಲ್ಲಿ ಬರುವ ಅದ್ಭುತವೃತ್ತಾಂತಗಳನ್ನು ಕವಿ ಭಕ್ತಿಯಿಂದಲೇ ವರ್ಣಿಸಿದ್ದಾನೆ ‘ ರಘುವಂಶಪ್ರದೀಪ’, ‘ ರಘೂದ್ವಹ , ‘ ರಾಘವ ’, ‘ ರಘುನಂದನ ’ ಮುಂತಾದ ವಿಶೇಷಣಗಳಿಗೆಲ್ಲ,ಶ್ರೀ ರಾಮನೇ ವಿಶೇಷ್ಯ. ಹೀಗೆ ಶ್ರೀರಾಮನ ಮಹಾವ್ಯಕ್ತಿತ್ವದ ಕಲ್ಪನೆ ‘ ರಘುವಂಶ ’ದಲ್ಲಿ ಸ್ಪಷ್ಟವಾಗಿದ್ದರೂ ಅದಕ್ಕೆ ರಾಮವಂಶವೆನ್ನದೆ ರಘುವಂಶವೆಂದು ಹೇಳಿದ್ದೇಕೆ, ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಬಗೆಬಗೆಯಾಗಿ ಊಹೆಗಳನ್ನು ವಿಮರ್ಶಕರು ಮುಂದೆಮಾಡಿದ್ದಾರೆ. ರಘುವಿನ ವ್ಯಕ್ತಿತ್ವವೇ ದಿಗ್ವಿಜಯ, ದಾನಶೌಂಡೀರ್ಯ ಮುಂತಾದ ಉದಾತ್ತ ಗುಣಗಳಿಂದ ಉಳಿದೆಲ್ಲವನ್ನೂ ಮೀರಿಸಿದೆಯೆಂದೂ, ರಘು–ದಿಗ್ವಿಜಯ ವರ್ಣನೆಯೇ ಚಂದ್ರಗುಪ್ತ ವಿಕ್ರಮಾದಿತ್ಯನ ದಿಗ್ವಿಜಯದ ಕಾವ್ಯಮಯ ಪ್ರತೀಕವಾದ ಕಾರಣ, ಕವಿ ಅದಕ್ಕೆ ಪ್ರಥಮಪ್ರಾಶಸ್ತ್ಯವೀಯುವುದು ಸಹಜವಾಗಿದೆಯೆಂದೂ ಹೇಳುವುದುಂಟು ಹೀಗೆ ಹೇಳಿದರೆ ಕಾಳಿದಾಸನಿಗೆ ಶ್ರೀರಾಮನ ಪಾತ್ರದಲ್ಲಿರುವ ಭಕ್ತಿಶ್ರದ್ಧೆಗಳಿಗೆ ಅಪಚಾರವಾದಂತಾಗುತ್ತದೆ; ತ್ರಿಲೋಕ ಕಂಟಕರಾದ ರಾವಣಾದಿಗಳನ್ನು ಸಂಹರಿಸಿದ ಶ್ರೀರಾಮನ ಶೌರ್ಯಾತಿಶಯಕ್ಕೆ ಸಲ್ಲದ ಅನ್ಯಾಯಮಾಡಿದಂತಾಗುತ್ತದೆ. ರಘುವಿನ ಧರ್ಮವಿಜಯವನ್ನು ಹೊಗಳುವ ಭರದಲ್ಲಿ ರಾಮನ ಧರ್ಮ ಮೂರ್ತಿ

ಯನ್ನು ಮರೆಯುವುದು ಸಲ್ಲದು ಅಂತಹ ರಾಮನು ಹುಟ್ಟಬೇಕಾದರೆ, ಅವನ ಪೂರ್ವಜರೂ ಹೇಗೆ ಮಹಾಕಾರ್ಯಗಳನ್ನು ಮಾಡಿದ್ದರೆಂದು ಯಥೋಚಿತವಾದ ಹಿನ್ನೆಲೆಯನ್ನು ಕಲ್ಪಿಸುವುದಷ್ಟೇ ಕಾಳಿದಾಸನ ಉದ್ದೇಶ. ರಾಮನಿಗಿಂತ ಹಿಂದಿನವರಲ್ಲಿ ಬಹುಪ್ರಸಿದ್ಧನಾಗಿದ್ದವನೆಂದರೆ ರಘುವೊಬ್ಬನೇ. ಆದ್ದರಿಂದ ವಂಶಕ್ಕೆ ಅವನ ಹೆಸರನ್ನಿತ್ತುದು ಯೋಗ್ಯವಾಗಿದೆಯೆನ್ನಬೇಕು. ರಘುವಿನ ವ್ಯಕ್ತಿತ್ವದ ವಿಸ್ತೃತ ಪರಿಚಯಕ್ಕೆ ಪೀಠಿಕೆಯಾಗಿ ದಿಲೀಪಚರಿತೆಯಿಂದ ಕಾವ್ಯವನ್ನಾರಂಭಿಸಬೇಕಾಯಿತು. ರಘುವಿನ ಜನ್ಮ ನಂದಿನೀಧೇನುವಿನ ವರಪ್ರಸಾದವೆಂದು ತೋರಿಸುವುದು ಕವಿಯ ವಿವಕ್ಷೆ. ದಿಲೀಪ, ಅಜ, ದಶರಥ ಮುಂತಾದ ರಾಮನ ಪೂರ್ವಜರ ವಿಷಯದಲ್ಲಿಯೂ, ರಾಮನ ಪುತ್ರಪೌತ್ರಾದಿಗಳ ವಿಷಯದಲ್ಲಿಯೂ ಕಾಳಿದಾಸನಿಗೆ ಪುರಾಣಪ್ರಸಿದ್ಧವಾದ ವಿಸ್ತೃತ ಕಥಾಭಾಗವಿರದೆ ಇದ್ದುದು ಒಂದು ರೀತಿಯಿಂದ ಅನುಕೂಲವೇ ಆಯಿತು ಕಥೋಚಿತವಾಗಿ ಕಾವ್ಯ ವರ್ಣನೆಗಳನ್ನು ಸ್ವಪ್ರತಿಭೆಯಿಂದ ಕಲ್ಪಿಸಿಕೊಳ್ಳಲು ಅವಕಾಶ ಸಿಕ್ಕಿದಂತಾಯಿತು. ದಿಲೀಪನ ಗೋಪರಿಚರ್ಯೆ, ಇಂದುಮತೀ ಸ್ವಯಂವರ, ಅಜವಿಲಾಪ, ದಶರಥನ ಬೇಟೆ, ಕುಶನ ಜಲಕ್ರೀಡೆ, ಕುಶ-ಅಯೋಧ್ಯಾಪುರದೇವತೆಗಳ ಸಂವಾದ, ಇವುಗಳು ರಘುವಿನ ಉಜ್ಜ್ವಲ ದಿಗ್ವಿಜಯ ಮತ್ತು ರಾಮನ ಅಸಮ ಸಾಹಸಗಳಿಗೆ ಸಮಾನವಾದ ರಸಸ್ಥಾನಗಳು. ಸೀತೆಯ ಪಾತ್ರದಲ್ಲಿಯೂ ಕಾಳಿದಾಸನಿಗಿರುವ ಅಪಾರ ಅನುಕಂಪೆ ಅವನ ಉತ್ತರರಾಮಚರಿತೆಯ ವರ್ಣನೆಯಲ್ಲಿ ವ್ಯಕ್ತವಾಗುತ್ತದೆ. ತಪೋವನಗಳನ್ನೂ ಋಷ್ಯಾಶ್ರಮಗಳನ್ನೂ ಕವಿ ಉತ್ಸಾಹದಿಂದ ವರ್ಣಿಸುವಂತೆ, ನಗರಾರಾಮಗಳ ಶೋಭಾತಿಶಯವನ್ನೂ ವರ್ಣಿಸುವ ಅವಕಾಶಗಳು ಬೇಕಾದಂತೆ ಈ ಕಥಾಭಿತ್ತಿಯಲ್ಲಿ ಒದಗುತ್ತವೆ. ಭಾರತ ವರ್ಷದ ಒಂದೊಂದು ಭಾಗವನ್ನೂ ಎಷ್ಟು ಬಣ್ಣಿಸಿದರೂ ಅವನಿಗೆ ತೃಪ್ತಿಯಿಲ್ಲ. ಒಮ್ಮೆ ರಘುದಿಗ್ವಿಜಯದ ನೆವದಿಂದ, ಇನ್ನೊಮ್ಮೆ ಸ್ವಯಂವರದಲ್ಲಿ ನೆರೆದ ರಾಜರ ನೆವದಿಂದ, ಮತ್ತೊಮ್ಮೆ ರಾಮನು ಸೀತೆಗೆ ವಿಮಾನದಿಂದ ಪ್ರೇಕ್ಷಣೀಯಾಂಶಗಳನ್ನು ತೋರಿಸುವ ನೆವದಿಂದ, ಭಾರತವನ್ನೆಲ್ಲ ಮನೋಹರವಾಗಿ ಬಣ್ಣಿಸುತ್ತಾನೆ. ರಘುವಂಶ ಕಾವ್ಯದಲ್ಲೆಲ್ಲ ಕೇವಲ ಕವಿಪ್ರತಿಭಾ ನವೀನಸೃಷ್ಟಿಗಳಾದ ಈ ವರ್ಣನಾಭಾಗ

ಗಳಿವೆಯೇ ಹೊರತು ಪುರಾಣೇತಿಹಾಸಗಳ ಮಾದರಿಯ ಕಥಾನಿರೂಪಣೆ ಅತ್ಯಲ್ಪ. ರಾಮನ ಚರಿತ್ರೆಯಲ್ಲಿ ಮಾತ್ರ ಕಥಾಪ್ರಸಂಗಗಳು ಬರುತ್ತವೆ, ಆದರೆ ಅವುಗಳ ನಿರೂಪಣೆಯಲ್ಲಿ ಒಂದು ಅಪೂರ್ವವಾದ ಓಟವಿದೆ; ಭಾಷೆಯಲ್ಲಿ ಬೆಡಗೂ ಇದೆ. ಹೀಗೆ ಲಾಕ್ಷಣಿಕರು ಹೇಳುವಂತೆ ರಸಸೂತ್ರಬದ್ಧವಾದರೆ ಅಷ್ಟಾದಶವರ್ಣನೆಗಳು ಹೇಗೆ ಅಮರಕಾವ್ಯವನ್ನು ಪ್ರೇರಿಸಬಹುದೆಂಬುದನ್ನು ಕಾಳಿದಾಸನು ಸಾಧಿಸಿ ತೋರಿಸಿದ್ದಾನೆ. ಹೆಚ್ಚು ಕಡಿಮೆ ಇಲ್ಲಿ ಹದಿನೆಂಟು ವರ್ಣನೆಗಳೂ ಬರುತ್ತವೆಯಾದರೂ, ಇವನ್ನು ಕೇವಲ ಶಾಸ್ತ್ರಸ್ಥಿತಿಸಂಪಾದನೆಗೆಂದು ಬರೆದಂತೆ ತೋರುವುದಿಲ್ಲ, ರಸದೃಷ್ಟಿಯೂ ಔಚಿತ್ಯವೂ ಎಲ್ಲೂ ಮಾಸುವುದಿಲ್ಲ. ಇಷ್ಟು ರಾಜರ ವರ್ಣನೆ ಬಂದರೂ, ಒಬ್ಬೊಬ್ಬರ ಜೀವನದಲ್ಲೂ ಪ್ರತಿಪಾದ್ಯವಾದ ಮುಖ್ಯಾಂಶ ಭಿನ್ನರಸಪೋಷಕವಾದುದರಿಂದ ಎಲ್ಲಿಯೂ ಪುನರುಕ್ತಿದೋಷ ಭಾಸವಾಗುವುದಿಲ್ಲ. ದಿಲೀಪ ಪುತ್ರಪ್ರಾಪ್ತಿಗಾಗಿ ಅನನ್ಯಭಾವದಿಂದ ಗೋಸೇವೆಯಲ್ಲಿ ಮಗ್ನನಾಗುವ ಧರ್ಮಾತ್ಮ; ರಘು ಭಂಡಾರವನ್ನೆಲ್ಲ ಸತ್ಪಾತ್ರದಲ್ಲಿ ದಾನಮಾಡಿ ಮೃತ್ಪಾತ್ರಶೇಷನಾದ ದಾನಶೂರ; ದಿಗ್ದಿಗಂತಗಳನ್ನೂ ಜಯಿಸಿ ವಿಶ್ವಜಿದ್ಯಾಗ ಮಾಡಿದ ಯುದ್ಧವೀರ; ಕಡೆಗೆ ಕಾಡಿನಲ್ಲಿ ಯೋಗನಿರತನಾಗುವ ಮಹಾತ್ಮ. ಅಜ ಸ್ವಯಂವರದಲ್ಲಿ ಇಂದುಮತಿಯನ್ನು ಪಡೆಯುವಂತಹ ಸುಂದರಾಂಗ; ಉಳಿದೆಲ್ಲರನ್ನೂ ಒಬ್ಬನೇ ಎದುರಿಸಿ ಯುದ್ಧಮಾಡಬಲ್ಲ ಏಕಾಂಗವೀರ, ಪ್ರೇಯಸಿಯ ಅಕಾಲಮರಣವನ್ನು ತಾಳಲಾರದೆ ಗಳಗಳನೆ ಅಳುವ ಕೋಮಲಹೃದಯಿ; ಪವಿತ್ರಪ್ರೇಮಕ್ಕಾಗಿ ಕಡೆಗೆ ಪ್ರಾಣಾರ್ಪಣವನ್ನೂ ಮಾಡುವ ಪ್ರಿಯ. ದಶರಥನಿಗೆ ಬೇಟೆಯಲ್ಲಿ ಆಸಕ್ತಿ, ಅದರ ಅವಿವೇಕದಿಂದಲೇ ಅವನಿಗೆ ಪುತ್ರಶೋಕದಿಂದ ಮರಣವೆಂಬ ಶಾಪವೂ ಬರುವಂತಾಯಿತು. ರಾಮನು ಸಾಕ್ಷಾತ್ ಮಹಾವಿಷ್ಣು, ದುಷ್ಟನಿಗ್ರಹಕ್ಕಾಗಿ ಜನಿಸಿದ ಅವತಾರಪುರುಷ. ಕುಶನು ಜಲಕ್ರೀಡಾಲೋಲ, ಉಂಗುರ ಕೊಳದಲ್ಲಿ ಕಳೆದರೆ ಗರುಡಾಸ್ತ್ರದಿಂದ ಕುಮುದನಾಗನನ್ನೇ ಅಂಜಿಸಿ ಕುಮುದ್ವತಿಯನ್ನು ಪಡೆಯುವ ಶೂರ, ಅಯೋಧ್ಯಾಧಿದೇವತೆಯ ಅಳಲನ್ನು ಗಮನಿಸಿ ಮತ್ತೆ ಆಕೆಯ ಸಮಾಧಾನಮಾಡಿದ ರಾಜ. ಅಗ್ನಿವರ್ಣನು ಸ್ತ್ರೀಲೋಲನಾಗಿ ಕ್ಷಯರೋಗವನ್ನು ತಂದುಕೊಂಡ ಅಯೋಗ್ಯ; ರಘುವಂಶದ ಕಳಂಕ. ಪ್ರಜೆಗಳು ದರ್ಶನಕ್ಕಾಗಿ ಬಂದರೆ ರಾಣಿ

ವಾಸದ ಕಿಟಕಿಯಿಂದ ಹೊರಕ್ಕೆ ಕಾಲನ್ನು ಚಾಚುತ್ತಿದ್ದ ಕುಲಾಧಮ. ಹೀಗೆ ಒಬ್ಬೊಬ್ಬರ ಪಾತ್ರದಲ್ಲೂ ಬೇರೆ ಬೇರೆಯಾದ ಅಂಶವನ್ನು ಬಹಳ ರಮ್ಯವಾದ ರೀತಿಯಿಂದ ಕವಿ ಪ್ರದರ್ಶಿಸಿ ಕೃತಕೃತ್ಯನಾಗಿದ್ದಾನೆ.

ರಘುವಂಶೋತ್ತಮರ ಧ್ಯೇಯಗಳೆಲ್ಲವೂ ಒಂದೇ, ಪ್ರಸಂಗೋಚಿತವಾಗಿ ಸತ್ವಪರೀಕ್ಷೆಯ ಕಾಲವೊದಗಿದಾಗ ಅವು ಪ್ರಕಟವಾಗುವುವೆಂಬುದನ್ನು ಈ ಮೊದಲೇ ಹೇಳಲಾಯಿತು. ಕಾಳಿದಾಸನೇ ಕಾವ್ಯಾರಂಭದಲ್ಲಿ ರಘೂತ್ತಮರ ಮೇಲ್ಮೆಯನ್ನು ಹೀಗೆ ಸಂಗ್ರಹಿಸಿದ್ದಾನೆ—“ ಅವರ ವಂಶವೆಂದರೆ ಸಾಮಾನ್ಯವಲ್ಲ, ಸಾಕ್ಷಾತ್ ಸೂರ್ಯನಿಂದಲೇ ಆರಂಭವಾದ ವಂಶ. ಅವರೆಲ್ಲರೂ ಜನ್ಮದಿಂದಲೇ ಪರಿಶುದ್ಧರು, ಫಲಸಿದ್ಧಿಯವರೆಗೂ ಕಾರ್ಯಶೀಲರು. ಸಮುದ್ರದವರೆಗೂ ಅವರ ರಾಜ್ಯದ ವಿಸ್ತಾರ, ಸ್ವರ್ಗದವರೆಗೂ ಅವರ ರಥಗಳ ಸಂಚಾರ. ವಿಧಿವತ್ತಾಗಿ ಅಗ್ನಿಯನ್ನು ಪೂಜಿಸಿದವರು, ಇಚ್ಛೆಯಂತೆ ಅತಿಥಿಗಳನ್ನು ಅರ್ಚಿಸಿದವರು. ತಪ್ಪನ್ನು ತಕ್ಕ ರೀತಿಯಿಂದ ಶಿಕ್ಷಿಸಿದವರು; ಕಾಲೋಚಿತವಾದ ಎಚ್ಚರಿಕೆ ತಪ್ಪದವರು. ತ್ಯಾಗಕ್ಕಾಗಿಯೇ ಧನವನ್ನು ಗಳಿಸಿದವರು, ಸತ್ಯಕ್ಕಾಗಿಯೇ ಮಿತವಾಗಿ ನುಡಿದವರು. ಯಶಸ್ಸಿಗಾಗಿಯೇ ದಿಗ್ವಿಜಯ ಹೊರಟವರು; ಸಂತಾನಕ್ಕಾಗಿಯೇ ಗೃಹಸ್ಥರಾದವರು. ಬಾಲ್ಯದಲ್ಲಿ ವಿದ್ಯಾಭ್ಯಾಸನಿರತರು, ಯೌವನದಲ್ಲಿ ವಿಷಯೈಷಿಗಳು, ಮುಪ್ಪಿನಲ್ಲಿ ಮುನಿವೃತ್ತಿಗಳು; ಕಡೆಗಾಲದಲ್ಲಿ ಯೋಗದಿಂದ ದೇಹಬಿಟ್ಟವರು;” ಪರಸ್ತ್ರೀವಿಮುಖರು, ತಪೋಬಲಪ್ರೇಮಿಗಳು, ಪ್ರಜಾರಂಜನದೀಕ್ಷರು, ಯಶೋಧನರು ಮುಂತಾದ ಅಂಶಗಳನ್ನೂ ಪ್ರತ್ಯೇಕವಾಗಿ ಕಾವ್ಯದ ಬೇರೆ ಬೇರೆ ಕಡೆಗಳಲ್ಲಿ ಕವಿಯೇ ತೋರಿಸಿದ್ದಾನೆ. ಈ ಧ್ಯೇಯಗಳು ಭಾರತ ಸಂಸ್ಕೃತಿಯ ನವನೀತ; ಇದನ್ನು ಹಾಡಿ ನಲಿದ ಕವಿ ಧನ್ಯ. ಓದಿ ತಿಳಿಯುವ ಸಹೃದಯರೂ ಧನ್ಯರು.

ಕಾಳಿದಾಸನ ವರ್ಣನಾಕೌಶಲವು ರಘುವಂಶದಲ್ಲಿ ಕಾಣುವುದು ಮೇಘದೂತದಂತೆ ಬಿಡಿಶ್ಲೋಕಗಳಲ್ಲಲ್ಲ, ಒಂದೊಂದು ರಸಘಟ್ಟಗಳಲ್ಲಿ. ಉಭಯಕವಿಚಕ್ರವರ್ತಿಯೆಂಬ ಬಿರುದನ್ನು ಸಮರ್ಥವಾಗಿ ಹೊತ್ತಿರುವ ಕನ್ನಡ ಮಹಾಕವಿ ಪೊನ್ನನು ತನ್ನ ಶಾಂತಿಪುರಾಣದಲ್ಲಿ ರಘುವಂಶದಿಂದ ಸ್ವಯಂವರ ವರ್ಣನೆಯ ಘಟ್ಟವನ್ನು ಕನ್ನಡಿಸಿಕೊಂಡು ಅಷ್ಟರಿಂದಲೇ

'ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗಂ ನಾಲ್ವಡಿ ರಚನೆಯೊಳ್'
ಎಂದು ಹೇಳಿಕೊಳ್ಳುವುದಕ್ಕೆ ಹಿಂಜರಿಯುವುದಿಲ್ಲ. ಇಲ್ಲಿ ಆ ಭಾವಾನುವಾದ
ಗಳಲ್ಲಿ ಕೆಲವನ್ನು ಮೂಲದೊಡನೆ ಉದಾಹರಿಸಿದೆ —

1. ತಾಸು ಶ್ರಿಯಾ ರಾಜಪರಂಪರಾಸು
ಪ್ರಭಾವಿಶೇಷೋದಯದುರ್ನಿರೀಕ್ಷ್ಯಃ ।
ಸಹಸ್ರಧಾತ್ಮಾ ವ್ಯರುಚದ್ವಿಭಕ್ತಃ
ಪಯೋಮುಚಾಂ ಪಂಕ್ತಿಷು ವಿದ್ಯುತೇವ ॥

ಆ ರಾಜಪರಂಪರೆಯ ಶ
ರೀರಂಗಳೊಳುರ್ವರಾಸ್ಯತಿಲಕನ ತೇಜಂ ।
ರಾರಾಜಿಸಿ ಪೋಲ್ತುದು ನವ
ವಾರಿದನಿಕುರುಂಬದೊಳಗೆ ಪೊಳೆವೆಳೆಮಿಂಚಂ ॥

2. ನೇತ್ರವ್ರಜಾಃ ಪೌರಜನಸ್ಯ ತಸ್ಮಿನ್
ವಿಹಾಯ ಸರ್ವಾನ್ ನೃಪತೀನ್ ನಿಪೇತುಃ ।
ಮದೋತ್ಕಟೇ ರೇಚಿತಪುಷ್ಪವೃಕ್ಷಾ
ಗಂಧದ್ವಿಪೇ ವನ್ಯ ಇವ ದ್ವಿರೇಫಾಃ ॥

ನೆರವಿಯ ಕಣ್ಗಳ್ ನೃಪರನಿ
ಬರುಮಂ ಬಿಸುಟುರ್ವರಾಸ್ಯತಿಲಕನೊಳಿರೆ ನೀ ।
ರರುಹಂಗಳನೊಲ್ಲದೆ ಚಂ-
ಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್ ॥

3. ತಾಂ ಪ್ರತ್ಯಭಿವ್ಯಕ್ತಮನೋರಥಾನಾಂ
ಮಹೀಪತೀನಾಂ ಪ್ರಣಯಾಗ್ರದೂತ್ಯಃ ।
ಪ್ರವಾಲಶೋಭಾ ಇವ ಪಾದಪಾನಾಂ
ಶೃಂಗಾರಚೇಷ್ಟಾ ವಿವಿಧಾ ಬಭೂವುಃ ॥

ಆ ರಾಜಕುಮಾರರ ಶೃಂ
ಗಾರಾಭಿನಯಂಗಳೊಡನೆ ನೆಗಳ್ದುವು ಪಲವುಂ ।

ಮಾರುತಹತಮಹಿರುಹ ಶೋ
ಭಾರುಚಿರಂಗಳ್ ಸ್ವಯಂವರಾಸ್ಥಾಯಿಕೆಯೊಳ್ ||

4. ಕಾಮಂ ನೃಪಾಃ ಸಂತು ಸಹಸ್ರಶೋಽನ್ಯೇ
ರಾಜನ್ವತೀಮಾಹುರನೇನ ಭೂಮಿಮ್ |
ನಕ್ಷತ್ರತಾರಾಗ್ರಹಸಂಕುಲಾಪಿ
ಜ್ಯೋತಿಷ್ಮತೀ ಚಂದ್ರಮಸೈವ ರಾತ್ರಿಃ ||

ಕ್ಷಿತಿನಾಥರ್ ಪಲರುಳ್ಳೊಡಂ ಬಗೆದು ಕೇಳ್
ನೀನಕ್ಕ ರಾಜಾನ್ವಯ
ಸ್ಥಿತಿ ವಿಶ್ವಾವನಿಗೀತನಿಂದೆ ದೊರೆಯಾಯ್ತೆಂತೆನ್ನ
ಸಜ್ಯೋತಿರು |
ನ್ನತಿ ಋಕ್ಷಗ್ರಹತಾರಕಾನಿಕರದಿಂದೇನಾದುದೇ
ರೋಹಿಣೀ
ಪತಿಯಿಂದಾದುದು ರಾತ್ರಿಗಂಬುಜದಳ
ವ್ಯಾಲೋಲಲೀಲೇಕ್ಷಣೇ ||

5. ತಾಂ ಸೈವ ವೇತ್ರಗ್ರಹಣೇ ನಿಯುಕ್ತಾ
ರಾಜಾಂತರಂ ರಾಜಸುತಾಂ ನಿನಾಯ |
ಸಮೀರಣೋತ್ಥೇವ ತರಂಗಲೇಖಾ
ಪದ್ಮಾಂತರಂ ಮಾನಸರಾಜಹಂಸೀಮ್ ||

ತಡೆಯದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿ
ಪಾಂತರಕ್ಕದಂ
ನಡೆಯಿಸಿದಳ್ ಸಮೀರಣಸಮುತ್ಥವಿಲೋಲ
ತರಂಗಲೇಖೆ ಚೆ|
ಲ್ವಿಡಿದ ಸರೋರುಹಾಂತರಕೆ ಮಾನಿತಮಾನಸರಾಜ
ಹಂಸಿಯಂ
ನಡೆಯಿಸುವಂತೆ ಸುಂದರನತಾಂಸೆಯನಲ್ಪ
ಕಪೋಲಮಾಂಸೆಯಂ ||

6. ನಿಸರ್ಗಭಿನ್ನಾಸ್ಪದಮೇಕಸಂಸ್ಥ-
ಮಸ್ಮಿನ್ ದ್ವಯಂ ಶ್ರೀಶ್ಚ ಸರಸ್ವತೀ ಚ।
ಕಾಂತ್ಯಾ ಗಿರಾ ಸೂನೃತಯಾ ಚ ಯೋಗ್ಯಾ
ತ್ವಮೇವ ಕಲ್ಯಾಣಿ ತಯೋಸ್ತೃತೀಯಾ॥

ಈತಂ ನಿಸರ್ಗಭಿನ್ನ ನಿ
ಕೇತನಮಂ ಶ್ರೀ ಸರಸ್ವತೀದ್ವಯಮಂ ತಂ।
ದೋತೊಂದೆ ಮೆಯ್ಯೊಳಿರಿಸಿದ
ನೇತಡವವರೊಳ್ ತೃತೀಯೆಯಾಗಿರು ನಿರುತಂ॥

7. ಅನೇನ ಯೂನಾ ಸಹ ಪಾರ್ಥಿವೇನ
ರಂಭೋರು ಕಚ್ಚಿನ್ಮನಸೋ ರುಚಿಸ್ತೇ।
ಸಿಪ್ರಾತರಂಗಾನಿಲಕಂಪಿತಾಸು
ವಿಹರ್ತುಮುದ್ಯಾನಪರಂಪರಾಸು॥

ಈ ನವಯೌವನನೊಡನೆ ಮ
ನೋನಯನಶರೀರಸುಖಮನನುಭವಿಸುಗೆ ಶಿ।
ಪ್ರಾನದಿಯೆರಡುಂ ತಡಿಯು
ದ್ಯಾನಪರಂಪರೆಯೊಳತನುತನುಲತಿಕೇ॥

8. ಸಂಚಾರಿಣೀ ದೀಪಶಿಖೇವ ರಾತ್ರೌ
ಯಂ ಯಂ ವ್ಯತೀಯಾಯ ಪತಿಂವರಾ ಸಾ।
ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ
ವಿವರ್ಣಭಾವಂ ಸ ಸ ಭೂಮಿಪಾಲಃ॥

ಆ ವಧುವೊಲ್ಲದೆ ಬರೆ ಸಕ
ಳಾವನಿಪರ್ ತಮ್ಮ ರಾಗಮೋಗಡಿಸಿರೆ ಕೆ।
ಯ್ದೀವಿಗೆ ಬರೆ ಪೆಱಗಣ ಭವ
ನಾವಳಿ ಮುಸುಳ್ದಂತೆ ಮುಸುಳ್ದರೆರಡೋಳಿಯೊಳಂ॥

9. ಸಾ ಯೂನಿ ತಸ್ಮಿನ್ನಭಿಲಾಷಬಂಧಂ
ಶಶಾಕ ಶಾಲೀನತಯಾ ನ ವಕ್ತುಂ ।
ರೋಮಾಂಚಲಕ್ಷ್ಯೇಣ ಸ ಗಾತ್ರಯಷ್ಟಿಂ
ಭಿತ್ವಾ ನಿರಾಕ್ರಾಮದರಾಲಕೇಶ್ಯಾಃ ॥

ಕಣ್ಬುಟಿತನದಿಂ ಪೇೞಲ್
ನಾಣ್ಚಿರೆ ತನ್ನೊಳಗನಬಲೆ ಪೊಱಪೊಣ್ಮದುದಾ ।
ಕಣ್ಚಿಲ್ಲದ ಬಳಸುವ ಕಡೆ
ಗಣ್ಬುಪಲತೆಯೊಡನಲಂಪು ಪೊಱಪೊಣ್ಮುವಿನಂ ॥

ಎರಡನ್ನೂ[9] ಜತೆಜತೆಗೆ ಓದಿದರೆ ಕಾಳಿದಾಸನ ನಿರುಪಮ ಶೈಲಿಯು ಕೆಲವೆಡೆಗಳಲ್ಲಿ ಅನುವಾದಕ್ಕೆ ಅಳವಡುವುದೇ ಅಸಂಭವವೆಂಬುದರ ಅರಿವಾಗುತ್ತದೆ. ಮಹಾಕಾವ್ಯದ ಗಾಂಭೀರ್ಯ ಕೆಡದಂತೆ ಇದಕ್ಕಿಂತ ಉತ್ತಮವಾಗಿ ಭಾಷಾಂತರ ಮಾಡುವುದೂ ಸಾಧ್ಯವಿಲ್ಲವೆನ್ನಬಹುದು.

**ಕಾಳಿದಾಸನ ಶೈಲಿ** —ಪ್ರಕೃತಿವರ್ಣನೆಯ ಪ್ರಸಂಗದಲ್ಲಿ ಪ್ರಕೃತಿ ಮಧುರವಾಗಿಯೂ, ಸ್ವಭಾವೋಕ್ತಿ ಸುಂದರವಾಗಿಯೂ, ಪ್ರಣಯವರ್ಣನಾವಸರದಲ್ಲಿ ಸರಸಸುಕುಮಾರವಾಗಿಯೂ ಪ್ರಸನ್ನರಮಣೀಯವಾಗಿಯೂ, ಸ್ತುತಿಪ್ರಕರಣದಲ್ಲಿ ಮತ್ತು ಕಥಾನಿರೂಪಣೆಯ ಕಾಲದಲ್ಲಿ ಔಚಿತ್ಯಮಯವಾದ ಅಲಂಕಾರಪರಂಪರಾ ಪರಿಶೋಭಿತವಾಗಿಯೂ ವೀರರೌದ್ರಾದಿ ಸನ್ನಿವೇಶಗಳಲ್ಲಿ ಓಜಸ್ವಿಯಾಗಿಯೂ ಇರುವ ವಿವಿಧವಿಲಾಸವೈಚಿತ್ರ್ಯಯುತ ಶೈಲಿ ಕಾಳಿದಾಸನ ಶೈಲಿ. ಅದರಲ್ಲಿ ಗಾಂಭೀರ್ಯಕ್ಕೆಂದೂ ಲೋಪವಿಲ್ಲ; ಗ್ರಾಮ್ಯತೆಯ ಲೇಪಕ್ಕೂ ಅವಕಾಶವಿಲ್ಲ. ವಾಲ್ಮೀಕಿ, ಅಶ್ವಘೋಷಾದಿಗಳು ಆಗಲೇ ಬಳಸಿ ಹದಮಾಡಿದ್ದ ಉಪಮೆ, ರೂಪಕ, ಉತ್ಪ್ರೇಕ್ಷೆ, ಯಮಕ, ಅನುಪ್ರಾಸ, ಅತಿಶಯೋಕ್ತಿ, ಅಲಂಕಾರಗಳಿಗೆ ಕಾಳಿದಾಸನಲ್ಲಿ ಹೆಚ್ಚಿನ ಸಾರ್ಥಕ್ಯ ಬರುತ್ತದೆ. ಅವರು ಹೆಚ್ಚಾಗಿ ಬಳಸದಿದ್ದ ಅರ್ಥಾಂತರನ್ಯಾಸ, ಸಮಾಸೋಕ್ತಿ, ವಿರೋಧಾಭಾಸ, ಶ್ಲೇಷ ಮುಂತಾದುವುಗಳೂ ಇಲ್ಲಿ ಅಪೂರ್ವ ಅರ್ಥಪುಷ್ಟಿಗೆ ಸಾಧನಗಳಾಗುತ್ತವೆ. ಆದರೆ ಸಾಮಾನ್ಯವಾಗಿ

---

9 ರಘುವಂಶ, ಸರ್ಗ vi ಮತ್ತು ಶಾಂತಿಪುರಾಣ, ಪಂಚಮಾಶ್ವಾಸ.

ಶಬ್ದಾಡಂಬರಕ್ಕೆ ಕವಿ ಮಾರುಹೋಗುವುದಿಲ್ಲ. ಕಾಳಿದಾಸನ ರೀತಿಯನ್ನು ವೈದರ್ಭೀ ರೀತಿಗೆ ಸರ್ವೋತ್ತಮ ಉದಾಹರಣೆಯೆಂದು ತಿಳಿಯಬೇಕು.

**ಶ್ಲೇಷಃ, ಪ್ರಸಾದಃ, ಸಮತಾ, ಮಾಧುರ್ಯಂ, ಸುಕುಮಾರತಾ ।**
**ಅರ್ಥವ್ಯಕ್ತಿಃ, ಉದಾರತ್ವಂ, ಓಜಃ, ಕಾಂತಿ, ಸಮಾಧಯಃ ॥**[10]

ಎಂದು ವೈಧರ್ಭಮಾರ್ಗಕ್ಕೆ ದಂಡಿ ಪ್ರಾಣಗಳೆನ್ನುವ ಹತ್ತು ಕಾವ್ಯಗುಣಗಳೂ ಪರಿಸ್ಫುಟವಾಗಿ ಕಾಳಿದಾಸನ ಶೈಲಿಯಲ್ಲಿ ಪ್ರಕಾಶಿಸುತ್ತವೆ ಅದರಿಂದಲೇ ಪ್ರಾಚೀನರು 'ವೈದರ್ಭೀರೀತಿಸಂದರ್ಭೇ ಕಾಳಿದಾಸಃ ಪ್ರಗಲ್ಭತೇ' ಎಂದಿರುವುದು. ಅವನ ಶೈಲಿಗೂ, ಮುಂದೆ ಗೌಡೀಯ ಶೈಲಿಯನ್ನು ಆದರಿಸಿದ ಬಾಣಮಯೂರಾದಿಗಳಿಗೂ, ಪ್ರಸ್ಫುಟವಾದ ಭೇದವನ್ನು ಕಾಣಬಹುದು. ಶೃಂಗಾರ ಕರುಣಾದಿ ರಸ ಪರಿಪುಷ್ಟಿಗೆ ಕಾಳಿದಾಸನ ರೀತಿಯೇ ಉಪಯುಕ್ತತರವೆನ್ನುವುದು ನಿರ್ವಿವಾದ, ವೀರರೌದ್ರಾದಿಗಳನ್ನೂ ಅದು ಸಮರ್ಥವಾಗಿಯೇ ಪ್ರಕಟಿಸಬಲ್ಲುದು, ಆದರೆ ಶಬ್ದನಿಷ್ಠವಾದ ಕಾಂತಿ ಕಡಿಮೆಯಾಗಿರುತ್ತದೆ ಕಾಳಿದಾಸನ ಮಧುರ ಲಲಿತ ಮನೋಧರ್ಮಕ್ಕೆ ಬಾಲಾತಪವೂ ಸಂಧ್ಯಾರಾಗವೂ ಪ್ರಿಯವಾಗುವಂತೆ ಕಣ್ಣು ಚುಚ್ಚುವ ಮಧ್ಯಾಹ್ನದ ಸೂರ್ಯರಶ್ಮಿ ಪ್ರಿಯವಾಗುವುದಿಲ್ಲ. ಕಾಳಿದಾಸನ ಶಬ್ದಸಂಪತ್ತೂ ಅರ್ಥನಾವೀನ್ಯವೂ ಸವ್ಯಸಾಚಿಯ ತೂಣೀರದಂತೆ ಅಕ್ಷಯವೇ. ಆತನ ಇಷ್ಟದೇವತೆಗಳಾದ ಪಾರ್ವತೀಪರಮೇಶ್ವರರಂತೆ ಅವನ ಶಬ್ದಾರ್ಥಸಾಹಿತ್ಯವೂ ಸರ್ವದಾ ಸುಂದರ. ಆತನ ಪಾರ್ವತಿಯ ಸೌಂದರ್ಯದಂತೆ ಆತನ ಕಾವ್ಯಕಲೆ.

**ಸರ್ವೋಪಮಾದ್ರವ್ಯಸಮುಚ್ಚಯೇನ ಯಥಾಪ್ರದೇಶಂ ವಿನಿವೇಶಿತೇನ ।**
**ಸಾ ನಿರ್ಮಿತಾ ವಿಶ್ವಸೃಜಾ ಪ್ರಯತ್ನಾದೇಕಸ್ಥಸೌಂದರ್ಯದಿದೃಕ್ಷಯೇವ ॥**[11]

ಎಂಬ ವರ್ಣನೆಗೆ ಅರ್ಹವಾಗಿದೆ. ಬ್ರಹ್ಮನೇ ಎಲ್ಲ ಸೌಂದರ್ಯನಿಮಿತ್ತಗಳನ್ನೂ ಶ್ರಮಪಟ್ಟು ಒಟ್ಟುಗೂಡಿಸಿ ಒಂದೆಡೆ ಸೌಂದರ್ಯವನ್ನೆಲ್ಲ ಕಾಣ

---

10. ನೋಡಿ, ಡಾ॥ ಕೆ. ಕೃಷ್ಣಮೂರ್ತಿ, ಕನ್ನಡಕಾವ್ಯಾಲಂಕಾರ, ಪು. ೧೪೯.
11 ಕುಮಾರಸಂಭವ, I. ೪೯.

ಬಯಸಿದನೋ ಎಂಬ ಉತ್ಪ್ರೇಕ್ಷೆ ಕಾಳಿದಾಸನ ಕಾವ್ಯಕಲೆಗೆ ಬಹಳ ಚೆನ್ನಾಗಿ ಒಪ್ಪುತ್ತದೆ. ರಘುವಂಶದಿಂದ ಕೆಲವು ಉದಾಹರಣೆಗಳನ್ನಾಗಲೇ ಕೊಟ್ಟಾಗಿರುವುದರಿಂದ ಆತನ ಉಳಿದ ಕಾವ್ಯಗಳಿಂದ ಕೆಲವು ಉದಾಹರಣೆಗಳನ್ನಿಲ್ಲಿ ಬರೆದಿದೆ ಒಂದೊಂದೂ ಕಾಳಿದಾಸನ ಕಲ್ಪನಾವಿಲಾಸದ ವಿಕಸಿತ ಕುಸುಮಗಳು, ಸುಂದರ ಶಬ್ದ ಚಿತ್ರಗಳು —

1. ಇದು ಶರದೃತುವಿನ ವರ್ಣನೆ:—

ಕಾಶಾಂಶುಕಾ ವಿಕಚಪದ್ಮಮನೋಜ್ಞವಕ್ತ್ರಾ
ಸೋನ್ಮಾದಹಂಸರವನೂಪುರನಾದರಮ್ಯಾ ।
ಆಪಕ್ವಶಾಲಿರುಚಿರಾನತಗಾತ್ರಯಷ್ಟಿಃ
ಪ್ರಾಪ್ತಾ ಶರನ್ನವವಧೂರಿವ ರೂಪರಮ್ಯಾ ॥[12]

ಕಾಶಾಂಬರಸಂಶೋಭಿತೆ ಚಂದ್ರೋದಯುಲಸಿತೆ
ಹೇಮಾಂಬುಜರುಚಿರಾನನೆ ಇಂದೀವರವದನೆ
ಸಾರಸಕುಲಕಲಕಲರವದಾಲಾಪದ ಬಿನದೆ
ಪರಿಣತವಹ ಶಾಲಿಯು ವನದಾನತ ತನು ಶರದೆ
ನವವಧುವಿನ ಶೃಂಗಾರದೆ ತೋರಿಹಳಿದೊ ಮುದದೆ[13]

ಆಕಂಪಯನ್ ಕುಸುಮಿತಾಃ ಸಹಕಾರಶಾಖಾಃ
ವಿಸ್ತಾರಯನ್ ಪರಭೃತಸ್ಯ ವಚಾಂಸಿ ದಿಕ್ಷು ।
ವಾಯುರ್ವಿವಾತಿ ಹೃದಯಾನಿ ಹರನ್ನರಾಣಾಂ
ನೀಹಾರಪಾತವಿಗಮಾತ್ ಸುಭಗೋ ವಸಂತೇ ॥[14]

ಕುಸುಮಿಸಿರುವ ಮಾಮರಂಗಳೆಲೆಯ ಕೊನೆಯನಲುಗಿಸಿ
ದಿಕ್ಕುದಿಕ್ಕುಗಳಲಿ ಕೋಗಿಲೆಗಳ ದನಿಯ ಪಸರಿಸಿ ।
ಸುರಿವ ಮಂಜುಹನಿಯ ನಿಲಿಸಿ ಜನರ ಮನವನರಳಿಸಿ
ಮರುತನಿಂತು ಸುಳಿವನಿಂದು ಚೈತ್ರ ಸಿರಿಯ ಮೆರೆಯಿಸಿ ॥[15]

---

12. ಋತುಸಂಹಾರ III. ೧

13. ಭಾವದ ಭಾಷಾಂತರ, ಶ್ರೀ ಎಸ್. ವಿ. ಪರಮೇಶ್ವರಭಟ್ಟರದು.

14. ಋತುಸಂಹಾರ, VI. ೨೨.

15. ಭಾಷಾಂತರ, ಶ್ರೀ ಎಸ್. ವಿ. ಪರಮೇಶ್ವರಭಟ್ಟರದು.

3. ಇದು ವಿರಹಿಣಿಯಾದ ಯಕ್ಷಪತ್ನಿಯ ಚಿತ್ರ· –

ಆಲೋಕೇ ತೇ ನಿಪತತಿ ಪುರಾ ಸಾ ಬಲಿವ್ಯಾಕುಲಾ ವಾ
ಮತ್ಸಾದೃಶ್ಯಂ ವಿರಹತನು ವಾ ಭಾವಗಮ್ಯಂ ಲಿಖನ್ತೀ ।
ಪೃಚ್ಛನ್ತೀ ವಾ ಮಧುರವಚನಾಂ ಸಾರಿಕಾಂ ಪಂಜರಸ್ಥಾಂ
ಕಚ್ಚಿದ್ಭರ್ತುಃ ಸ್ಮರಸಿ ರಸಿಕೇ ತ್ವಂ ಹಿ ತಸ್ಯ ಪ್ರಿಯೇತಿ ॥[16]

ಅವಳು ಬೀಳುವಳೊ ನಿನ್ನ ಕಣ್ಗೆ ಆಚಾರದಲ್ಲಿ ತೊಡಗಿ
ಸೊರಗಿ ಕಡ್ಡಿಯಾದವಳು ನನ್ನ ಚಿತ್ರವನೆ ಬರೆವ ಹುಡುಗಿ
ಇಲ್ಲ ಕೇಳುತಿರಬಹುದು ಸಾಕುಸಾರಿಕೆಯ " ಹೇಳೆ ಜೇನೇ
ಅವರ ಮುದ್ದು ನೀ, ನಿಮ್ಮ ಒಡೆಯರನು ಒಮ್ಮೆ
ನೆನೆವೆಯೇನೇ.[17]

4. ಯಕ್ಷನ ವಿರಹೋದ್ವೇಗಗಳ ಹೃದಯವಿದ್ರಾವಕ ಚಿತ್ರ :—

ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಃ ಶಿಲಾಯಾಂ
ಆತ್ಮಾನಂ ತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಂ ।
ಅಸ್ರೈಸ್ತಾವನ್ಮುಹುರುಪಚಿತೈರ್ದೃಷ್ಟಿರಾಲುಪ್ಯತೇ ಮೇ
ಕ್ರೂರಸ್ತಸ್ಮಿನ್ನಪಿ ನ ಸಹತೇ ಸಂಗಮಂ ನೌ ಕೃತಾಂತಃ ॥[18]

ಅರೆಗಳಲ್ಲಿ ಕೆಂಗಾವಿಯಿಂದ ಹುಸಿಮುನಿಸಿನವಳ ಬರೆದು
ನಿನ್ನ ಮೆಲ್ಲಡಿಗೆ ಕೆಡಹಿಕೊಳಲು ಬರುತಿರಲು ಮುಂದುವರಿದು।
ಕಣ್ಣು ತುಂಬಿ ಕಂಗೆಡಿಸಿ ಕಂಬನಿಯು ಹಳ್ಳ ಹರಿಯಿತಲ್ಲಃ
ಚಿತ್ರದಲ್ಲಿ ಕೂಡುವುದು ಕೂಡ ಆ ಇದಿಗೆ ಸೇರಲಿಲ್ಲಃ.[19]

5. ಮೇಘವು ಚರ್ಮಣ್ವತೀ ನದಿಯ ಮೇಲೆ ಬಂದಾಗ ಕವಿಯು ಕಲ್ಪನೆಯಲ್ಲಿ ತೋರುವ ಸುಂದರ ಚಿತ್ರವಿದು :—

---

16 ಮೇಘದೂತ, ೯೦.

17. ಭಾಷಾಂತರ, ಶ್ರೀ ದ. ರಾ. ಬೇಂದ್ರೆಯವರದು.

18. ಮೇಘದೂತ, ೧೧೨.

19. ಭಾಷಾಂತರ, ಶ್ರೀ ದ. ರಾ. ಬೇಂದ್ರೆಯವರದು.

ತ್ವಯ್ಯಾದಾತುಂ ಜಲಮವನತೇ ಶಾಙ್ರ್ಗಿಣೋ ವರ್ಣಚೌರೇ
ತಸ್ಯಾಃ ಸಿಂಧೋಃ ಪೃಥುಮಪಿ ತನುಂ ದೂರಭಾವಾತ್ ಪ್ರವಾಹಮ್ ।
ಪ್ರೇಕ್ಷಿಷ್ಯನ್ತೇ ಗಗನಗತಯೋ ನೂನಮಾವರ್ಜ್ಯ ದೃಷ್ಟೀ
ರೇಕಂ ಮುಕ್ತಾಗುಣಮಿವ ಭುವಃ ಸ್ಥೂಲಮಧ್ಯೇಂದ್ರನೀಲಮ್ ॥ [20]

ಕೃಷ್ಣವರ್ಣವನೆ ಕಳುಹು ಮಾಡಿದಾ ಮೋಡ ನೀನು ತಗ್ಗಿ
ನದಿಯ ನೀರು ಕುಡಿವಾಗ ಕಾಣುವಿಯೊ, ಬಾನಿನಲ್ಲಿ ಹಿಗ್ಗಿ
ನೋಡಲಿರುವ ಆ ದೇವಜಾತಿಗಳ ಕಣ್ಗೆ ಜಾಲವಾಗಿ
ಭೂಮಿ ತೊಟ್ಟ ಅಣಿ ಮುತ್ತು ಹಾರದಲಿ ಇಂದ್ರನೀಲವಾಗಿ.[21]

6. ನಂದಿಯ ಸನ್ನೆಯಿಂದ ಸ್ತಬ್ಧವಾದ ತಪೋವನದ ವರ್ಣನೆ.—

ನಿಷ್ಕಂಪವೃಕ್ಷಂ ನಿಭೃತದ್ವಿರೇಫಂ
ಮೂಕಾಂಡಜಂ ಶಾಂತಮೃಗಪ್ರಚಾರಮ್ ।
ತಚ್ಛಾಸನಾತ್ ಕಾನನಮೇವ ಸರ್ವಂ
ಚಿತ್ರಾರ್ಪಿತಾರಂಭಮಿವಾವತಸ್ಥೇ ॥ [22]

ವೃಕ್ಷಕಂಪನ ನಿಂತು ಭ್ರಮರಸಂಭ್ರಮ ನಿಂತು
ಅಂಡಜಧ್ವನಿ ನಿಂತು ಮೃಗಚಲನ ನಿಂತು ।
ಆತನಾಣೆ ಸಂದು ಸರ್ವಕಾನನಮಂದು
ಚಿತ್ರಾರ್ಪಿತಾರಂಭವಾಗಿರ್ದುದಂದು. [23]

7. ಬ್ರಹ್ಮಚಾರಿವೇಷದ ಶಿವನು ಪಾರ್ವತಿಯನ್ನು ನೋಡಿ ನಗುವ ಚಿತ್ರ .—

ದ್ವಯಂ ಗತಂ ಸಂಪ್ರತಿ ಶೋಚನೀಯತಾಂ
ಸಮಾಗಮಪ್ರಾರ್ಥನಯಾ ಕಪಾಲಿನಃ ।

---

20. ಮೇಘದೂತ, ೪೮.

21 ಭಾಷಾಂತರ, ಶ್ರೀ ದ. ರಾ. ಬೇಂದ್ರೆಯವರದು.

22. ಕುಮಾರಸಂಭವ, III. ೪೨.

23. ಭಾಷಾಂತರ, ಶ್ರೀ ಎಸ್. ವಿ. ಪರಮೇಶ್ವರಭಟ್ಟರದು.

ಕಲಾ ಚ ಸಾ ಕಾಂತಿಮತೀ ಕಲಾವತಃ
ತ್ವಮಸ್ಯ ಲೋಕಸ್ಯ ಚ ನೇತ್ರ ಕೌಮುದೀ ॥ [24]

ಕೂಡಲ್ಕೆಳಸಿ ಕಪಾಲಿಯ
ನೀಡುಂ ತಾಮೆರಡುಮಿಂದು ಶೋಚ್ಯಂ ಜಾತಂ ।
ಗಾಡಿಯ ಚಂದ್ರನ ಕಳೆಯುಂ
ನೋಡಲ್ ಧಾರಿಣಿಯ ನೇತ್ರಕೌಮುದಿ ನೀನುಂ॥ [25]

8. ವಿವಾಹಾಲಂಕೃತೆಯಾದ ಪಾರ್ವತಿಗೆ ಸಖಿಯ ಪರಿಹಾಸವಾಕ್ಯ –

ಪತ್ಯುಃ ಶಿರಶ್ಚಂದ್ರಕಲಾಮನೇನ
ಸ್ಪೃಶೇತಿ ಸಖ್ಯಾ ಪರಿಹಾಸಪೂರ್ವಮ್ ।
ಸಾ ರಂಜಯಿತ್ವಾ ಚರಣೌ ಕೃತಾಶೀ-
ರ್ಮಾಲ್ಯೇನ ತಾಂ ನಿರ್ವಚನಂ ಜಘಾನ ॥ [26]

ಇಂದಿದರಿಂದಿನಿಯನ ಶಿರ
ದಿಂದುವನೊದೆಯೆಂದು ಹರಸಿ ನಗುತುಂ ಸಖಿ ತಾ ।
ನಂದಂಗೊಳಿಸಲ್ ಕಾಲ್ಗಳ
ನಂದವಳಂ ಮಾತನುಳಿದು ಸುಮದಿಂ ಪೊಯ್ದಳ್॥ [27]

9. ಹಿಮವಂತನಿಗೆ ಪಾರ್ವತಿಯ ಜನನದಿಂದ ಬಂದ ಶ್ರೇಯಸ್ಸಿನ ಚಿತ್ರ –

ಪ್ರಭಾಮಹತ್ಯಾ ಶಿಖಯೇವ ದೀಪಃ
ತ್ರಿಮಾರ್ಗಯೇವ ತ್ರಿದಿವಸ್ಯ ಮಾರ್ಗಃ ।
ಸಂಸ್ಕಾರವತ್ಯೇವ ಗಿರಾ ಮನೀಷೀ
ತಯಾ ಸ ಪೂತಶ್ಚ ವಿಭೂಷಿತಶ್ಚ ॥ [28]

---

24. ಕುಮಾರಸಂಭವ, V. ೭೧
25. ಭಾಷಾಂತರ, ಇದೇ ಲೇಖಕನದು.
26 ಕುಮಾರಸಂಭವ, VII. ೧೯.
27. ಭಾಷಾಂತರ ಇದೇ ಲೇಖಕನದು. ಕನ್ನಡ ಧ್ವನ್ಯಾಲೋಕ, ಪು. ೧೫೦.
28 ಕುಮಾರಸಂಭವ, I. ೨೮.

**ಸೊಡರವೊಲನೂನಕಾಂತಿಯು**
**ಕುಡಿಯಿಂದಂ ನಾಕದಂತೆ ಮಂದಾಕಿನಿಯಂ।**
**ನುಡಿಜಾಣಿಂ ವಿಬುಧನವೋಲ್**
**ಪಡೆದಂ ಪೂತತೆಯುನಂತೆ ಶೋಭೆಯುನವಳಿಂ ॥** [29]

ಶುಷ್ಕಪಾಂಡಿತ್ಯಪ್ರಿಯರೂ ದೋಷೈಕದೃಷ್ಟಿಗಳೂ ಆದ ಕೆಲವು ಲಾಕ್ಷಣಿಕರು 'ಕಾಮಯಾನ'[30] ('ಕಾಮಯಮಾನ' ಎಂಬುದಕ್ಕೆ ಪ್ರತಿಯಾಗಿ) ಮುಂತಾದ ಒಂದೊಂದು ವ್ಯಾಕರಣದೋಷಗಳನ್ನೂ 'ತಂ ಪಾತಯಾಂ ಪ್ರಥಮಮಾಸ'[31] ಮುಂತಾದ ಅಪಾಣಿನೀಯ ಪ್ರಯೋಗಗಳನ್ನೂ ಕೈಮಾಡಿ ತೋರಿಸಿದ್ದಾರೆ. ಆದರೆ ಕಾಳಿದಾಸನೇ ಹೇಳಿರುವಂತೆ ಒಂದು ದೋಷವು ಅನೇಕಗುಣಗಳ ರಾಶಿಯಲ್ಲಿ ಮುಚ್ಚಿಹೋಗುತ್ತದೆ. (ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತೀಂದೋ. ಕಿರಣೇಷ್ವಿವಾಂಕಃ). ಆನಂದವರ್ಧನನು ನುಡಿದಿರುವಂತೆ, ಸೂಕ್ತಿ ಸಹಸ್ರದ್ಯೋತಿತಾತ್ಮರಾದ ಮಹಾಕವಿಗಳಲ್ಲಿ ದೋಷೋದ್ಘಾಟನ ಮಾಡುವುದು ತನ್ನ ದೋಷೋದ್ಘೋಷಣವೇ ಆಗುತ್ತದೆ. ಕೃಷ್ಣಕವಿಯ[32] ಮಾತಿನಲ್ಲಿ–

**ಅಸ್ಪೃಷ್ಟದೋಷಾ ನಲಿನೀವ ದೃಷ್ಟಾ**
**ಹಾರಾವಲೀವ ಗ್ರಥಿತಾ ಗುಣೌಘೈಃ।**
**ಪ್ರಿಯಾಂಕಪಾಲೀವ ವಿಮರ್ದಹೃದ್ಯಾ**
**ನ ಕಾಳಿದಾಸಾದಪರಸ್ಯ ವಾಣೀ ॥**

ಕಮಲಿನಿಯಂತೆ ಅಸ್ಪೃಷ್ಟದೋಷೆ (ದೋಷ=ರಾತ್ರಿಯೆಂದೂ ಅರ್ಥ), ಮುಕ್ತಾಹಾರದಂತೆ ಗುಣೌಘ (ಗುಣ=ದಾರವೆಂದೂ ಅರ್ಥ) ಗ್ರಥಿತೆ, ಪ್ರಿಯೆಯ ಅಂಕದಂತೆ ವಿಮರ್ದಹೃದ್ಯೆ, ಕಾಳಿದಾಸನ ವಾಣಿಯೊಂದೇ ಸರಿ. ಕಾಳಿದಾಸನ ಕಾವ್ಯತ್ರಯವನ್ನೂ ಒಂದೊಂದು ಪದವನ್ನೂ ಬಿಡದೆ ವ್ಯಾಖ್ಯಾನ ಮಾಡಿದ ಮಹಾ ಮೇಧಾವಿಯಾದ ಮಲ್ಲಿನಾಥನು ಕಾಳಿದಾಸನ

---

29. ಭಾಷಾಂತರ ಇದೇ ಲೇಖಕನದು. ಕನ್ನಡ ಧ್ವನ್ಯಾಲೋಕ, ಪು. ೧೪೬.
30. ರಘುವಂಶ, XIX. ೫೦.
31. ರಘುವಂಶ, IX. ೬೧.
32. ಭರತಚರಿತೆ, I. ೩.

ಶೈಲಿಯ ಬಗ್ಗೆ ಹೇಳುವ ನುಡಿಮುತ್ತಿನಿಂದ ಈ ಅಧ್ಯಾಯವನ್ನು ಮುಗಿಸಬಹುದು –

**ಕಾಳಿದಾಸಗಿರಾಂ ಸಾರಂ ಕಾಲಿದಾಸಃ ಸರಸ್ವತೀ ।**
**ಚತುರ್ಮುಖೋಽಥವಾ ಸಾಕ್ಷಾದ್ ವಿದುರ್ನಾನ್ಯೇ ತು ಮಾದೃಶಾಃ ॥**[33]

ಕಾಳಿದಾಸನ ವಾಣಿಯ ಸಾರವನ್ನು ಕಾಳಿದಾಸ, ಸರಸ್ವತಿ ಅಥವಾ ಸಾಕ್ಷಾತ್ ಚತುರ್ಮುಖನು ತಿಳಿಯಬಹುದೇ ಹೊರತು ಮಿಕ್ಕ ನನ್ನಂತಹವರೆಂದೂ ಪೂರ್ಣವಾಗಿ ತಿಳಿಯಲಾರರು.' ಈ ಮಾತು ಅತಿವಿನಯವಲ್ಲ; ಬಹುಮಟ್ಟಿಗೆ ನಿಜ.[34]

---

33. ಸಂಜೀವಿನೀವ್ಯಾಖ್ಯಾನ, I. ೬.

34 ಕಾಳಿದಾಸನ ವಿಷಯವಾಗಿ ಓದಬಹುದಾದ ಗ್ರಂಥಗಳು :—

೧ ಶ್ರೀ ವಿ ವಿ. ಮಿರಾಶಿ · ಕಾಳಿದಾಸ (ಮರಾಠಿ) ನಾಗಪುರ, 1934
೨ ಶ್ರೀ ಅರೊಬಿಂದೊ . ಕಾಳಿದಾಸ, ಕಲ್ಕತ್ತಾ, 1929
೩ Hillebrandt. Kalidasa (German) 1921
೪ S. S. Bhawe : Kalidasa, Baroda, 1942
೫. ವಿಕ್ರಮಸ್ಮೃತಿಗ್ರಂಥ (ಹಿಂದೀ).
೬. ಎಂ. ಲಕ್ಷ್ಮೀನರಸಿಂಹಯ್ಯ : ಕಾಳಿದಾಸ.

# ಅಧ್ಯಾಯ ೬

## ವಿದ್ವತ್ಕವಿಗಳು : ಭಾರವಿ, ಭಟ್ಟಿ, ಮಾಘ, ಶ್ರೀಹರ್ಷ - ಇತ್ಯಾದಿ

**ಅವಯಃ ಕೇವಲ ಕವಯಃ**
**ಕೇವಲ ಧೀರಾಸ್ತು ಕೇವಲಂ ಕೀರಾಃ ।**
**ಕವಯಃ ಪಂಡಿತಕವಯಃ**
**ತಾನವಮಂತಾ ತು ಕೇವಲಂ ಗವಯಃ " ॥**

**ಕುರಿಗಳ್ ಕೇವಲ ಕವಿಗಳ್**
**ಬರಿದೋದಿದರಂತೆ ಬರಿದೆ ಗಿಳಿಗಳ್ ದಿಟದಿಂ ।**
**ಉರುಪಂಡಿತಕವಿಗಳ್ ಕವಿ**
**ವರರವರಂ ಜರಿವರೆಲ್ಲ ದನಗಳ್ ಧರೆಯೊಳ್ ॥**

ಕಾಳಿದಾಸನ ಅನಂತರ ಸಂಸ್ಕೃತ ಮಹಾಕಾವ್ಯದ ದಿಕ್ಕೇ ಬದಲಾಯಿಸಿತು. ರಾಷ್ಟ್ರಜೀವನದ ಮುಖ್ಯಮಾರ್ಗಗಳನ್ನು ರಮಣೀಯವಾಗಿ ಅಭಿವ್ಯಕ್ತಿಗೊಳಿಸುವ ಮುಖ್ಯಸಾಧನವೇ ಸಾಹಿತ್ಯವೆಂಬ ಮೂಲತತ್ತ್ವ ಮರೆಯಾಗಿ ಅದರ ಸ್ಥಾನದಲ್ಲಿ ಲೇಕನ ಬಹುಶ್ರುತತ್ವವನ್ನು ಪ್ರದರ್ಶಿಸುವ, ದುಷ್ಕರ ಶ್ಲೇಷಯಮಕಾದಿ ಪ್ರಾವೀಣ್ಯದಿಂದ ವಿದ್ವಾಂಸರನ್ನು ಬೆಕ್ಕಸ ಬೆರಗಾಗಿಸುವ ಮತ್ತು ರಾಜಾನುಗ್ರಹವನ್ನು ಸಂಪಾದಿಸುವ ಒಂದು ಸಲಕರಣೆಯೆಂಬ ಹೊಸ ಅಭಿರುಚಿ ತಲೆದೋರಿತು. ಹೀಗೆ ಅಭಿರುಚಿ ಮಾರ್ಪಡಲು ಮುಖ್ಯಕಾರಣ ದೇಶದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿ. ಸಾಹಿತ್ಯ ರಾಜ್ಯದಲ್ಲಿ ರಾಜರ ಮತ್ತು ಪಂಡಿತರ ನಿರಂಕುಶಾಧಿಕಾರ ಎಲ್ಲಿಯವರೆಗೆ ಇರಲಿಲ್ಲವೋ ಅಲ್ಲಿಯವರೆಗೂ ರಸಜ್ಞ ಜನಗಳೇ ಕಾವ್ಯವಿಮರ್ಶಕರಾಗಿರುತ್ತಿದ್ದರು ; ತಮ್ಮ ಆನಂದದ ಪ್ರಮಾಣದ ಮೇಲಿಂದ ಕವಿಗಳ ಯೋಗ್ಯತೆಯನ್ನು ನಿರ್ಣಯಿಸುತ್ತಿದ್ದರು. ರಸಿಕಗೋಷ್ಠಿಗಳಲ್ಲಿ ಮೆಚ್ಚಿಗೆ ಪಡೆಯದ ರಚನೆಗಳು ಹುಟ್ಟಿದಂತೆಯೇ ಪ್ರಚಾರವಿಲ್ಲದೆ ಸಾಯುತ್ತಿದ್ದುವು.

ರಾಮಾಯಣಮಹಾಭಾರತಗಳಿಗೆ ಧರ್ಮದೃಷ್ಟಿಯಿಂದಲೂ ಪ್ರಚಾರ ಸಿಕ್ಕಿದರೆ ಲೌಕಿಕಕಾವ್ಯಗಳು ಕೇವಲ ತಮ್ಮ ಸ್ವಾರಸ್ಯಬಲದಿಂದ ಜನರಲ್ಲಿ ಪ್ರಚಾರ ವನ್ನು ಪಡೆಯಬೇಕಾಗಿತ್ತು. ಇಂತಹ ಯೋಗ ಬಂದುದು ಕಾಳಿದಾಸನ ಕಾವ್ಯಗಳಿಗೆ ಮಾತ್ರ.* ಜನಾಶ್ರಯದ ಅನಿಶ್ಚಿತತೆಯನ್ನು ತಪ್ಪಿಸಿದಲ್ಲದೆ ಕಾವ್ಯ ಮುಂತಾದ ಕಲೆಗಳು ಪೂರ್ಣವಿಕಾಸವನ್ನು ಪಡೆಯಲಾರವೆಂಬ ಸದ್ಭಾವನೆಯಿಂದಲೇ ದೇಶದಲ್ಲಿದ್ದ ಸಣ್ಣ ಪುಟ್ಟ ಅರಸರೆಲ್ಲರೂ ತಮ್ಮ ಆಸ್ಥಾನದಲ್ಲಿ ಕವಿಗಳಿಗೆ ಪ್ರೋತ್ಸಾಹಕೊಡಬೇಕೆಂಬ ನಿಯಮವನ್ನು ಭಾರತೀಯ ಸಮಾಜ ರಚಿಸಿಕೊಂಡಿತು. ಆದರೆ ಅರಮನೆಯ ಅಧಿಕಾರಿಗಳ ಪಕ್ಷಪಾತಾದಿಗಳು, ಕವಿಗಳ ಸ್ಪರ್ಧೆ ಮತ್ತು ದ್ವೇಷಾಸೂಯೆಗಳು, ಕವಿಗಳ ಯೋಗ್ಯತಾನಿರ್ಣಯಕ್ಕೆಂದು ಆಸ್ಥಾನಗಳಲ್ಲಿ ಕುಳಿತುಕೊಳ್ಳುತ್ತಿದ್ದ ಶಾಸ್ತ್ರಪಾರಂಗತರ ಕೃತ್ರಿಮ ಆದರ್ಶಗಳು, ಇವೆಲ್ಲವುಗಳ ಪರಿಣಾಮವಾಗಿ ಕಾವ್ಯ ನಿರ್ಮಾತೃಗಳ ಸಂಖ್ಯೆ ಹೆಚ್ಚಿದಂತೆ ಸರ್ವಾಂಗಸುಂದರವಾದ ಮಹಾಕಾವ್ಯಗಳ ಸಂಖ್ಯೆ ಹೆಚ್ಚಲಿಲ್ಲ ಕೇವಲ ರಾಜಪ್ರಶಸ್ತಿಪರವಾದ ಕೃತಕ ಶ್ಲೋಕಗಳು, ವಸ್ತುಸೌಂದರ್ಯವಿಲ್ಲದ ಆದರೆ ವಕ್ರೋಕ್ತಿಮಯವಾದ ಸಾಂಪ್ರದಾಯಿಕ ರಚನೆಗಳು ಹೆಚ್ಚು ಹೆಚ್ಚಾಗಿ ಹುಟ್ಟಿಕೊಂಡುವು. ಮಹಾಕಾವ್ಯದ ಪ್ರಾಣವಾದ ಪ್ರತಿಭೆಯ ಬೆಲೆ ತಗ್ಗಿ, ಶಾಸ್ತ್ರಪಾಂಡಿತ್ಯದಿಂದ ಬರುವ ವ್ಯುತ್ಪತ್ತಿಗೂ, ಅಷ್ಟಾವಧಾನಾದಿ ಬುದ್ಧಿಬಲಕ್ಕೂ ಅನುಚಿತವಾದ ಪ್ರಶಸ್ತಿಯುಂಟಾಯಿತು. ಈ ಕಾಲದಲ್ಲಿ "ಅಷ್ಟಾಧ್ಯಾಯೀ ಜಗನ್ಮಾತಾಽಮರಕೋಶೋ ಜಗತ್ಪಿತಾ" ಎಂದು ಪರಿಗಣಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಪಾಂಡಿತ್ಯದಿಗ್ಧ, ಅಲ್ಲ ದಗ್ಧ, ರಾದ ದುರ್ವಿದಗ್ಧರ ಕೈಯಲ್ಲಿ ಕವಿಕಲ್ಪನೆಯ ಸ್ವಚ್ಛಂದವಿಹಾರಕ್ಕೆ ಆಸ್ಪದವಿಲ್ಲದಂತಾಗಿ ಲಕ್ಷಣಶಾಸ್ತ್ರದ ನಿಯಮಾನುರೋಧವು ಗಂಟಲ ಗಾಣವಾಯಿತು. ಒಂದೊಂದು ಅಲಂಕಾರದ ಚಮತ್ಕಾರದಿಂದಲೇ ಆಸ್ಥಾನದ ಪಂಡಿತ ಸಭೆಯನ್ನು ಬೆರಗುಗೊಳಿಸುವಂತಹ ಚಾಟುಪದ್ಯಗಳ ರಚನೆಯಲ್ಲಿ ಕವಿಗಳು ಸ್ಪರ್ಧಿಸುತ್ತಿದ್ದರು. ಜೀವನಕ್ಕೂ ಕಾವ್ಯಕ್ಕೂ ಯಾವ ಸಂಬಂಧವೂ ಇಲ್ಲವೆನ್ನು

---

* ಕಾಳಿದಾಸನಂತೆ ಕೀರ್ತಿಭಾಜನರಾದ ಭರ್ತೃಮೇಂಠಾದಿಗಳ ಕೃತಿಗಳು ಈಗ ಉಪಲಬ್ಧವಿಲ್ಲ ಹೋಲಿಸಿ. 'ಇಹ ಕಾಲಿದಾಸಮೇಂಠಾವತ್ರಾಮರರೂಪಸೂರಭಾರವಯಃ। ಹರಿಚಂದ್ರ ಚಂದ್ರಗುಪ್ತೌ ಪರೀಕ್ಷಿತಾವಿಹ ವಿಶಾಲಾಯಾಮ್॥" ರಾಜಶೇಖರನ ಕಾವ್ಯಮೀಮಾಂಸೆ, ಅಧ್ಯಾಯ X. ಪು. 55.

ವಂತಾಗಿ ಕಾವ್ಯವು ಒಂದು ಸಣ್ಣ ಗುಂಪಿನವರ, ಶುಷ್ಕಸಂಪ್ರದಾಯ ಪ್ರೇಮಿಗಳ, ಸ್ವತ್ತಾಯಿತು. ಆದರೆ ಈ ಸಂಪ್ರದಾಯಗಳನ್ನೆಲ್ಲ ಪಾಲಿಸಿಯೂ, ಪ್ರತಿಭೆಯ ಬಲದಿಂದ ಹೆಚ್ಚಿನ ಕಾವ್ಯಸಿದ್ಧಿಯನ್ನು ಸಾಧಿಸಿದ ಕೆಲವರು ಇದ್ದಾರೆ. ಇವರಲ್ಲಿ ಭಾರವಿ, ಮಾಘ, ಶ್ರೀಹರ್ಷರು ಮುಖ್ಯರು. ಕಾಳಿದಾಸನ ಎರಡು ಮಹಾಕಾವ್ಯಗಳ ಜತೆಗೆ ಈ ಮೂವರ ಒಂದೊಂದು ಕಾವ್ಯವೂ ಸೇರಿ ಸಂಸ್ಕೃತದಲ್ಲಿ ಸುಪ್ರಸಿದ್ಧವಾದ **ಪಂಚಮಹಾಕಾವ್ಯ**ಗಳೆನಿಸಿವೆ. ಮುಂದೆ ಎಷ್ಟೋ ಕವಿಗಳು ಎಷ್ಟೋ ಬುದ್ಧಿಸಾಧನೆ ಮಾಡಿದ್ದರೂ ಎಷ್ಟೆಷ್ಟೋ ರಾಜಮರ್ಯಾದೆಗಳನ್ನು ಗಳಿಸಿದ್ದರೂ, ಅವಕ್ಕೆ ಜನಪ್ರಚಾರ ಸಿಕ್ಕಲಿಲ್ಲ, ಕಾಲಾಂತರದ ಪಂಡಿತರ ಪ್ರಶಸ್ತಿಯೂ ದೊರೆಯಲಿಲ್ಲ. ಸಂಸ್ಕೃತದಲ್ಲಿ ಭಾಷಾವ್ಯುತ್ಪತ್ತಿಯುಂಟಾಗಲು ಈ ಮೂರು ಮಹಾಕಾವ್ಯಗಳೂ ಪರಮ ಪ್ರಯೋಜಕಗಳೆಂದು ಪಂಡಿತರು ಅವಕ್ಕೆ ಕಾಳಿದಾಸನಿಗಿಂತ ಮೇಲಿನ ಸ್ಥಾನ ಕೊಡುತ್ತಾರೆ. ಆ ಕಾರಣವನ್ನು ಅಲ್ಲಗಳೆಯುವ ಇಂದಿನ ಅಭಿರುಚಿಯಾದರೂ ಅಲ್ಲಲ್ಲಿ ಬರುವ ಅವರ ಉಜ್ಜ್ವಲ ಪ್ರತಿಭಾಕಿರಣಗಳನ್ನು ಮೆಚ್ಚದಿರುವುದು ಸಾಧ್ಯವಿಲ್ಲ. ಕಾಳಿದಾಸನ ಎತ್ತರಕ್ಕೆ ಅವರು ಏರದಿದ್ದರೂ, ಕಾವ್ಯಕ್ಷೇತ್ರದಲ್ಲಿ ಹೊಸ ಪ್ರಯೋಗ ಮಾಡಿದ ಕೀರ್ತಿಯನ್ನು ಅವರಿಗೆ ಸಲ್ಲಿಸಲೇಬೇಕು. ಸಂಗೀತದಲ್ಲಿ ಸಪ್ತಸ್ವರಗಳ ಭಿನ್ನ ಸಂಯೋಗಗಳನ್ನೆಲ್ಲ ಪ್ರಯೋಗಮಾಡಿ ಶಾಸ್ತ್ರರಚನೆ ಮಾಡಿದಂತೆ, ನಾಟ್ಯದ ಒಂದೊಂದು ಅಭಿನಯವನ್ನೂ ಮುದ್ರೆಯನ್ನೂ ಪರಿಶೀಲಿಸಿ ನಾಟ್ಯಶಾಸ್ತ್ರ ಬರೆದಂತೆ, ಮೂರ್ತಿಶಿಲ್ಪ, ಚಿತ್ರ ಮುಂತಾದ ಉಳಿದ ಲಲಿತಕಲೆಗಳಲ್ಲಿಯೂ ಸರ್ವಾಂಶಸಂಗ್ರಾಹಕವಾಗಿ ಶಾಸ್ತ್ರರಚನೆ ಮಾಡಿದಂತೆ, ಭಾರತೀಯರ ಧೀಶಕ್ತಿಯು ಕಾವ್ಯದ ವಿಷಯ ದಲ್ಲಿಯೂ ಅದ್ವಿತೀಯವಾದ ಸೂಕ್ಷ್ಮವಿಮರ್ಶೆ ಮಾಡಿ ಶಾಸ್ತ್ರರಚನೆ ಮಾಡಿರುವುದೆಂದು ಒಪ್ಪಿದರೆ ಆ ಅಲಂಕಾರಶಾಸ್ತ್ರಸಂಪ್ರದಾಯವನ್ನು ಅನುಸರಿಸಿಬಿಟ್ಟ ಮಾತ್ರಕ್ಕೆ ಕಾವ್ಯವು ಕೃತಕವಾಗಲೇಬೇಕೆಂದು ಭಾವಿಸುವ ಪ್ರಸಂಗ ಬರುವುದಿಲ್ಲ, ಪ್ರತಿಭಾಹೀನನಿಗೂ ದರಿದ್ರನಿಗೂ ಅನುಕರಣೆ ಸಾಧ್ಯವಾಗಬಹುದು ; ಆದರೆ ಪ್ರತಿಭಾವಂತನಿಗೆ ಮಾತ್ರ ಅದರ ನಿಜವಾದ ಮರ್ಮ ಅರಿವಾದೀತು. ಉಪಮೆಯನ್ನು ಉತ್ತಮ ಅಲಂಕಾರವೆಂದು ಶಾಸ್ತ್ರ ಹೇಳಿದರೆ ಎಲ್ಲರೂ ಕಾಳಿದಾಸನಂತಹ ಉಪಮೆಗಳನ್ನು ಕಲ್ಪಿಸಿಬಿಡುವುದ

ಕ್ಕಾಗುವುದಿಲ್ಲ. ನಾವು ಹಿಂದೆಯೇ ನೋಡಿದಂತೆ ಕಾಳಿದಾಸನೂ ಕೂಡ ಸಂಪ್ರದಾಯದ ಅನುವರ್ತಿಯೇ ಹೌದು, ವಿರೋಧಿಯಲ್ಲ. ಈ ಪೂರ್ವ ಪರಂಪರಾಪ್ರಾಪ್ತವಾದ ಕಾವ್ಯಸಂಪ್ರದಾಯಕ್ಕೆ ಶ್ಲೇಷಯಮಕಾದಿಗಳ, ಖಡ್ಗ ಪದ್ಮಾದಿಚಿತ್ರಬಂಧಗಳ, ದ್ವ್ಯಕ್ಷರೀ, ತ್ರ್ಯಕ್ಷರೀ ಮುಂತಾದ ಶಬ್ದಸಾಧನೆಗಳ, ಬಾಹ್ಯಚಮತ್ಕಾರವನ್ನು ಜೋಡಿಸಿದ ಮತ್ತು ವ್ಯಾಕರಣ, ನಿಘಂಟುಗಳ ವ್ಯುತ್ಪತ್ತಿಪ್ರದತ್ವವನ್ನು ಕೂಡಿಸಿದ ಕೀರ್ತಿ ಕಾಳಿದಾಸನಿಂದ ಮೇಲಿನ ಮಹಾಕವಿಗಳದು. "ಕಲೆ ಕಲೆಗಾಗಿ"ಯೆಂಬ ತತ್ವದಲ್ಲಿ ಶ್ರದ್ಧೆಯುಳ್ಳವರು, ಜೀವನದ ತಾಪತ್ರಯಗಳೊಂದೂ ಇಲ್ಲದೆ ನಿರಂತರ ವಿರಾಮದ ಪುಣ್ಯವುಳ್ಳ ಕಾವ್ಯಕಲಾಪ್ರೇಮಿಗಳು ಅಂದಿನಂತೆ ಇಂದೂ ವಿದ್ವತ್ಕವಿಗಳನ್ನು ಮೆಚ್ಚ ಬಹುದು, ಮೆಚ್ಚುತ್ತಾರೆ. ಆದರೆ ಅವರ ಸಂಖ್ಯೆ ಮಾತ್ರ ಇಂದಿನ ಪರಿವರ್ತನ ಯುಗದಲ್ಲಿ ಕೈಬೆರಳುಗಳಿಂದ ಲೆಕ್ಕಮಾಡುವಷ್ಟು ಸಣ್ಣನಾಗುತ್ತಿದೆ. ಸರಸ್ವತಿಯ ಭಂಡಾರವನ್ನು ಬರಿದುಮಾಡಿರುವ ಮಹಾಕವಿಗಳನ್ನು ಕಂಡು ವ್ಯಾಕರಣಕೋಶಾದಿಗಳ ವ್ಯಾಸಂಗದಲ್ಲಿ ಆಯುಷ್ಯದ ಬಹುಭಾಗವನ್ನು ಕಳೆದ ವಿಮರ್ಶಕರಿಗೆ ಅಪಾರವಾದ ಆನಂದವಾದರೆ ಆಶ್ಚರ್ಯವಿಲ್ಲ. ಆದರೆ ವೃತ್ತಪತ್ರಿಕೆಗಳನ್ನೋದುವುದಕ್ಕೂ ವಿರಾಮವಿಲ್ಲದವರಿಗೆ ಆ ಕಾವ್ಯಗಳು ಚಿತ್ರಶಾಲೆಯ ವಿಚಿತ್ರವಸ್ತುಗಳೆನಿಸುವುದು ಅನಿವಾರ್ಯ.

ಈ ವಿದ್ವತ್ಕವಿಕುಂಜರರ ಪರಿಚಯಕ್ಕೆ ಪೂರ್ವದಲ್ಲಿ ಹಿಂದಿನ ರಾಜಾಸ್ಥಾನಗಳಲ್ಲಿ ಕವಿ, ಗಮಕಿ, ವಾದಿ, ವಾಗ್ಮಿಗಳಿಗೆ ನಡೆಯುತ್ತಿದ್ದ ಸ್ಪರ್ಧೆ-ಪ್ರತಿಸ್ಪರ್ಧೆಗಳ ಒಂದು ಸಣ್ಣ ಉದಾಹರಣೆಯನ್ನು ನೋಡಿ — ಗುರ್ಜರರಾಜನಾದ ವೀರಧವಲನ (೧೨ನೆಯ ಶತಮಾನ) ಆಸ್ಥಾನ, ಹರಿಹರನೆಂಬ ಕವಿಗೂ ಮದನನೆಂಬ ಕವಿಗೂ ಸ್ಪರ್ಧೆ. ಮದನ ಹೇಳುತ್ತಾನೆ ಪದ್ಯಾರ್ಧದಿಂದ:—

**'ಹರಿಹರ, ಪರಿಹರ ಗರ್ವಂ**
**ಕವಿರಾಜ ಗಜಾಂಕುಶೋऽಸ್ಮ್ಯಹಂ ಮದನಃ।'**

'ಹರಿಹರ, ನಿನ್ನ ಗರ್ವ ಸಾಕು; ಇಗೋ ಕವಿರಾಜನೆಂಬ ಆನೆಗೆ ಅಂಕುಶನೆನಿಸುವ ಮದನ ಬಂದಿದ್ದೇನೆ.'

ಹರಿಹರನ ಉತ್ತರ—ಪದ್ಯದ ಉತ್ತರಾರ್ಧ. —

**'ಮದನ, ವಿಮುದ್ರಯ ವದನಂ**
**ಹರಿಹರಚರಿತಂ ಸ್ಮರಾತೀತಮ್ ||[1]'**

'ಮದನ, ಬಾಯಿ ಮುಚ್ಚು, ಹರಿಹರನು ಹಿಂದೆ ಮದನನಿಗೆ ಮಾಡಿದ್ದನ್ನು ನೆನಿಸಿಕೊ (ಅಥವಾ ಹರಿಹರನ ಅಳವು ಮದನನಿಗೆ ಮೀರಿದ್ದು).' ಇಂತಹ ಆಶುಕವಿತ್ವಸ್ಪರ್ಧೆಗಳಲ್ಲಿ ಶಬ್ದಾದಿಚಮತ್ಕಾರಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಬರುವುದು ಸಹಜವಾಗಿಯೇ ಇದೆ.

ನೈಷಧಕಾರನಾದ ಶ್ರೀಹರ್ಷನು ಕಾನ್ಯಕುಬ್ಜೇಶ್ವರನನ್ನು ಕಾಣಲು ರಚಿಸಿದ ಪ್ರಶಸ್ತಿಶ್ಲೋಕವಿದು :

**ಗೋವಿಂದನಂದನತಯಾ ಚ ವಪುಃಶ್ರಿಯಾ ಚ**
**ಮಾಸ್ಮಿನ್ ನೃಪೇ ಕುರುತ ಕಾಮಧಿಯಂ ತರುಣ್ಯಃ ।**
**ಅಸ್ತ್ರೀಕರೋತಿ ಜಗತಾಂ ವಿಜಯೇ ಸ್ಮರಃ ಸ್ತ್ರೀ-**
**ರಸ್ತ್ರೀ ಜನಃ ಪುನರನೇನ ವಿಧೀಯತೇ ಸ್ತ್ರೀ ||[2]**

'ಗೋವಿಂದನ ಕಂದ, ರೂಪಸಂಪನ್ನ, ಎಂದು ಈ ರಾಜನನ್ನು ತರುಣಿಯರೇ, ಕಾಮನೆಂದುಕೊಳ್ಳಬೇಡಿ. ಜಗದ್ವಿಜಯಕ್ಕೆ ಸ್ತ್ರೀಯರನ್ನೇ ಕಾಮನು ಅಸ್ತ್ರಮಾಡಿಕೊಂಡರೆ, ಇವನು ಅಸ್ತ್ರಧರರನ್ನೇ (ಅಸ್ತ್ರೀಜನರನ್ನೇ) ಸ್ತ್ರೀಯರನ್ನಾಗಿ ಮಾರ್ಪಡಿಸಿಬಿಡುತ್ತಾನೆ.'
ಇಲ್ಲಿ ಶ್ಲೇಷ, ವಿರೋಧಾಭಾಸಗಳು ಕವಿಯ ಬುದ್ಧಿಕೌಶಲವನ್ನು ಸ್ಪಷ್ಟವಾಗಿ ಸೂಚಿಸುತ್ತವೆ; ಎಂತಹವರನ್ನಾದರೂ ತತ್ಕಾಲದಲ್ಲಿ ತಲೆದೂಗಿಸುತ್ತವೆ.

ಕೊಂಕಣದಿಂದ ಅಪರಾದಿತ್ಯನ ರಾಯಭಾರಿಯಾಗಿ ಕಾಶ್ಮೀರಕ್ಕೆ ಹೋಗಿದ್ದ ತೇಜಕಂಠನ ಪ್ರಾರ್ಥನೆಯನ್ನು ಮನ್ನಿಸಿ ಅವನ ಉಪಯೋಗಕ್ಕೆಂದು ಮಹಾಕವಿಯಾದ ಮಂಖನು ಬರೆದುಕೊಟ್ಟನೆಂದು ಹೇಳುವ[3] ರಾಜ

---

1. ಜೈನಕವಿ ರಾಜಶೇಖರನ ಪ್ರಬಂಧಕೋಶ
2. ಮಹಾಮಹೋಪಾಧ್ಯಾಯ ಪಂಡಿತ ಶಿವದತ್ತರ ನೈಷಧಕಾವ್ಯ ಭೂಮಿಕೆ
3. ಶ್ರೀಕಂಠಚರಿತ, ಸರ್ಗ 25, ಪದ್ಯ 120.

ಪ್ರಶಸ್ತಿಪದ್ಯಗಳಲ್ಲಿ ಒಂದನ್ನಿಲ್ಲಿ ಉದಾಹರಿಸಿದೆ, ವಕ್ರೋಕ್ತಿಯ ನಿದರ್ಶನ ವಾಗಿ.—

**ಯದ್ವಕ್ರೇಣ ಪಥಾ ಪ್ರಯಾಸಿ ಸತತಂ ಯದ್ವಾಸಿ ವಿದ್ವನ್ಮನ-**
**ಶ್ಚೌರೀ ಯಚ್ಚ ಕರೋಷಿ ಪೂರ್ವಸುಕವಿಪ್ರೌಢಿಪ್ರಥೋ-**
**ತ್ಪುಂಸನಮ್ ।**
**ತಸ್ಮಾದ್ಭಾರತಿ ಸದ್ಭಿರತ್ರ ಭವತೀ ತೀಕ್ಷ್ಣೇತಿ ಸಂಭಾವಿತಾ**
**ತೂರ್ಣಂ ಪಾರ್ಶ್ವಮಮುಷ್ಯ ಪಾರ್ಥಿವಮುನೇರಭ್ಯೇಹಿ**
**ಶುದ್ಧ್ಯರ್ಥಿನೀ ॥**

ಸರಸ್ವತಿ, ನೀನು ಹೋಗುವುದು ವಕ್ರಮಾರ್ಗ. ವಿದ್ವಾಂಸರ ಮನಸ್ಸನ್ನು ಕದ್ದಿರುವೆ. ಪೂರ್ವ ಸುಕವಿಗಳ ಪ್ರೌಢಿಮೆಯನ್ನು ಒರಸಿಹಾಕಿರುವೆ. ಆದ್ದರಿಂದ ಇಲ್ಲಿಯ ಸಜ್ಜನರು ನಿನ್ನನ್ನು ಅಪರಾಧಿನಿಯೆಂದು ತೀರ್ಮಾನಿಸಿದ್ದಾರೆ ಬೇಗ ಈ ರಾಜರ್ಷಿಯ ಸನ್ನಿಧಿಗೆ ಬಂದು, ತಕ್ಕ ದಂಡ ಪಡೆದು, ಪರಿಶುದ್ಧಳಾಗು !

ತನ್ನ ಕವಿತೆಯ ಸೊಬಗನ್ನೂ ರಾಜನ ರಸಿಕತೆಯನ್ನೂ ಏಕಕಾಲದಲ್ಲಿ ಕವಿ ಧ್ವನಿಯಿಂದ ಸೂಚಿಸುತ್ತಿದ್ದಾನೆ.

ಹೀಗೆಯೇ 'ಸಮಸ್ಯಾಪೂರಣ' ಎಂದರೆ ಒಂದು ಆಪಾತತಃ ಅಪಾರ್ಥಕವಾದ ಸಾಲನ್ನು ಕೊಟ್ಟು ಉಳಿದ ಮೂರು ಸಾಲುಗಳನ್ನು ಸೇರಿಸಿ ಅದು ಸರಿಯಾಗುವಂತೆ ಮಾಡುವ ಒಂದು ವಿನೋದವೂ ಕವಿಗೋಷ್ಠಿಗಳಲ್ಲಿ ಬಹಳ ಪ್ರಿಯವಾಗಿರುತ್ತಿತ್ತು. ಒಂದು ಉದಾಹರಣೆ —

**ಸ್ತನವಸ್ತ್ರಂ ಪರಿತ್ಯಜ್ಯ ವಧೂಃ ಶ್ವಶುರಮಿಚ್ಛತಿ** [4]

'ಕುಪ್ಪಸವನ್ನು ಕಳೆದು, ಸೊಸೆ ಮಾವನನ್ನು ಬಯಸುತ್ತಾಳೆ'

ಇದು ಸಮಸ್ಯೆ. ಅದರ ಪೂರಣ—

**'ಹಿಡಿಂಬಾ ಭೀಮದಯಿತಾ ನಿದಾಘೇ ಘರ್ಮಪೀಡಿತಾ'**

---

4. ವಾಸಿಷ್ಠ ಗಣಪತಿಮುನಿಗಳ ಉಮಾಸಹಸ್ರಕ್ಕೆ ಕಪಾಲಿಶಾಸ್ತ್ರಿಗಳ ಪ್ರಸ್ತಾವನೆ.

ಎಂಬ ಪೂರ್ವಾರ್ಧ. 'ಭೀಮನ ಪ್ರೇಯಸಿಯಾದ ಹಿಡಂಬೆ ಬಿಸಿಲಿನ ಬೇಗೆಯನ್ನು ತಡೆಯಲಾರದೆ' ಎಂದು ಸೇರಿಸಿದೊಡನೆ ನಾವನಾದ ಗಾಳಿಯನ್ನು ಬಯಸುತ್ತಾಳೆ ಎಂದು ಅಭಿಪ್ರಾಯ ಸ್ಫುರಿಸಿ, ಮೊದಲಿನ ಅಪಾರ್ಥವೆಲ್ಲ ಮಾಯವಾಗುತ್ತದೆ.

ಇದರಂತೆ ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ, ಕೆಳಗಿನಿಂದ ಮೇಲಕ್ಕೆ, ಮೇಲಿಂದ ಕೆಳಕ್ಕೆ ಹೇಗೆ ಹೇಗೆ ಓದಿದರೂ ಅಕ್ಷರಗಳು ಒಂದೇ ಆಗಿರುವ "ಸರ್ವತೋಭದ್ರ" ವೆಂಬ ಚಿತ್ರಬಂಧಕ್ಕೆ ಒಂದು ಉದಾಹರಣೆ —

ರ ಮಾ ರ ಸ್ಾ ಸಾ ರ ಮಾ ರ
ಮಾ ನ ತಾ ನ ನ ತಾ ನ ಮಾ ।
ರ ತಾ ಗ ಮಾ ಮಾ ಗ ತಾ ರ
ಸಾ ನ ಮಾ ನ ನ ಮಾ ನ ಸಾ ॥[5]

[ಇದರ ಅರ್ಥ ಮಾಡುವ ವ್ಯುತ್ಪತ್ತಿ ಈ ಲೇಖಕನಿಗಿಲ್ಲ, ಏಕಾಕ್ಷರೀ ಕೋಶಗಳ ಪಾರಂಗತರೇ ಬರಬೇಕು.]

ಇಲ್ಲಿಯೂ ಕಥಂಚಿತ್ ಅರ್ಥಹೇಳಿದರೂ ವೈಚಿತ್ರ್ಯವಿರುವುದು ಅರ್ಥದಲ್ಲಲ್ಲ, ಚಿತ್ರಾಕಾರದ ಅಕ್ಷರಯೋಜನೆಯಲ್ಲಿ ಮಾತ್ರ.

ಇಂತಹ ಪ್ರಚಂಡ ಬುದ್ಧಿಬಲದ ಪ್ರದರ್ಶನದಿಂದ ಕಾವ್ಯಕ್ಕೆ ಹೆಚ್ಚಿನ ಬೆಲೆಯೇನೂ ಇಲ್ಲವೆಂಬುದನ್ನು ಪ್ರಾಚೀನರೇ ಮನಗಂಡಿದ್ದರು. ಆದರೆ ಒಂದು ಸಭೆಯಲ್ಲಿ ಸ್ಪರ್ಧಾಳುಗಳಿಬ್ಬರ ತಾರತಮ್ಯವನ್ನು ಪರೀಕ್ಷಿಸಬೇಕಾದರೆ ಇವುಗಳಿಂದಲೂ ಲಾಭವಾಗುತ್ತಿತ್ತು ಭಾರವಿ, ಮಾಘಾದಿಗಳು, ಒಂದೇ ಅಕ್ಷರ, ಎರಡೇ ಅಕ್ಷರ, ಗಳಿಂದ ಉದ್ದುದ್ದ ಪದ್ಯಗಳನ್ನು ರಚಿಸಿ ಈ ಪರೀಕ್ಷೆಯಲ್ಲಿ ತಾವೇನೂ ಸೋಲುವವರಲ್ಲವೆಂದು ತೋರಿಸಿಕೊಂಡಿದ್ದಾರೆಂದರಿಯಬೇಕೇ ಹೊರತು ಇವುಗಳನ್ನು ಪ್ರದರ್ಶಿಸುವ ಸಲುವಾಗಿಯೇ ಮಹಾಕಾವ್ಯಗಳನ್ನು ಬರೆದರೆಂದು ಭಾವಿಸಲಾಗದು. ಸಾವಿರಾರು ಸುಂದರ ಪದ್ಯಗಳ ನಡುವೆ ಇವುಗಳ ಸಂಖ್ಯೆ ಹತ್ತೆಂಟು, ಅಷ್ಟೆ. ಒಂದು ಉದಾಹರಣೆ:—

---

5. ರಾಘವಪಾಂಡವೀಯ, XIII. 61.

**ವಿವೇಶ ವಿಶ್ವಶಾವೇಶಃ ಶಶೀವ ಶಿವಶೈಶವಃ ।**
**ಶೈವಃ ಶವಾಂಶಾಶಾವೇಶಿಶಿವಾವಂಶಂ ವಶೀ ವಿಶಾವ್ ॥**[6]

ಇದು ದ್ವ್ಯಕ್ಷರಿ. ಇಲ್ಲಿ ವ, ಶ, ಎರಡೇ ಅಕ್ಷರಗಳಿಂದ ಶ್ಲೋಕ ರಚಿತವಾಗಿದೆ.

ಆದರೆ ಮಹಾಕವಿಗಳಲ್ಲಿ ಪ್ರತಿಭಾಪರಿಸ್ಪಂದಕ್ಕೆ ವ್ಯುತ್ಪತ್ತಿಗಿಂತ ಹೆಚ್ಚಿನ ಆದರ ಮಾತ್ರ ಎಂದೂ ತಪ್ಪಿರಲಿಲ್ಲವೆನ್ನಲು ಆ ಕವಿಗಳಿಂದಲೇ ನೂರಾರು ಉದಾಹರಣೆಗಳನ್ನು ಕೊಡಬಹುದು. ಗ್ರಂಥವಿಸ್ತರ ಭಯದಿಂದ ಮಂಖನ ಕೆಲವು ಸುಭಾಷಿತಗಳನ್ನು ಮಾತ್ರ ಇಲ್ಲಿ ಉದ್ಧರಿಸಿದೆ --

1. **ಆಟೋಪೇನ ಪಟೀಯಸಾ ಯ್ದಪಿ ಸಾ ವಾಣೀ ಕವೇರಾಮುಖೇ**
**ಖೇಲನ್ತೀ ಪ್ರಥತೇ ತಥಾಪಿ ಕುರುತೇ ನೋ ಸನ್ಮನೋ ರಂಜನಮ್ ।**
**ನ ಸ್ಯಾದ್ ಯಾವದಮಂದಸುಂದರಗುಣಾಲಂಕಾರ ಝಂಕಾರಿತಃ**
**ಸ ಪ್ರಸ್ಯಂದಿಲಸದ್ರಸಾಯನ ರಸಾಸಾರಾನುಸಾರೀ ರಸಃ ॥**[7]

ಕವಿಯ ವಾಗಾಡಂಬರದಿಂದ ಸಹೃದಯರ ಮನೋರಂಜನೆಯಾಗುವುದಿಲ್ಲ, ಅದಕ್ಕೆ ಸುಂದರ ಗುಣಾಲಂಕಾರಗಳು ಝೇಂಕರಿಸುತ್ತ ಬರುವ ರಸಾಸಾರವೂ ಅಗತ್ಯ.

2. **ತತ್ತತ್ ಸಮಗ್ರ ಬಹುಶಾಸ್ತ್ರವಿಮರ್ಶಸಿದ್ಧ**
**ವೈದಗ್ಧ್ಯದಿಗ್ಧಮತಯೋ ಬಹವಃ ಕವನ್ತಾಮ್ ।**
**ಯತ್ಕಿಂಚಿದಸ್ತಿ ತು ಮಹಾಕವಿವಾಗ್ರಹಸ್ಯಂ**
**ಸ್ವಪ್ನೇಽಪಿ ತಸ್ಯ ಕಿಲ ತೇ ನ ದಿಶಂ ಸ್ಪೃಶನ್ತಿ ॥**[8]

ಬೇಕಾದಂತೆ ಬಹುಶಾಸ್ತ್ರಪಂಡಿತರು ಕವಿತೆ ಮಾಡಬಹುದು, ಆದರೆ ಮಹಾ ಕವಿಗಳ ವಾಗ್ರಹಸ್ಯವಾವುದುಂಟೋ ಅದರ ದಿಕ್ಕು ಕೂಡ ಅವರಿಗೆ ಕನಸಿನಲ್ಲಿಯೂ ಕಾಣುವುದಿಲ್ಲ.

---

6. ರತ್ನಾಕರನ ಹರವಿಜಯ, ಸರ್ಗ 43, ಪದ್ಯ 33.
7 ಶ್ರೀಕಂಠಚರಿತ, II 49.
8. ಅದೇ. II. 35.

3 **ಸರ್ವೈಃ ಕೈಶ್ಚನ ದೂಷಿತಾಃ ಕವಿತೃಭಿಃ ಪ್ರಸ್ತೀರ್ಯ ಪೃಥ್ವೀಭೃತಾ-**
**ಮಾಸ್ಥಾನಾಪಣಸೀಮ್ನಿ ವಿಕ್ರಯತಿರಸ್ಕಾರಾದನ-**
**ಘ್ಯಾರ್ಃ ಗಿರಃ |.** [9]

ಅಮೂಲ್ಯವಾದ ವಾಣಿಯನ್ನು ರಾಜರ ಆಸ್ಥಾನವೆಂಬ ಅಂಗಡಿಯಲ್ಲಿ ಮಾರಿ ಎಷ್ಟೋ ಕವಿಗಳು ಕಲುಷಿತಗೊಳಿಸಿದ್ದಾರೆ

4. ಆದರೆ ಅವ್ಯುತ್ಪನ್ನನಿಂದ ರಸವತ್ಕವಿತೆ ಬರುವುದಿಲ್ಲ. ಯಾವ ಸೂರ್ಯನು ಸುಡಬಲ್ಲನೋ ಅವನಿಂದಲೇ ಮಳೆಯ ಮೋಡವೂ ಹುಟ್ಟೀತು.-

**ಕಾವ್ಯಂ ಯ ಏವ ಗಹನಂ ಕ್ಷಮತೇ ಪ್ರಯೋಕ್ತುಂ**
**ಶಕ್ತಃ ಸ ಏವ ರಸಮಪ್ಯಸಮಂ ಪ್ರಣೇತುಮ್ |**
**ಭಾನುರ್ಯ ಏವ ದಹತೀಹ ಖರೈರ್ಮಯೂಖೈಃ**
**ಸದ್ಯಃ ಸ ಏವ ಜಗದಾವೃಣುತೇ ಪಯೋಭಿಃ ||** [10]

ಇದನ್ನೇ ನೀಲಕಂಠದೀಕ್ಷಿತನೂ ಮುಚ್ಚುಮರೆಯಿಲ್ಲದೆ ತನ್ನ ಶಿವಲೀಲಾರ್ಣವ, ಗಂಗಾವತರಣ, ಮುಂತಾದ ಕಾವ್ಯಗಳಲ್ಲಿ ಹೇಳಿದ್ದಾನೆ. ಯಮಕವೇ ವ್ಯಾಧಿ, ದುಷ್ಕವಿಯೇ ಅಪಮೃತ್ಯು ಎಂದಿದ್ದಾನೆ —

**ಆಮಯೋ ಯಮಕೇ ಜಾಗ್ರತ್ಯಪಮೃತ್ಯೌ ಚ ದುಷ್ಕವೌ |**
**ವಾಣಿ ಪ್ರಾಣಿಷಿ ತನ್ಮನ್ಯೇ ವಜ್ರೇಣೈವಾಸಿ ನಿರ್ಮಿತಾ ||** [11]

ಹೀಗೆ ಕಾಳಿದಾಸನ ಅನಂತರಕಾಲದಲ್ಲಿ ರಸವತ್ಕವಿತೆಯ ಆದರ ಕಡಿಮೆಯಾಗದಿದ್ದರೂ ವ್ಯುತ್ಪತ್ತಿಯ ಮೇಲಿನ ಗೌರವ ಹೆಚ್ಚಿತು, ಶಬ್ದಚಿತ್ರಾದಿಗಳ ವ್ಯಾಮೋಹ ಆಗಾಗ ಪ್ರಬಲಿಸಿತು. ಅಭಿರುಚಿಯಲ್ಲಿ ಮಾರ್ಪಾಟುಗಳಾಗುತ್ತಿದ್ದುವು. ರಾಜಾಸ್ಥಾನಗಳ ಪ್ರಭಾವ ವಿಪರೀತವಾಯಿತು. ಇದನ್ನು ಮೆಚ್ಚಿದ ಕವಿಗಳಾಗಲಿ ಮೆಚ್ಚದಿದ್ದ ಕವಿಗಳಾಗಲಿ, ಕಾಳಿದಾಸ, ಭಾರವಿಗಳ ಅನುಕರಣದ ಮೇರೆ ಕಾವ್ಯ ಬರೆದರೇ ಹೊರತು, ಜೀವನದಿಂದ ನೇರವಾದ

---

9. ಅದೇ I 56

10. ಅದೇ II. 31.

11. ಗಂಗಾವತರಣ, I. 30

ಸ್ಫೂರ್ತಿಯನ್ನು ಪಡೆಯಲು ಯತ್ನಿಸಲಿಲ್ಲ. ರಾಜನ ಸ್ತುತಿಗೆ ಹೇಸಿದವರು ಭಗವಂತನ ಸ್ತುತಿ ಮಾಡಿ ಕಾವ್ಯ ಬರೆದರು. ಹೊಸ ಕಾವ್ಯವಿಷಯಕ್ಕೆ ಪ್ರತಿಭೆಯನ್ನು ಉಪಯೋಗಿಸಲಿಲ್ಲ, ಅಷ್ಟಾದಶವರ್ಣನೆಗಳಲ್ಲಿ ಹೊಸ ಉಕ್ತಿ ವೈಚಿತ್ರ್ಯವನ್ನು ಮಾತ್ರ ತೋರಿಸಲು ಹೊರಟರು. ಹೀಗಾಗಿ ಎಲ್ಲ ಕಾವ್ಯಗಳೂ ಒಟ್ಟಿನಲ್ಲಿ ಒಂದರ ಅಚ್ಚಿನಲ್ಲಿ ಮತ್ತೊಂದು ಎನ್ನುವಂತಾದುವು. ಕಡೆ ಕಡೆಗೆ ಕೃತ್ರಿಮವಾದುವು, ನೀರಸವಾದುವು. ಕಾವ್ಯವಸ್ತುವಿನಲ್ಲಿ ವೈವಿಧ್ಯ ಹೊಸತನಗಳಿಲ್ಲದೆ ಹೋದುದೇ ಸಂಸ್ಕೃತಕಾವ್ಯ ಬೆಳೆಯದೆ ಸುಮ್ಮನೆ ಬೊಜ್ಜು ತುಂಬಿಕೊಂಡಂತಾದುದಕ್ಕೆ ಕಾರಣ. ಆರ್ಷಕಾಲದ ಮಹಾವೀರರ, ಧರ್ಮಪ್ರವರ್ತಕರ, ಬೃಹದ್ ವ್ಯಕ್ತಿತ್ವಗಳೂ ಸಾಹಸಗಳೂ, ತಮ್ಮ ಸ್ಫೂರ್ತಿದಾಯಿಕತ್ವವನ್ನು ಕಳೆದುಕೊಂಡಾದ ಮೇಲೆ, ಭಾರತದ ರಾಷ್ಟ್ರಜೀವನದಲ್ಲಿ ಹೊಸ ಸ್ಫೂರ್ತಿಯನ್ನು ತರುವ ಸನ್ನಿವೇಶಗಳ ಬದಲು ಮೊದಲು ಮುಸಲ್ಮಾನರು, ಆಮೇಲೆ ಐರೋಪ್ಯರು, ಹೀಗೆ ವಿದೇಶೀಯರ ಅಭಿಯೋಗಗಳೇ ಒದಗಿದುದರ ಪರಿಣಾಮವಾಗಿ ಭಾರತೀಯರು ಗತಯುಗವೇ ಸ್ವರ್ಣಯುಗವೆಂದು ನಂಬುವಂತಾಗಿತ್ತು. ಹಿಂದಿನವರ ಸಂಪ್ರದಾಯವನ್ನು ಪೂರ್ಣವಾಗಿ ಬದಲಾಯಿಸುವ ಸಾಹಸವನ್ನು ಯಾವ ಸಂಸ್ಕೃತಕವಿಯೂ ಮಾಡಲಿಲ್ಲ. ಕಾವ್ಯದ ಕ್ಷೇತ್ರವಿಸ್ತಾರಕ್ಕೆ ಯತ್ನಿಸದಿದ್ದರೂ ಆದರ ಸಂಕುಚಿತ ಕ್ಷೇತ್ರದಲ್ಲಿ ಮನುಷ್ಯಬುದ್ಧಿಯು ಎಷ್ಟನ್ನು ಮಾಡಿ ತೋರಿಸಬಹುದೋ ಅದರ ಪರಾಕಾಷ್ಠೆಯನ್ನೇ ಇವರು ತೋರಿಸಿಬಿಟ್ಟಿದ್ದಾರೆ. ವಿಶ್ವದ ಬೇರೆ ಯಾವ ಭಾಷೆಯಲ್ಲಿಯೂ ಸಂಸ್ಕೃತದ ಎರಡು ಸಾಲುಗಳಲ್ಲಿ ತೋರಿಸಬಹುದಾದ ಶಬ್ದಾರ್ಥ ಚಮತ್ಕಾರ ಸಾಧ್ಯವಿಲ್ಲ. ಈ ಅಧ್ಯಾಯದಲ್ಲಿ ಎಲ್ಲ ಕವಿಗಳ ನಾಮಾವಳಿಯನ್ನು ಬರೆಯುವುದಕ್ಕೆ ಹೊರಡದೆ ಮಾದರಿಯಾಗಿ ಕೆಲವರ ಸಂಕ್ಷಿಪ್ತ ಪರಿಚಯವನ್ನು ಮಾತ್ರ ಬರೆದಿದೆ.

**ಭಾರವಿ :**

**ಪ್ರಕಾಶಂ ಸರ್ವತೋ ದಿವ್ಯಂ ವಿದಧಾನಾ ಸತಾಂ ಮುದೇ ।**
**ಪ್ರಬೋಧನಪರಾ ಹೃದ್ಯಾ ಭಾರವೇರಿವ ಭಾರವೇಃ ॥**

**ಬೆಳಗಂ ಬೀರುತ್ತೆಲ್ಲೆಡೆ**
**ಗಳಿಲನೆ ಸುಜನರ್ಗೆ ಮೋದಮಂ ನೀಡುತ್ತುಂ ।**

**ತಿಳಿಯಿಪ ರವಿಕಿರಣಂಬೋಲ್**
**ತಳತಳಿಪುದು ದಿವ್ಯದೀಪ್ತಿ ಭಾರವಿಕವಿಯಾ ||**

ಭಾರವಿಯ ಕೀರ್ತಿ ಕ್ರಿ. ಶ. ೭ನೆಯ ಶತಮಾನದ ಇಮ್ಮಡಿ ಪುಲಿಕೇಶಿಯ ಕಾಲಕ್ಕೆ ಚಿರಪ್ರಸಿದ್ಧವಾಗಿದ್ದಂತೆ ಅವನ ಕೃತಿ ವ್ಯಾಕರಣಶುದ್ಧಿಗೆ ಲಕ್ಷ್ಯಪ್ರಯೋಗವನ್ನೂ ಒದಗಿಸುತ್ತಿದ್ದಿತೆಂದು ಅದಕ್ಕೂ ಸ್ವಲ್ಪ ಹಿಂದಿನ "ಕಾಶಿಕಾ" ವೃತ್ತಿಯಿಂದ ವ್ಯಕ್ತವಾಗುತ್ತದೆ.[12] ಗಂಗರಾಜ ದುರ್ವಿನೀತನ ಕಾಲದಲ್ಲಿ ಭಾರವಿಯಿದ್ದನೆಂಬ ಅವಂತಿಸುಂದರೀಕಥೆಯ ಆಖ್ಯಾಯಿಕೆ ನಿಜವಾದರೆ ಭಾರವಿಯು ಕ್ರಿ. ಶ. ೫೫೦–೬೦೦ ರ ಅವಧಿಯಲ್ಲಿದ್ದನೆಂದೂ ಕರ್ಣಾಟಕದೇಶದಲ್ಲೇ ತನ್ನ ಜೀವನದ ಬಹುಭಾಗವನ್ನು ಕಳೆದನೆಂದೂ ಊಹಿಸಬಹುದು.[13] ಕೆಲವು ಶಾಸನಗಳು ದುರ್ವಿನೀತ ದೊರೆಯನ್ನು 'ಕಿರಾತಾರ್ಜುನೀಯ ಪಂಚದಶ–ಸರ್ಗ–ಟೀಕಾಕಾರ' ನೆಂದೂ ಬಣ್ಣಿಸಿವೆ. ಇದು ಸಣ್ಣ ಕೀರ್ತಿಯಲ್ಲ, ಒಬ್ಬ ಆಶ್ರಿತಕವಿಗೆ. ಭಾರವಿಯ ಮಹಾಕಾವ್ಯವೇ 'ಕಿರಾತಾರ್ಜುನೀಯ.' ಅದರಲ್ಲಿ ೧೮ ಸರ್ಗಗಳಿವೆ.

ಅವಂತಿಸುಂದರೀಕಥೆಯಲ್ಲಿ ಭಾರವಿಯ ವಿಷಯವಾಗಿ ಬಂದಿರುವ ಆಖ್ಯಾಯಿಕೆಯನ್ನು ಹೀಗೆ ಸಂಗ್ರಹಿಸಬಹುದು:—

ದಕ್ಷಿಣಾಪಥದಲ್ಲಿ ಪ್ರಸಿದ್ಧವಾದ ಪಟ್ಟಣ-ಕಾಂಚಿ, ಅದನ್ನು ಸಿಂಹವಿಷ್ಣುವೆಂಬ ಪಲ್ಲವರಾಜನು ಆಳುತ್ತಿದ್ದನು. ಆತನಿಗೆ ಕವಿಗಳೆಂದರೆ ಪ್ರಾಣ. ಒಂದು ದಿನ ಅಪರಿಚಿತನೊಬ್ಬನು ಅವನ ಆಸ್ಥಾನಕ್ಕೆ ಬಂದು ವಿಷ್ಣುವಿನ ನರಸಿಂಹಾವತಾರವನ್ನು ಬಣ್ಣಿಸುವ ಶ್ಲೋಕವೊಂದನ್ನು ಹೇಳಿದನು. ಶ್ಲೋಕದ ಭಾವದಿಂದ ಪರವಶನಾದ ರಾಜನು ಅದನ್ನು ಬರೆದವನ ಬಗೆಗೆ ಆಸಕ್ತಿಯಿಂದ ವಿಚಾರಿಸಲು, ಆ ಅಪರಿಚಿತನು—ವಸ್ತುತಃ ಅವನೊಬ್ಬ ಗಂಧರ್ವ–ಹೀಗೆಂದನಂತೆ:—"ಭಾರತವರ್ಷದ ಪಶ್ಚಿಮೋತ್ತರ ದಿಗ್ಭಾಗದಲ್ಲಿ ಆನಂದಪುರವೆಂಬ ನಗರ ಆರ್ಯಾವರ್ತಕ್ಕೆ ಶಿರೋರತ್ನದಂತೆ ರಾಜಿಸುತ್ತಿದೆ. ಅಲ್ಲಿ ಅನೇಕ

---

12. ನೋಡಿ, ಡಾ|| ಕೆ. ಕೃಷ್ಣಮೂರ್ತಿ, ಕನ್ನಡ ಕಿರಾತಾರ್ಜುನೀಯ, ಪೀಠಿಕೆ, ಪು. XIII. f.

13. ಅದೇ ಪೀಠಿಕೆಯಲ್ಲಿ ಈ ಕಥೆಯಂತೆ ಇತರ ಕಥೆಗಳನ್ನೂ ವಿವರವಾಗಿ ಬರೆದಿದೆ.

ಪ್ರಸಿದ್ಧ ರಾಜರು ಆಗಿಹೋದರು. ಅಲ್ಲಿಯ ನಿವಾಸಿಗಳಲ್ಲಿ ಕೌಶಿಕಗೋತ್ರದ ಬ್ರಾಹ್ಮಣ ವಂಶವೊಂದು ದಕ್ಷಿಣಾಪಥದ ಅಚಲಪುರಕ್ಕೆ ವಲಸೆಬಂದಿತು. ಈ ವಂಶಕ್ಕೆ ಸೇರಿದ ನಾರಾಯಣಸ್ವಾಮಿಯೆಂಬಾತನಿಗೆ ದಾಮೋದರನೆಂಬ ಮಗ ನಿದ್ದನು. ಈತನು ತನ್ನ ನಿರುಪಮ ಪ್ರತಿಭೆಯಿಂದ "ಭಾರವಿ" ಅಥವಾ ಬೆಳಗುವ ಸೂರ್ಯನೆಂಬ ಪ್ರಖ್ಯಾತಿಯನ್ನು ಪಡೆದನು. ಚಾಲುಕ್ಯರಾಜನಾದ ವಿಷ್ಣುವರ್ಧನನ ಗೆಳೆಯನಾದನು. ಒಮ್ಮೆ ವಿಷ್ಣುವರ್ಧನನೊಡನೆ ಭಾರವಿ ಬೇಟೆಗೆ ಹೋಗಿರುವಾಗ ಅವನ ಒತ್ತಾಯದಿಂದ ಅನಿವಾರ್ಯವಾಗಿ ಮಾಂಸವನ್ನು ತಿನ್ನಬೇಕಾಗಿ ಬಂದಿತು. ಆ ದೋಷದ ಪ್ರಾಯಶ್ಚಿತ್ತಕ್ಕಾಗಿ ಆತನು ತೀರ್ಥಯಾತ್ರೆ ಕೈಗೊಂಡು ದೇಶಾಟನೆ ಮಾಡಿ ಕಡೆಗೆ ದುರ್ವಿನೀತ ನೆಂಬ ರಾಜನ ಆಸ್ಥಾನವನ್ನು ಸೇರಿದನು. ಆತನೇ ಈಗ ನಾನು ಹೇಳಿದ ಶ್ಲೋಕವನ್ನು ರಚಿಸಿದ ಕವಿ." ಇದನ್ನು ಕೇಳಿದೊಡನೆಯೇ ಪಲ್ಲವರಾಜನ ಕುತೂಹಲ ನೂರ್ಮಡಿಯಾಗಿ ಕೆರಳಿತು. ಆತನು ಮೇಲಿಂದ ಮೇಲೆ ಭಾರವಿಗೆ ಆಮಂತ್ರಣಗಳನ್ನು ಕಳುಹಿಸಿ ಕಡೆಗೊಮ್ಮೆ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಅವನಿಗಾಗಿ ಮನೆಯನ್ನೂ ಕಟ್ಟಿಸಿಕೊಟ್ಟನು. ಭಾರವಿ ಅಲ್ಲೇ ನೆಲೆಸಿ ತನ್ನ ಸುಭಾಷಿತಗಳಿಂದ ರಾಜನಿಗೆ ಅಚ್ಚುಮೆಚ್ಚಾ ಗಿದ್ದನು. ಭಾರವಿಯನ್ನು 'ಮಹಾಶೈವ'ನೆಂದೂ 'ಮಹಾಪ್ರಭಾವ'ನೆಂದೂ 'ಪ್ರದೀಪ್ತಭಾಸ'ನೆಂದೂ ಇಲ್ಲಿ ಉಲ್ಲೇಖಿಸಿದೆ. ಈ ಕಥೆಯಲ್ಲಿ ಬರುವ ಪಲ್ಲವ ಸಿಂಹವಿಷ್ಣು, ಚಾಲುಕ್ಯ ವಿಷ್ಣುವರ್ಧನ, ಗಂಗದುರ್ವಿನೀತ, ಎಲ್ಲರೂ ಸಮಕಾಲೀನರಾಗಿದ್ದುದು ಐತಿಹಾಸಿಕ ಸತ್ಯ. ಸಿಂಹವಿಷ್ಣುರಾಜನು ಕ್ರಿ. ಶ. ೫೭೫ ರಿಂದ ೬೦೦ ರ ವರೆಗೆ ಕಾಂಚಿಯನ್ನಾಳುತ್ತಿದ್ದನು. ಹಾಗೆಯೇ ವಿಷ್ಣು ವರ್ಧನನು ಕ್ರಿ. ಶ. ೬೦೮ ರಲ್ಲಿ ಪಟ್ಟಕ್ಕೆ ಬಂದ ಸತ್ಯಾಶ್ರಯ ಪುಲಿಕೇಶಿಯ ತಮ್ಮ. ದುರ್ವಿನೀತನು ಕೊಂಗಣಿ ಅವಿನೀತನ ಮಗ.

ಕಥೆ ಮಹಾಭಾರತದ ವನಪರ್ವದಲ್ಲಿ ಪ್ರಸಿದ್ಧವಾಗಿರುವ ಭಾಗ. ಪಾಶುಪತಾಸ್ತ್ರವನ್ನು ಪಡೆಯಲು ಅರ್ಜುನನು ಹೊರಡುವ ಸನ್ನಿವೇಶ, ಆದರ ಹಿನ್ನೆಲೆ, ಅರ್ಜುನನ ತಪಸ್ಸಾಧನೆ, ಕಿರಾತರೂಪೀ ಶಿವನೊಡನೆ ಯುದ್ಧ ಮತ್ತು ಅನುಗ್ರಹಪ್ರಾಪ್ತಿ–ಇದೇ ಕಾವ್ಯದ ಕಥಾಸೂತ್ರ.[14]

---

14 ಉಕ್ತ ಪೀಠಿಕೆಯಲ್ಲಿ ವಿವರವಾದ ಕಥಾಸಂಗ್ರಹವನ್ನು ಕೊಡಲಾಗಿದೆ.

ಕಿರಾತಾರ್ಜುನೀಯದ ಕಥಾಸೂತ್ರವು ಸಣ್ಣದಾದರೂ ಬಹಳ ಸಾರವತ್ತಾಗಿದೆ ತಪಃಪ್ರಭಾವದಿಂದ ಪುರುಷನು ಪರಮೇಶ್ವರನನ್ನೇ ಪ್ರತ್ಯಕ್ಷ ಮಾಡಿಕೊಳ್ಳುವ ಗಂಭೀರ ಸನ್ನಿವೇಶವು ಭಾರತಸಂಸ್ಕೃತಿಯ ಜೀವರಸವಾದ ಯೋಗಸಿದ್ಧಿಯ ಹಿರಿಮೆಯನ್ನು ಹಿಡಿದತ್ತಲು ಉತ್ತಮ ಸಾಧನ. ಮಹಾಭಾರತದ ಮೂಲಕಥೆಯಲ್ಲಿ ಅನೇಕ ವಿಕ್ಷಿಪ್ತಘಟನೆಗಳು ನಡೆಯುವುದರಿಂದ, ರಾಗದ್ವೇಷಗಳ ಚಾಕಚಕ್ಯದ ನಡುವೆ ಮಹತ್ತಮ ಮೌಲ್ಯಗಳಾದ ಧರ್ಮಶಾಂತಿಗಳ, ಸತ್ತ್ವತಪಸ್ಸುಗಳ, ಅಮೇಯಮಹಿಮೆ ನೇರವಾಗಿ ಕಣ್ಣಿಗೆ ಬೀಳದೆ ಹೋಗಬಹುದು. ಭಾರವಿ ಅದೊಂದನ್ನೇ ಸರ್ವಾಂಗಸುಂದರವಾಗಿ ಬಣ್ಣಿಸಿ ಮಹಾಭಾರತದ ಸಾರವನ್ನು ಸರ್ವರಿಗೂ ಪ್ರತೀತಿಯೋಗ್ಯವಾಗುವಂತೆ ಮಾಡಿದ್ದಾನೆ. ತಪಸ್ಸಿದ್ಧಿ ಇಹಕ್ಕೆ ಅನಗತ್ಯವೆಂಬ ಕಲ್ಪನೆ ದೂರವಾಗುವಂತೆ ಐಹಿಕ ವರಾರ್ಥಿಯಾದ ಅರ್ಜುನನನ್ನೂ ಕಾವ್ಯಕ್ಕೆ ನಾಯಕನನ್ನಾಗಿ ಮಾಡಿದ್ದಾನೆ. ಹಾಗೆಯೇ ಸೌಂದರ್ಯದೃಷ್ಟಿ ತತ್ತ್ವದರ್ಶನದೊಡನೆ ಸಮನ್ವಿತವಾಗಬಹುದೆಂಬುದನ್ನೂ ಪರ್ವತ, ಚಂದ್ರ-ಸೂರ್ಯರ ಉದಯಾಸ್ತಮಯಗಳು, ಋತುಗಳು, ಜಲಕ್ರೀಡೆ, ಮುಂತಾದ ಪ್ರಕೃತಿ ಪ್ರಕಾರಗಳ ರಮಣೀಯವರ್ಣನೆಗಳ ಮೂಲಕ ತೋರಿಸಿದ್ದಾನೆ. ಇಂದ್ರಿಯವಶನಾದವನ ಲೋಲುಪ್ತಿಗೂ ಜಿತೇಂದ್ರಿಯನ ಸೌಂದರ್ಯಾನುಭೂತಿಗೂ ಅಂತರವನ್ನು ಭಾರವಿ ಬಲ್ಲನು. ದೇವಲೋಕನಿವಾಸಿಗಳಿಗೂ ಮರ್ತ್ಯಲೋಕನಿವಾಸಿಗಳಿಗೂ ಸುಖಭೋಗದಲ್ಲಿ ತಾರತಮ್ಯವುಂಟೆಂದೇ ಭಾರವಿ ಶೃಂಗಾರಾದಿಗಳನ್ನು ಗಂಧರ್ವರಲ್ಲಿಯೂ ಅಪ್ಸರೆಯರಲ್ಲಿಯೂ ಚಿತ್ರಿಸಿದ್ದಾನೆ. ಭೀಮ, ಅರ್ಜುನ, ದ್ರೌಪದಿ ಮುಂತಾದವರಲ್ಲಿ ಚಿತ್ರಿಸಿಲ್ಲ. ಕವಿಯ ಕಲ್ಪನಾಲೋಕದ ಈ ಪ್ರಜೆಗಳನ್ನು ವಾಸ್ತವಪ್ರಪಂಚದ ಪ್ರಜೆಗಳೆಂದು ಭಾವಿಸಿದರೆ ರಸವನ್ನು ಸವಿಯಲು ಅಡ್ಡಿಯೊದಗುತ್ತದೆ. ಕಿರಾತಾರ್ಜುನೀಯದ ಮಹಾಕಥೆಯಲ್ಲಿ ಮರ್ತ್ಯ ಮತ್ತು ಅಮರ್ತ್ಯಲೋಕಗಳ ಸುಂದರ ಸೇತುವೆಯನ್ನು ಸಹೃದಯರು ಸಂದರ್ಶಿಸಬಹುದು.

ಭಾರವಿ ಕಲ್ಪಿಸಿರುವ ಪಾತ್ರಗಳೆಲ್ಲ ಜೀವಕಳೆಯಿಂದ ಮೈತುಂಬಿಕೊಂಡು ಕಣ್ಣಿಗೆ ಕಟ್ಟುವಂತಿವೆ. ನಾಟಕದಲ್ಲಿ ಈ ಚಿತ್ರಕಲೆ ದೃಷ್ಟವೇ ಹೊರತು ಪದ್ಯಕಾವ್ಯದಲ್ಲಿ ಕಾಣಬರುವುದು ವಿರಲ. ಇದಕ್ಕೆ ಅಲಂಕಾರಶಾಸ್ತ್ರದಲ್ಲಿ " ಭಾವಿಕತ್ವ"ವೆನ್ನುತ್ತಿದ್ದರು. ಪದ್ಯಮಯನಾಟಕಗಳಂತೆ ಸಂವಾದ

ರೂಪವಾಗಿ, ಅನಾಕುಲಶಬ್ದಗಳಿಂದ ಅನೇಕಶ್ಲೋಕವ್ಯಾಪಿಯಾದ ಈ ಚಮತ್ಕಾರವೇ ಭಾವಿಕತ್ವ ಗುಣ ಅಥವಾ ಅಲಂಕಾರ. ಅಶ್ವಘೋಷ ಕಾಳಿದಾಸರಿಗಿಂತಲೂ ಹೆಚ್ಚಿನ ಸಿದ್ಧಿ ಭಾರವಿಗೆ ಕಿರಾತಾರ್ಜುನೀಯದಲ್ಲಿ ದೊರೆತಿದೆ. ಈ ನಾಟಕೀಯತೆಯಲ್ಲಿ. ಈ ಕಲೆಯ ಉತ್ತಮ ಉದಾಹರಣೆಗಳನ್ನು ಮೊದಲನೆಯ ಸರ್ಗದ ದ್ರೌಪದಿಯ ಮಾತುಗಳಲ್ಲಿಯೂ ಹನ್ನೊಂದನೆಯ ಸರ್ಗದಲ್ಲಿ ವಿಪ್ರವೇಷದ ಇಂದ್ರ ಮತ್ತು ಅರ್ಜುನರ ಸಂವಾದದಲ್ಲಿಯೂ ನೋಡಬಹುದು. ಒಂದೊಂದು ಪಾತ್ರವೂ ಒಂದೇ ಸಲ ಮಾತನಾಡಿ ಮುಗಿಯುವುದರೊಳಗೆ ವಕ್ತೃತ್ವಕಲೆಯ ಸ್ವರೂಪದರ್ಶನ ಮಾಡಿಕೊಡುವಂತೆ ಸ್ವಸ್ವಭಾವದರ್ಶನವನ್ನೂ ಸಂಪೂರ್ಣವಾಗಿ ಮಾಡಿಕೊಡುತ್ತದೆ. ವಿನಯಾದಿ ಸೌಜನ್ಯಗಳಿದ್ದರೂ ಶಬ್ದವಾಹಕಯಂತ್ರದಂತೆ ವಾರ್ತಾವಾಹಕನಾದ ಚಾರ, ಶಾಂತಿವಿವೇಕಗಳನ್ನು ಎಂದೂ ಕಳೆದುಕೊಳ್ಳದ ಆದರ್ಶರಾಜ—ಯುಧಿಷ್ಠಿರ, ರಾಜನ ಆದರ್ಶವನ್ನು ಅನುಕರಣಮಾಡುವ ದುರ್ಯೋಧನ, ಹಗೆಯ ಹೆಸರೆತ್ತಿದೊಡನೆ ಮೈಯೆಲ್ಲಾ ಉರಿಯುತ್ತಾ ಬೆಂಕಿಯನ್ನು ಕಾರುತ್ತಾ ನಾಗಿನಿಯಂತೆ ಚುಚ್ಚುನುಡಿಗಳನ್ನುಗುಳುವ ದ್ರೌಪದಿ, ಅವಳ ಮಾತಿಗೆ ಶಾಸ್ತ್ರಾಧಾರವನ್ನು ತೆಗೆದು ತೋರುವ ಭೀಮ, ಉತ್ಸಾಹಶರಧಿಯೂ ಪ್ರತಾಪ ಮಾರ್ತಾಂಡನೂ ಆದ ಪಾರ್ಥ, ವಾಗ್ವಿನೋದಪ್ರಿಯನಾದ ಇಂದ್ರ, ಯುದ್ಧವಿನೋದಿಯೂ ಭಕ್ತಕಾರುಣ್ಯನಿಧಿಯೂ ಆದ ಸಾಕ್ಷಾತ್ ಪರಮೇಶ್ವರ—ಇವರ ಸುಂದರ, ಸುಸ್ಪಷ್ಟ, ಹಾಗು ಸಮಗ್ರ ಪಾತ್ರಚಿತ್ರಗಳನ್ನು ಕಾವ್ಯವನ್ನೊಮ್ಮೆ ಓದಿದವರೂ ಮರಯುವಂತಿಲ್ಲ.

ಭಾರವಿಯು ಪಂಡಿತರಲ್ಲಿ 'ಅರ್ಥಗೌರವಕ್ಕೆ' ಹೆಸರಾದವನು. "ಭಾರವೇರರ್ಥಗೌರವಮ್" ಎಂಬುದು "ಉಪಮಾಕಾಳಿದಾಸಸ್ಯ" ಎಂಬಂತೆ ಸುಪರಿಚಿತವಾದ ಪ್ರಶಸ್ತಿಸೂತ್ರ, ವಸ್ತುತಃ ಕಿರಾತಾರ್ಜುನೀಯದಲ್ಲೇ ಎರಡನೆಯ ಸರ್ಗದಲ್ಲೊಮ್ಮೆ, ಮತ್ತೆ ಹನ್ನೊಂದನೆಯ ಸರ್ಗದಲ್ಲೊಮ್ಮೆ, ಮತ್ತೆ ಹದಿನೈದನೆಯ ಸರ್ಗದಲ್ಲೊಮ್ಮೆ, ಈ 'ಅರ್ಥಗೌರವ'ದ ಉಲ್ಲೇಖ ಬರುತ್ತದೆ.[15] ಇಲ್ಲಿ 'ಅರ್ಥ' ವೆಂದರೆ ಪ್ರತಿಪಾದ್ಯವಿಷಯ, ಅರ್ಥ

---

15. ಹೋಲಿಸಿ —' ಸ್ಫುಟತಾ ನ ಪದೈರಪಾಕೃತಾ
ನ ಚ ನ ಸ್ವೀಕೃತಮರ್ಥಗೌರವಮ್. II. 27.

ಶಾಸ್ತ್ರಪ್ರಕ್ರಿಯೆ, ಎರಡೂ ಕವಿವಿವಕ್ಷಿತವೆಂಬುದು ಆಯಾ ಸಂದರ್ಭಗಳ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಕಾಳಿದಾಸಾದಿಗಳಲ್ಲಿಯೂ ಕೂಡ ಅರ್ಥ ಅಥವಾ ಕಾವ್ಯಾರ್ಥದ ಲಾಘವವುಂಟೆಂದು ಯಾರೂ ಎಂದಿಗೂ ತಿಳಿಯುವಂತಿಲ್ಲ. ಭಾರವಿಯ ವೈಲಕ್ಷಣ್ಯವೆಂದರೆ ಅರ್ಥಶಾಸ್ತ್ರಪ್ರಕ್ರಿಯೆಯ ಅಥವಾ ರಾಜನೀತಿಯ ಸುಂದರ ಸಂಯೋಜನೆ. ಇದು ಪೂರ್ವಕವಿಗಳಲ್ಲಿ ಇಷ್ಟು ಸ್ಫುಟವಾಗಿ ಇದೇ ಪ್ರಮಾಣದಲ್ಲಿ ಇಲ್ಲ, ವರ್ಣಿತವಾದ ವಿಷಯವು ಗುರು ಅಥವಾ ಉದಾರ ಅಥವಾ ಉನ್ನತವಾಗಿರುವುದರ ಜತೆಗೆ ರಾಜಾದಿಗಳಿಗೆ ಉಪಯುಕ್ತವಾದ ನೀತಿತತ್ತ್ವಗಳ ಉಪದೇಶವೂ ಕೂಡಿಬರುವುದು ಭಾರವಿಯ ವೈಶಿಷ್ಟ್ಯ, ಅವನ ಪಾಂಡಿತ್ಯದ ಪುಷ್ಟಿ. ಇದನ್ನೇ ಕೃಷ್ಣಕವಿಯು 'ಭಾರವಿಯ ಕೃತಿ, ಒಂದೇಕಡೆ ಇದ್ದರೂ ವಸ್ತುನಿಕರವನ್ನೆಲ್ಲ ಬೆಳಗುತ್ತಾ ಆನಂದವನ್ನು ತರುವ ದಾರಿದೀಪದಂತೆ ರಮಣೀಯ ವಸ್ತು ಸಕಲರಿಗೂ ಉಪಜೀವ್ಯ ಎಂದು ಹೊಗಳಿದ್ದಾನೆ.[16] ಭಾರವಿಯ ಶಬ್ದಶುದ್ಧಿಯೂ ಅರ್ಥಸಂಪತ್ತೂ ಅನ್ಯಾದೃಶವಾದುವು ಆತನ ಪಾಂಡಿತ್ಯದ ಒಂದು ವ್ಯಾಖ್ಯಾಂಗ ರಾಜನೀತಿಯನ್ನು ಕುರಿತುದು. ವ್ಯಾಸರ ಮೂಲಕೃತಿಯಲ್ಲಿ ಗುಪ್ತಚಾರನೂ ಇಲ್ಲ; ಆದರ್ಶರಾಜನಾದ ದುರ್ಯೋಧನನೂ ಇಲ್ಲ; ವ್ಯಾಸ, ಭೀಮ, ಧರ್ಮರಾಜ, ದ್ರೌಪದಿ, ಯಾರೂ ರಾಜಕಾರಣಪಟುಗಳಂತೆ ಮಾತನಾಡುವುದಿಲ್ಲ. ಆದರೆ ಕಿರಾತಾರ್ಜುನೀಯದಲ್ಲಿ ಎಲ್ಲರೂ ರಾಜನೀತಿವಿಶಾರದರೇ. ಮನು, ಯಾಜ್ಞವಲ್ಕ್ಯ, ಕೌಟಿಲ್ಯ ಮುಂತಾದ ಶಾಸ್ತ್ರಕಾರರು ಹೇಳುವ ಸೂಕ್ಷ್ಮ ಪ್ರಕ್ರಿಯೆಗಳನ್ನು ಎಲ್ಲರೂ ಬಲ್ಲವರೇ. ರಾಜಪುತ್ರಾದಿಗಳಿಗೆ ಶಾಸ್ತ್ರಾರ್ಥವನ್ನು ಹೃದ್ಯವಾಗಿ ಕಾವ್ಯವು ಬೋಧಿಸುವಂತಿರಬೇಕೆಂಬ ಧ್ಯೇಯವು ಸಾಧಿತವಾಗಿರುವ ಮೊದಲ ಮಹಾಕಾವ್ಯ ಭಾರವಿಯ ಕಿರಾತಾರ್ಜುನೀಯ. ಅನೇಕ ವೃತ್ತವಿಲಾಸಗಳಿಂದಲೂ, ಏಕಾಕ್ಷರೀ, ದ್ವ್ಯಕ್ಷರೀ ಗತಪ್ರತ್ಯಾಗತಾದಿ ಅಕ್ಷರವಿನ್ಯಾಸ ವೈಚಿತ್ರ್ಯಗಳಿಂದಲೂ, ಯಮಕಾನುಪ್ರಾಸಾದಿ ಚಿತ್ರಬಂಧಗಳಿಂದಲೂ

---

'ಔದಾರ್ಯಾದರ್ಥಸಂಪತ್ತೇಃ
ಶಾಂತಂ ಚಿತ್ತಂ ಋಷೇರಿವ XI 40.
ಸ್ತುವಂತಿ ಗುರ್ವೀಮಭಿಧೇಯಸಂಪದಂ. XIV. 5

16 ಪ್ರದೇಶವೃತ್ತ್ಯಾಪಿ ಮಹಾಂತಮರ್ಥಂ ಪ್ರದರ್ಶಯನ್ತೀ ರಸಮಾದಧಾನಾ ।
ಸಾ ಭಾರವೇಃ ಸತ್ಪಥದೀಪಿಕೇವ ರಮ್ಯಾಕೃತಿಃ ಕೈರಿವ ನೋಪಜೀವ್ಯಾ ॥

ಬಂಧುರವಾಗಿರುವ ಮೊದಲ ಮಹಾಕಾವ್ಯವೂ ಕಿರಾತಾರ್ಜುನೀಯವೇ. ಈ ನೂತನ ಸಂಪ್ರದಾಯವೇ ಮುಂದಿನ ಮಾಘಾದಿ ಮಹಾಕವಿಗಳಿಗೆಲ್ಲ ಮೇಲ್ಪಂಕ್ತಿಯಾಯಿತು. ಭಾರವಿಯ ಸಂಪ್ರದಾಯವನ್ನು ಮರೆಸುವಂತಹ ಮತ್ತೊಂದು ಸಂಪ್ರದಾಯವನ್ನು ಸ್ಥಾಪಿಸುವ ಮಹಾಕವಿ ಮುಂದೆಂದೂ ಹುಟ್ಟಲಿಲ್ಲ. ಈ ಸಂಪ್ರದಾಯವನ್ನು ನೋಡಿಕೊಂಡೇ ಭಾಮಹಾದಿಗಳು ಮಂತ್ರದೂತಾದಿಗಳು ಮಹಾಕಾವ್ಯದ ಮುಖ್ಯಾಂಗಗಳೆಂದು ಪರಿಗಣಿಸಿದ ರೆಂದು ಹೇಳುವುದಕ್ಕೂ ಆಸ್ಪದವಿದೆ. ಲಾಕ್ಷಣಿಕರು ಇದಕ್ಕಿಂತ ಹೆಚ್ಚಿನ ಮನ್ನಣೆಯನ್ನು ಒಬ್ಬ ಕವಿಗೆ ಕೊಡುವುದೇನಿದೆ? ಭಾರವಿಯು ಸರ್ಗಾಂತ್ಯ ಗಳಲ್ಲೆಲ್ಲ 'ಮುದ್ರೆ'ಯಾಗಿ 'ಲಕ್ಷ್ಮೀ' ಶಬ್ದವನ್ನು ಬಳಸಿದರೆ ಅದೂ ಲಾಕ್ಷಣಿಕರಿಗೆ ಒಂದು ನಿರ್ದೇಶಯೋಗ್ಯವಾದ ಮಹಾಕಾವ್ಯ ನಿಯಮವೇ ಆಗಿಬಿಟ್ಟಿತು. ಮಾಘಾದಿ ಮೇಧಾವಿಗಳಿಗೂ ಅನುಕರಣಯೋಗ್ಯವಾದ ಮಾದರಿಯೆನಿಸಿತು.

ಭಾರವಿ ಮಹಾಕವಿಯೆಂದು ಸರ್ವರೂ ಗೌರವಿಸುವುದಕ್ಕೆ ಅವನ ಪ್ರತಿಭೆಯ ಉಜ್ಜ್ವಲತೆಯೇ ಎಲ್ಲಕ್ಕೂ ಹೆಚ್ಚಿನ ಕಾರಣ ಅವನು ಸರಸ್ವತಿಯ ಭಂಡಾರವನ್ನೇ ಸೂರೆಮಾಡಬಲ್ಲ, ವರ್ಣನೆಗಳನ್ನು ತರ ತರಂಗವಾಗಿ, ಮಾಲೆ ಮಾಲೆಯಾಗಿ ಸೃಷ್ಟಿಸಬಲ್ಲ ಕವಿಪುಂಗವ ಋತು ಋತುಗಳಲ್ಲೂ ಬೇರೆಯಾಗಿ ಕಂಗೊಳಿಸುವ ಪ್ರಕೃತಿಮಾತೆಯ ಸೊಬಗಾಗಲಿ, ಮುಚ್ಚಂಜೆಯಲ್ಲಿ ಮನೆಗೆ ಮರಳುವ ಬೆಳ್ಗೆಚ್ಚಲಿನ ತುರುವಿಂಡುಗಳ ದೃಶ್ಯ ವಾಗಲಿ, ಅವುಗಳ ಬಳಿಯಲ್ಲಿ ದಾರಿಕಾರರನ್ನು ಮುಗ್ಧರಾಗಿಸುತ್ತ ಸುಳಿವ ನೀತೋಳ, ಚಳ್ಲೆಗಂಗಳ ಗೊಲ್ಲವೆಣ್ಗಳ ನೋಟವಾಗಲಿ, ಕವಿಯ ಕಲ್ಪನೆಗೆ ಸಮಾನವಾಗಿ ರೆಕ್ಕೆಯನ್ನೀಯುತ್ತವೆ. ಪರ್ವತರಾಜಿಯ ಸೌಂದ ರ್ಯವು ಅವನ ಪ್ರತಿಭೆಗೆ ಪ್ರೇರಕವಾಗುವಂತೆ ವನರಾಜಿಯ ವೈಭವವೂ ಪ್ರಚೋದಕವಾಗುತ್ತದೆ, ಕಾವ್ಯಾಲಂಕಾರಗಳನ್ನೆಲ್ಲ 'ಸ್ವಭಾವೋಕ್ತಿ', ಮತ್ತು 'ಅತಿಶಯೋಕ್ತಿ'ಗಳೆಂಬ ಪ್ರಕಾರಗಳಲ್ಲಿ ಐಕ್ಯಮಾಡಬಹುದೆಂಬ ಲಾಕ್ಷಣಿಕರ ಸಿದ್ಧಾಂತವನ್ನಿಲ್ಲಿ ಅನ್ವಯಿಸಿದರೆ ನಾಲ್ಕನೆಯ ಸರ್ಗದಲ್ಲಿ ಸ್ವಭಾವೋಕ್ತಿಯ ಚೆಲುವನ್ನೂ ಐದು ಆರನೆಯ ಸರ್ಗಗಳಲ್ಲಿ ಅತಿಶಯೋ ಕ್ತಿಯ ಚಮತ್ಕಾರವನ್ನೂ ಗುರುತಿಸಬಹುದು. ಭಾರವಿಯ ಉಪಮೆ,

ರೂಪಕ, ಉತ್ಪ್ರೇಕ್ಷೆಗಳೂ ಕೂಡ ಅನ್ಯಾದೃಶವಾದ ಕಾಂತಿಯಿಂದ ಮಿರುಗುತ್ತವೆ, ನೈಜಾನುಭೂತಿಗೆ ಸಾಕ್ಷಿಗಳಾಗುತ್ತವೆ. ಕವಿಸಮಯಗಳ ಕೃತ್ರಿಮತೆ ಭಾರವಿಯಲ್ಲಿ ಇನ್ನೂ ಇಲ್ಲ. ಅದೇ ಅವನ ವರ್ಣನಾವೈಶಿಷ್ಟ್ಯ. ಭಾರವಿಯ ಅಲಂಕಾರಗಳಲ್ಲಿ ಪ್ರತಿಭಾನಾವೀನ್ಯವೆಂದೂ ಕುಂದುವುದಿಲ್ಲ. ಒಂದೆರಡು ಉದಾಹರಣೆಗಳನ್ನು ನೋಡಿ.—

ಶ್ಲಿಷ್ಟೋಪಮೆ :—

ಅಕೃತ್ರಿಮಪ್ರೇಮರಸಾಭಿರಾಮಂ
ರಾಮಾರ್ಪಿತಂ ದೃಷ್ಟಿವಿಲೋಭಿದೃಷ್ಟಮ್।
ಮನಃಪ್ರಸಾದಾಂಜಲಿನಾ ನಿಕಾಮಾ
ಜಗ್ರಾಹ ಪಾಥೇಯಮಿವೇಂದ್ರಸೂನುಃ ॥

ಸಹಜ ಪ್ರೇಮದ ರಸದಿಂ ತುಂಬಿದ
ಸತಿಯಳ ಚೆಲ್ವಿನ ನೋಟವನು ।
ಮನದುಲ್ಲಾಸದ ಬೊಗಸೆಯಿನಾಂತನು
ಪಾರ್ಥನು ಪಯಣದ ಬುತ್ತಿಯೊಲು ॥ [17]

ಉತ್ಪ್ರೇಕ್ಷೆ - -

ಅವಿರತೋಜ್ಝಿತವಾರಿವಿಪಾಂಡುಭಿ
ರ್ವಿರಹಿತೈರಚಿರದ್ಯುತಿತೇಜಸಾ ॥
ಉದಿತಪಕ್ಷಮಿವಾರತನಿಃಸ್ವನೈಃ
ಪೃಥುನಿತಂಬವಿಲಂಬಿಭಿರಂಬುದೈಃ ॥

ಮಳೆಯನು ಸುರಿಸುತೆ ಬೆಳ್ಪನು ತಳೆಯುತೆ
ಸೆಳೆಮಿಂಚಿನ ಬೆಳಕನು ಕಳೆಯುತ್ತೆ ।
ಗರ್ಜನೆಯುಡಗಿದ ತಪ್ಪಲ ಮುಗಿಲಿಂ
ಬೆಟ್ಟಕೆ ರೆಕ್ಕೆಯೆ ಮೂಡಿದುವೆನಿಸೆ ॥ [18]

17. ಕನ್ನಡ ಕಿರಾತಾರ್ಜುನೀಯ, III. ೩೭.
18. ಅದೇ, V. ೬.

ಸ್ವಭಾವೋಕ್ತಿ :--

**ಗತಾನ್ ಪಶೂನಾಂ ಸಹಜನ್ಮಬಂಧುತಾಂ**
**ಗೃಹಾಶ್ರಯಂ ಪ್ರೇಮ ವನೇಷುಬಿಭ್ರತಃ ।**
**ದದರ್ಶ ಗೋಪಾನುಪಧೇನು ಪಾಂಡವಃ**
**ಕೃತಾನುಕಾರಾನಿವ ಗೋಭಿರಾರ್ಜವೇ ॥**

**ದನಗಳೊಡಹುಟ್ಟಿದರೊ ಎನಿಸುವನಂಟನುಕ್ಕಿಸೆ**
**ವನವೆ ಮನೆಯೆನಿಪಾತರು । [ಗೊಲ್ಲರು**
**ಸಾಧುತನದಲಿ ಗೋವುಗಳನೇ ಪೋಲುತಿಹರೆ**
**ದನಗಳೆಡೆಯಲಿ ಕಾಡನು ॥ [19] [ನಲವರನು**

ನಿದರ್ಶನೆ —

**ಉತ್ಫುಲ್ಲಸ್ಥಲನಲಿನೀವನಾದಮುಷ್ಮಾ-**
**ದುದ್ಧೂತಃ ಸರಸಿಜಸಂಭವಃ ಪರಾಗಃ ।**
**ವಾತ್ಯಾಭಿರ್ವಿಯತಿ ವಿವರ್ತಿತಃ ಸಮಂತಾ**
**ದಾಧತ್ತೇ ಕನಕಮಯಾತಪತ್ರಲಕ್ಷ್ಮೀಮ್ ॥**

**ಅರಳಿದ ನೆಲದಾವರೆವನದಿಂದಿದೊ**
**ಎದ್ದಿಹ ಪದುಮದ ಪೂದೂಳಿ ।**
**ಗಿರ್ರನೆ ತಿರುಗುತೆ ಗಾಳಿಗೆ ಗಗನದೆ**
**ಪೊಂಗೊಡೆ ಚೆಲುವನು ತಳೆಯುತಿರೆ ॥ [20]**

ಅತಿಶಯೋಕ್ತಿ —

**ತಪನಮಂಡಲದೀಪಿತ ಮೇಕತಃ**
**ಸತತನೈಶತಮೋವೃತಮನ್ಯತಃ ।**
**ಹಸಿತಭಿನ್ನತಮಿಸ್ರಚಯಂ ಪುರಃ**
**ಶಿವಮಿವಾನುಗತಂ ಗಜಚರ್ಮಣಾ ॥**

---

19. ಅದೇ, IV. ೧೩.

20 ಅದೇ, V ೩೯ ಈ ಒಂದು ಅಲಂಕಾರದ ಸೊಬಗಿಗೇ ಪರವಶರಾದ ಹಿಂದಿನ ಸಂಸ್ಕೃತಸಹೃದಯರು ಭಾರವಿಗೆ 'ಛತ್ರಭಾರವಿ'ಯೆಂಬ ಪ್ರೇಮನಾಮವ ನ್ನಿತ್ತಿದ್ದರು, 'ದೀಪಶಿಖಾ ಕಾಳಿದಾಸ' ಎಂಬಂತೆ.

ಒಂದೆಡೆ ಸೂರ್ಯನ ಬಿಸಿಲದು ಹೊಳೆವುದು
ಮತ್ತೊಂದೆಡೆ ಕಾರ್ಗತ್ತಲೆಯಿಹುದು ।
ಮುಂಗಡೆ ತಮವನು ನಗೆಯುಪಹರಿಸಲು
ಗಜಚರ್ಮವು ಹಿಂದಿಹ ಶಿವನೆನಲು ॥ 21

ರೂಪಕ —

ಪ್ರಬಭೂವ ನಾಲಮವಲೋಕಯಿತುಂ
ಪರಿತಃ ಸರೋಜರಜಸಾರುಣಿತಮ್ ।
ಸರಿದುತ್ತರೀಯಮಿವ ಸಂಹತಿಮತ್
ಸ ತರಂಗರಂಗಿ ಕಲಹಂಸಕುಲಮ್ ॥

ಪದುಮದ ರೇಣುಗಳಿಂದರುಣಿಸುತಿರೆ
ಸುತ್ತಲು ಅಲೆಗಳ ಚೆಲುವೇರೆ ।
ಅಂಚೆಯ ಗುಂಪನು ನೋಡುತೆ ಸೋತನು
ತೊರೆಗದೆ ಮೇಲುದು ಎಂದವನು ॥ 22

ಹೀಗೆ ಒಂದೊಂದು ಸರ್ಗದಿಂದಲೂ ಸುಂದರ ಅಲಂಕಾರಗಳಿಗೆ ಹತ್ತಾರು ಉದಾಹರಣೆಗಳನ್ನು ಕೊಡುತ್ತ ಹೋಗಬಹುದು. ಶೃಂಖಲಾಮೂಲವಾದ ಸಾರ, ಏಕಾವಲಿ, ಕಾರಣಮಾಲಾ, ಮುಂತಾದ ಅಲಂಕಾರಗಳಿಂದಲೂ ಉಕ್ತಿ ಚಮತ್ಕಾರ ಉಕ್ಕುತ್ತದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಭಾರವಿ ಕಾಳಿದಾಸನಂತೆಯೇ ಲೋಕೋಕ್ತಿಗಳನ್ನೂ ಅರ್ಥಾಂತರನ್ಯಾಸಗಳನ್ನೂ ಬಳಸಿ ಇವು ಸಂಸ್ಕೃತದ ಗಾದೆಗಳಾಗುವಂತೆ ಮಾಡಿದ್ದಾನೆ. 'ಹಿತಂ ಮನೋಹಾರಿ ಚ ದುರ್ಲಭಂ ವಚಃ,' 'ಅಹೋ ದುರಂತಾ ಬಲವದ್ವಿರೋಧಿತಾ,' 'ವಿಚಿತ್ರರೂಪಾಃ ಖಲು ಚಿತ್ತ ವೃತ್ತಯಃ,' 'ಅವಿವೇಕಃ ಪರಮಾಪದಾಂ ಪದಂ' 'ವಸಂತಿ ಹಿ ಪ್ರೇಮ್ಣಿ ಗುಣಾ ನ ವಸ್ತುಷು' ಮುಂತಾದುವು ಒಂದೆರಡು ನಿದರ್ಶನಗಳು, ಭಾರವಿಯ ಲೋಕಾನುಭವದಿಂದ ಬಂದ ಸೂಕ್ತಿರತ್ನಗಳು.

21 ಅದೇ, V ೨

22. ಅದೇ, VI ೬

ಕಾಳಿದಾಸನ ಶೈಲಿ ದ್ರಾಕ್ಷಾಪಾಕವಾದರೆ ಭಾರವಿಯದು ನಾರಿಕೇಳಪಾಕ"[23] ಕಾಳಿದಾಸನ ಚಿತ್ತವೃತ್ತಿ ಕೋಮಲ, ಭಾರವಿಯದು ಗಂಭೀರ. ಭಾರವಿಯ ಹಿಮವದ್ವರ್ಣನೆಯನ್ನು ಕಾಳಿದಾಸನ ವರ್ಣನ ಯೊಂದಿಗೆ ಹೋಲಿಸಿದರೆ ಇಬ್ಬರ ಪ್ರತಿಭಾತಾರತಮ್ಯವು ವೇದ್ಯವಾಗುತ್ತದೆ. ಕಾಳಿದಾಸನು ಉಪಕ್ರಮದಲ್ಲಿಯೇ 'ದೇವತಾತ್ಮ'ನೆಂದು ಪರ್ವತಕ್ಕೆ ವಿಶೇಷಣ ಹೇಳಿ ಅದಕ್ಕನುಗುಣವಾಗಿ ವರ್ಣಿಸಿರುವುದು ಆ ಕಾವ್ಯವಸ್ತುವಾದ ಪಾರ್ವತೀಜನಕತ್ವದ ದೃಷ್ಟಿಯಿಂದ ಸಮುಚಿತವಾಗಿದೆ. ಆದರೆ ಮಹಾ ಶೈಲದ ಯಥಾರ್ಥ ಭವ್ಯತೆ (Sublimity) ಒಡಮೂಡುವುದು ಭಾರವಿಯ ದಿವ್ಯಪ್ರತಿಭೆಯ ಫಲಗಳಾದ ಉತ್ಪ್ರೇಕ್ಷೆ ಅತಿಶಯೋಕ್ತಿಗಳಲ್ಲಿ. ಭಾರವಿಯು ಪೌರಾಣಿಕಲೋಕದಿಂದ ಅಲಂಕಾರಗಳನ್ನು ತರಬಲ್ಲನಾದರೂ ತಾನು ಸ್ವಂತವಾಗಿ ಅನುಭವಿಸಿದ ಪ್ರಪಂಚದಿಂದಲೇ ಕಲ್ಪನಾಚಿತ್ರಗಳನ್ನು ರೇಖಿಸುವುದು ಅವನ ವೈಶಿಷ್ಟ್ಯ. ಕಾಳಿದಾಸನ ಮನೋಧರ್ಮವು ಸಹಜವಾಗಿಯೇ ಸುಕುಮಾರವಾದುದು. ಅವನ ಶೈಲಿ ಮಧುರ. ಅದು ಶೃಂಗಾರ ಚಿತ್ರಗಳಲ್ಲಿ ಪಡೆಯುವ ಸಿದ್ಧಿ ಅದ್ವಿತೀಯ. ಆದರೆ ಕ್ಷಾತ್ರದ ಕಿಡಿಯಂತೆ ಕ್ರೋಧದ ಉರಿಯನ್ನೂ, ಅಳಲಿನ ಬೆಂಕಿಯಂತೆ ಯುದ್ಧದ ಬಿರುಬನ್ನೂ, ಹೈಮಾಚಲ ಸ್ವರೂಪದಂತೆ ಸುರಲೋಕದವರ ಸುರತಗೋಷ್ಠಿಯನ್ನೂ ವರ್ಣಿಸಲು ಭಾರವಿಯ ಶೈಲಿಗಿರುವ ಸಾಮರ್ಥ್ಯ ಕಾಳಿದಾಸನಿಗಿಂತ ಮಿಗಿಲಾದುದು. ಭಾರವಿಯ ಶೈಲಿಯಲ್ಲಿರುವ ಜೋರು ಅಥವಾ ಏರು ಸಂಸ್ಕೃತದ ಮತ್ತಾವ ಕವಿಯಲ್ಲಿಯೂ ಇಲ್ಲ. ಶಿವನ ವ್ಯಕ್ತಿಚಿತ್ರವನ್ನು ರೇಖಿಸುವಲ್ಲಿ ಕಾಳಿದಾಸನಿಂದಲೇ ಭಾರವಿ ಪ್ರಚೋದನೆ ಪಡೆದಿರುವುದನ್ನೂ ಕಾಣಬಹುದು. ಅವನ 'ವಿರುದ್ಧವೇಷಾಭರಣದ ಕಾಂತತೆ'ಯು ಕುಮಾರಸಂಭವದಲ್ಲಿ ಬಂದುದನ್ನೇ

---

23 ನಾರಿಕೇಲಫಲಸಂಮಿತಂ ವಚೋ ಭಾರವೇ: ಸಪದಿ ತದ್ವಿಭಜ್ಯತೇ ।
ಸ್ವಾದಯಂತು ರಸಗರ್ಭನಿರ್ಭರಂ ಸಾರಮಸ್ಯ ರಸಿಕಾ ಯಥೇಪ್ಸಿತಂ ॥
—ಮಲ್ಲಿನಾಥ.

ಭಾರವಿಕಾವ್ಯಂ ಭಾವಿಸೆ
ಧಾರಿಣಿಯೊಳ್ ನಾರಿಕೇಳಫಲಕೆಣೆಯೊಡೆಯಲ್ ।
ಧೀರರ್ ಧೀಬಲದಿಂ ರಸ
ಸಾರಂ ಸವಿಯಲ್ಕೆ ವರ್ಪುದೊಳಗಿಂ ಮಧುರಂ ॥

ಭಾರವಿ ಇಲ್ಲಿಯೂ ಅಳವಡಿಸಿಕೊಂಡಿದ್ದಾನೆ,[24] ಅವಕ್ಕೆ ಹೊಸ ಕಾಂತಿಯನ್ನು ತಂದಿದ್ದಾನೆ.

ಹೀಗೆ ಭಾರವಿ ಕಾಳಿದಾಸನ ಅನಂತರ ಸಂಸ್ಕೃತ ಕಾವ್ಯದ ಚಕ್ರವರ್ತಿ. ಮುಂದಿನವರೆಲ್ಲ ಇಬ್ಬರ ಅನುವರ್ತಿಗಳು ಇಬ್ಬರ ಪ್ರತಿಭೆಯೂ ಪರಸ್ಪರ ಪೂರಕ. ಸಂಸ್ಕೃತ ಕಾವ್ಯಾಕಾಶದಲ್ಲಿ ಭಾರವಿ ಬಾಲಸೂರ್ಯನಾದರೆ ಕಾಳಿದಾಸ ಪೂರ್ಣಿಮಾ ಚಂದ್ರ, ಮುಂದಿನವರಲ್ಲಿ ಸಾಧನೆ ಹೆಚ್ಚು, ಸಿದ್ಧಿ ಕಡಿಮೆ, ಪ್ರಯತ್ನ ಹೆಚ್ಚು, ಪ್ರಯೋಜನ ಕಡಿಮೆ, ಪರಿಷ್ಕಾರ ಹೆಚ್ಚು, ಪರಿಣಾಮ ಕಡಿಮೆ. ಭಾರವಿಯ ಶೈಲಿಯ ಮುಖ್ಯ ಗುಣಗಳು ಅವನ ಮಾತಿನಲ್ಲಿಯೇ —

**ಪ್ರಸಾದರಮ್ಯಮೋಜಸ್ವಿ ಗರೀಯಃ ಲಾಘವಾನ್ವಿತಮ್ ।**
**ಸಾಕಾಂಕ್ಷಮ್ ಅನುಪಸ್ಕಾರಂ ವಿಷ್ವಗ್ಗತಿನಿರಾಕುಲಮ್ ॥**
**ನ್ಯಾಯನಿರ್ಣೀತಸಾರತ್ವಾತ್ ನಿರಪೇಕ್ಷಮಿವಾಗಮೇ ।**
**ಅಪ್ರಕಮ್ಪ್ಯತಯಾನ್ಯೇಷಾಂ ಆಮ್ನಾಯವಚನೋಪಮಮ್ ॥**

**ಅಲಂಘ್ಯತ್ವಾಜ್ಜನೈರನ್ಯೈಃ ಕ್ಷುಭಿತೋದನ್ವದೂರ್ಜಿತಮ್ ।**
**ಔದಾರ್ಯಾದರ್ಥಸಂಪತ್ತೇಃ ಶಾಂತಂ ಚಿತ್ತಂ ಋಷೇರಿವ ॥**[25]

'ಪ್ರಸಾದರಮ್ಯವಾದರೂ ಓಜಸ್ವಿ, ಗರೀಯವಾದರೂ ಲಾಘವಾನ್ವಿತ, ಸಾಕಾಂಕ್ಷವಾದರೂ ಅನುಪಸ್ಕಾರ, ಸರ್ವಜನಸುಲಭವೇದ್ಯ, ನ್ಯಾಯನಿರ್ಣೀತಸಾರ ಮತ್ತು ಶಾಸ್ತ್ರಸ್ವತಂತ್ರ, ಅದರ ಅಧಿಕಾರವಾಣಿ ವೇದವಾಕ್ಯಕ್ಕೆ ಸಮ, ಇತರ ಜನರಿಗೆ ಅಲಂಘ್ಯವಾಗಿ ಕ್ಷುಭಿತೋದಧಿಯಂತೆ ಊರ್ಜಿತ ಮತ್ತು ಅರ್ಥಸಂಪತ್ತಿಯ ಔದಾರ್ಯವಿದ್ದರೂ ಋಷಿಯ ಚಿತ್ತದಂತೆ ಶಾಂತ' ಈ ವಿರದ್ಧಗುಣಗಳೆಲ್ಲವೂ ಹೀಗೆ ಸಮರಸವಾಗಿ ಬೆರತ ಮತ್ತೊಬ್ಬ ಕವಿಯಿಲ್ಲ ಭಾರವಿ ದಾಕ್ಷಿಣಾತ್ಯನೆಂದಮೇಲೆ ಇವನೂ ವೈದರ್ಭೀರೀತಿಯ ಕವಿಯೇ ಎಂದು ಸ್ಪಷ್ಟಪಡಿಸುವ ಕಾರಣವಿಲ್ಲ. ಒಂದು ಸುಭಾಷಿತವು

---

24. ಸರ್ಗ ೧೮ರಲ್ಲಿ ಬರುವ 'ನ ರಾಗಿ ಚೇತಃ ಪರಮಾ ವಿಲಾಸಿತಾ, ವಧೂಃ ಶರೀರೇಽಸ್ತಿ ನ ಚಾಸ್ತಿ ಮನ್ಮಥಃ'.. (31) ಇತ್ಯಾದಿ ವರ್ಣನೆಯನ್ನು ಓದಿ

25 XI, 38-40

ಹೇಳುವಂತೆ–'ಪ್ರಕೃತಿಮಧುರಾ ಭಾರವಿಗಿರಃ'–ಭಾರವಿಯ ಸೂಕ್ತಿಗಳು ಪ್ರಕೃತಿಮಧುರ.[26]

ಭಾರವಿಯ ಗುಣಪ್ರಶಂಸೆಯ ಜತೆಗೆ ಅವನಲ್ಲಿ ಕಾಣಬರುವ ವರ್ಣನಾ ವ್ಯಾಮೋಹವನ್ನು ಕುರಿತು ಒಂದು ಮಾತನ್ನು ಆಡಬೇಕಾಗುತ್ತದೆ. ಇಲ್ಲಿ ಕಾವ್ಯದುದ್ದಕ್ಕೂ ನಾಯಕ ತಪಸ್ವಿವೇಷದ ಕ್ಷತ್ರಿಯವೀರ–ಅರ್ಜುನ. ಅವನ ಪಾತ್ರಪರಿಪುಷ್ಟಿಗಾಗಿ, ಅವನ ಕ್ಷಾತ್ರಪ್ರದರ್ಶನದಂತೆ ಅವನ ಅಚಲ ಧ್ಯೇಯಗಳ ನಿದರ್ಶನಕ್ಕಾಗಿ, ಇಂದ್ರ, ಪರಮೇಶ್ವರರ ವರ್ಣನೆ ಕ್ರಮಪ್ರಾಪ್ತವಾಗಿರುವಂತೆ, ಪ್ರಾಸಂಗಿಕವಾದ ಸುರಸುಂದರಿಯರ ತಪೋಭಂಗಪ್ರಯತ್ನವೂ ಸಮುಚಿತ ವೆಂದು ಸುಲಭವಾಗಿ ಒಪ್ಪಬಹುದು. ಅವನ ಉದ್ಯಮಗಳಿಗೆಲ್ಲ ಹಿನ್ನೆಲೆಯನ್ನು ಕಲ್ಪಿಸುವಂತೆ ದುರ್ಯೋಧನ, ಭೀಮ, ದ್ರೌಪದಿ, ಯುಧಿಷ್ಠಿರ, ವ್ಯಾಸ– ಇವರು ಆದಿಯಲ್ಲಿ ಬಂದಿರುವುದೂ ಸಮಂಜಸವಾಗಿದೆ. ನಾಟಕೀಯತೆ ಯಿಂದಲೂ, ನೀತಿವಾಕ್ಯಾಲಂಕಾರಗಳಿಂದಲೂ ನೈತುಂಬಿಕೊಂಡು ಕಾವ್ಯದ ಲ್ಲೆಲ್ಲ ಸ್ವಾರಸ್ಯಪೂರ್ಣವಾದ ಭಾಗಗಳೇ ಇವು. ಆದರೆ ಶರದ್ವರ್ಣನೆಯನ್ನು ಒಂದು ಸರ್ಗದಲ್ಲೂ, ಪರ್ವತವರ್ಣನೆಯನ್ನು ಒಂದೆರಡು ಸರ್ಗಗಳಲ್ಲೂ ಮಾಡಿರುವುದು ಆವರಣಕಲ್ಪನೆಗೆ ಅಗತ್ಯವೆಂದೇ ಕಥಂಚಿತ್ ಸಮರ್ಥಿ ಸಿದರೂ ಸುರಾಂಗನೆಯರ ಕ್ರೀಡೆಗಳು, ಸೂರ್ಯೋದಯ, ಮುಂತಾದುವನ್ನು ನಾಲ್ಕು ಸರ್ಗಗಳ ತುಂಬ ಮಾಡಿರುವುದು ಅತಿ ವಿಸ್ತೃತವೆಂದೇ ಹೇಳಬೇಕಾಗುತ್ತದೆ. ಈ ಒಂದೊಂದು ಸರ್ಗವೂ ಒಂದೊಂದು ಸ್ವತಂತ್ರ ಕಾವ್ಯದಂತಾಗಿ, ಹಿಂದಿನ ಕಥೆಯನ್ನೂ, ಪಾತ್ರಪುಷ್ಟಿಯನ್ನೂ ಮರೆಸಿಬಿಡು ತ್ತವೆ. ಈ ಕಥಾನಿರಪೇಕ್ಷ ವರ್ಣನಾವ್ಯಾಮೋಹವು ಮುಂದಿನವರಲ್ಲಿ ಮತ್ತೂ ಅಧಿಕವಾಗುತ್ತದೆ. ಈ ಪ್ರವೃತ್ತಿಗೆ ಭಾರವಿಯನ್ನೇ ಜನಕನೆಂದು ಹೇಳುವಂ ತಿದೆ. ಈ ಅನುಚಿತ ವರ್ಣನೆಗಳನ್ನು ಬಿಟ್ಟಲ್ಲದೆ ಪಾತ್ರಗಳ ಸ್ವರೂಪದ ವಿವೇಚನೆಯನ್ನೇ ಮಾಡುವಂತಿಲ್ಲ. ಇವನ್ನು ಬಿಟ್ಟು ವಿವೇಚಿಸಿದರೆ ದೃಢನಿಶ್ಚಯನಾದ ಅರ್ಜುನನೂ, ಕುಶಲಮತಿಯಾದ ಇಂದ್ರನೂ, ಲೀಲಾ ಕಿರಾತನಾದ ಸರ್ವೇಶ್ವರನೂ ಆಯಾ ಸಂವಾದಗಳಲ್ಲಿ ನಮ್ಮನ್ನು ಮುಗ್ಧ ರನ್ನಾಗಿ ಮಾಡುತ್ತಾರೆ. ಕೂರಂಬಿನ ವೇಗದಲ್ಲಿ ಕಾಣನ್ನೇ ಕೂಗಿಡಿಸುತ್ತ

26 ಕವಿಕಾವ್ಯಪರಿಚಯದಲ್ಲಿ ಹೆಚ್ಚಿನ ವಿವರಗಳಿಗೆ ಪೂರ್ವೋಕ್ತ ಕನ್ನಡ ಕಿರಾತಾರ್ಜುನೀಯವನ್ನು ಓದಿ

ಬರುವ ಕಾಡುಹಂದಿಯ ವರ್ಣನೆಯೂ ಭಾರವಿಯ ಪ್ರತಿಭೆಯನ್ನೇ ತೋರಿಸುವಂತಿದೆ

**ಭಟ್ಟಿ:**— 'ಶ್ರೀಧರಸೇನನರೇಂದ್ರಪಾಲಿತ'ವಾದ ವಲಭಿಯಲ್ಲಿ ಈತನು ಬರೆದ ಕಾವ್ಯವೇ 'ಭಟ್ಟಿಕಾವ್ಯ' ಅಥವಾ 'ರಾವಣವಧ.' ಚರಿತ್ರೆಯಲ್ಲಿ ಈ ಹೆಸರಿನ ರಾಜರು ಅನೇಕರಿರುವುದರಿಂದ ಕ್ರಿ.ಶ. 495 ರಿಂದ ಕ್ರಿ.ಶ. 641 ರೊಳಗೆ ಈತನು ಜೀವಿಸಿದ್ದನೆಂದು ಸ್ಥೂಲವಾಗಿ ಹೇಳಬಹುದಾಗಿದೆ. ಪ್ರಥಮಾಲಂಕಾರಿಕನಾದ ಭಾಮಹನಿಗೆ ಈತನ ಪರಿಚಯವಿತ್ತೋ ಎಂಬ ಸಂದೇಹ ಬರುವಂತೆ ಕೆಲವು ವಾಕ್ಯಗಳಿವೆ[27]

ರಾಮಾಯಣದ ಕಥೆಯನ್ನೆಲ್ಲ ಕಾವ್ಯದಲ್ಲಿ ಸಂಗ್ರಹಿಸಿದ್ದರೂ, ಭಟ್ಟಿಯ ಮುಖ್ಯ ಉದ್ದೇಶ ಕಥಾನಿರೂಪಣೆಯೂ ಅಲ್ಲ, ವರ್ಣನಾನಿರ್ವಹಣೆಯೂ ಅಲ್ಲ. ಶಬ್ದಲಕ್ಷಣ ಅಥವಾ ವ್ಯಾಕರಣನಿಯಮಗಳನ್ನೂ ಕಾವ್ಯಲಕ್ಷಣಗಳನ್ನೂ ಪ್ರಯೋಗಗಳ ಮೂಲಕ ಒಂದೂ ಬಿಡದಂತೆ ಪ್ರದರ್ಶಿಸುವ ಅದ್ಭುತವಿವಕ್ಷೆ ಭಟ್ಟಿಯದು. ಇದು ಶಬ್ದಲಕ್ಷಣಚಕ್ಷುಗಳಿಗೆ ದೀಪತುಲ್ಯವಾದರೆ ವ್ಯಾಕರಣ ಪರಿಜ್ಞಾನವಿಲ್ಲದವರಿಗೆ ಅಂಧರ ಹಸ್ತಾಮರ್ಶಸದೃಶವೆಂದು ಭಟ್ಟಿಯೇ ಹೇಳಿ ಕೊಂಡಿದ್ದಾನೆ.[28] ಅಷ್ಟೇ ಅಲ್ಲದೆ ಇದು 'ವ್ಯಾಖ್ಯಾಗಮ್ಯ'ವಾದ ಕಾವ್ಯ ವೆಂದೂ, ವಿದ್ವಾಂಸರಿಗೆ ಉತ್ಸವವೆಂದೂ, ತನ್ನ ವಿದ್ವತ್ಪ್ರಿಯತೆಯಿಂದ ಮಂದ ಮತಿಗಳನ್ನೆಲ್ಲ ತೀರಿಸಿಬಿಟ್ಟಿರುವುದಾಗಿಯೂ ಸಾರಿ ಹೇಳಲು ಮರೆತಿಲ್ಲ.[29] ಯುದ್ಧವಿಜಯಕ್ಕೆ ಪಾಶುಪತಾಸ್ತ್ರ ಹೇಗೋ ಹಾಗೆ ಭಾಷಾವಿಜಯಕ್ಕೆ ತನ್ನ ಕಾವ್ಯಾಭ್ಯಾಸ ಅಪ್ರತಿಹತ ಸಾಧನವೆಂದೂ ಸೂಚಿಸಿದ್ದಾನೆ.[30] ಈ ವಿವಕ್ಷೆಯೇ

27. ನೋಡಿ—ಡಾ॥ ಕೆ ಕೃಷ್ಣಮೂರ್ತಿ, ಕನ್ನಡಕಾವ್ಯಾಲಂಕಾರ, ಪು ೨೮

28 ದೀಪತುಲ್ಯಃ ಪ್ರಬಂಧೋಽಯಂ ಶಬ್ದಲಕ್ಷಣಚಕ್ಷುಷಾಮ್ ।
ಹಸ್ತಾಮರ್ಶ ಇವಾಂಧಾನಾಂ ಭವೇದ್ ವ್ಯಾಕರಣಾದೃತೇ ॥
XXII 33.

29 ವ್ಯಾಖ್ಯಾಗಮ್ಯಮಿದಂ ಕಾವ್ಯಮುತ್ಸವಃ ಸುಧಿಯಾಮಲಮ್ ।
ಹತಾ ದುರ್ಮೇಧಸಶ್ಚಾಸ್ಮಿನ್ ವಿದ್ವತ್ಪ್ರಿಯತಯಾ ಮಯಾ ॥
XXII. 34.

30. ...ಜನಯತಿ ವಿಜಯಂ ಸದಾ ಜನಾನಾಂ
ಯುಧಿ ಸುಸಮಾಹಿತಮೈಶ್ವರಂ ಯಥಾಸ್ತ್ರಮ್ ।—XXII. 32.

ಕಾವ್ಯಶತ್ರುವೆಂದು ಪರಿಗಣಿಸಿ ಭಟ್ಟಿಯನ್ನು ಕವಿಯೇ ಅಲ್ಲವೆನ್ನುವ ವಿಮರ್ಶಕ ರುಂಟು ಅಲ್ಲಲ್ಲಿ ಧಾತುರೂಪಾದಿಗಳ ಪ್ರದರ್ಶನವೇ ಮುಂತಾದ ಸ್ಥಲಗಳಲ್ಲಿ ಕಾವ್ಯಧರ್ಮಕ್ಕೆ ಲೋಪಬರುವುದೆಂದೆಲ್ಲರೂ ಒಪ್ಪಿದರೂ, ಒಟ್ಟಿನಮೇಲೆ ಕವಿಗೆ ಪ್ರತಿಭಾಪ್ರಕಾಶವೂ ಉಂಟೆನ್ನಬೇಕಾಗುತ್ತದೆ, ಅವನ ವರ್ಣನೆಯ ಓಘವನ್ನು ನಿರೀಕ್ಷಿಸಿದರೆ. ಅಸಾಧ್ಯವಾದ ಸನ್ನಿವೇಶದಲ್ಲಿಯೂ ಕಾವ್ಯ ಮಾಧುರ್ಯ ಕೆಲವೇ ಸರ್ಗಗಳಲ್ಲಿಯಾದರೂ ತಪ್ಪದೆ ಬರಬೇಕಾದರೆ ಭಟ್ಟಿಯು ಮಹಾಕವಿಯೇ ಆಗಿದ್ದಿರಬೇಕೆಂಬುದು ಸ್ಪಷ್ಟ ಆದರ ಏಕವಿಧ ವಾದ ರಸಾಭಿವ್ಯಕ್ತಿಯನ್ನಿಲ್ಲಿ ನಿರೀಕ್ಷಿಸುವಂತಿಲ್ಲ ಕಥಾಯೋಜನೆಯಲ್ಲಿ ನಾವೀನ್ಯವೇನೂ ಇಲ್ಲ, ಪಾತ್ರ ಪರಿಪೋಷಕ್ಕೆ ಅವಕಾಶವಿಲ್ಲ ಅಲ್ಲಲ್ಲಿ ಮಿಂಚುವ ಚೆಲುವೆಲ್ಲಾ ಒಂದೊಂದು ಪ್ರಕೃತಿವರ್ಣನೆಗೆ ಸಂಬಂಧಿಸಿದ್ದು, ಅಲಂಕಾರಗಳ ಚಮತ್ಕಾರವನ್ನು ಕುರಿತದ್ದು. ಇದು ಆಲಂಕಾರಿಕರೆಲ್ಲರೂ ಮೆಚ್ಚಿರುವ ಶರತ್ಕಾಲದ ವರ್ಣನಾಪದ್ಯ –

> **ನ ತಜ್ಜಲಂ, ಯನ್ನ ಸುಚಾರುಪಂಕಜಂ**
> **ನ ಪಂಕಜಂ ತದ್, ಯದಲೀನಷಟ್ಪದಮ್ ।**
> **ನ ಷಟ್ಪದೋಽಸೌ, ನ ಜುಗುಂಜ ಯಃ ಕಲಂ**
> **ನ ಗುಂಜಿತಂ ತತ್, ನ ಜಹಾರ ಯನ್ಮನಃ ॥**[31]

'ಚಾರು ಪಂಕಜಗಳಿಲ್ಲದ ಜಲವಿಲ್ಲ, ದುಂಬಿಗಳೆರಗದ ಪಂಕಜವಿಲ್ಲ, ಇಂಚರದಿಂದ ಹಾಡದ ದುಂಬಿಯಿಲ್ಲ, ಮನಸ್ಸನ್ನು ಸೆಳೆಯದ ಹಾಡಿಲ್ಲ!

ಇದನ್ನು ಏಕಾವಳ್ಯಲಂಕಾರಕ್ಕೆ ಮಮ್ಮಟಾದಿಗಳು ಉದಾಹರಣೆ ಯೆನ್ನುತ್ತಾರೆ.[32] ಇಲ್ಲಿ ಅರ್ಥವ್ಯಕ್ತಿ ತಿಳಿಯಾಗಿರುವಂತೆ ಶೈಲಿಯೂ ತಿಳಿಯಾಗಿದೆ.

ಭಟ್ಟಿಯೇ ಹತ್ತನೆಯ ಸರ್ಗದಲ್ಲಿ ಭಾಮಹನು ಹೇಳುವ ಅಲಂಕಾರ ಗಳಿಗೆಲ್ಲ ಒಂದೊಂದು ಸೊಗಸಾದ ಉದಾಹರಣೆ ಕೊಟ್ಟಿದ್ದಾನೆ. ಭಾಮಹನು ಹೇಳದ ಯಮಕ ಭೇದಗಳಿಗೂ ಲಕ್ಷ್ಯಗಳನ್ನು ಬರೆದಿದ್ದಾನೆ. ಕಾವ್ಯದಲ್ಲಿ

---

31. ಭಟ್ಟಿಕಾವ್ಯ. II, 19.
32. ಕಾವ್ಯಪ್ರಕಾಶ, ಉಲ್ಲಾಸ X.

ಮಾಧುರ್ಯಗುಣದ ಪ್ರದರ್ಶನಕ್ಕಾಗಿಯೇ ಒಂದು ಸರ್ಗವನ್ನು (XII) ರಚಿಸಿದ್ದಾನೆ ಹೀಗೆ ಅಲಂಕಾರಶಾಸ್ತ್ರದ ವಿಮರ್ಶಕರಿಗೂ ಈ ಕಾವ್ಯದಲ್ಲಿ ಆದರಣೀಯವಾದ ಸಾಮಗ್ರಿಯಿದೆ. ಹದಿಮೂರನೆಯ ಸರ್ಗದಲ್ಲಿ ಸಂಸ್ಕೃತ ಪ್ರಾಕೃತಗಳೆರಡಕ್ಕೂ ಸಲ್ಲುವ ತತ್ಸಮಶಬ್ದಗಳಿಂದಲೇ, ಆರ್ಯಾಗೀತಿ ಅಥವಾ ಸ್ಕಂಧಕವೆಂಬ ಮಾತ್ರಾ ಛಂದಸ್ಸಿನಲ್ಲಿ ಐವತ್ತು ಪದ್ಯಗಳನ್ನು ರಚಿಸಿದ್ದಾನೆ. ಈ ಛಂದಸ್ಸೇ ಕನ್ನಡದಲ್ಲಿ ಪ್ರಸಿದ್ಧವಾದ **ಕಂದ.** ದ್ವಿತೀಯಾಕ್ಷರ ಪ್ರಾಸ ಮಾತ್ರ ಭಟ್ಟಿಯಲ್ಲಿಲ್ಲ. ಕನ್ನಡಿಗರಿಗೆ ಅನುವಾದದ ಅಗತ್ಯವಿಲ್ಲದೆಯೇ ಈ ಪದ್ಯಗಳು ಅರ್ಥವಾಗುವಂತಿವೆಯೆಂಬುದನ್ನು ತೋರಿಸಲು ಕೆಳಗೆ ಕೆಲವನ್ನು ಉದಾಹರಿಸಲಾಗಿದೆ. ಭಟ್ಟಿಯ ಸಿರರ್ಗಳ ಶೈಲಿಗೆ ಅವಕ್ಕಿಂತ ಉತ್ತಮವಾದ ಉದಾಹರಣೆಗಳ ಅಗತ್ಯವಿಲ್ಲ --

1. **ಚಂಚಲ ತರುಹರಿಣಗಣಂ**
**ಬಹು ಕುಸುಮಾ ಬಂಧ ಬದ್ಧ ರಾಮಾವಾಸಂ ।**
**ಹರಿ ಪಲ್ಲವ ತರು ಜಾಲಂ**
**ತುಂಗೋರು ಸಮಿದ್ಧ ತರುವರ ಹಿಮಚ್ಛಾಯಂ ॥** [33]

2 **ಅವಗಾಢಂ ಗಿರಿಜಾಲಂ**
**ತುಂಗ ಮಹಾ ಭಿತ್ತಿ ರುದ್ಧ ಸುರ ಸಂಚಾರಂ ।**
**ಅಭಯ ಹರಿ ರಾಸ ಭೀಮಂ**
**ಕರಿ ಪರಿಮಲ ಚಾರು ಬಹಲ ಕಂದರ ಸಲಿಲಂ ॥** [34]

3. **ಅಳಿಗಣ ವಿಲೋಲ ಕುಸುಮಂ**
**ಸಕಮಲ ಜಲ ಮತ್ತ ಕುರರ ಕಾರಂಡಗಣಂ ।**
**ಫಣಿ ಸಂಕುಲ ಭೀಮ ಗುಹಂ**
**ಕರಿ ದಂತಸಮೂಢ ಸರಸ ವಸುಧಾ ಖಂಡಂ ॥** [35]

---

33. XIII 6
34. XIII 17
35. XIII 18

4 ಹರಿರವ ವಿಲೋಲ ವಾರಣ
ಗಂಭೀರಾಬದ್ಧ ಸರಸ ಗುರು ಸಂರಾವಂ ।
ಘೋಣಾ ಸಂಗಮ ಪಂಕಾ
ವಿಲ ಸುಬಲ ಭರ ಮಹೋರು ವರಾಹಂ ॥[36]

5. ಲಂಕಾಲಯ ತುಮುಲಾರವ
ಸುಭರ ಗಭೀರೋರು ಕುಂಜಕಂದರ ವಿವರಂ ।
ವೀಣಾರವ ರಸ ಸಂಗಮ
ಸುರಗಣ ಸಂಕುಲ ಮಹಾ ತಮಾಲ ಚ್ಛಾಯಂ ॥[37]

ಆರಂಭದ ಪದ್ಯ ರಾಮಬಾಣದಿಂದ ಕ್ಷುಭಿತವಾದ ಮಹೋದಧಿಯ ವರ್ಣನೆ. ಮುಂದಿನ ಪದ್ಯಗಳು ಕಪಿಸೈನ್ಯವು ಭೂವ್ಯಾಕಾಶಗಳಲ್ಲೆಲ್ಲ ತುಂಬಿ ಕೊಂಡುದನ್ನೂ ಅತ್ತ ರಾಕ್ಷಸಸೇನೆಯ ಕಲಕಲವನ್ನೂ ವರ್ಣಿಸುತ್ತವೆ. ಇಲ್ಲಿ ಕನ್ನಡದ ಕಂದಕ್ಕೆ ಸ್ಫೂರ್ತಿಯನ್ನಿತ್ತ ಪ್ರಾಚೀನ ಪ್ರಾಕೃತ 'ಸ್ಕಂಧಕ' ಅಥವಾ ಸಂಸ್ಕೃತ 'ಆರ್ಯಾಗೀತಿ'ಯ ಮೂಲರೂಪವು ಕನ್ನಡಿಗರಿಗೆ ಗಮನಾರ್ಹ.[38] ಈ ಮೂಲರೂಪದಲ್ಲಿ ಅನುಪ್ರಾಸದ ನಿಯಮವಾಗಲಿ, ಪ್ರತಿ ಪಾದದ ಆದ್ಯಕ್ಷರವೂ ಗುರು ಅಥವಾ ಲಘುವೇ ಆಗಿರಬೇಕೆಂಬ ನಿಯಮ ವಾಗಲಿ ಇಲ್ಲ. ಆದರೆ ಯತಿನಿಯಮವಿದೆ. ಇವನ್ನೋದುವಾಗ ಒಂದು ಹಳೆಗನ್ನಡ ಕಾವ್ಯವನ್ನೇ ಓದುತ್ತಿರುವೆವೆಂಬ ಭ್ರಾಂತಿ ನಮಗೆ ಬರುವಷ್ಟರ ಮಟ್ಟಿಗೆ ಭಟ್ಟಿಯ ಸಮಸಂಸ್ಕೃತ ಪ್ರಯೋಗ ಬಂದಿದೆ.[39]

**ಕುಮಾರದಾಸ:** ಭಟ್ಟಿಯಂತೆ ಕಾವ್ಯವಿಭಿನ್ನ ವಿವಕ್ಷೆಯೊಂದೂ ಇಲ್ಲದೆ ಕಾಳಿದಾಸನ ಕಾವ್ಯಮಾರ್ಗವನ್ನು ಅನುಸರಿಸಿ 'ಜಾನಕೀಹರಣ' ವೆಂಬ ಮಹಾಕಾವ್ಯವನ್ನು ರಚಿಸಿದ ಕೀರ್ತಿ ಸಿಂಹಳ ದ್ವೀಪದ ಕುಮಾರ

---

36 XIII. 20.

37. XIII. 32.

38. ಸಾಮಾನ್ಯವಾಗಿ ಪ್ರಾಕೃತಕಾವ್ಯಗಳಲ್ಲೆಲ್ಲ 'ಸ್ಕಂಧಕ' ಪ್ರಯೋಗ ಹೆಚ್ಚು

39. ಭಟ್ಟಿಯ ಕಾವ್ಯದೃಷ್ಟಿ ವ್ಯಾಕರಣಪ್ರಕ್ರಿಯೆಗಳಿಂದ ಆಚ್ಛಾದಿತವಾಗಿದೆ ಯೆಂದು ಮತ್ತೆ ಹೇಳುವ ಕಾರಣವಿಲ್ಲ.

ದಾಸನದು. ರಘುವಂಶವಿರುವಾಗಲೇ ಜಾನಕೀಹರಣ ಮಾಡುವುದಕ್ಕೆ ಒಬ್ಬ ರಾವಣ, ಒಬ್ಬ ಕುಮಾರದಾಸ, ಇಬ್ಬರೇ ಸಮರ್ಥರೆಂದು ಶ್ಲೇಷೆಯಿಂದ ವರ್ಣಿಸುವ ಸುಭಾಷಿತವೊಂದು ಜಲ್ಹಣನ 'ಸೂಕ್ತಿಮುಕ್ತಾವಳಿ'ಯಲ್ಲಿ ಬರುತ್ತದೆ.[40] ಈ ಕಾವ್ಯದಿಂದ ಪ್ರಾಚೀನ ಲಕ್ಷಣಗ್ರಂಥಗಳಲ್ಲಿ ಉದಾಹರಣೆಗಳನ್ನೆತ್ತಿಕೊಂಡಿದ್ದರೂ, ಪ್ರಚಾರ ತಪ್ಪಿಹೋಗಿ, ಈ ಶತಮಾನದ ಆದಿಯಲ್ಲಿ ಮಾತ್ರ ಅಪೂರ್ಣವಾಗಿ ಉಪಲಬ್ಧವಾಗಿ ಅಚ್ಚಾಗಿದೆ. ಬರೆದ 25 ಸರ್ಗಗಳಲ್ಲಿ ಈಗ ಸರಿಯಾಗಿ ಸಿಕ್ಕಿರುವುವು ಹದಿನಾಲ್ಕೇ. ಈಗ ಸಿಕ್ಕಿರುವ ಸರ್ಗಗಳ ಕಥಾಭಾಗ ಅಂಗದ ದೌತ್ಯದಲ್ಲಿ ಪರ್ಯವಸಾನವಾಗುತ್ತದೆ. ಸಿಂಹಳದ ಐತಿಹ್ಯಗಳ ಪ್ರಕಾರ, ಕುಮಾರದಾಸನು ಕ್ರಿ. ಶ. ೬ ನೆ ಶತಮಾನದಲ್ಲಿ ದ್ವೀಪವನ್ನಾಳುತ್ತಿದ್ದ ರಾಜ. ಕಾಳಿದಾಸನ ಸಮಕಾಲೀನನೆನ್ನುವ ದಂತಕಥೆಗಳು ಉಂಟು. ಆದರೆ ಆಧುನಿಕ ಸಂಶೋಧಕರು ಇವನ ಕಾಲ ಕ್ರಿ. ಶ. 8 ನೆ ಶತಮಾನದ ಅಂತ್ಯ ಅಥವಾ 9 ನೆ ಶತಕದ ಆದಿಯೆಂದು ತಿಳಿಯುತ್ತಾರೆ.

ಕಥೆ ಸಂಪೂರ್ಣವಾಗಿ ರಾಮಾಯಣ, ರಘುವಂಶಗಳಲ್ಲಿ ಬರುವ ರಾಮನ ಕಥೆ. ಆದರೆ ಶೃಂಗಾರಾತ್ಮಕ ವರ್ಣನೆಗಳಿಗೆ ಕವಿ ವಿಶೇಷ ಸಂಧಿಗಳನ್ನು ಕಲ್ಪಿಸಿಕೊಂಡಿದ್ದಾನೆ. 3 ನೆಯ ಸರ್ಗದಲ್ಲಿ ದಶರಥ ಮತ್ತು ಅವನ ಪತ್ನಿಯರ ಜಲಕ್ರೀಡಾದಿ ವಿಹಾರಗಳ ವರ್ಣನೆಯೂ, 7 ನೆಯ ಸರ್ಗದಲ್ಲಿ ರಾಮ ಸೀತೆಯರ ಪೂರ್ವಾನುರಾಗದ ವರ್ಣನೆಯೂ, 8 ನೆಯ ಸರ್ಗದಲ್ಲಿ ರಾಮಸೀತೆಯರ ಸಂಭೋಗ ಶೃಂಗಾರದ ವರ್ಣನೆಯೂ ಬರುತ್ತವೆ. ಎಲ್ಲದರಲ್ಲಿಯೂ ಕಾಳಿದಾಸನ ಪ್ರಭಾವ ಸ್ಪಷ್ಟವಾಗಿದೆ. ಹನ್ನೊಂದನೆಯ ಸರ್ಗದಲ್ಲಿ ವರ್ಷಋತುವನ್ನೂ 12 ರಲ್ಲಿ ಶರದೃತುವನ್ನೂ ಸುಂದರವಾಗಿ ವರ್ಣಿಸಿದೆ. ಇಲ್ಲಿ ದಶರಥನು ರಾಮನಿಗೆ ರಾಜನೀತಿಯನ್ನೂ ಉಪದೇಶಿಸುವ ಭಾಗವು ಭಾರವಿಯಿಂದ ಪ್ರಚೋದಿತವಾಗಿರಬಹುದು. ಸಾಧಾರಣವಾಗಿ ವರ್ಣನೆಯು ಕಥೆಯ ಓಟಕ್ಕೆ ಬಾಧಕವಾಗುವುದಿಲ್ಲ. ಕಾಳಿದಾಸನೊಡನೆ ತುಲನೆಗೆ ನಿಲ್ಲಬಲ್ಲ ಕವಿಯೆಂದಮೇಲೆ ಅದಕ್ಕಿಂತ ಹೆಚ್ಚಿನ ಪ್ರಶಂಸೆ ಕುಮಾರದಾಸನಿಗೆ ಬೇಕಾಗುವುದಿಲ್ಲ. ಅವನ ನಿಸರ್ಗರಮಣೀಯ ಶೈಲಿಗೆ ಇವು ಉದಾಹರಣೆಗಳು :—

---

40. Cf. ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ ।
ಕವಿಃ ಕುಮಾರದಾಸಶ್ಚ ರಾವಣಶ್ಚ ಯದಿ ಕ್ಷಮಃ ॥

ರಾಣಿಯ ರೂಪವರ್ಣನೆ—

**ಕಾಂತಿಶ್ರಿಯಾ ನಿರ್ಜಿತಪದ್ಮರಾಗಂ**
**ಮನೋಜ್ಞಗಂಧಂ ದ್ವಯಮೇವ ಶಸ್ತಮ್ ।**
**ನವಪ್ರಬುದ್ಧಂ ಜಲಜಂ ಜಲೇಷು**
**ಸ್ಥಲೇಷು ತಸ್ಯಾ ವದನಾರವಿಂದಮ್ ॥** (I 38)

‘ಕಾಂತಿಬಾಹುಲ್ಯದಿಂದ ಪದ್ಮರಾಗವನ್ನೂ ಮೀರಿಸಿ, ಮನೋಜ್ಞಗಂಧವನ್ನೂ ಒಳಕೊಂಡ ವಸ್ತುಗಳೆಂದರೆ ಎರಡೇ—ನೀರಲ್ಲಿ ನವಪ್ರಬುದ್ಧವಾದ ಜಲಜ, ನೆಲದಲ್ಲಿ ಆಕೆಯ ವದನಾರವಿಂದ.’

ನೀತಿಬೋಧೆ —

**ಸ್ತ್ರಿಯೋ ನ ಪುಂಸಾಮುದಯಸ್ಯ ಸಾಧನಂ**
**ತ ಏವ ತದ್ಧಾಮವಿಭೂತಿಹೇತವಃ ।**
**ತಡಿದ್ವಿಯುಕ್ತೋಽಪಿ ಘನಃ ಪ್ರಜೃಂಭತೇ**
**ವಿನಾ ನ ಮೇಘಂ ವಿಲಸಂತಿ ವಿದ್ಯುತಃ ॥** (IX 5)

‘ಸ್ತ್ರೀಯರು ಪುರುಷರ ಅಭ್ಯುದಯಕ್ಕೇನೂ ಸಾಧನವಲ್ಲ, ಆದರೆ ಅವರ ಪ್ರಭೆಯ ವಿಕಾಸಕ್ಕೆ ಸಹಾಯಕರು ಮಾತ್ರ. ಮಿಂಚಿಲ್ಲದಿದ್ದರೂ ಮೋಡವು ಮೆರೆಯಬಲ್ಲುದು. ಆದರೆ ಮೋಡವಿಲ್ಲದೆ ಮಿಂಚುಗಳು ಹೊಳೆಯಲಾರವು.’

ರಾಜನ ಮೆರವಣಿಗೆಯನ್ನು ನೋಡುವ ಹೆಂಗಸಿನ ಚಿತ್ರ -

**ನಿಧಾಯ ಕಾಚಿತ್ತನಯಂ ತನೂದರೀ**
**ಪ್ರಸಹ್ಯ ವಾತಾಯನ ದೇಹಿನೀತಲೇ ।**
**ಅಕಾರಯತ್ ಪಂಕಜಕೋಶಕೋಮಲಂ**
**ಮಹೀಭುಜೇ ಬಾಲಕಮಂಜಲಿಂ ಬಲಾತ್ ॥**

(IX. 62)

‘ಚಲುವೆಯೊಬ್ಬಳು ಕಿಟಕಿಯ ಬುಡದಲ್ಲಿ ಮಗುವನ್ನು ಬಲವಂತದಿಂದಿಳಿಸಿ ಕಮಲದೆಸಳಿನಂತೆ ಕೋಮಲವಾದ ಅದರ ಪುಟ್ಟಕೈಗಳಿಂದ ರಾಜನಿಗೆ ಕೈಮುಗಿಯಿಸುತ್ತಿದ್ದಳು.’

ಅಶ್ವಘೋಷಕಾಳಿದಾಸರನ್ನು ಸ್ಮರಣೆಗೆ ತರುವ ಕುಮಾರದಾಸನ ಲಲಿತಶೈಲಿ ಮುಂದಿನ ಮಹಾಕವಿಗಳಲ್ಲಿ ದುರ್ಲಭ.[41]

**ಮಾಘ** (ಸುಮಾರು ಕ್ರಿ. ಶ. 650–700).

**'ಮಾಘೋ ಮಾಘ ಇವಾಶೇಷಂ ಕ್ಷಮಃ ಕಂಪಯಿತಂ ಜಗತ್ ।**
**ಶ್ಲೇಷಾಮೋದಭರಂ ಚಾಪಿ ಸಂಭಾವಯಿತುಮೀಶ್ವರಃ ॥'**

**— ಸುಭಾಷಿತ.**

'ಮಾಘನು ಮಾಘಮಾಸದಂತೆ ಜಗತ್ತನ್ನೇ ಕಂಪಿಸಬಲ್ಲ, ಮತ್ತು ಕಾಂತಾಲಿಂಗನ ಸೌಖ್ಯವನ್ನೂ ಉಂಟುಮಾಡಬಲ್ಲ.'

ಇತರ ಕವಿಗಳಂತಲ್ಲದೆ ಮಾಘನು ತನ್ನ ವಂಶದ ವರ್ಣನೆಯನ್ನು ತಾನೇ ಬರೆದಿದ್ದಾನೆ. ಇವನು ದತ್ತಕನ ಪುತ್ರ ಮತ್ತು ವರ್ಮಲಾತನೆಂಬ ರಾಜನ ಮಂತ್ರಿಯಾಗಿದ್ದ ಸುಪ್ರಭದೇವನ ಪೌತ್ರ. ರಾಜನಾಳುತ್ತಿದ್ದುದು ಗುಜರಾತ್ ಮಂಡಲ. ಈತನ ಒಂದೇ ಕೃತಿ–'ಶಿಶುಪಾಲವಧ'ವೆಂಬ ಮಹಾಕಾವ್ಯ. ಕನ್ನಡ ಕವಿರಾಜಮಾರ್ಗಕಾರನೂ, ವಾಮನ ಆನಂದವರ್ಧನಾದಿ ಆಲಂಕಾರಿಕರೂ ಮಾಘನ ಕಾವ್ಯವನ್ನು ಉತ್ತಮವೆಂದು ಪರಿಗಣಿಸಿದ್ದರು. ಆದ್ದರಿಂದ ಅವನು ಅವರಿಗಿಂತ ಒಂದು ಶತಮಾನವಾದರೂ ಪೂರ್ವದಲ್ಲಿದ್ದಿರಬಹುದು. ಪಾಣಿನಿಸೂತ್ರ ಟೀಕೆಯಾದ 'ನ್ಯಾಸ'ವನ್ನು ಕವಿ ಹೆಸರಿಸುವುದರಿಂದ ಕ್ರಿ. ಶ. 7ನೆಯ ಶತಮಾನಕ್ಕಿಂತ ಈಚಿನವನೆಂದು ಪಾಶ್ಚಿಮಾತ್ಯ ವಿದ್ವಾಂಸರು ತಿಳಿಯುತ್ತಾರೆ.[42] ಆದರೆ ಜಿನೇಂದ್ರಬುದ್ಧಿಯ ಪ್ರಸಿದ್ಧ 'ನ್ಯಾಸ'ಕ್ಕೂ ಪೂರ್ವದಲ್ಲಿಯೇ ನ್ಯಾಸಗಳಿದ್ದುದನ್ನು ಬಾಣನೇ ಹರ್ಷಚರಿತೆಯಲ್ಲಿ ಉಲ್ಲೇಖಿಸಿದ್ದಾನೆ.[43] ಹೇಗಾದರೂ ಭಾರವಿಯ ಕಾವ್ಯದ ಪ್ರತಿರೂಪವೆನ್ನುವಂತೆ ಮಾಘನ ಕಾವ್ಯವಿರುವುದರಿಂದ ಭಾರವಿಗಿಂತ ಈತನು ಅರ್ವಾಚೀನನೆನ್ನುವುದು ನಿರ್ವಿವಾದ.

---

41 ಜಾನಕೀಹರಣ, ಹರದಾಸಶಾಸ್ತ್ರಿಗಳ ಸಂಸ್ಕರಣ (ಕಲ್ಕತ್ತಾ, 1893) ದಿಂದ ಪದ್ಯಭಾಗಗಳನ್ನಾರಿಸಿದೆ.

42. ಅನುತ್ಸೂತ್ರಪದನ್ಯಾಸಾ ಸದ್ವೃತ್ತಿಃ ಸನ್ನಿಬಂಧನಾ ।
ಶಬ್ದವಿದ್ಯೇವ ನೋ ಭಾತಿ ರಾಜನೀತಿರಪಸ್ಪಶಾ ॥ (II. 112)
ಹೋಲಿಸಿ—Keith : History of Sanskrit Literature.

43. 'ಕೃತಗುರುಪದನ್ಯಾಸಾ ಲೋಕ ಇವ ವ್ಯಾಕರಣೇಽಪಿ'— ಹರ್ಷಚರಿತ.

ಭಾರವಿಯನ್ನು ಮೀರಿಸಬೇಕೆಂಬ ಉದ್ದೇಶದಿಂದಲೇ ಮಾಘನು ಕಾವ್ಯರಚನೆಗೆ ಹೊರಟಿರುವಂತೆ ಕಾಣುತ್ತದೆ. ಚಾಚೂ ತಪ್ಪದೆ ಭಾರವಿಯ ಕಿರಾತಾರ್ಜುನೀಯದ ಮೇಲ್ಪಂಕ್ತಿಯನ್ನು ಮಾಘನು ಅನುಸರಿಸಿದ್ದಾನೆ. ಎರಡರ ಕಥೆಯೂ ಮಹಾಭಾರತದ ಒಂದು ಘಟನೆ, ಎರಡೂ 'ಶ್ರೀ' ಶಬ್ದದಿಂದ ಆರಂಭವಾಗುತ್ತವೆ. ಎರಡರಲ್ಲೂ ಮೊದಲನೆ ಸರ್ಗವು ಸಂದೇಶ ಕಥನಕ್ಕೆ ಮೀಸಲು. ಕಿರಾತಾರ್ಜುನೀಯದಲ್ಲಿ ವನೇಚರನು ಯುಧಿಷ್ಠಿರನಿಗೆ ಹೇಳುವ ಸಂದೇಶವಿದ್ದರೆ ಶಿಶುಪಾಲವಧೆಯಲ್ಲಿ ನಾರದನು ಶ್ರೀಕೃಷ್ಣನಿಗೆ ಹೇಳುವ ಸಂದೇಶವಿದೆ ಎರಡರಲ್ಲೂ ದ್ವಿತೀಯಸರ್ಗವು ರಾಜನೀತಿ ನಿರೂಪಣೆಗೆ ಸಂಬಂಧಪಟ್ಟುದು. ಒಂದರಲ್ಲಿ ಯುಧಿಷ್ಠಿರ, ಭೀಮ, ದ್ರೌಪದಿಯರು ಮಾತನಾಡಿದರೆ, ಇನ್ನೊಂದರಲ್ಲಿ ಬಲರಾಮ, ಕೃಷ್ಣ, ಉದ್ಧವರು ಭಾಗವಹಿಸುತ್ತಾರೆ. ಭಾರವಿಯಲ್ಲಿನ ಮಹರ್ಷಿ ವ್ಯಾಸರ ಪಾತ್ರಕ್ಕೆ ಪ್ರತಿರೂಪವಾಗಿ ಮಾಘನಲ್ಲಿ ನಾರದರ ಪಾತ್ರವಿದೆ. ಅರ್ಜುನನು ಇಂದ್ರಕೀಲಪರ್ವತಕ್ಕೆ ಹೋಗುವಂತೆ ಶ್ರೀಕೃಷ್ಣನು ರೈವತಕಪರ್ವತದ ಸಮೀಪಕ್ಕೆ ಬರುತ್ತಾನೆ. ಭಾರವಿಯು ಹಿಮಾಲಯವನ್ನು ಯಮಕಾದ್ಯಲಂಕಾರಗಳಿಂದ ವರ್ಣಿಸುವಂತೆ ಮಾಘನೂ ರೈವತಕವನ್ನು ಬಗೆಬಗೆಯಾಗಿ ಬಣ್ಣಿಸುತ್ತಾನೆ. ಎರಡರಲ್ಲೂ ಅಲ್ಲಿಯ ಅಪ್ಸರೆಯರ ಚಾರು ಚಿತ್ರಣವಿದೆ. ಶಿವನು ಅರ್ಜುನನನ್ನು ಹೀನಗಳೆಯಲು ದೂತನನ್ನಟ್ಟುವಂತೆ ಶಿಶುಪಾಲನೂ ಕೃಷ್ಣನನ್ನು ಅವಮಾನ ಮಾಡಲು ದೂತನನ್ನು ಅಟ್ಟುತ್ತಾನೆ. ಭಾರವಿಯಲ್ಲಿ ಶಿವ-ಅರ್ಜುನರ ವಾಗ್ವಿವಾದ ಎರಡು ಸರ್ಗಗಳಲ್ಲಿ ಬರುವಂತೆ (೧೩ ಮತ್ತು ೧೪) ಇದೇ ಬಗೆಯ ವಿವಾದವು ಮಾಘನ ೧೬ ನೇ ಸರ್ಗದಲ್ಲಿ ಶಿಶುಪಾಲ ಮತ್ತು ಸಾತ್ಯಕಿಗಳ ನಡುವೆ ಸಾಗುತ್ತದೆ. ಕಿರಾತಾರ್ಜುನೀಯದ ೧೫ನೆ ಸರ್ಗದಂತೆ ಶಿಶುಪಾಲವಧೆಯ ೧೧ ನೆಯ ಸರ್ಗದಲ್ಲಿಯೂ ಚಿತ್ರಬಂಧಗಳ ಮೂಲಕ ಯುದ್ಧ ವರ್ಣಿತವಾಗಿದೆ. ಎರಡರಲ್ಲೂ ಒಂದೇ ವಿಧವಾಗಿ ಸಂಧ್ಯಾಕಾಲ, ರಾತ್ರಿ, ಚಂದ್ರೋದಯ, ಋತುಗಳು, ಯಾತ್ರೆ, ಮುಂತಾದುವು ವರ್ಣಿತವಾಗಿವೆ. ಭಾರವಿಯ ಸರ್ಗಾಂತ್ಯಪದ್ಯಗಳೆಲ್ಲ 'ಲಕ್ಷ್ಮೀ'ಶಬ್ದಗರ್ಭವಾಗಿರುವಂತೆ ಮಾಘನ ಸರ್ಗಾಂತ್ಯಪದ್ಯಗಳೂ 'ಶ್ರೀ'ಶಬ್ದಘಟಿತವಾಗಿವೆ; ಎರಡರಲ್ಲೂ ಯುದ್ಧಕ್ಕೆ ಮುಂಚೆ ಸೇನಾ-ಸಂಘರ್ಷದ ಪ್ರಸ್ತಾಪವಿದೆ. ಹೀಗೆ ಮುಖ್ಯ

ವಿಷಯಗಳಲ್ಲಿ ಮಾತ್ರವೇ ಅಲ್ಲ, ಅಮುಖ್ಯಾಂಶಗಳಲ್ಲಿಯೂ ಭಾರವಿಯೇ ಮಾದರಿ ಮಾಘನಿಗೆ.

ಪ್ರಾಚೀನ ಪಂಡಿತರ ದೃಷ್ಟಿಯಲ್ಲಿ ಭಾರವಿಗಿಂತ ಮಾಘನ ಸಿದ್ಧಿಯೇ ಹೆಚ್ಚಿನದು. ಕಾಳಿದಾಸನ ಉಪಮೆ, ಭಾರವಿಯ ಅರ್ಥಗೌರವ, ದಂಡಿಯ ಪದಲಾಲಿತ್ಯ, ಈ ಮೂರು ಗುಣಗಳೂ ಮಾಘನಲ್ಲುಂಟೆನ್ನುತ್ತಾರೆ.[44] ಮಾಘ ಹುಟ್ಟುವವರೆಗೇ ಭಾರವಿಯ ಬೆಳಕು, ಮಾಘ ಹುಟ್ಟಿದ ಮೇಲೆ ಅದೆಲ್ಲ ಚಳಿಗಾಲದ ಸೂರ್ಯತಾಪದಂತೆ ಅಡಗಿಯೇ ಹೋಗುತ್ತದೆ ಎಂದು ಚಮತ್ಕಾರವಾಗಿ ನುಡಿದಿದ್ದಾರೆ.[45] ಇದಕ್ಕೆ ಕಾರಣವಿಲ್ಲದೆ ಇಲ್ಲ. ಭಾರವಿಯು ಅರ್ಥಶಾಸ್ತ್ರ, ಸಾಮ, ನೀತಿ, ವ್ಯಾಕರಣಶಾಸ್ತ್ರಗಳಲ್ಲಿ ಮಾತ್ರ ತನ್ನ ಹೆಚ್ಚಿನ ಕೌಶಲವನ್ನು ತೋರಿಸಿದ್ದರೆ ಮಾಘ ಇವುಗಳ ಜತೆಗೆ ಅಶ್ವಶಾಸ್ತ್ರ, ಗಜಶಾಸ್ತ್ರ, ಬೌದ್ಧಸಿದ್ಧಾಂತ, ಸಾಂಖ್ಯಾದಿದರ್ಶನಗಳು, ಸಂಗೀತಶಾಸ್ತ್ರ, ನಾಟ್ಯಶಾಸ್ತ್ರ ಇತ್ಯಾದಿ ಚತುರ್ದಶವಿದ್ಯೆಗಳಲ್ಲೂ ತನ್ನ ಪರಿಚಯವನ್ನು ಪ್ರದರ್ಶಿಸಿದ್ದಾನೆ. ಶಾಸ್ತ್ರಪಾಂಡಿತ್ಯದಿಂದ ಕವಿತ್ವದ ಬೆಲೆಯೇರುವುದೆಂದು ಭಾವಿಸುವ ಪಂಡಿತರಿಗೆ ಭಾರವಿ ಕಾಳಿದಾಸರಿಗಿಂತ ಮಾಘನು ದೊಡ್ಡವನೆನಿಸಿದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಆದರೆ ರಸೈಕಲೋಲರಾದ ಸಹೃದಯರಿಗೆ ಈ ವಿಮರ್ಶೆ ಹೃದಯಗ್ರಾಹಿಯಾಗಲಾರದು. ಮಾಘನದು ಮೂಲಪ್ರತಿಭೆಯಲ್ಲ; ಪ್ರತಿಬಿಂಬ ಪ್ರತಿಭೆ. ಹಿಂದಿನ ಮಹಾಕವಿಗಳ ಪ್ರತಿಭಾಕುಸುಮಗಳನ್ನು ಅವನು ಮತ್ತಷ್ಟು ಕಡೆದು ನಯಮಾಡಿ ಹೊಳೆಯಿಸಬಲ್ಲನೇ ಹೊರತು ಸ್ವಂತವಾಗಿ ಸೌಂದರ್ಯವನ್ನು ಸೃಷ್ಟಿಸಲಾರನು. ವ್ಯಾಕರಣರಾಜ್ಯದ ಚಕ್ರವರ್ತಿಯಾದರೂ, ಪಾತ್ರಸ್ವಭಾವ ನಿರೂಪಣೆಯಲ್ಲಿ ಭಾರವಿಕಾಳಿದಾಸರನ್ನು ಸರಿಗಟ್ಟಲಾರನು. ಇಪ್ಪತ್ತು ಸರ್ಗಗಳ ಈ ಮಹಾಕಾವ್ಯದಲ್ಲಿ ಕಥೆಯ ಸ್ವಾರಸ್ಯ ಶೂನ್ಯವೇ ಎನ್ನಬಹುದು. ಆದರೆ ಬಿಡಿಪದ್ಯಗಳಲ್ಲಿ ಪೂರ್ವಕವಿಗಳನ್ನೂ ಮೀರಿಸುವ ಸಿದ್ಧಿ ಅನೇಕವೇಳೆ ಮಾಘನಲ್ಲಿ ಕಾಣುತ್ತದೆ. ಒಂದೆರಡು ಉದಾಹರಣೆಗಳನ್ನು ನೋಡಿ:—

44. ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಮ್ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

45. ತಾವದ್ಭಾ ಭಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ ।
ಉದಿತೇ ಚ ಪುನರ್ಮಾಘೇ ಭಾರವೇರ್ಭಾ ರವೇರಿವ ॥

ರೈವತಕ ಪರ್ವತದ ವರ್ಣನೆ–

**ಉದಯತಿ ವಿತತೋರ್ಧ್ವರಶ್ಮಿರಜ್ಜಾ–**
**ವಹಿಮರುಚೌ ಹಿಮಧಾಮ್ನಿ ಯಾತಿ ಚಾಸ್ತಮ್ ।**
**ವಹತಿ ಗಿರಿರಯಂ ವಿಲಂಬಿಘಂಟಾ-**
**ದ್ವಯಪರಿವಾರಿತವಾರಣೇಂದ್ರಲೀಲಾಮ್ ॥** (IV 10)

**ಕರರಜ್ಜುಗಳಂ ಚಾಚುತೆ**
**ಭರದಿಂದಂ ನಭದೊಳುದಿಸೆ ರವಿ, ಶಶಿ ಮುಳುಗಲ್ ।**
**ಗಿರಿಯಿದು ಘಂಟಾದ್ವಯದಿಂ**
**ಪರಿಶೋಭಿಪ ಕರಿಯ ಸಿರಿಯನಾಂತುದು ನಿರುತಂ ॥** [46]

ಈ ನಿಸರ್ಗಮನೋಹರವಾದ ಪ್ರಕೃತಿಚಿತ್ರಕ್ಕೆ ಮಾರುಹೋದ ರಸಿಕರು ಮಾಘನಿಗೆ "ಘಂಟಾಮಾಘ" ನೆಂಬ ಪ್ರೀತಿಯ ನಾಮಕರಣ ಗೈದಿದ್ದಾರೆ. ಆತನ ಪ್ರಕೃತಿ ಪರ್ಯವೇಕ್ಷಣ ಶಕ್ತಿಯು ಅದ್ಭುತವೂ ಪ್ರಭಾವಪೂರ್ಣವೂ ಆಗಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಬೆಟ್ಟದ ತುದಿಯಲ್ಲಿ ಒಂದು ಮಗ್ಗುಲಿಗೆ ಹೊಳೆಯುವ ಸೂರ್ಯಬಿಂಬವು ಹುಟ್ಟುತ್ತಾ ಇನ್ನೊಂದು ಮಗ್ಗುಲಿಗೆ ಹೊಳೆಯುವ ಚಂದ್ರಬಿಂಬ ಮುಳುಗುತ್ತಿದೆ ಎರಡು ಮಗ್ಗಲಿಗೂ ಎರಡು ಚಿನ್ನದ ಗಂಟೆಗಳು ನೇತಾಡುತ್ತಿರುವ ಪಟ್ಟದಾನೆಯಂತೆ ಬೆಟ್ಟ ಶೋಭಿಸುತ್ತದೆ. ಇಲ್ಲಿಯ ನಿದರ್ಶನಾಲಂಕಾರ ಯಾರ ಮನಸ್ಸನ್ನಾದರೂ ಸೂರೆಗೊಳ್ಳುವಂತಿದೆ.

ಇನ್ನೊಂದು ಸುಂದರ ಕಲ್ಪನಾವಿಲಾಸವನ್ನು ನೋಡಿ. ಇದು ಬಾಲಸೂರ್ಯನ ಬಾಲಲೀಲೆಯ ಚಿತ್ರ —

**ಉದಯ ಶಿಖರಿಶೃಂಗ ಪ್ರಾಂಗಣೇಷ್ವೇವ ರಿಂಗನ್**
**ಸಕಮಲಮುಖಹಾಸಂ ವೀಕ್ಷಿತಃ ಪದ್ಮಿನೀಭಿಃ ।**
**ವಿತತಮೃದುಕರಾಗ್ರಃ ಶಬ್ದಯಂತ್ಯಾ ವಯೋಭಿಃ**
**ಪರಿಪತತಿ ದಿವೋಽಂಕೇ ಹೇಲಯಾ ಬಾಲಸೂರ್ಯಃ ॥**

'ಉದಯಾಚಲದ ಶೃಂಗವೇ ಬಾಲಸೂರ್ಯನ ಕ್ರೀಡಾಂಗಣ; ಅಲ್ಲಿ ಆಡುತ್ತಿದ್ದುದನ್ನು ನೋಡುತ್ತಿರುವವರು ಪದ್ಮಿನಿಯರು; ಅವರ ಕಮಲ

46. ಅನುವಾದ ಲೇಖಕನದೇ.

ಮುಖಗಳಲ್ಲಿ ನಗೆ ಸೂಸುತ್ತಿದೆ. ತಟ್ಟನೆ ಅಂತರಿಕ್ಷವೆಂಬ ತಾಯಿ ಮಗುವನ್ನು ಕರೆಯುತ್ತಾಳೆ—ಹಕ್ಕಿಗಳ ಕಲಕಲವೆಂಬ ಮಧುರಶಬ್ದದಿಂದ. ಕೋಮಲ ಕರಾಗ್ರಗಳನ್ನು (ಕೈ, ಮತ್ತು ಕಿರಣ) ಮೇಲೆತ್ತಿ ಬಾಲಲೀಲೆಯಿಂದ ತಾಯಿಯ ತೊಡೆಯ ಮೇಲೆ ಏರುತ್ತಾನೆ.'

ಇಲ್ಲಿಯ ಕ್ಲಿಷ್ಟರೂಪಕಾಲಂಕಾರವು ಸಹಜರಮಣೀಯವಾಗಿದೆ, ರಸಸಿಕ್ತ ವಾಗಿದೆ. ವ್ಯಂಗ್ಯವಾದ ಉತ್ಪ್ರೇಕ್ಷಾಲಂಕಾರದ ಸೊಬಗಿಗೆ ಆನಂದವರ್ಧನನೇ ಆರಿಸಿಕೊಂಡಿರುವ ಉದಾಹರಣೆಯಿದು :—

**ತ್ರಾಸಾಕುಲಃ ಪರಿಪತನ್ ಪರಿತೋ ನಿಕೇತಾನ್**
**ಪುಂಭಿರ್ನ ಕೈಶ್ಚಿದಪಿ ಧನ್ವಿಭಿರನ್ವಬಂಧಿ ।**
**ತಸ್ಥೌ ತಥಾಪಿ ನ ಮೃಗಃ ಕ್ವಚಿದಂಗನಾಭಿ-**
**ರಾಕರ್ಣಪೂರ್ಣನಯನೇಷುಹತೇಕ್ಷಣಶ್ರೀಃ ॥** (V 26)

**ಮನೆಗಳೆಡೆಯೊಳಗೆ ಭಯದಿಂದ ಪರಿಯುತಿಹ ಹರಿ-**
**ಣನಾ ಬೆಂಬಳಿವಿಡಿದು ಬಿಲ್ಲುಗಳ ಕೈಕೊಂಡ**
**ಜನರು ಯಾರೂ ಅಲ್ಲಿ ಬರದಿದ್ದರೂ ತಾನು ಪರಿವುದನು**
**ನಿಲಿಸಲಿಲ್ಲ ।**
**ತನಗಿದ್ದ ಕಣ್ಣ ಚೆಲುವನ್ನೆಲ್ಲ ಸುಂದರಾಂ-**
**ಗನೆಯರೆಲ್ಲಂ ತಮ್ಮ ಕಿವಿವರೆಗೆ ತಾಗಿ ನೀ-**
**ಳ್ದ ನಯನಂಗಳ ಬಾಣಘಾತದಿಂ ತಳುವದೆಯೆ**
**ಗಾಸಿಗೊಳಿಸುತ್ತಲಿರಲು ॥**[17]

ಇದು ರೈವತಕದ ತಪ್ಪಲಿನಲ್ಲಿ ಬೀಡುಬಿಟ್ಟು ವಿಹಾರಾಸಕ್ತರಾಗಿದ ಕೃಷ್ಣಸೈನ್ಯದಲ್ಲಿ ಸ್ತ್ರೀವರ್ಣನೆ. ಸಹಜವಾಗಿ ಅಲ್ಲಿಯೇ ಸುಳಿಯುತ್ತಿದ್ದ ಹರಿಣಗಳ ವರ್ಣನೆಯನ್ನೂ ಕೂಡಿಸಿಕೊಂಡು ಅವುಗಳು ಬೆದರಿ ಓಡು ತ್ತಿದ್ದುದಕ್ಕೆ ಸ್ತ್ರೀಯರ ಕಟಾಕ್ಷವೆಂಬ ಬಾಣಗಳೇ ಕಾರಣವಿರಬಹುದೆಂದು ಕವಿ ಸುಂದರವಾಗಿ ಕಲ್ಪಿಸಿದ್ದಾನೆ.

ಇದೇ ತುಲ್ಯಯೋಗಿತಾಲಂಕಾರವು ಶ್ಲೇಷಚ್ಛಾಯೆಯಿಂದ ಕೂಡಿದಾಗ ಬರುವ ಸೊಬಗಿಗೆ ಉದಾಹರಣೆ ;—

47. ನೋಡಿ—ಕನ್ನಡ ಧ್ವನ್ಯಾಲೋಕ, ಪು. ೬೮.

ರಮ್ಯಾ ಇತಿ ಪ್ರಾಪ್ತವತೀಃ ಪತಾಕಾ
ರಾಗಂ ವಿವಿಕ್ತಾ ಇತಿ ವರ್ಧಯನ್ತೀಃ ।
ಯಸ್ಯಾಮಸೇವನ್ತ ನಮದ್ವಲೀಕಾಃ
ಸಮಂ ವಧೂಭಿರ್ವಲಭೀರ್ಯುವಾನಃ ॥(III, 53)

ರಮಣೀಯತಾಗುಣಪತಾಕೆ[48]ಯನೆ ಪಡೆಯುತ್ತ,
ವಿವಿಕ್ತತಾ[49]ಕಾರಣದೆ ರಾಗ[50]ವನು ಪೆರ್ಚಿಸುತ ।
ಪರಿನಮ್ರವಲಿ[51]ಗಳಿಂ ಸೊಗಯಿಸುವ ವಲಭಿಗಳ
ವಧುಗಳೊಂದಿಗೆ ಸೇವಿಸಿದರಲ್ಲಿ ಯುವಜನರು ॥[52]

ಮಾರ್ದವ ಪೌರುಷಗಳ ಫಲಾಫಲವನ್ನು ಮಾರ್ಮಿಕವಾಗಿ ಬಿಂಬಿಸುವ ಅಪ್ರಸ್ತುತ ಪ್ರಶಂಸೆಯಿದು:—

ಅಂಕಾಧಿರೋಪಿತ ಮೃಗಶ್ಚಂದ್ರಮಾ ಮೃಗಲಾಂಛನಃ ।
ಕೇಸರೀ ನಿಷ್ಠುರಕ್ಷಿಪ್ತಮೃಗಯೂಥೋ ಮೃಗಾಧಿಪಃ ॥
(II. 53)

'ಅಕ್ಕರೆಯಿಂದ ಮೃಗವನ್ನು ತೊಡೆಯಮೇಲೆ ಹತ್ತಿಸಿಕೊಂಡಿರುವ ಚಂದ್ರ, ಮೃಗಲಾಂಛನ (ಮೃಗದಿಂದ ಕಳಂಕಿತ)ನಾದರೆ ಮೃಗಯೂಥವನ್ನೆಲ್ಲ ನಿಷ್ಠುರವಾಗಿ ಕೊಂದು ಕೆಡಹುವ ಕೇಸರಿ ಮೃಗಾಧಿಪನೆನಿಸಿದ್ದಾನೆ.'

ಪದಮಾಧುರ್ಯಕ್ಕೊಂದು ಉದಾಹರಣೆ :—

ಮಧುರಯಾ ಮಧುಬೋಧಿತಮಾಧವೀ
ಮಧುಸಮೃದ್ಧಿಸಮೇಧಿತಮೇಧಯಾ ।
ಮಧುಕರಾಂಗನಯಾ ಮುಹುರುನ್ಮದ
ಧ್ವನಿಭೃತಾ ನಿಭೃತಾಕ್ಷರಮುಜ್ಜಗೇ ॥ (VI, 20)

---

48. ಧ್ವಜ ಅಥವಾ ಪ್ರಸಿದ್ಧಿ.
49 ನಿರ್ಜನತೆ ಅಥವಾ ಅಂಗಸೌಷ್ಠವ.
50. ಕೆಂಪು ಅಥವಾ ಪ್ರೇಮ.
51. ಸೂರುಕಟ್ಟು ಅಥವಾ ಸ್ತ್ರೀಯರ ಶರೀರದ ತ್ರಿವಲಿಗಳು.
52. ಕನ್ನಡ ಧ್ವನ್ಯಾಲೋಕ, ಪು. ೩೮-೯.

'ವಸಂತನಿಂದ ಎಚ್ಚೆತ್ತ ಮಾಧವಿಯ ಮಧುಸಮೃದ್ಧಿಯಿಂದ ಆಸೆ ಯುಕ್ಕಲು ಮಧುರಳಾದ ಮಧುಕರಾಂಗನೆಯು ಮತ್ತೆ ಮತ್ತೆ ಮದೋನ್ಮತ್ತಳಾಗಿ ದೊಡ್ಡದನಿಯಿಂದ ಒಂದೇ ಸಮನೆ ಮೊರೆಯುತ್ತಿದ್ದಳು.'

ಹೀಗೆ ಮಾಘನ ಪ್ರಯತ್ನಪುರಸ್ಸರವಾದ ಕಾವ್ಯಶೈಲಿಯಲ್ಲಿ ಮಾರ್ದವ-ಗೌರವಗಳಂತೆ ಗುಣಾಲಂಕಾರ ವೈಚಿತ್ರ್ಯಗಳ ವರ್ಣ ವೈವಿಧ್ಯವನ್ನೂ ಕಾಣಬಹುದು. ಮಾಘನೇ ಹೇಳುವಂತೆ 'ಕುಶಲರು ಮೃದುಲ ವಾಣಿಯನ್ನೇ ಘನವಾಗಿಯೂ ಅನಲ್ಪಗುಣಕಲ್ಪಿತೆಯಾಗಿಯೂ, ಬಣ್ಣಬಣ್ಣಗಳಿಂದ ಕಣ್ಗಿಂಬಾಗಿಯೂ ಇರುವ ಜರಿಯ ಬಟ್ಟೆಯಂತೆ ನೇಯುತ್ತಾರೆ.'[53] ಈ ಕೌಶಲ ಮಾಘನಲ್ಲಿ ವಿಶೇಷವಾಗಿದೆ. ಶಬ್ದಾರ್ಥಗಳೆರಡರಲ್ಲೂ ಈ ಕುಶಲಕಲೆಯನ್ನು, ಕುಸುರಿ ಕೆಲಸವನ್ನು, ಮಾಘನಂತೆ ತೋರಿಸಿರುವ ಮಹಾಕವಿಗಳು ಸಂಸ್ಕೃತದಲ್ಲಿಯೂ ವಿರಳ. ಅವನ ಪ್ರಕೃತಿಚಿತ್ರಗಳು ನಿತ್ಯರಮಣೀಯವಾಗಿರುವುದು ಅವನ ಪ್ರತಿಭಾನೈರ್ಮಲ್ಯಕ್ಕೆ ನಿದರ್ಶನ. ಕ್ಷಣಕ್ಷಣಕ್ಕೂ ನವತೆಯನ್ನು ತಳೆಯಬಲ್ಲ ಗುಣವೇ ರಮಣೀಯತೆಯ ಮರ್ಮವೆಂದು ಮಾಘನೇ ನುಡಿದಿದ್ದಾನೆ.[54] ಆ ಗುಣವನ್ನು ಮಾಘನ ಅನೇಕ ಸೂಕ್ತಿಗಳಲ್ಲಿ ಧಾರಾಳವಾಗಿ ಕಾಣಬಹುದು. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಭಾಷೆಯ ಅಭ್ಯಾಸಿಗಳಿಗೆ ಮಾಘನು ಕಾಮಧೇನು. 'ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ' ಎಂದು ಪಂಡಿತರು ಹೇಳುವಮಾತು ಅಕ್ಷರಶಃ ನಿಜ. ಮಾಘನ ಒಂಬತ್ತು ಸರ್ಗಗಳ ನಿಶ್ಶೇಷ ಅಭ್ಯಾಸ ಮಾಡಿದವನಿಗೆ ತಿಳಿಯಬೇಕಾದ ಹೊಸ ಶಬ್ದವಿರುವುದಿಲ್ಲ. ಆದರೆ ಕಾವ್ಯವನ್ನು ಸರ್ಗಸರ್ಗವಾಗಿ, ಪದ್ಯಪದ್ಯವಾಗಿ ವಿರಾಮವಾಗಿ ಓದಿ ಸವಿಯಬೇಕೇ ಹೊರತು ರಾಮಾಯಣ ಅಥವಾ ರಘುವಂಶಗಳಂತೆ ಒಟ್ಟಿಗೆ ಒಂದೇ ಸಲ ಓದಿ ಸವಿಯುವುದು ಅಸಾಧ್ಯ. ಕಾಮಶಾಸ್ತ್ರದ ಸೂಕ್ಷ್ಮ ವಿವರಗಳೆಲ್ಲವನ್ನೂ ಕೆಲವು ಸರ್ಗಗಳು ಒಳಗೊಳ್ಳುವುದರಿಂದ ಇವು ಬಾಲರ ಅಧ್ಯಯನಕ್ಕೆ ಅನರ್ಹವೆನ್ನುವ ಅಭಿಪ್ರಾಯವೂ ಪ್ರಾಚೀನರಲ್ಲಿದ್ದಿತು. 'ಮಾಘ ಓದಿ ಮಗ ಕೆಟ್ಟ' ಎಂಬ ಕನ್ನಡ ಗಾದೆ ಇವನ್ನು ಮಾತ್ರ ಕುರಿತದ್ದು.

---

53. ಮೃದೀಯಸೀಮಪಿ ಘನಾಮನಲ್ಪಗುಣಕಲ್ಪಿತಾಮ್ ।
ಪ್ರಸಾರಯಂತಿ ಕುಶಲಾಶ್ಚಿತ್ರಾಂ ವಾಚಂ ಪಟೀಮಿವ ॥ (II, 74).

54. ಕ್ಷಣೇಕ್ಷಣೇ ಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಯಾಃ ।

**ಶಿವಸ್ವಾಮಿ ಮತ್ತು ರತ್ನಾಕರ** · ಇಬ್ಬರೂ ಮಾಘನ ವಿದ್ವತ್ಕಾವ್ಯವನ್ನು ಸ್ಪರ್ಧಿಸಲು ಮಹಾಕಾವ್ಯ ರಚನೆ ಮಾಡಿದವರು, ಇಬ್ಬರೂ ಆನಂದವರ್ಧನನ ಸಮಕಾಲೀನರು, ಕಾಶ್ಮೀರ ದೇಶದವರು, ಇಬ್ಬರ ಕಾಲವೂ ಕ್ರಿ.ಶ. ೯ ನೆಯ ಶತಮಾನ.[55] ಶಿವಸ್ವಾಮಿಯ ಮಹಾಕಾವ್ಯ "ಕಪ್ಫಿಣಾಭ್ಯುದಯ" ಮತ್ತು ರತ್ನಾಕರನದು "ಹರವಿಜಯ."

ಕಪ್ಫಿಣಾಭ್ಯುದಯವು ಕಪ್ಫಿಣನೆಂಬ ದಾಕ್ಷಿಣಾತ್ಯ ರಾಜನು ಶ್ರಾವಸ್ತಿಯ ರಾಜನಮೇಲೆ ಯುದ್ಧಮಾಡಲು ಹೋಗಿ, ಅಲ್ಲಿ ಬೌದ್ಧಧರ್ಮ ದೀಕ್ಷೆಯನ್ನು ಪಡೆದನೆಂಬ ಪ್ರಸಿದ್ಧ ಬೌದ್ಧ "ಅವದಾನ" ಕಥೆಯನ್ನು ಅವಲಂಬಿಸಿದೆ. ಇವನ ಸರ್ಗಾಂತ್ಯ ಮುದ್ರೆ "ಶಿವ", ಕಾಶ್ಮೀರಶೈವನೇ ಇದ್ದಿರಬಹುದು. ಆದರೂ ಬುದ್ಧಸ್ತುತಿ ಮಾಡಿದ್ದಾನೆ ಕಾವ್ಯದ ಉದ್ದೇಶವೇ ಚಿತ್ರಬಂಧ ಪ್ರದರ್ಶನ; ಯಮಕಾದಿ ದುಷ್ಕರ ಶಬ್ದಾಲಂಕಾರ ಸಂಯೋಜನ. 'ಚಿತ್ರಕಾವ್ಯೋಪದೇಷ್ಟಾ', 'ಅಗಮ್ಯ ಯಮಕ ಕವಿ' 'ಅನುಕೃತ ರಘುಕಾರ', 'ಉದಾರ ಕವಿ' 'ದಂಡಿದಂಡ' 'ಶಿವಾಂಕ', ಇವು ಆತನ ಕೆಲವು ಬಿರುದುಗಳು.[56] ಅಗಮ್ಯಕವಿಗಳ ಹೆಚ್ಚಿನ ವಿವೇಚನೆ ಇಲ್ಲಿ ಅನಗತ್ಯ. ಆತನ ಕೃತಿ ಈ ಶತಮಾನದಲ್ಲಿ ಮಾತ್ರ ಸಿಕ್ಕಿ ಮುದ್ರಣಕ್ಕೆ ಬಂದಿದೆ.

'ಹರವಿಜಯ'ವನ್ನೊಂದು ರಾಕ್ಷಸ ಮಹಾಕಾವ್ಯವೆನ್ನಬಹುದು. ಇದರಲ್ಲಿ ೫೦ ದೊಡ್ಡ ಸರ್ಗಗಳಿವೆ. ಶಿವನ ಅಂಧಕಾಸುರ ಸಂಹಾರ ಇದರ ಕಥಾವಸ್ತು. ಆದರೆ ಕಾಮಶಾಸ್ತ್ರ; ರಾಜನೀತಿ, ಸ್ತೋತ್ರಗಳು, ಇವುಗಳಿಗಾಗಿ ಮಾಘ ಭಾರವಿಗಳ ಒಂದೊಂದು ಸರ್ಗದ ಬದಲು ನಾಲ್ಕೈದು ಸರ್ಗಗಳು ಇಲ್ಲಿ ವಿನಿಯುಕ್ತವಾಗುತ್ತವೆ. ಚಿತ್ರಕಾವ್ಯದ ಪ್ರದರ್ಶನ ಇಲ್ಲಿ ಅತ್ಯದ್ಭುತವಾಗಿದೆ. ನೂರಾರು 'ದ್ವ್ಯಕ್ಷರೀ' ಮುಂತಾದುವು ಬರುತ್ತವೆ. ರತ್ನಾಕರನು

---

55. ಮುಕ್ತಾಕಣಃ ಶಿವಸ್ವಾಮೀ ಕವಿರಾನಂದವರ್ಧನಃ ।
ಪ್ರಥಾಂ ರತ್ನಾಕರಶ್ಚಾಗಾತ್ ಸಾಮ್ರಾಜ್ಯೇಽವಂತಿವರ್ಮಣಃ ॥
—ರಾಜತರಂಗಿಣೀ, V, 34.

56. ವಿದಿತಬಹುಕಥಾರ್ಥಶ್ಚಿತ್ರಕಾವ್ಯೋಪದೇಷ್ಟಾ
ಯಮಕಕವಿರಗಮ್ಯಶ್ಚಾರುಸಂಧಾನಮಾನೀ ।
ಅನುಕೃತರಘುಕಾರೋಽಭ್ಯಸ್ತಮೇಂಠಪ್ರಚಾರೋ ।
ಜಯತಿ ಕವಿರುದಾರೋ ದಂಡಿದಂಡಃ ಶಿವಾಂಕಃ ॥ (XX, 47)

ಗ್ರಂಥದ ಕಡೆಯಲ್ಲಿ ಮೂಡುವ ಪ್ರತಿಜ್ಞೆ ಸ್ವಾರಸ್ಯವಾಗಿದೆ. 'ನನ್ನ ಕಾವ್ಯದಲ್ಲಿ ಆದರವಿದ್ದರೆ ಅಕವಿಯಾದ ಶಿಶುವೂ ಕವಿಯಾಗುತ್ತಾನೆ; ಕವಿಯು ಮಹಾಕವಿಯಾಗುತ್ತಾನೆ.'

" ಹರವಿಜಯ ಮಹಾಕವೇಃ ಪ್ರತಿಜ್ಞಾಂ
ಶೃಣುತ ಕೃತಪ್ರಣಯೋ ಮಮ ಪ್ರಬಂಧೇ ।
ಅಪಿ ಶಿಶುರಕವಿಃ ಕವಿಃ ಪ್ರಭಾವಾತ್
ಭವತಿ ಕವಿಶ್ಚ ಮಹಾಕವಿಃ ಕ್ರಮೇಣ "

ಅನುಕರಣಕವಿಗಳಿಗೆ ಇವನು ಆಚಾರ್ಯಪುರುಷನೇ ಸರಿ. ಅವನೇ ಹೇಳುವಂತೆ 'ವಿಕಟಯಮಕ ಶ್ಲೇಷೋದ್ಗಾರ'ವಾದ ನಿರರ್ಗಲಪ್ರಬಂಧ ರಚನೆಯಲ್ಲಿ ಅವನು ಸಾಕ್ಷಾತ್ ವಾಚಸ್ಪತಿಯನ್ನೂ ಲೆಕ್ಕಿಸುವುದಿಲ್ಲ. ಆ ಮಹಾರಣ್ಯದಲ್ಲಿ ಬೇಸರವಿಲ್ಲದೆ ನಡೆಯುವಂತಹವರಿಗೆ 'ಲಲಿತಮಧುರ'ವೂ ಸಾಲಂಕಾರವೂ 'ಪ್ರಸಾದ ಮನೋಹರ'ವೂ ಆದ ಪದ್ಯರತ್ನಗಳೂ ಸಿಕ್ಕಬಹುದು. ಆದರೆ ಅವನದು ಮುಖ್ಯವಾಗಿ ಅಸದೃಶವಾದ ಚಿತ್ರಮಾರ್ಗ.[57] ಪಾಂಡಿತ್ಯಪ್ರಿಯರು ಇವನಿಗೂ ಮಾಘನಿಗೂ ಮೇಲಿನ ಸ್ಥಾನವನ್ನು ಕೊಟ್ಟಿದ್ದುಂಟು —'ಮಾಘನು 'ಶಿಶುಪಾಲವಧೆ'ಯಿಂದ ಕವಿಮದವನ್ನು ವಧೆ ಮಾಡಿದನು,[58] ರತ್ನಾಕರನು 'ಹರವಿಜಯ'ದಿಂದ ಸ್ವವಿಜಯವನ್ನೇ ವಿವರಿಸಿದನು' ಎಂದಿದ್ದಾರೆ.

**ಜಿನಸೇನ** —(ಕ್ರಿ ಶ. ೯ ನೆಯ ಶತಮಾನ): ಹೀಗೆ ಸಂಸ್ಕೃತ ವಿದ್ವತ್ಕಾವ್ಯವು ಕೃತ್ರಿಮತೆಯ ಪರಾಕಾಷ್ಠೆಯ ಕಡೆಗೆ ವಿದ್ಯುದ್ವೇಗದಿಂದ

---

57. ಲಲಿತಮಧುರಾಃ ಸಾಲಂಕಾರಾಃ ಪ್ರಸಾದಮನೋಹರಾ
ವಿಕಟಯಮಕಶ್ಲೇಷೋದ್ಗಾರಪ್ರಬಂಧನಿರರ್ಗಲಾಃ ।
ಅಸದೃಶಗತೀಶ್ಚಿತ್ರೇ ಮಾರ್ಗೇ ಮಮೋದ್ಗಿರತೋ ಗಿರೋ
ನ ಖಲು ನೃಪತೇ ಚೇತೋ ವಾಚಸ್ಪತೇರಪಿ ಶಂಕತೇ ॥
—ಹರವಿಜಯ L. 2.

58 ಮಾಘಃ ಶಿಶುಪಾಲವಧಂ
ವಿದಧತ್ ಕವಿಮದವಧಂ ವಿದಧೇ ।
ರತ್ನಾಕರಃ ಸ್ವವಿಜಯಂ
ಹರವಿಜಯಂ ವರ್ಣಯನ್ ವ್ಯವೃಣೋತ್ ॥—ಸುಭಾಷಿತ.

ಓಡುತ್ತಿದ್ದಾಗ, ಜೈನಧರ್ಮ ಪ್ರಚಾರದ ದೃಷ್ಟಿಯಿಂದ ಮತ್ತೆ ಅದನ್ನು ರಾಮಾಯಣದ ಲಲಿತಮಾರ್ಗಕ್ಕೆ ತಂದುಬಿಡಲು ಪ್ರಯತ್ನಿಸಿದ ಕೀರ್ತಿ ಜೈನರ ಆಚಾರ್ಯನಾದ ಜಿನಸೇನನದು. ಹಿಂದೂ ಪುರಾಣಗಳಲ್ಲಿ ಧರ್ಮವಿರುತ್ತಿದ್ದಿತೇ ಹೊರತು ಕಾವ್ಯಧರ್ಮವಿರುತ್ತಿರಲಿಲ್ಲ. ಧರ್ಮದಂತೆ ಕಾವ್ಯಧರ್ಮವನ್ನೂ ಕೂಡಿಸಿಕೊಂಡು, ಕವಿತ್ವದೊಡನೆ ಲೋಕವಿತ್ತ್ವವನ್ನೂ ಸೇರಿಸಿಕೊಂಡು ಹೊಸಬಗೆಯ ಜೈನಮಹಾಪುರಾಣವನ್ನು ಬರೆದ ಜಿನಸೇನನು ಸಂಸ್ಕೃತದಲ್ಲಿ ಮಾತ್ರವೇ ಅಲ್ಲ, ಕನ್ನಡದಲ್ಲೂ ಅನೇಕ ಮಹಾಕವಿಗಳಿಗೆ ಮಾರ್ಗದರ್ಶಿಯಾದನು, ನೂತನ ಸಂಪ್ರದಾಯಸ್ಥಾಪಕನಾದನು.

ಜಿನಸೇನನು ಕರ್ನಾಟಕದ ಪ್ರಸಿದ್ಧ ರಾಷ್ಟ್ರಕೂಟ ರಾಜನಾದ ನೃಪತುಂಗ ಅಥವಾ ಅಮೋಘವರ್ಷನ ಆಶ್ರಯವನ್ನು ಪಡೆದಿದ್ದನು. ಇವನ ಗ್ರಂಥಕ್ಕೆ **ಆದಿಪುರಾಣ**ವೆಂದು ಹೆಸರು. ಜೈನರ ೬೩ ಪುರಾತನರ ಚರಿತ್ರೆಗೆಂದು ಹೊರಟ ಅದು ಪೂರ್ಣವಾಗಲಿಲ್ಲ. ಜಿನಸೇನನ ಶಿಷ್ಯನಾದ ಗುಣಭದ್ರನು ಉತ್ತರ ಪುರಾಣವನ್ನು ಬರೆದು ಅದನ್ನು ಮುಗಿಸಿದನು. ಒಟ್ಟು ಎರಡೂ ಕೂಡಿದ್ದನ್ನು **ಮಹಾಪುರಾಣ**ವೆನ್ನುತ್ತಾರೆ. ಈ ಪುರಾಣಗಳಲ್ಲಿ ಮತ್ತೆ ಕಥೆಯ ಸ್ವಾರಸ್ಯವೂ ಕಥನ ರಮಣೀಯತೆಯೂ, ಸರಸ ವರ್ಣನೆಗಳೂ ಪ್ರಾಧಾನ್ಯವನ್ನು ಪಡೆಯುತ್ತವೆ. ಹೀಗೆ 'ಧರ್ಮಕಥಾಮಯ'ವಾದ 'ಕಾವ್ಯರಸಾಯನ'ವನ್ನು ಬರೆಯುವಾಗ ಜಿನಸೇನನು 'ಕವಿಪರಮೇಶ್ವರ'ನೇ ಮುಂತಾದ ಪೂರ್ವಕವಿಗಳನ್ನು ಸ್ತುತಿಸುತ್ತಾನೆ. ಆದರೆ ಅವರ ಗ್ರಂಥಗಳೊಂದೂ ಸಿಕ್ಕಿಲ್ಲ.[59] ಆದರೆ ರಾಮಕಥೆಯ ಜೈನ ರೂಪಾಂತರವಾದ ರವಿಷೇಣನ 'ಪದ್ಮಪುರಾಣ' (ಕ್ರಿ. ಶ. ೭ ನೆ ಶತಮಾನ) ಜಿನಸೇನನ (ಈ ಜಿನಸೇನನೂ ಆದಿಪುರಾಣಕಾರನೂ ಬೇರೆ ಬೇರೆ) 'ಹರಿವಂಶಪುರಾಣ'ವೂ (ಕ್ರಿ. ಶ. ೮ ನೆ ಶತಮಾನ) ಈಗಲೂ ಉಪಲಬ್ಧವಿವೆ. ಇವುಗಳಲ್ಲಿ ಕಾವ್ಯದೃಷ್ಟಿಯಿದ್ದರೂ ಆದಿಪುರಾಣಕಾರನ ಪ್ರತಿಭಾಪ್ರವಾಹ ಧಾರಗೆ ಸಮವೆನಿಸುವುದಿಲ್ಲ, ಧರ್ಮದೃಷ್ಟಿಯಿಂದ ಪ್ರಸಿದ್ಧ ಕಥೆಯನ್ನು ಬದಲಾಯಿಸುವ ಪ್ರಯತ್ನ ಹೆಚ್ಚು.

---

59. ಮಹಾಪುರಾಣದ ಸುಂದರ ಮುದ್ರಣವು 1954 ರಲ್ಲಿ ಕಾಶಿಯ ಭಾರತೀಯ ಜ್ಞಾನಪೀಠದಿಂದ ಪ್ರಕಾಶಿತವಾಗಿದೆ.

ಕನ್ನಡದಲ್ಲಿ ಪಂಪನ ಆದಿಪುರಾಣವನ್ನು ಓದಿದವರಿಗೆ ಜಿನಸೇನನ ಆದಿಪುರಾಣದ ಕಥೆಯನ್ನೇನೂ ಹೊಸದಾಗಿ ಪರಿಚಯಮಾಡಿಸಬೇಕಾಗಿಲ್ಲ. ಪೀಠಿಕೆ, ಪೀಠಿಕೆಯನಂತರ ಆದಿತೀರ್ಥಂಕರನಾದ ವೃಷಭದೇವನ ಚರಿತ್ರೆ, ಅದಕ್ಕೆ ಅಂಗವಾಗಿ ಗಂಧಿಳಾದೇಶ, ವಿಜಯಾರ್ಧಪರ್ವತ, ಅತಿಬಲ, ಮಹಾಬಲರೆಂಬ ವಿದ್ಯಾಧರರಾಜರು, ಮಹಾಬಲನ ಆಸ್ಥಾನದಲ್ಲಿ ಮಹಾಮತಿ, ಸಂಭಿನ್ನಮತಿ, ಶತಮತಿ ಮುಂತಾದ ಮಂತ್ರಿಗಳ ಪರಮಾರ್ಥ ಚರ್ಚೆಗಳು, ಮಹಾಬಲನ ಭವಾವಳಿ, ಲಲಿತಾಂಗದೇವ-ಸ್ವಯಂಪ್ರಭೆ, ವಜ್ರಜಂಘ-ಶ್ರೀಮತಿ, ಇವರ ವೃತ್ತಾಂತಗಳು, ನಾಭಿರಾಜನ ಜನ್ಮಾಭಿಷೇಕಾದಿಗಳು, ಭರತಚಕ್ರವರ್ತಿ, ವೃಷಭದೇವನ ಕೈವಲ್ಯಪ್ರಾಪ್ತಿ, ಭರತಚಕ್ರವರ್ತಿಯ ವೃತ್ತಾಂತ—ಹೀಗೆ ಎಲ್ಲ ವರ್ಣನೆಗಳೂ ಜಿನಸೇನನ ಪುರಾಣದಲ್ಲಿ ಬರುತ್ತವೆ. 'ಪುರಾಣ'ವೆಂದು ಇದನ್ನು ಕರೆದರೂ ಬ್ರಾಹ್ಮಣರ ಪುರಾಣಗಳಲ್ಲಿಲ್ಲದ ಕಾವ್ಯಗುಣ ಇದರಲ್ಲಿ ಮಿಗಿಲಾಗಿದೆ. ಪ್ರಾಯಿಕವಾಗಿ ರಾಮಾಯಣದ ಅನುಷ್ಟುಭ್ ಶ್ಲೋಕಗಳೇ ಹೆಚ್ಚಾದರೂ ಛಂದೋವಿಚಿತಿಯಲ್ಲಿರುವ ವೃತ್ತ ವಿನ್ಯಾಸಗಳೆಲ್ಲವನ್ನೂ ಜಿನಸೇನನು ಅಲ್ಲಲ್ಲಿ ಉದಾಹರಿಸಿ ತನ್ನ ಕಾವ ಕೌಶಲವನ್ನು ಮೆರೆದಿದ್ದಾನೆ. ಕಾಳಿದಾಸ ಭಾರವಿಗಳ ಪ್ರಭಾವವನ್ನಂತೂ ಎಲ್ಲೆಡೆಗಳಲ್ಲಿಯೂ ಗಮನಿಸಬಹುದು. ೪೨ ಪರ್ವಗಳನ್ನುಳ್ಳ ಜಿನಸೇನನ ಕೃತಿಯಲ್ಲಿ ೧೧೯೭೭ ಪದ್ಯಗಳಿವೆ. ಇದರಿಂದಲೇ ಅವನ ಕೃತಿಯ ಮಹತ್ತ್ವದ ಕಲ್ಪನೆ ಬರುತ್ತದೆ. ಎಲ್ಲಿಯೂ ಅರ್ಥವ್ಯಕ್ತಿಗೆ ಲೋಪಬರುವುದಿಲ್ಲ. ಜಿನಸೇನನೇ ಸೂಚಿಸುವಂತೆ ಜನತಾಚಿತ್ತರಂಜನೆಗಾಗಿಯೇ ಬರೆದ ಪ್ರಸನ್ನ ಮತ್ತು ಸರಸ ಸತ್ಕಾವ್ಯತರಂಗಿಣಿಯೇ ಇದು :—

**ಪ್ರಸನ್ನಮಭವತ್ತೋಯಂ ಸರಸಾಂ ಸರಿತಾಮಪಿ ।**
**ಕವೀನಾಮಿವ ಸತ್ಕಾವ್ಯಂ ಜನತಾಚಿತ್ತರಂಜನಮ್ ॥**

(XXVI. 7)

ಅವನು ಸರಸ್ವತಿಯನ್ನು ಆಯಾಸಪಡಿಸುವುದಿಲ್ಲ, ತಾನೂ ಆಯಾಸದಿಂದ ಬೆವರು ಸುರಿಸಿಕೊಂಡು, ಎಡಹುತ್ತಾ, ಓದುಗರನ್ನು ಹಿಂಸಿಸುವುದಿಲ್ಲ :—

**ನ ಸ್ವಿದ್ಯನ್ನ ಪರಿಶ್ರಾಮ್ಯನ್ನೋ ತ್ರಸ್ಯನ್ನ ಪರಿಸ್ಖಲನ್ ।**
**ಸರಸ್ವತೀಮತಿಪ್ರೌಢಾಮನಾಯಾಸೇನ ಯೋಜಯನ್॥**
(II. 92)

ಕ್ರಮಾಗತವಾದ ಬ್ರಹ್ಮಪ್ರೋಕ್ತವಾದ ಪುರಾಣ ಎಲ್ಲರ ಬುದ್ಧಿಗೂ ನಿಲುಕತಕ್ಕುದಲ್ಲ, ಜಿನಸೇನನಂತಹ ಕವಿಪರಮೇಶ್ವರರು ಮಾತ್ರ ಗ್ರಹಿಸಿಯಾರು ಎಂದೂ ತಾನೇ ಹೇಳಿದ್ದಾನೆ:—

**ಧೀಪ್ರಮಾದಾದಿದೋಷೇಣ ವಿರಲೈರ್ಧಾರಯಿಷ್ಯತೇ ।**
**ತದಾಪೀದಮನುಸ್ಮರ್ತುಂ ಪ್ರಭವಿಷ್ಯಂತಿ ಧೀಧನಾಃ ।**
**ಜಿನಸೇನಾಗ್ರಗಾಃ ಪೂಜ್ಯಾಃ ಕವೀನಾಂ ಪರಮೇಶ್ವರಾಃ ॥**
(II 151-153)

ಧರ್ಮತರುವಿಗೆ ಅರ್ಥವೇ ಫಲವಾದರೆ, ಕಾಮವೇ ಫಲದ ರಸವೆಂದೂ, ಹೀಗೆ ತ್ರಿವರ್ಗತ್ರಯಕ್ಕೂ ಪುಣ್ಯಕಥಾಶ್ರುತಿಯೇ ಮೂಲವೆಂದೂ ತಿಳಿಸುತ್ತಾನೆ.—

**ಪಶ್ಯ ಧರ್ಮತರೋರರ್ಥಃ ಫಲಂ ಕಾಮಸ್ತು ತದ್ರಸಃ ।**
**ಸತ್ರಿವರ್ಗತ್ರಯಸ್ಯಾಸ್ಯ ಮೂಲಂ ಪುಣ್ಯಕಥಾಶ್ರುತಿಃ॥**(II, 31)

ಕೆಳಗಿನ ಪದ್ಯದಲ್ಲಿ ಪುರಾಣದ ವಸ್ತುವಿನ ಎಂಟಂಗಗಳನ್ನು ಹೇಳಿದ್ದಾನೆ:—

**ಲೋಕೋ ದೇಶಃ ಪುರಂ ರಾಜ್ಯಂ ತೀರ್ಥಂ ದಾನತಪೋಽ**
**ನ್ವಯಮ್ ।**
**ಪುರಾಣೇಷ್ವಷ್ಟಧಾಖ್ಯೇಯಂ ಗತಯಃ ಫಲಮಿತ್ಯಪಿ ॥**(IV, 3)

ಜಿನಸೇನನು ಪಂಪನಿಗೂ, ಮುಂದಿನ ಹಳೆಗನ್ನಡ ಪುರಾಣಕವಿಗಳಿಗೂ ಎಷ್ಟು ಸ್ಫೂರ್ತಿದಾಯಕನಾಗಿದ್ದನೆಂಬುದನ್ನು ತೋರಿಸಲು ಕೆಳಗಿನ ದೇಶವರ್ಣನೆಯ ಪದ್ಯಗಳೇ ಸಾಕು.—

**ಯತ್ರಾರಾಮಾಃ ಸದಾ ರಮ್ಯಾಸ್ತರುಭಿಃ ಫಲಶಾಲಿಭಿಃ ।**
**ಪಥಿಕಾನಾಹ್ವಯನ್ತೀವ ಪರಪುಷ್ಟಕಲಸ್ವನೈಃ ॥**
**ಯಸ್ಯ ಸೀಮಾವಿಭಾಗೇಷು ಶಾಲ್ಯಾದಿಕ್ಷೇತ್ರಸಂಪದಃ ।**
**ಸದೈವ ಫಲಶಾಲಿನ್ಯೋ ಭಾನ್ತಿ ಧರ್ಮ್ಯಾ ಇವ ಕ್ರಿಯಾಃ ॥**

**ಯತ್ರ ಶಾಲಿವನೋಪಾನ್ತೇ ಖಾತ್ಪತನ್ತೀಂ ಶುಕಾವಲೀಮ್ ।**
**ಶಾಲಿಗೋಪ್ಯೋಽನುಮನ್ಯನ್ತೇ ದಧತೀಂ ತೋರಣಶ್ರಿಯಮ್**
(IV, 59-61)

**ಯತ್ರಭಂಗಸ್ತರಂಗೇಷು ಗಜೇಷು ಮದವಿಕ್ರಿಯಾ ।**
**ದಂಡಪಾರುಷ್ಯಮಬ್ಜೇಷು ಸರಸ್ಸು ಜಲಸಂಗ್ರಹಃ ॥** (IV, 68)

[ಅಲ್ಲಿ ಯಾವಾಗಲೂ ಹಣ್ಣಿನಿಂದ ತುಂಬಿ ಶೋಭಿಸುವ ತೋಟಗಳು ಕೋಗಿಲೆಗಳ ಇನಿದನಿಯಿಂದ ಪಥಿಕರನ್ನು ಕರೆಯುವಂತಿವೆ. ಅದರ ಸೀಮೆಯಲ್ಲಿ ಗದ್ದೆಹೊಲಗಳು ಯಾವಾಗಲೂ ತೆನೆಗಳಿಂದಲೂ ಕಾಳುಗಳಿಂದಲೂ ತುಂಬಿ ಫಲಭರಿತವಾದ ಧರ್ಮಕಾರ್ಯಗಳಂತೆಯೇ ರಾಜಿಸುವುವು. ಅಲ್ಲಿಯ ನೆಲ್ಲುಗದ್ದೆಗಳಲ್ಲಿ ಹಾರಿಬರುವ ಗಿಳಿವಿಂಡನ್ನು ಗದ್ದೆಕಾಯುವ ಹೆಣ್ಣುಗಳು ತೋರಣದ ಮಾಲೆಯೆಂದು ಭಾವಿಸುವರು. ಅಲ್ಲಿ ಭಂಗವಿರುವುದು ತರಂಗಗಳಲ್ಲಿ ಮಾತ್ರ (ಆಸೆಗಳಲ್ಲಲ್ಲ), ಮದ ಕಾಣುವುದು ಆನೆಗಳಲ್ಲಿ ಮಾತ್ರ ಜನರಲ್ಲಲ್ಲ, ದಂಡಪಾರುಷ್ಯ (ಕ್ರೂರದಂಡನೆ ಮತ್ತು ತೊಟ್ಟಿನ ಕಾಠಿಣ್ಯ) ಪದ್ಮಗಳಲ್ಲಿ ಮಾತ್ರ. ಜಲಸಂಗ್ರಹವು (ಅಥವಾ ಜಡಮತಿಗಳ ಗುಂಪು) ಸರೋವರಗಳಲ್ಲಿ ಮಾತ್ರ]

ಕಾಳಿದಾಸನ ಛಾಯೆಗೆ ಒಂದು ಉದಾಹರಣೆ —

**ಕ್ವ ಗಂಭೀರಾ ಪುರಾಣಾಬ್ಧಿಃ ಕ್ವ ಮಾದೃಗ್ಬೋಧದುರ್ವಿಧಃ ।**
**ಸೋಽಹಂ ಮಹೋದಧಿಂ ದೋರ್ಭ್ಯಾಂ ತಿತೀರ್ಷುರ್ಯಾಮಿ ಹಾಸ್ಯತಾಮ್ ॥** (I, 28)

[ಗಂಭೀರವಾದ ಪುರಾಣಸಾಗರವೆಲ್ಲಿ ? ನನ್ನಂತೆ ಮಂದಮತಿಯೆಲ್ಲಿ ? ಮಹೋದಧಿಯನ್ನು ಕೈಬಲದಿಂದ ದಾಟಲೆಳಸುವವನಂತೆ ಹಾಸ್ಯಾಸ್ಪದನಾಗುವೆನು ! ]

ಕೆಳಗಿನ ಪರ್ವತವರ್ಣನೆಯಲ್ಲಿ ಭಾರವಿಯ (V. 2) ಛಾಯೆಯಿದೆ:—

**ಗಿರಿರಯಂ ಗುರುಭಿಃ ಶಿಖರೈರ್ದಿವಂ**
**ಪ್ರವಿಪುಲೇನ ತಲೇನ ಚ ಭೂತಲಮ್ ।**
**ದಧದುಪಾಂತಚರೈಃ ಖಚರೋರಗೈಃ**
**ಪ್ರಥಯತಿ ತ್ರಿಜಗಚ್ಛ್ರಿಯಮೇಕತಃ ॥** (XIX. 91)

[ಈ ಬೆಟ್ಟವು ಉನ್ನತ ಶಿಖರಗಳಿಂದ ದೇವಲೋಕವನ್ನೂ ವಿಪುಲವಾದ ಬುಡದಿಂದ ಭೂತಲವನ್ನೂ ಧರಿಸಿದೆ. ಪಕ್ಕದಲ್ಲಿ ಸಂಚರಿಸುವ ಖೇಚರಾದಿಗಳೂ ಇರುವುದರಿಂದ ಮೂಜಗಗಳ ಸಂಪತ್ತನ್ನೂ ಒಂದೇಕಡೆ ಪ್ರದರ್ಶಿಸುತ್ತಿರುವಂತಿದೆ! ]

ಸಹ್ಯಾದ್ರಿ ಸಮುದ್ರಗಳ ಪರಸ್ಪರ ಸಂಗಮದ ಚಿತ್ರವನ್ನು ನೋಡಿ —

**ಸಹ್ಯೋತ್ಸಂಗೇ ಲುಠನ್ನಬ್ಧಿಃ ನೂನಂ ದುಃಖಂ ನ್ಯವೇದಯತ್ ।**
**ಸೋಽಪಿ ಸಂಧಾರಯನ್ನೇನಂ ಬಂಧುಕೃತ್ಯಮಿವಾತನೋತ್ ॥**
(XXX. 44)

[ಸಹ್ಯಾದ್ರಿಯ ತೊಡೆಯಮೇಲೆ ಹೊರಳಾಡುವ ಕಡಲು ತನ್ನ ಗೋಳನ್ನು ಹೇಳಿಕೊಳ್ಳುವಂತಿದ್ದಿತು. ಅದನ್ನೆತ್ತಿಕೊಂಡ ಪರ್ವತವು ನಂಟನಂತೆ ಅದನ್ನು ಸಮಾಧಾನ ಮಾಡುತ್ತಿದೆಯೋ ಎನಿಸುತ್ತಿದ್ದಿತು! ]

ಜಿನಸೇನನು ಈ ದೃಶ್ಯವನ್ನು ಕಣ್ಣಾರೆ ಕಂಡು ಆನಂದಿಸದೆ ಹೋಗಿದ್ದರೆ ಇಂಥ ಚಿತ್ರ ಬರುತ್ತಿರಲಿಲ್ಲ.

ಆಗಿನ ಕಾಲದಲ್ಲಿ ಅತ್ಯಂತ ಪ್ರಿಯವಾಗಿದ್ದ ನಿರೌಷ್ಠ್ಯ, ಬಿಂದುಚ್ಯುತಕ, ಮುಂತಾದ ಪಂಡಿತಗೋಷ್ಠೀವಿನೋದಗಳನ್ನೆಲ್ಲ ಜಿನಸೇನನು ಹನ್ನೆರಡನೆಯ ಪರ್ವದಲ್ಲಿ ಬೇಕಾದಷ್ಟು ತೋರಿಸಿದ್ದಾನೆ. ಒಂದು ಮಾದರಿಯ ಒಗಟೆ —

**ವಟವೃಕ್ಷಃ ಪುರೋಽಯಂ ತೇ ಘನಚ್ಛಾಯಃ ಸ್ಥಿತೋ ಮಹಾನ್ ।**
**ಇತ್ಯುಕ್ತೋಽಪಿ ನ ತಂ ಘರ್ಮೇ ಶ್ರಿತಃ ಕೋಽಪಿ ವದಾದ್ಭುತಮ್ ॥** (XII. 226)

[‘ನೋಡು–ನಿನ್ನ ಮುಂದೆಯೇ ದೊಡ್ಡ ಆಲದಮರದ ನೆರಳು ಬೇಕಾದ ಹಾಗಿದೆ’ ಎಂದು ತೋರಿಸಿಕೊಟ್ಟರೂ ಬಿಸಿಲಿನಲ್ಲಿದ್ದವರು ಯಾರೂ ನೆರಳಿಗೆ ಹೋಗಲಿಲ್ಲ. ಈ ಸೋಜಿಗವನ್ನು ವಿವರಿಸು. ಇದೇ ಒಗಟೆ]

‘ವಟವೃಕ್ಷಃ’ ಎಂಬುದನ್ನು ವಟೋ! (=ಎಲೈ ವಟುವೇ) ಋಕ್ಷಃ (=ಕರಡಿ) ಎಂದು ಬಿಡಿಸಿಕೊಂಡರೆ ಒಗಟೆಯೂ ಬಿಡುತ್ತದೆ. ‘**ಘನಚ್ಛಾಯ**’ ಎಂದರೆ ‘**ಮೋಡದ ಬಣ್ಣದ**’ ಎಂಬರ್ಥವೂ ಹೊಳೆಯುತ್ತದೆ. ‘ಹುಡುಗನೆ’

ನಿನ್ನೆದುರಿಗೆ ಮೋಡದಂತೆ ಕಪ್ಪಾದ ಕರಡಿಯಿದೆಯೆಂದು ತೋರಿಸುತ್ತಿರುವಾಗ ಬಿಸಿಲಿನಲ್ಲಿದ್ದವರು ಯಾರೂ ಅದರ ಹತ್ತಿರ ಹೋಗದೆ ಇದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಇದೊಂದು ಕೂಟಪ್ರಶ್ನೆ (Quiz) :—

**ವರಾಶನೇಷು ಕೋ ರುಚ್ಯಃ ಕೋ ಗಂಭೀರೋ ಜಲಾಶಯಃ ।**
**ಕಃ ಕಾಂತಸ್ತವ ತನ್ವಂಗಿ ವದಾದಿವ್ಯಂಜನೈಃ ಪೃಥಕ್ ॥**

(XII. 243)

[ಉಣಿಸುಗಳಲ್ಲಿ ರುಚಿಕರವಾದುದು ಯಾವುದು ? ಆಳವಾದ ಜಲಾಶಯದ ಹೆಸರೇನು ? ನಿನ್ನ ಪತಿಯಾರು ? ಸುಂದರಿ, ಮೂರಕ್ಕೂ ಮೊದಲನೆ ವ್ಯಂಜನ ಮಾತ್ರ ಬೇರೆಯಾಗಿ ಎರಡನೆಯದು ಒಂದೇ ಆಗಿರುವಂತೆ ಉತ್ತರವನ್ನು ಹೇಳು]

ಸೂಪ (=ತೊವ್ವೆ), ಕೂಪ (ಭಾವಿ), ಭೂಪ, ಎಂದು ಉತ್ತರ.

ಹೀಗೆ ಜಿನಸೇನನ ವಾಣಿ ಅವನ ನಾಯಕನ ವಾಣಿಯಂತೆಯೇ 'ಪ್ರಸನ್ನಗಂಭೀರ' ಮತ್ತು 'ಅಲಂಕಾರಕೋಮಲ' (XXXIV. 31). ಅದರಲ್ಲಿ ಮಾಧುರ್ಯವುಂಟು, ಓಜಸ್ಸುಂಟು 'ಪದಸೌಷ್ಠವವುಂಟು, ಧರ್ಮನಿರ್ಣಯವುಂಟು, ಇಲ್ಲದಿರುವುದೇನೂ ಇಲ್ಲ :—

**ಅಸ್ತಿ ಮಾಧುರ್ಯಮುಸ್ತ್ಯೋಜಃ ತದಸ್ತಿ ಪದಸೌಷ್ಠವಮ್ ।**
**ಅಸ್ತ್ಯರ್ಥಾನುಗಮೋಽನ್ಯತ್ಕಿಂ ಯನ್ನಾಸ್ತಿ ತ್ವದ್ವಚೋಮಯೇ ॥** ( XXXIV. 32 )

ಸ್ವಾದ್ಯವೂ, ಅಮೃತೋಪಮವೂ, ಹೃದ್ಯವೂ, ಸುಸಂಸ್ಕೃತವೂ ಆದ ದಿವ್ಯ ಪಾನಕ ಅಥವಾ ರಸಾಯನರಸವೇ ಅದು.—

**ಸ್ವಾದ್ಯಂ ಚಾಮೃತಕಲ್ಪಾಖ್ಯಂ ಹೃದ್ಯಾಸ್ವಾದಂ ಸುಸಂಸ್ಕೃತಂ ।**
**ರಸಾಯನರಸಂ ದಿವ್ಯಂ ಪಾನಕಂ ಚಾಮೃತಾಹ್ವಯಮ್ ॥**

(XXXVII. 189)

ಜಿನಸೇನನ ಕಾಲದಲ್ಲಿ ವಾಙ್ಮಯವೆಂದರೆ ವ್ಯಾಕರಣ, ಛಂದಶ್ಶಾಸ್ತ್ರ, ಅಲಂಕಾರಶಾಸ್ತ್ರಗಳೆಂದೇ ತಿಳಿಯುತ್ತಿದ್ದರೆಂಬುದೂ, ಅಲಂಕಾರಶಾಸ್ತ್ರವೆಂದರೆ

ದಂಡಿಯ ಕಾವ್ಯಾದರ್ಶೋಕ್ತವಾದ ಪ್ರಕ್ರಿಯೆಗಳಿಗೇ ಪ್ರಾಶಸ್ತ್ಯವಿತ್ತೆಂಬುದೂ ಕೆಳಗಿನ ಪದ್ಯಗಳಿಂದ ವ್ಯಕ್ತವಾಗುತ್ತದೆ—

**ಪದವಿದ್ಯಾಮಧಿಚ್ಛನ್ದೋವಿಚಿತಿಂ ವಾಗಲಂಕೃತಿಮ್ ।**
**ತ್ರಯೀಂ ಸಮುದಿತಾಮೇತಾಂ ತದ್ವಿದೋ ವಾಙ್ಮಯಂ ವಿದುಃ॥**

(XVI. 111)

**ಉಪಮಾದೀನಲಂಕಾರಾಂಸ್ತನ್ಮಾರ್ಗದ್ವಯವಿಸ್ತರಮ್ ।**
**ದಶ ಪ್ರಾಣಾನಲಂಕಾರಸಂಗ್ರಹೇ ವಿಭುರಭ್ಯಧಾತ್ ॥**

(XVI. 115)

ಮುಂದೆ ೪೩ ನೆಯ ಪರ್ವದಿಂದಾಚೆಗೆ ೭೬ ನೆಯ ಪರ್ವದವರೆಗೂ ಉತ್ತರಕಥೆಯನ್ನು ಬರೆದು ಮುಗಿಸಿದ ಜಿನಸೇನನ ಶಿಷ್ಯ ಗುಣಭದ್ರನ ಸಾಧನೆಯೂ ದೊಡ್ಡದೇ. ಆದರೆ ಅವನಿಗೆ ಮುಗಿಸಬೇಕಾದ ಕಥಾಭಾಗವೇ ಹೆಚ್ಚಾಗಿದ್ದುದರಿಂದ ಜಿನಸೇನನಿಗಿದ್ದ ವರ್ಣನಾಸೌಕರ್ಯ ಕಡಿಮೆಯಾಗಿದ್ದಿತು. ತನ್ನ ಗುರುವನ್ನು ಆತನು ಪರಿಪರಿಯಿಂದ ಸ್ತುತಿಸುತ್ತಾನೆ. ಗುರುವಿನ ರಸಗಳ ಉಚ್ಛಿಷ್ಟವನ್ನು ಮಾತ್ರ ತಾನು ಭಕ್ತಿಯಿಂದ ಉಪಯೋಗಿಸುವುದಾಗಿ ಹೇಳುತ್ತಾನೆ. (XXXXIII, 9) 'ಕವಿಯ ಶ್ರಮ ಕವಿಗೇ ಗೊತ್ತು; ಬಂಜೆಗೆ ಪ್ರಸವವೇದನೆ ಹೇಗೆ ತಿಳಿಯಬೇಕು' ಎಂಬ ಸುಭಾಷಿತ ಗುಣಭದ್ರನದೇ—

**ಕವಿರೇವ ಕವೇರ್ವೇತ್ತಿ ಕಾಮಂ ಕಾವ್ಯಪರಿಶ್ರಮಮ್ ।**
**ವಂಧ್ಯಾ ಸ್ತನಂಧಯೋತ್ಪತ್ತಿವೇದನಾಮಿವ ನಾಕವಿಃ ॥**

(ಅದೇ ಪರ್ವ, 24)

ಗ್ರಂಥಾಂತ್ಯಪ್ರಶಸ್ತಿಯಲ್ಲಿ ಗುಣಭದ್ರನು ಜಿನಸೇನನ ಪುರಾಣವನ್ನು 'ಸಕಲಚ್ಛಂದೋಽಲಂಕೃತಿಲಕ್ಷ್ಯ'ವೆಂದೂ 'ಸೂಕ್ಷ್ಮಾರ್ಥಗೂಢಪದರಚನ'ವೆಂದೂ, 'ಸಾಕ್ಷಾತ್ಕೃತಸರ್ವಶಾಸ್ತ್ರಸದ್ಭಾವ'ವೆಂದೂ 'ನಿರ್ಜಿತಪರಕಾವ್ಯ'ವೆಂದೂ 'ಅತಿಲಲಿತ'ವೆಂದೂ 'ಮಿಥ್ಯಾಕವಿದರ್ಪದಲನ'ವೆಂದೂ ವರ್ಣಿಸಿದರೆ ಯಾರಿಗೂ ಅತಿಶಯೋಕ್ತಿಯೆನಿಸುವುದಿಲ್ಲ. ಧರ್ಮಾಸಕ್ತಿಯಿಲ್ಲದ ಕಾವ್ಯವಿಮರ್ಶಕರಿಗೂ ಇದರಲ್ಲಿ ಹೃದಯಂಗಮವಾದ ಅಂಶ ಅಗಾಧವಾಗಿದೆ. ಧರ್ಮಶ್ರದ್ಧೆಯೂ ಸೇರಿದವರಿಗೆ ಹೇಳುವುದೇನು!

ಜೈನರಲ್ಲಿ ನಿರ್ದೇಶಯೋಗ್ಯನಾದ ಇನ್ನೊಬ್ಬ ಸಂಸ್ಕೃತಮಹಾಕವಿ ಯೆಂದರೆ **ವಾದಿರಾಜ.** 'ಜಗದೇಕಮಲ್ಲ,' 'ಷಟ್ತರ್ಕಷಣ್ಮುಖ,' 'ಸ್ಯಾದ್ವಾದವಿದ್ಯಾಪತಿ,' ಎಂಬವು ಈತನ ಬಿರುದುಗಳು. ಈತನು ಸುಮಾರು ಕ್ರಿ.ಶ. ೯೫೦ ರಲ್ಲಿದ್ದನೆಂದು ಕೀತ್‌ರವರೂ, ಕ್ರಿ.ಶ. ೧೦೧೮-೧೦೪೨ ರ ವರೆಗೆ ಆಳಿದ ಚಾಲುಕ್ಯರಾಜ ಜಯಸಿಂಹನ ಸಮಕಾಲೀನನೆಂದು ರಾ. ನರಸಿಂಹಾ ಚಾರ್ಯರೂ ಹೇಳುತ್ತಾರೆ. ಈತನು ಬರೆದ ಕಾವ್ಯಗಳು ಎರಡು — ೧. ಪಾರ್ಶ್ವನಾಥಚರಿತ ಮತ್ತು ೨. ಯಶೋಧರಕಾವ್ಯ. ಮೊದಲನೆಯದು ಉಪಲಬ್ಧವಿಲ್ಲ. ಎರಡನೆಯದರ ಭಾಷಾಂತರವೇ ಕನ್ನಡಕವಿಚಕ್ರವರ್ತಿ ಜನ್ನನ 'ಯಶೋಧರಚರಿತೆ'. ಇಷ್ಟರಿಂದಲೇ ವಾದಿರಾಜನ ಕಾವ್ಯದ ಮಹತ್ತ್ವ ಸ್ಪಷ್ಟ. ವಾದಿರಾಜನ ಪ್ರಶಂಸೆಮಾಡುವ ವಾಕ್ಯಗಳು ಪ್ರಾಚೀನ ಶಾಸನಗಳಲ್ಲೂ ಪ್ರಶಸ್ತಿಗಳಲ್ಲೂ ಬೇಕಾದಹಾಗೆ ಬರುತ್ತವೆ. 'ತ್ರೈಲೋಕ್ಯ ದೀಪಕವಾದ ವಾಣಿ ಹೊರಟುದು ಜಗತ್ತಿನಲ್ಲಿ ಇಬ್ಬರಿಂದಲೇ, ಒಬ್ಬ ಜಿನರಾಜ, ಇನ್ನೊಬ್ಬ ವಾದಿರಾಜ'—

**ತ್ರೈಲೋಕ್ಯದೀಪಿಕಾ ವಾಣೀ ದ್ವಾಭ್ಯಾಮೇವೋದಗಾದಿಹ ।**
**ಜಿನರಾಜತ ಏಕಸ್ಮಾದೇಕಸ್ಮಾದ್ವಾದಿರಾಜತಃ ॥**

ಎಂದು ಮಲ್ಲಿಷೇಣಪ್ರಶಸ್ತಿಯಲ್ಲಿ ಹೇಳಿದ್ದರೆ 'ಸಭೆಯಲ್ಲಿ ವಾದಿ ರಾಜನೇ ಅಕಲಂಕ, ಕೀರ್ತನದಲ್ಲಿ ಧರ್ಮಕೀರ್ತಿ, ಮಾತಿನಲ್ಲಿ ಬೃಹಸ್ಪತಿ, ತರ್ಕವಾದದಲ್ಲಿ ಅಕ್ಷಪಾದ—ಹೀಗೆ ಎಲ್ಲ ಶಾಸ್ತ್ರಾಚಾರ್ಯರ ಗುಣಗಳೂ ಒಂದೆಡೆ ಸೇರಿರುವ ಎಲ್ಲರ ಪ್ರತಿನಿಧಿಯೇ ವಾದಿರಾಜ' ಎಂದು ಅವನ ಶಾಸ್ತ್ರ ಕೌಶಲವನ್ನು ನಗರ ತಾಲ್ಲೂಕಿನ ಶಿಲಾಶಾಸನವು (No. 36, Rice's Collection) ಕೊಂಡಾಡುತ್ತದೆ. ಶ್ರವಣಬೆಳಗೊಳದ ಶಾಸನವೊಂದು (No. ೫೪) 'ಸ್ಫುಟವ್ಮೃದುಮಧುರಶ್ರಾವ್ಯಕಾವ್ಯಾವಲೇಪಃ' ಎಂದು ಇವನ ಕವಿತೆಯ ಮೇಲ್ಮೆಯನ್ನು ನುತಿಸುತ್ತದೆ.

ವಾದಿರಾಜನ ಕಾವ್ಯವು ನಾಲ್ಕೇ ಸರ್ಗಗಳನ್ನುಳ್ಳ ಚಿಕ್ಕ ಕಾವ್ಯ. ಅದು ಜಿನ-ಗುರು-ಸಮಂತಭದ್ರಾದಿಗಳ ನಮಸ್ಕಾರದಿಂದಾರಂಭವಾಗುತ್ತದೆ. ಅನಂತರ ಈ ಧರ್ಮಕಥೆಯ ಪೀಠಿಕೆ ಬರುತ್ತದೆ.

**ಇತಿಹಾಸ ಸಮಾಸೋಽಯಮತ್ರಾವಹಿತಚೇತಸಾಂ ।**
**ಆಸ್ರವನ್ತಿ ಶುಭಾನ್ಯುಚ್ಚೈರ್ನಿರ್ಜೀರ್ಯನ್ತ್ಯಶುಭಾನಪಿ ॥** (I 4)

[ಈ ಸಂಗ್ರಹವಾದ ಪುಣ್ಯಚರಿತೆಯು ಧರ್ಮಶ್ರದ್ಧೆಯುಳ್ಳವರಿಗೆ ಪುಣ್ಯವನ್ನು ಹೆಚ್ಚಿಸಿ ಅಶುಭಗಳನ್ನು ನಾಶಮಾಡುತ್ತದೆ.] ಇದು ಫಲಶ್ರುತಿ—

**ವರ್ಧಯತ್ಯೇಷ ಸಂಯೋಗಂ ವಿಧತ್ತೇ ಶುದ್ಧವೃತ್ತಿತಾಂ ।**
**ಪ್ರಧ್ವಸ್ತೀಕುರುತೇ ವ್ಯಾಧೀನಾಧೀನಪಹರತ್ಯಲಂ ॥** (I. 5)

[ಯೋಗವನ್ನು ಹೆಚ್ಚಿಸುತ್ತದೆ, ಮನಸ್ಸನ್ನು ಪರಿಶುದ್ಧಮಾಡುತ್ತದೆ, ವ್ಯಾಧಿಗಳನ್ನು ಧ್ವಂಸಮಾಡಿ ಆಧಿಗಳನ್ನು ಪರಿಹರಿಸುತ್ತದೆ.] ಕವಿ ವಿಷಯ ಗ್ರಂಥದಲ್ಲಿ ಬರುವುದಿಷ್ಟೆ --

**ಶ್ರೀಪಾರ್ಶ್ವನಾಥಕಾಕುತ್ಸ್ಥಚರಿತಂ ಯೇನ ಕೀರ್ತಿತಮ್ ।**
**ತೇನ ಶ್ರೀ ವಾದಿರಾಜೇನ ದೃಬ್ಧಾ ಯಾಶೋಧರೀ ಕಥಾ ॥**
(I. 6)

[ಶ್ರೀ ಪಾರ್ಶ್ವನಾಥಚರಿತೆಯನ್ನು ವರ್ಣಿಸಿದ ವಾದಿರಾಜನೇ ಯಶೋಧರ ಚರಿತೆಯನ್ನೂ ರಚಿಸಿದ್ದಾನೆ ! ]

ವಾದಿರಾಜನ 'ಯಶೋಧರ ಕಾವ್ಯ'ವನ್ನೂ ಜನ್ನನ ಯಶೋಧರ ಚರಿತೆಯನ್ನೂ ತುಲನಾತ್ಮಕವಾಗಿ ವಿಮರ್ಶಿಸಿರುವ ಪ್ರೊ॥ ಡಿ. ಎಲ್. ನರಸಿಂಹಾಚಾರ್ ಅವರು "ಕೆಲವು ವೇಳೆ ಕಾಳಿದಾಸನನ್ನು ಮರೆಮಾಡುವ ಯೋಗ್ಯತೆಯು ವಾದಿರಾಜನಲ್ಲುಂಟು" ಎಂದಿದ್ದಾರೆ. (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೧೫-೪) ನಾಗವರ್ಮನ ಕಾವ್ಯಾವಲೋಕನದಲ್ಲಿ—

**ಅದ್ವೈತವಾದಿನಿವಹಮ**
**ದದ್ವಿರದಘಟಾವಿಪಾಟನೈಕಪಟಿಷ್ಠ- ।**
**ಸ್ಯಾದ್ವಾದಾಚಲಸಿಂಹಂ**
**ವಿದ್ವಾಂಸರ್ ಪೊಗಳೆ ವಾದಿರಾಜಂ ನೆಗಳ್ದಂ ॥**

ಎಂದು ಸಂಸ್ತುತನಾಗಿರುವ ಕವೀಶ್ವರನು ಈತನೇ.

ಈತನ ಕಾವ್ಯಸೌಂದರ್ಯಕ್ಕೆ ಎರಡು ಉದಾಹರಣೆಗಳು ; ಭಾವಾನುವಾದ ಜನ್ನನದು :—

ಅಸೌ ಕಥಂ ನಾಮ ನರೇಂದ್ರಪತ್ನ್ಯೈ
ರೋಚೇತ ರುಚ್ಯಾಕೃತಿಮುದ್ವಹನ್ತ್ಯೈ |
ಯದ್ವಾ ಕಿಮೇವಂ ಪರಿಚಿಂತಯಾ ಮೇ
ಸ್ತ್ರೀಣಾಮಪಾತ್ರೇಭಿರತಿಃ ಸ್ವಭಾವಃ ||

ಅಮೃತಮತಿಯೆತ್ತ ರೂಪಾ
ಧಮನಷ್ಟಾವಂಕನೆತ್ತ ಚಿತ್ರಮಪಾತ್ರೇ |
ರಮತೇ ನಾರೀ ಎಂಬುದು
ಸಮನಿಸಿದುದು ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ ||

ವಯೋ ನವಂ ರೂಪಮತೀವ ರಮ್ಯಂ
ಕುಲೋನ್ನತಿಶ್ಚೇತಿ ಕುಬುದ್ಧಿರೇಷಾ |
ಯತ್ರ ಪ್ರಸನ್ನೋ ಭಗವಾನ್ ಮನೋಭೂಃ
ಸ ಏವ ದೇವಃ ಸಖಿ ಸುಂದರೀಣಾಂ ||

ಕರಿದಾದೊಡೆ ಕತ್ತುರಿಯುಂ
ಮುರುಡಾದೊಡೆ ಮಲಯಜಂಗಳಂ
ಸ್ಮರಚಾಪಮನಿಳಿಕಯ್ವರೆ [ಕೊಂಕಿದೊಡೇಂ |
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್||

ಹೀಗೆ ಸಂಸ್ಕೃತ ಪುರಾಣಕಾರರಾದ ಜೈನರಲ್ಲಿ ಆರ್ಷಕವಿಗಳ ಸರಳ ಶೈಲಿಯ ಅನುಸರಣೆಯಿದ್ದರೂ 'ಮಹಾಕಾವ್ಯ' ವನ್ನು ಬರೆಯಲೆಂದೇ ಹೊರಟ ಜೈನ ವಿದ್ವತ್ಕವಿಗಳು ಕೂಡ ಭಾರವಿ, ಮಾಘರ ಸಂಪ್ರದಾಯವನ್ನೇ ಅನುಸರಿಸಿದರು. ಧರ್ಮನಾಥನೆಂಬ ತೀರ್ಥಂಕರನ ಕಥೆಯನ್ನಾಶ್ರಯಿಸಿ ಸುಮಾರು ೧೧ನೆಯ ಶತಮಾನದಲ್ಲಿ "ಧರ್ಮಶರ್ಮಾಭ್ಯುದಯ" ವೆಂಬ ಮಹಾಕಾವ್ಯವನ್ನು ಬರೆದ **ಹರಿಚಂದ್ರ**ನಲ್ಲಿ ಈ ಪ್ರಭಾವವನ್ನು ಸ್ಪಷ್ಟ ವಾಗಿ ಅನುಲಕ್ಷಿಸಬಹುದು. ಈತನು ತನ್ನ ಕಾವ್ಯವನ್ನು 'ಕರ್ಣಪೀಯೂಷ ರಸಪ್ರವಾಹ' ವೆಂದೂ ತನ್ನನ್ನು 'ರಸಧ್ವನಿಯ ಅಧ್ವದಲ್ಲಿ ಸಾರ್ಥವಾಹ' ನೆಂದೂ ವಿಶೇಷಿಸಿಕೊಂಡಿದ್ದರೂ ಹೆಚ್ಚಿನ ಸೃಷ್ಟಿ ವೈಶಿಷ್ಟ್ಯವೇನೂ ಇಲ್ಲ.

**ಕವಿರಾಜ :** ವಿದ್ವತ್ಕವಿಗಳ ಮಾಲಿಕೆಯಲ್ಲಿ ಕನ್ನಡಿಗನಾದ ಕವಿ ರಾಜನು ತೋರಿಸಿದ ಚಮತ್ಕಾರ ಅದ್ವಿತೀಯವಾದುದು. ಈತನು ಜಯಂತಿ

ಅಥವಾ ಬನವಾಸಿಯ ಅರಸನಾದ ಕಾಮದೇವನ ಸಭಾಕವಿಯಾಗಿದ್ದನು. ಕಾಲ ಕ್ರಿ. ಶ. ೧೨ನೆಯ ಶತಮಾನವಿರಬಹುದು. ಕವಿರಾಜನಾದ ಮಾಧವ ಭಟ್ಟನಿಗೆ ಕಾಮದೇವನ ಪೌತ್ರನೊಬ್ಬನು ದಾನಕೊಟ್ಟ ತಾಮ್ರಪಟವೊಂದು ದೊರೆತಿದೆ. ರೈಸ್ ಅವರು ಇದರ ಕಾಲ ಕ್ರಿ. ಶ. ೧೧೧೮ ಎಂದಿದ್ದಾರೆ.

ಹದಿಮೂರು ಸರ್ಗಗಳಿರುವ 'ರಾಘವಪಾಂಡವೀಯ' ವೆಂಬ ಚಿತ್ರ ಕಾವ್ಯದಲ್ಲಿ ಕವಿರಾಜನು ರಾಮಾಯಣ, ಮಹಾಭಾರತ, ಎರಡೂ ಕಥೆಗಳ ವರ್ಣನೆಯನ್ನು ಏಕಕಾಲದಲ್ಲಿ ಮಾಡಿ ತೋರಿಸಿದ್ದಾನೆ. ಈ ಅದ್ಭುತಪ್ರಯೋಗಕ್ಕೆ 'ದ್ವಿಸಂಧಾನ' ಕಾವ್ಯವೆಂದೂ ಹೇಳುವುದುಂಟು. ಶ್ರೀರಾಮಾಯಣದ ಮಾಣಿಕ್ಯವನ್ನು ಭಾರತಸುವರ್ಣದಲ್ಲಿ ಮೆಟ್ಟಿದರೆ ಯಾರ ಮಾನಸ ತಾನೇ ವಿಸ್ಮಯೋಲ್ಲಾಸಿಯಾಗದೆಂದು ಕವಿರಾಜನು ಕೇಳಿದರೆ ಅದು ಗರ್ವೋಕ್ತಿಯಲ್ಲ, ವಸ್ತುಸ್ಥಿತಿ. 'ಒಂದೇ ಪದದಲ್ಲಿ ಶ್ಲೇಷವನ್ನು ತರುವುದೂ ಮಹಾ ಪರಿಶ್ರಮದ ಕೆಲಸ, ಎರಡು ಮಹಾಕಥೆಗಳನ್ನು ಒಟ್ಟಿಗೆ ಕೂಡಿಸುವುದೆಂದರೆ ಆದಿಶೇಷನ ಪ್ರಯಾಸಕ್ಕೆ ಸಮಾನ' ವೆಂದು [60] ಆತನೇ ಆರಂಭದಲ್ಲಿ ಹೇಳಿದ್ದಾನೆ. 'ಶ್ರೀಮದ್ರಾಮಾಯಣವೇ ಗಂಗೆ, ಭಾರತವೇ ಮಹಾಸಾಗರ. ಇವೆರಡರ ಸಂಯೋಜನ ಮಾಡಲು ಇಬ್ಬರೇ ಸಮರ್ಥರು—ಒಬ್ಬ ಕವಿರಾಜ, ಇನ್ನೊಬ್ಬ ಭಗೀರಥ. ರಮ್ಯವಾದ ರಾಮಾಯಣವೂ ಭಾರತಿಯೇ ಆದ ಭಾರತವೂ ಒಂದೇ ಮೈಯಲ್ಲಿ ಸೇರಿ ಇಲ್ಲಿ ಅರ್ಧನಾರೀಶ್ವರನ ಮೂರ್ತಿಯಂತೆ ಮನೋಹರವಾಗಿವೆಯೆಂದೂ, ಸುಬಂಧು, ಬಾಣಭಟ್ಟ, ಕವಿರಾಜ, ಈ ಮೂವರಲ್ಲದೆ ನಾಲ್ಕನೆಯ "ವಕ್ರೋಕ್ತಿಮಾರ್ಗನಿಪುಣ" ನು ಇಲ್ಲವೇ ಇಲ್ಲವೆಂದೂ ನುಡಿದಿದ್ದಾನೆ. ಒಂದೇ ಉದಾಹರಣೆ:—

**ನೃಪೇಣ ಕನ್ಯಾಂ ಜನಕೇನ ದಿತ್ಸಿತಾ-**
**ಮಯೋನಿಜಾಂ ಲಂಭಯಿತುಂ ಸ್ವಯಂವರೇ ।**
**ದ್ವಿಜಪ್ರವರ್ಯೇಣ ಸ ಧರ್ಮನಂದನಃ**
**ಸಹಾನುಜಸ್ತತ್ಪುರಮಪ್ಯನೀನಯತ್ ॥** (II. 1)

---

60. ಪದಮೇಕಮಪಿ ಶ್ಲಿಷ್ಟಂ ವಕ್ತುಂ ಭೂಯಾನ್ ಪರಿಶ್ರಮಃ ।
ಕಥಾದ್ವಯೈಕ್ಯನಿರ್ವೋಢುಃ ಕಿಂ ಧರಾಧಾರಿಣೋಽಧಿಕಂ ॥ (I, 38)

ರಾಮಾಯಣಪರವಾದ ಅರ್ಥ :—

'ಆ ದ್ವಿಜಶ್ರೇಷ್ಠನಾದ ವಿಶ್ವಾಮಿತ್ರನು ಜನಕರಾಜನಿಂದ ಸ್ವಯಂವರದಲ್ಲಿ ಕೊಡಬೇಕೆಂದು ನಿರ್ಣೀತೆಯಾಗಿದ್ದ ಅಯೋನಿಜೆ ಸೀತೆಯನ್ನು ಕೊಡಿಸುವ ಉದ್ದೇಶದಿಂದ ಧರ್ಮಾಸಕ್ತನಾದ ಶ್ರೀರಾಮನನ್ನು ಲಕ್ಷ್ಮಣನೊಡನೆ ಮಿಥಿಲಾಪಟ್ಟಣಕ್ಕೆ ಕರೆದುಕೊಂಡು ಬಂದನು.'

ಭಾರತಪರವಾದ ಅರ್ಥ —

ಒಬ್ಬ ದ್ವಿಜಶ್ರೇಷ್ಠನು ಸ್ವಯಂವರದಲ್ಲೇ ಮಗಳನ್ನು ಕೊಡಬೇಕೆಂದು ತಂದೆಯಿಂದ ನಿರ್ಣೀತೆಯಾಗಿದ್ದಂಥ ಅಯೋನಿಜೆ ದ್ರೌಪದಿಯನ್ನು ಕೊಡಿಸುವ ಉದ್ದೇಶದಿಂದ ತಮ್ಮಂದಿರೊಡನೆ ಧರ್ಮರಾಯನನ್ನು ಪಟ್ಟಣಕ್ಕೆ ಕರೆತಂದನು.

ಈ ಚಮತ್ಕಾರವೇ ಯಾರನ್ನಾದರೂ ಮೂಗಿನಮೇಲೆ ಬೆರಳಿಡಿಸುವಂತಿದೆ. ಜತೆಗೆ ಏಕಾಕ್ಷರಾದಿ ಚಿತ್ರಗಳೂ, ಯಮಕಾದಿ ಅಲಂಕಾರಗಳೂ, ಖಡ್ಗಾದಿ ಬಂಧಗಳೂ ಸೇರಿದರೆ ಹೇಳುವುದೇನು! ಪ್ರಾಚೀನ ಸುಭಾಷಿತವೊಂದು (ವಾಮನನಿಂದ ಉದಾಹೃತ) ಮತ್ತೊಬ್ಬ ಅಜ್ಞಾತ ಕವಿರಾಜನನ್ನು ಕುರಿತು ಹೇಳುವುದನ್ನೇ ಈ ಕವಿಗೂ ಅನ್ವಯಿಸಿ ಹೇಳುವುದಾದರೆ—

'ಕವಿರಾಜನನ್ನು ತಿಳಿಯದಿದ್ದರೆ, ಕಾವ್ಯಕ್ರಿಯೆಯ ಆದರವೇಕೆ ?
ಕವಿರಾಜನನ್ನು ತಿಳಿದರೆ, ಕಾವ್ಯಕ್ರಿಯೆಯ ಆದರವೇಕೆ ?' [61]

ಹೇಗೂ ಅವನ ಕೃತಿ ಪ್ರಶ್ನಾರ್ಥಕ ಚಿಹ್ನೆಯನ್ನೇ ಓದುಗನಲ್ಲಿ ಮೂಡಿಸುತ್ತದೆ. ಅಂತೂ ಅನುಕರಣಕ್ಕೆ ಹೊಸದೊಂದು ಮಾದರಿ ಸಿಕ್ಕಿದಂತಾಯಿತು ಮುಂದಿನ ಪಂಡಿತ ಪ್ರಕಾಂಡರಿಗೆ.

**ಮಂಖ :** (ಕ್ರಿ. ಶ. ೧೨ನೆಯ ಶತಮಾನ). ಈತನು ಶಾರದಾಪೀಠವೆಂದು ಪ್ರಸಿದ್ಧವಾಗಿದ್ದ ಕಾಶ್ಮೀರದಲ್ಲಿ ಖ್ಯಾತಿಯಾಂತ ಅಲಂಕಾರಿಕ ಮತ್ತು ಮಹಾಕವಿ. ಈತನ ಮಹಾಕಾವ್ಯ—"ಶ್ರೀಕಂಠಚರಿತ." 'ಅಲಂಕಾರಸರ್ವಸ್ವ'ದ ಕರ್ತೃವಾದ ರುಯ್ಯಕನು ಇವನ ಗುರು. ಈ ಕಾವ್ಯದ ಕಡೆಯಲ್ಲಿ ಅಂದಿನ

---

61. ಕವಿರಾಜಮವಿಜ್ಞಾಯ ಕುತಃ ಕಾವ್ಯಕ್ರಿಯಾದರಃ ।
ಕವಿರಾಜಂ ಚ ವಿಜ್ಞಾಯ ಕುತಃ ಕಾವ್ಯಕ್ರಿಯಾದರಃ ॥
—ವಾಮನನ ಕಾವ್ಯಾಲಂಕಾರಸೂತ್ರವೃತ್ತಿ.

ಕಾವ್ಯಗೋಷ್ಠಿಗಳ ಪೂರ್ಣ ಪರಿಚಯವನ್ನು ಕೊಡುವ ಒಂದು ಸರ್ಗವಿದೆ. ಕವಿ ನರಸ್ತುತಿಗೆ ಹೇಸಿ ತನ್ನ ಕಾವ್ಯಕಲೆಯನ್ನು ದೇವತಾಸ್ತುತಿಗೆ ವಿನಿಯೋಗಿಸಿದ್ದಾನೆ. ಅವನ ಸುಜನದುರ್ಜನವರ್ಣನೆ (ಸರ್ಗ ೨) ಮತ್ತು ದೇಶ ವಂಶಾದಿವರ್ಣನೆ (ಸರ್ಗ ೩) ಗಳು ಹೃದಯಂಗಮವಾಗಿರುವುದಲ್ಲದೆ ಐತಿಹಾಸಿಕ ದೃಷ್ಟಿಯಿಂದಲೂ ಉಪಯುಕ್ತವಾಗಿವೆ. ಪರ್ವತ, ವಸಂತ, ಮುಂತಾದ ವರ್ಣನೆಗಳಲ್ಲೂ ಕವಿ ನವೀನತೆಯನ್ನು ತೋರಿಸಿದ್ದಾನೆ. ಮಾಘಾದಿಗಳ ಶ್ಲೇಷೆಯ ಬದಲು ವಕ್ರೋಕ್ತಿಯ ವಿಲಾಸವಿಲ್ಲಿ ನಿರರ್ಗಳವಾಗಿ ಹರಿಯುತ್ತದೆ. ವೈದರ್ಭೀರೀತಿಯ ಜತೆಗೆ ಗೌಡೀರೀತಿಯೂ ಬರುತ್ತದೆ, ಕವಿತೆಯ ಓಟ ನಿರರ್ಗಳವಾಗಿರುವುದನ್ನೂ ಅಲಂಕಾರಗಳ ಚಮತ್ಕಾರವನ್ನೂ ಬಿಟ್ಟರೆ ಕಾವ್ಯದಲ್ಲಿ ಮತ್ತೇನೂ ವೈಶಿಷ್ಟ್ಯವಿಲ್ಲ.

**ಶ್ರೀಹರ್ಷ:** ಶ್ರೀಹರ್ಷನೇ ಸಂಸ್ಕೃತ ವಿದ್ವತ್ಕವಿಗಳ ಸಾಲಿನಲ್ಲಿ ಪರಮಪೂಜ್ಯ. ಸಂಸ್ಕೃತಮಹಾಕಾವ್ಯದ ಪರಂಪರೆಯ ಚರಮವಿಶ್ರಾಮಸ್ಥಾನವೇ ಆತನ 'ನೈಷಧೀಯಚರಿತ' ಅಥವಾ ನೈಷಧ. "ಪಂಚಮಹಾಕಾವ್ಯ" ಗಳಲ್ಲಿ ಅದೇ ಕಡೆಯ ರತ್ನ. ಅವನ ತಂದೆ 'ಕವಿರಾಜ ರಾಜಿಮುಕುಟಾಲಂಕಾರ'ನಾದ ಶ್ರೀ ಹೀರ; ತಾಯಿ ಮಾಮಲ್ಲದೇವಿ. ಶ್ರೀ ಹೀರನು ಕಾನ್ಯಕುಬ್ಜೇಶ್ವರನಾದ ವಿಜಯಚಂದ್ರನ ಸಭಾಕವಿಯಾಗಿದ್ದಂತೆ ಶ್ರೀಹರ್ಷನು ವಿಜಯಚಂದ್ರನ ಮಗ ಜಯಂತಚಂದ್ರ (ಕ್ರಿ.ಶ. ೧೧೬೯–೧೧೯೦)ನ ಸಭಾಕವಿಯಾಗಿದ್ದನು. (ಈ ರಾಜನೇ ಇತಿಹಾಸ ಪ್ರಸಿದ್ಧನಾದ ಪೃಥ್ವೀರಾಜನ ಮಾವ ಮತ್ತು ಸಂಯೋಗಿತೆಯ ತಂದೆ ರಾಠೋಡ ಜಯಚಂದನಿರಬೇಕು.) ಪ್ರಸಿದ್ಧ ನೈಯಾಯಿಕನಾದ ಉದಯನನು ಹೀರನನ್ನು ವಾದದಲ್ಲಿ ಸೋಲಿಸಿದ್ದನೆಂದೂ, ಶ್ರೀಹರ್ಷನು 'ಚಿಂತಾಮಣಿ' ಮಂತ್ರದ ಉಪಾಸನಾ ಬಲದಿಂದ ತ್ರಿಪುರಾದೇವಿಯ ಅದ್ಭುತ ಅನುಗ್ರಹವನ್ನು ಪಡೆದು ಮಹಾಪಂಡಿತನೆನಿಸಿ ಉದಯನಾದಿ ಸರ್ವವಾದಿಗಳನ್ನೂ ನಿಗ್ರಹಿಸಿದ್ದನೆಂದೂ ಹೇಳುತ್ತಾರೆ. ಶ್ರೀಹರ್ಷನೇ ನೈಷಧದ ಸರ್ಗಾಂತ್ಯಗಳಲ್ಲಿ ತನ್ನ ಗ್ರಂಥಾಂತರಗಳ ಹೆಸರನ್ನು ತಿಳಿಸಿದ್ದಾನೆ:—

೧. ಸ್ಥೈರ್ಯ ವಿಚಾರಣ
೨. ವಿಜಯ ಪ್ರಶಸ್ತಿ

೩. ಖಂಡನಖಂಡಖಾದ್ಯ (ಪ್ರಸಿದ್ಧವಾದ ಅದ್ವೈತ ವೇದಾಂತದ ಪ್ರೌಢ ಗ್ರಂಥ)

೪. ಗೌಡೋರ್ವೀಶ ಕುಲ ಪ್ರಶಸ್ತಿ

೫. ಅರ್ಣವ ವರ್ಣನ

೬. ಛಿಂದ ಪ್ರಶಸ್ತಿ

೭. ಶಿವಶಕ್ತಿ ಸಿದ್ಧಿ

೮. ನವಸಾಹಸಾಂಕಚರಿತಚಂಪೂ

ಅದ್ವೈತ ವೇದಾಂತದ ಇತಿಹಾಸದ ವಾದಗ್ರಂಥಗಳಲ್ಲಿ ಸರ್ವಶ್ರೇಷ್ಠವೆಂದು ಪರಿಗಣಿತವಾಗಿರುವ ಮೂರನೆಯದನ್ನು ಬಿಟ್ಟರೆ ಉಳಿದ ಪ್ರಶಸ್ತಿ ಕಾವ್ಯ, ಮುಂತಾದವು ದೊರೆತಿಲ್ಲ. ಆದರೂ ಶ್ರೀ ಹರ್ಷನು ಉದ್ದಾಮ ಶಾಸ್ತ್ರಜ್ಞ ಮತ್ತು ಪ್ರೌಢಕವಿಯೆಂಬುದರಲ್ಲಿ ಸಂಶಯವಿಲ್ಲ ಅವನ ವಾಣಿಯು ಕರ್ಕಶವಾದ ತರ್ಕದಲ್ಲೂ ಸುಕುಮಾರವಾದ ಸಾಹಿತ್ಯದಲ್ಲೂ ಏಕವಿಧವಾಗಿ, ಲೀಲಾಜಾಲವಾಗಿ, ಪ್ರಸರಿಸುತ್ತದೆ —

**" ಸಾಹಿತ್ಯೇ ಸುಕುಮಾರ ವಸ್ತುನಿ ದೃಢನ್ಯಾಯಗ್ರಹಗ್ರಂಥಿಲೇ**
**ತರ್ಕೇ ವಾ ಮಯಿ ಸಂವಿಧಾತರಿ ಸಮಂ ಲೀಲಾಯತೇ**
**ಭಾರತೀ । "**

ಸಂಸ್ಕೃತದ ಶಿಕ್ಷಾ ಕೇಂದ್ರವಾದ ಕಾಶ್ಮೀರದಲ್ಲೂ ಚತುರ್ದಶ ವಿದ್ಯಾ ಪ್ರವೀಣರಾದ ಪಂಡಿತರು ತನ್ನ ಕಾವ್ಯವನ್ನು ಕೊಂಡಾಡಿದರೆಂದು ಶ್ರೀ ಹರ್ಷನೇ ನಿರ್ದೇಶಿಸಿದ್ದಾನೆ. (ಕಾಶ್ಮೀರೈರ್ಮಹಿತೇ ಚತುರ್ದಶತಯೀಂ ವಿದ್ಯಾಂ ವಿದದ್ಭಿರ್ಮಹಾಕಾವ್ಯೇ)

ನೈಷಧ ಕಾವ್ಯದಲ್ಲಿ ಈಗ ೨೨ ಸರ್ಗಗಳು ಉಪಲಬ್ಧವಿವೆ. ಕಥೆ ಪ್ರಸಿದ್ಧವಾದ ನಳಚರಿತ್ರೆ. ಆದರೆ ಈ ಸರ್ಗಗಳಲ್ಲಿ ನಳದಮಯಂತಿಯರ ವಿವಾಹದವರೆಗಿನ ಕಥೆಯಷ್ಟೇ ಇದೆ. ನಳಕಥೆಯ ಕರುಣಮಯ ಪ್ರಸಂಗಗಳ ಸ್ಪರ್ಶವೂ ಇಲ್ಲ. ಮಹಾಭಾರತದ ಸಂಪೂರ್ಣನಳೋಪಾಖ್ಯಾನವು ಸುಮಾರು ೨೦೦ ಶ್ಲೋಕಗಳಲ್ಲಿ ಮುಗಿದರೆ ಇಲ್ಲಿ ನಳದಮಯಂತಿಯರ ವಿವಾಹದ ಹೊತ್ತಿಗೆ ೨೫೦೦ ಶ್ಲೋಕಗಳು ಬರುತ್ತವೆ. ಮೂಲ ಕಥೆಯಲ್ಲಿ ಶೃಂಗಾರ, ಕರುಣ, ಅದ್ಭುತಗಳ ಸಂಶ್ಲೇಷವಿದ್ದರೆ ಶ್ರೀ ಹರ್ಷನ ಕಾವ್ಯದಲ್ಲಿ ಕಾಮಶಾಸ್ತ್ರದ ಪ್ರಾಯೋಗಿಕ ರೂಪವೆನ್ನುವಂತಹ ವರ್ಣನೆಗಳು ಮಾತ್ರ ತುಂಬಿವೆ.

ದಮಯಂತೀ ಸ್ವಯಂವರಕ್ಕೆ ಇಲ್ಲಿ ಕವಿ ಐದು ಸಂಪೂರ್ಣ ಸರ್ಗಗಳನ್ನೇ ಮೀಸಲಾಗಿಟ್ಟಿದ್ದಾನೆ. 'ಶೃಂಗಾರಾಮೃತ ಶೀತಗುಃ' ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ. ಮಾಘನನ್ನು ಶ್ರೀ ಹರ್ಷನು ಈ ಅಂಶದಲ್ಲಿ ಮೀರಿಸಿರುವುದು ಸ್ಪಷ್ಟ. ಅವನೇ ಹೇಳುವಂತೆ 'ನವಾರ್ಥ ಘಟನೆ'ಯೂ 'ಕವಿಕುಲಾದೃಷ್ಟಾಧ್ವಪಾಂಥ'ತ್ವವೂ ಕಾವ್ಯದಲ್ಲಿ ಉಂಟು. 'ಖಂಡನ ಖಂಡಖಾದ್ಯ'ದಲ್ಲಿ "ತಥಾಹಮುಕಥಯಂ ನೈಷಧಚರಿತಸ್ಯ ಪರಮ ಪುರುಷಸ್ತುತೌ ಸರ್ಗೇ' ಎಂದಿರುವ ಸರ್ಗ ಈಗ ಈ ೨೨ರಲ್ಲಿ ಅಂತರ್ಗತವಾಗದಿರುವುದರಿಂದ ಗ್ರಂಥದ ಮುಂದಿನ ಸರ್ಗಗಳು ಸಿಕ್ಕಿಲ್ಲವೆಂದು ತಿಳಿಯುವುದೂ ಉಂಟು. ಆದರೆ ೨೨ನೆ ಸರ್ಗದ ಕಡೆಗೆ ಸಮಾಪ್ತಿ ಸೂಚಕವಾದ ಪ್ರಶಸ್ತಿಗಳಿವೆ.

ಕವಿಯೇ ಹೇಳುವಂತೆ ಇದನ್ನು ಓದಿ ಆನಂದಿಸಬೇಕಾದವರು ಪ್ರಾಜ್ಞಂಮನ್ಯರಲ್ಲ, ಶ್ರದ್ಧೆಯಿಂದ ಗುರುಸೇವೆ ಮಾಡಿ 'ಶ್ಲಥೀಕೃತ ದೃಢ ಗ್ರಂಥಿ'ಗಳಾದ ಮಹಾವಿದ್ವಾಂಸರು. ಅದರಿಂದ ಶ್ರಮಪಟ್ಟು ಅಲ್ಲಲ್ಲಿ 'ಗ್ರಂಥ ಗ್ರಂಥಿ'ಗಳನ್ನಿಟ್ಟಿದ್ದಾನೆ. ಹಲ್ಲು ಮೊಳೆಯದ ಬಾಲರಿರಲಿ, ಪ್ರೌಢರ ಗಟ್ಟಿಯಾದ ಹಲ್ಲುಗಳಿಗೂ ಹರಿಯದಂತಹ ಕಬ್ಬಿಣದ ಕಡಲೆಗಳಿವು. ಇವುಗಳೆಂದರೆ ಸಂಸ್ಕೃತಪಂಡಿತರಿಗೆ ಪ್ರಾಣ, ಪಂಡಿತರ ಪರೀಕ್ಷೆಗಿವು ಎತ್ತಿದ ಘಟ್ಟಗಳು. ಇವನ್ನು ಕುರಿತೇ "ನೈಷಧಂ ವಿದ್ವದೌಷಧಂ" ಎಂಬ ಗಾದೆ ಹುಟ್ಟಿರುವುದು. ಇದು ನಿಜವಾಗಿಯೂ ಔಷಧಿ ಪಾಕವೇ ಹೌದು. ಶ್ಲೇಷಾಶ್ಲಿಷ್ಟವಾದ ಈ 'ಕಾವ್ಯ ರಸೋರ್ಮಿಮಜ್ಜನ ಸುಖ'ಕ್ಕೆ ಅಂದಿನ ಯುಗದ ಸಜ್ಜನರೇ ಮತ್ತೆ ಹುಟ್ಟಿಬರಬೇಕಾಗಿದೆ ಪರ್ಯಾಯವಾಗಿ ಕವಿ ತಾನೇ ಸರಸ್ವತಿಯ ವಾಸಭೂಮಿಯೆಂದೂ, ಬ್ರಹ್ಮನು ಭೂಲೋಕ-ವಿಲೋಕನೋತ್ಸಾಹದಿಂದ ಕಳುಹಿಸಿದ ಹೈಮಹಂಸವೆಂದೂ ಹೊಗಳಿ ಕೊಂಡಿದ್ದಾನೆ.[62] ನಮ್ಮ ಅಲ್ಪ ಬುದ್ಧಿಗೆ ನಾವು ನಾಚಬೇಕೇ ಹೊರತು ಶ್ರೀ ಹರ್ಷನ ಶಬ್ದ ಸಂಪತ್ತನ್ನು, ಪದಲಾಲಿತ್ಯವನ್ನು, ಭಾಷಾ ಸೌಷ್ಠವವನ್ನು, ಪ್ರತಿಭೆಯ ಔಜ್ಜ್ವಲ್ಯವನ್ನು ಅಲ್ಲಗಳೆಯುವಂತಿಲ್ಲ. ಅವನ ವರ್ಣನಶಕ್ತಿಗೆ ಅಂತವಿಲ್ಲ, ಒಂದನ್ನು ನೂರು ಪರಿಗಳಿಂದ ಪುನರುಕ್ತಿ ಕಾಣದಂತೆ ವರ್ಣಿಸಬಲ್ಲ ಧೀರ ಶ್ರೀ ಹರ್ಷ. ಅವನ ಶಬ್ದ ಸಂಗ್ರಹ ಅಪಾರ, ಎಲ್ಲ ಪುರಾಣಗಳೂ ಅವನ ಕೈಬೆರಳುಗಳ ತುದಿ

62. ದಿಶಿ ದಿಶಿ ಗಿರಿಗ್ರಾವಾಣ . . . . . —ನೈಷ । (XX, 151)

ಯಲ್ಲಿ ಕುಣಿಯುತ್ತವೆ. ಉಳಿದ ಕವಿಗಳ ಅಲಂಕಾರಗಳನ್ನೆಲ್ಲ ತಲೆಕೆಳಗು ಮಾಡಿ ಬೇರೆ ಅಲಂಕಾರಚ್ಛಾಯೆಯನ್ನು ಲೀಲಾಜಾಲವಾಗಿ ಶ್ರೀ ಹರ್ಷನು ತರಲು ಸಮರ್ಥ. ಇವನನ್ನು ಓದಿ ಅರಿತುದಾದರೆ ಭಾರವಿ ಮಾಘರು ಯಾವ ಲೆಕ್ಕವೆನಿಸಿಬಿಡಬಹುದು. ‘ ಉದಿತೇ ನೈಷಧೇ ಕಾವ್ಯೇ ಕ್ವ ಮಾಘಃ ಕ್ವ ಚ ಭಾರವಿಃ?’ ಅಲಂಕಾರಗಳೊಂದೊಂದರಲ್ಲೂ ನಾವೀನ್ಯವೇನೆಂಬುದನ್ನು ತಿಳಿಯಬೇಕಾದರೆ ಶ್ರೀಹರ್ಷನ ಪ್ರಖರಪ್ರತಿಭೆಯ ಪ್ರಸೂನಗಳನ್ನೇ ನೋಡ ಬೇಕು. ಅವನು ಯಾವುದರಲ್ಲೂ ಅನುಕರಣತೃಪ್ತನಲ್ಲ, ನವೀನಘಟನಾ ತತ್ಪರ ಅವನೇ ಹೇಳುವಂತೆ ಈ ಮಹಾಕಾವ್ಯವು ಸುಮ್ಮನೆ ‘ ನವ್ಯ ’ವಲ್ಲ, ‘ಅತಿನವ್ಯ’, ಸುಮ್ಮನೆ ‘ಉಜ್ಜ್ವಲ ’ವಲ್ಲ, ‘ನಿಸರ್ಗೋಜ್ಜ್ವಲ ’. ‘ ಭೂಮಿಯ ಮೇಲಿನ ಕವಿಗಳೆಲ್ಲ ಬೇಸಗೆಯಲ್ಲೊಣಗುವ ಝರಿಗಳನ್ನು ಹರಿಸುವ ಗುಡ್ಡ ಗಳಾದರೆ ಶ್ರೀಹರ್ಷನು ಅಮೃತವೇ ಮುಂತಾದ ಚತುರ್ದಶರತ್ನಗಳಿಗೂ ಆಗರವಾದ ಕ್ಷೀರಸಾಗರ’.[63] ಇದನ್ನು ಇಂದಿನವರು ಆತ್ಮಪ್ರಶಂಸೆಯ ಪರಾ ಕಾಷ್ಠೆಯೆನ್ನಬಹುದು, ಆದರೆ ಹಿಂದಿನವರು ಅಕ್ಷರಶಃ ಅನ್ವರ್ಥಕವೆನ್ನು ತ್ತಿದ್ದರು. ನೈಷಧದ ವಿಶಾಲ ವಿಲಾಸವಾಟಿಯಲ್ಲಿ ಜೀವನದ ಜಟಿಲ ವಟವೃಕ್ಷಗಳಿಗೆ ಯಾವ ಸ್ಥಾನವೂ ಇಲ್ಲದಿರುವುದು ಅದರ ಅಲೌಕಿಕ ಸನ್ನಿವೇಶಕ್ಕೆ ಸಮಂಜಸವಾಗಿಯೇ ಇದೆ. ಮಹಾಭಾರತದ ನಳೋಪಾಖ್ಯಾನ ದಲ್ಲಿ ನಳದಮಯಂತಿಯರ ಪವಿತ್ರಪ್ರೇಮದ ಸಾತ್ವಿಕ ರೂಪ ಚಿತ್ರಿತವಾಗಿದ್ದರೆ ಇಲ್ಲಿ ವಿಲಾಸಮಯವೂ ವಾಸನಾಪೂರ್ಣವೂ ಆದ ಬಣ್ಣಗಳಿಂದ ರಂಜಿತ ವಾಗಿದೆ. ರಾಜ್ಯಭ್ರಷ್ಟನಾದ ನಳನ ಕರುಳು ಕರಗುವ ದಶೆಗೆ ಇಲ್ಲಿ ಎಡೆಯಿಲ್ಲ. ತನ್ನ ವಿವಕ್ಷೆಗನುಗುಣವಾಗಿ ಕವಿ ಮೂಲದಲ್ಲಿಲ್ಲದ ಕಥಾಂಶಗಳನ್ನೂ ಕಲ್ಪಿಸಿ ಕೊಂಡಿದ್ದಾನೆ. ಉದಾಹರಣೆಗೆ ಇಲ್ಲಿ ನಳನು ದೇವತೆಗಳ ದೂತನಾಗಿ ದಮಯಂತಿಯ ಬಳಿಗೆ ಬರುತ್ತಾನೆ, ದೇವತೆಗಳನ್ನೇ ವರಿಸಬೇಕೆಂದು ಅವನ

---

63 ಹೋಲಿಸಿ—‘ ಮಧ್ಯೇ ಶ್ರುತೀನಾಂ ಪ್ರತಿವೇಶಿನೀನಾಂ
ಸರಸ್ವತೀ ವಾಸವತೀ ಮುಖೇ ನಃ ’. —(III, 64)

ಮತ್ತು “ ಧಾತುರ್ನಿದೇಶಾದಿಹ ನೈಷಧೀಯಂ
ಲೀಲಾಸರಃ ಸೇವಿತುಮಾಗತೇಷು ।
ಹೈಮೇಷು ಹಂಸೇಷ್ವಹಮೇಕ ಏವ
ಭ್ರಮಾಮಿ ಭೂಲೋಕವಿಲೋಕನೋತ್ಕಃ ॥ ” (III, 18)

ಮನವೊಲಿಸುವುದಕ್ಕಾಗಿ. ತಾನೇ ವರನಾಗಿರುವಾಗ ಇದು ಎಂತಹ ಸತ್ವ ಪರೀಕ್ಷೆಯ ಪ್ರಸಂಗ! ಕರ್ತವ್ಯಕ್ಕೂ ಆತ್ಮಾಭಿಮಾನಕ್ಕೂ ಎಂತಹ ಸಂಘರ್ಷ! ಈ ಸನ್ನಿವೇಶ ಮೂಲ ಮಹಾಭಾರತದಲ್ಲಿಲ್ಲ.

ಶ್ರೀಹರ್ಷನ ಅಲಂಕಾರಗಳ ಅತಿನವ್ಯತೆಗೆ ಒಂದು ಉದಾಹರಣೆ·— ದಮಯಂತೀಸ್ವಯಂವರಕ್ಕೆ ಬಂದಿರುವ ಒಬ್ಬ ರಾಜನ ಅಕೀರ್ತಿಯ ವೈಖರಿಯಿದು .—

**ಅಸ್ಯ ಕ್ಷೋಣಿಪತೇಃ ಪರಾರ್ಧಪರಯಾ ಲಕ್ಷೀಕೃತಾಃ ಸಂಖ್ಯಯಾ**
**ಪ್ರಜ್ಞಾಚಕ್ಷುರವೇಕ್ಷ್ಯಮಾಣತಿಮಿರಪ್ರಖ್ಯಾಃ ಕಿಲಾಕೀರ್ತಯಃ ।**
**ಗೀಯಂತೇ ಸ್ವರಮಷ್ಟಮಂ ಕಲಯತಾ ಜಾತೇನ ವಂಧ್ಯೋದರಾ-**
**ನ್ಮೂಕಾನಾಂ ಪ್ರಕರೇಣ ಕೂರ್ಮರಮಣೀದುಗ್ಧೋದಧೇ ರೋಧಸಿ ॥** (XII-106)

'ಈ ಅರಸನ ಅಕೀರ್ತಿಗಳನ್ನು ಎಣಿಸಲು ಅನಂತಕ್ಕಿಂತ ಮೇಲಿನ ಸಂಖ್ಯೆ ಬೇಕು. ಅವುಗಳ ಬಣ್ಣವೋ ಹುಟ್ಟುಗುರುಡನು ನೋಡುವ ಅಂಧಕಾರದಂತೆಯೇ ಕಪ್ಪು. ಬಂಜೆ ಹೆತ್ತ ಮೂಗರ ಗುಂಪು ಹೆಣ್ಣಾಮೆಯ ಹಾಲಿನ ಕಡಲ ತಡಿಯಲ್ಲಿ ಕುಳಿತುಕೊಂಡು ಅಷ್ಟಮಸ್ವರದಿಂದ ಅದನ್ನು ಗಾನಮಾಡುತ್ತಿವೆ.'

ಅನಂತಕ್ಕಿಂತ ಮೇಲಿನ ಸಂಖ್ಯೆ, ಹುಟ್ಟು ಕುರುಡನ ನೋಟ, ಅಂಧ ಕಾರದ ಮೂರ್ತತ್ವ, ಹೆಣ್ಣಾಮೆಯ ಹಾಲು, ಬಂಜೆಯ ಮಕ್ಕಳು, ಮೂಗರ ಗಾಯನ, ಅಷ್ಟಮ ಸ್ವರ- ಒಂದಕ್ಕಿಂತ ಒಂದು ಅತ್ಯಂತ ಅಭಾವಗಳು ಅಥವಾ ಅಸತ್ಯಗಳು. ಆದರೆ ಇವುಗಳೆಲ್ಲವೂ ಎಷ್ಟು ಅಸಿದ್ಧವೋ ರಾಜನ ಅಕೀರ್ತಿಯೂ ಅಷ್ಟೇ ಅಸಿದ್ಧವೆಂದು ಕವಿ ಸುಂದರವಾಗಿ ಸೂಚಿಸುತ್ತಾ, ರಾಜನ ಕೀರ್ತಿಯನ್ನೇ ಪ್ರಕಾರಾಂತರದಿಂದ ಕೊಂಡಾಡುತ್ತಾನೆ. ಈ ಅಲಂಕಾರ ವ್ಯಾಜಸ್ತುತಿ.

ಶ್ರೀ ಹರ್ಷನ ಶ್ಲೇಷ-ಸಂಯೋಜನಾಚಾತುರ್ಯದ ಪರಮಾವಧಿ ಯೆಂದರೆ ಪ್ರಸಿದ್ಧವಾದ ಹದಿಮೂರನೆಯ ಸರ್ಗದ "ಪಂಚನಳೀ" ಎಂಬ ಭಾಗ. ಸರಸ್ವತಿಯ ಬಾಯಿಂದಲೇ ಆಡಿಸಿರುವ ಈ ಒಂದೊಂದು ಶ್ಲೋಕಕ್ಕೂ ನಳನ ಪರವಾದ ಅರ್ಥವಲ್ಲದೆ, ಇಂದ್ರ, ಅಗ್ನಿ, ಯಮ, ವರುಣ ರೊಬ್ಬೊಬ್ಬ ರಿಗೂ ಅನ್ವಯಿಸುವ ಅರ್ಥಗಳೂ ಬರುತ್ತವೆ. ಹೀಗೆ ಒಂದು ಶ್ಲೋಕದಿಂದ ಐದು ಅರ್ಥಗಳನ್ನು ಹೊರಡಿಸುವ ಜಾಣ್ಮೆ, ಒಂದು ಬಾಣದಿಂದ ಐದು ಹಕ್ಕಿಗಳನ್ನು ಕೊಲ್ಲುವಂತೆ ಅಸಾಧ್ಯಪ್ರಾಯವಾದ ಕಾರ್ಯ; ವಿಶ್ವದ ಮತ್ತಾವ ಸಾಹಿತ್ಯದಲ್ಲೂ ಇದು ಶಕ್ಯವಾಗಲಾರದು. ಆದರೆ ಸಂಸ್ಕೃತ ಭಾಷೆಯ ಶ್ರೀಮಂತ ನಾನಾರ್ಥಕ ಶಬ್ದಭಂಡಾರದಲ್ಲಿ ಶ್ರೀ ಹರ್ಷನಂತಹ ಜಗದೇಕ ಮಲ್ಲನಿಗೆ ಈ ಸಾಧನೆಯೂ ಸಾಧಿಸಿದೆ.

ಇದೊಂದು 'ಅತಿನವ್ಯ'ವಾದ ಉತ್ಪ್ರೇಕ್ಷೆ: —

**ಹೃತಸಾರಮಿವೇಂದುಮಂಡಲಂ**
**ದಮಯಂತೀವದನಾಯ ವೇಧಸಾ ।**
**ಕೃತ ಮಧ್ಯಬಿಲಂ ವಿಲೋಕ್ಯತೇ**
**ಧೃತಗಂಭೀರಖನೀ ಖನೀಲಿಮ ॥** (II. 25)

ದಮಯಂತಿಯ ವದನ ನಿರ್ಮಾಣಕ್ಕಾಗಿ ಬ್ರಹ್ಮನು ಚಂದ್ರ ಮಂಡಲದ ನಡುವಿನ ಸಾರವನ್ನೆಲ್ಲ ತೆಗೆದುಕೊಂಡುಬಿಟ್ಟುದರಿಂದ ಮಧ್ಯದಲ್ಲಿ ತೂತಾಗಿ ಬಿಟ್ಟಿತು. ಆ ಆಳದ ತೂತಿನ ಮೂಲಕ ಆಚೆಯ ಆಕಾಶದ ನೀಲ ವರ್ಣವು ಈಗಲೂ ಕಪ್ಪಗೆ ನಮಗೆ ಕಾಣುತ್ತದೆ'.

ಇಂತಹದೇ ಒಂದು ಕಾವ್ಯಲಿಂಗಾಲಂಕಾರಕ್ಕೆ ನೋಡಿ :—

**ಅಯಮಯೋಗಿ ವಧೂವಧಪಾತಕೈ-**
**ರ್ಭ್ರಮಿಮವಾಪ್ಯ ದಿವಃ ಖಲು ಪಾತ್ಯತೇ ।**
**ಶಿತಿನಿಶಾದೃಷದಿ ಸ್ಫುಟದುತ್ಪತತ್**
**ಕಣಗಣಾಧಿಕತಾರಕಿತಾಂಬರಃ ॥** (IV. 49)

'ಈ ಚಂದ್ರನು ನಿರಪರಾಧಿನಿಯರಾದ ಅನೇಕ ವಿರಹಿಣಿಯರನ್ನು ಕೊಂದ ಪಾತಕಿ. ಆ ಪಾಪದಿಂದಲೇ ತಲೆಸುತ್ತು ಬಂದು ಅವನು ಗಗನದಿಂದ

ಕಾರ್ಗತ್ತಲೆಯೆಂಬ ಕಗ್ಗಲ್ಲ ಬಂಡೆಯ ಮೇಲೆ ಉರುಳಿ ಬಿದ್ದಿದ್ದಾನೆ. ಬಿದ್ದಾಗ ಚೂರುಚೂರಾದ ಕಣಗಳೇ ದಿಕ್ಕುದಿಕ್ಕಿಗೂ ಸಿಡಿದು ಗಗನದಲ್ಲಿ ತಾರೆಗಳಾಗಿ ಹೊಳೆಯುತ್ತಿವೆ.'

ಇಂತಹ ದುರೂಹ ಕಲ್ಪನೆಗಳೂ ಅತಿನವ್ಯ ಅಲಂಕಾರಗಳೂ ಕಾವ್ಯದಲ್ಲಿ ನೂರಾರಲ್ಲ, ಸಾವಿರಾರು ತುಂಬಿವೆ. ಕಲ್ಪನೆಯ ಅತಿನಾವೀನ್ಯವನ್ನೇ ಪರಮಪರಿಶುದ್ಧವಾದ ಕಾವ್ಯಮಾರ್ಗವೆನ್ನುವವರಿಗೆ ನೈಷಧದ ಒಂದೊಂದು ಪದ್ಯವೂ ಒಂದೊಂದು ಸುಗ್ಗಿ. ಆದರೆ ಇವೆಲ್ಲವೂ ಒಂದೊಂದು ದೋಷಕ್ಕೇ ಲಕ್ಷ್ಯಗಳೆಂದು ತಿಳಿಯುವ ಅಭಿರುಚಿಯೂ ಪೂರ್ವದಲ್ಲಿತ್ತೆಂಬುದನ್ನು ಸೂಚಿಸುವ ಒಂದು ದಂತಕಥೆಯಿದೆ. ಈ ಕಥೆಯ ಪ್ರಕಾರ ಕಾವ್ಯಪ್ರಕಾಶಕಾರನಾದ ಮಮ್ಮಟ ಶ್ರೀಹರ್ಷನ ಸೋದರಮಾವ. ತನ್ನ ಕಾವ್ಯವನ್ನು ಮಾವನಿಗೆ ತೋರಿಸಿದಾಗ ಅವನು ಹೇಳಿದನಂತೆ—'ಅಯ್ಯೋ, ಎಂತಹ ಮೋಸವಾಯಿತು! ನಾನು ಹತ್ತಾರು ವರ್ಷ ಶ್ರಮಪಟ್ಟು ದೋಷಪ್ರಕರಣವನ್ನು ಮುಗಿಸಬೇಕಾಯಿತು. ನಿನ್ನ ಗ್ರಂಥ ಮೊದಲೇ ದೊರೆತಿದ್ದರೆ ಯಾವ ದೋಷದ ಲಕ್ಷ್ಯಕ್ಕೂ ಬೇರೆ ಕಡೆ ಹುಡುಕುವ ಪ್ರಯಾಸ ತಪ್ಪುತ್ತಿತ್ತು.'

ಹೇಗೂ ಇರಲಿ, ಶ್ರೀಹರ್ಷನು ಅತಿವಕ್ರವಾದ ಕಾವ್ಯಮಾರ್ಗದ ಚಕ್ರವರ್ತಿಯೇ ಹೌದು. ಮನುಷ್ಯನ ಬುದ್ಧಿ ತದೇಕಧ್ಯಾನದಿಂದ ಹೊರಟರೆ ಏನೇನನ್ನು ಸಾಧಿಸಬಹುದೆಂಬುದಕ್ಕೆ ಒಂದು ಅದ್ಭುತ ದೃಷ್ಟಾಂತ. ಶ್ರೀಹರ್ಷನ ಜಾಜ್ವಲ್ಯಮಾನವಾದ ಸಾಧನೆಯ ಮುಂದೆ ಸ್ಪರ್ಧಿಸಿ ಯಶಸ್ಸನ್ನು ಪಡೆಯುವ ಆಶೆಯೇ ಮುಂದಿನ ದಿಗ್ಗಜಪಂಡಿತರಿಗೆಲ್ಲ ಇಲ್ಲದಂತಾಯಿತು. ನೈಷಧಕಾವ್ಯದ ಉದಯದಿಂದ ಪರಿಷ್ಕೃತ ಮಹಾಕಾವ್ಯವು ಮುಟ್ಟಬಹುದಾದ ಗೌರೀಶಿಖರವನ್ನು ನೈಷಧಕಾವ್ಯ ಮುಟ್ಟಿಯಾಗಿತ್ತು. ಅಲ್ಲಿಗೆ ಸಂಸ್ಕೃತ ಪರಿಷ್ಕೃತಕಾವ್ಯದ ಬೆಳೆವಳಿಗೆ ನಿಂತಿತು. ಮುಂದಿನದು ಕ್ಷೀಣಯುಗ. ಆಗ ಕವಿಗಳು ತಮ್ಮ ತಮ್ಮ ಆಶ್ರಯದಾತರಾದ ಆಳರಸರನ್ನು ನಾಯಕರನ್ನಾಗಿ ಮಾಡಿಕೊಂಡು ಆಷ್ಟಿಷ್ಟು ಮಹಾಕಾವ್ಯದ ವರ್ಣನಾ ಭಾಗಗಳನ್ನೂ ಸೇರಿಸಿಕೊಂಡು ಬರೆಯಲಾರಂಭಿಸಿದರು. ಹನ್ನೆರಡನೆಯ ಶತಮಾನದಾಚೆಗೆ ಕಾಳಿದಾಸ, ಭಾರವಿ, ಮಾಘ, ಶ್ರೀಹರ್ಷರ ಜತೆಗೆ ನಿಲ್ಲಬಲ್ಲ ಕವಿಗಳಿಲ್ಲ. ಈ ಸಾಹಿತ್ಯಪ್ರಕಾರವನ್ನೇ ಬಿಟ್ಟು ಲಘುಕಾವ್ಯಾದಿಗಳನ್ನು ಮುಂದಿನವರು

ಸ್ತರಿಸಲಾರಂಭಿಸಿದರು. ಹೀಗೆ ಸಂಸ್ಕೃತ ಮಹಾಕಾವ್ಯದ ಇತಿಹಾಸ
ಳಿದ ಭಾರತೀಯ ಸಾಹಿತ್ಯಗಳ ಇತಿಹಾಸಕ್ಕೆ ವಿರುದ್ಧವಾಗಿದೆ. ಮೊದ
ಾದಲು ಪ್ರೌಢವಾಗದ್ದು ಬರಬರುತ್ತಾ ಹೆಚ್ಚು ಹೆಚ್ಚು ಜನಪ್ರಿಯವಾದ
ನೆ ಉಳಿದ ಭಾರತೀಯ ಕಾವ್ಯಗಳದು, ಆದರೆ ಸಂಸ್ಕೃತದಲ್ಲಿ ಮಾತ್ರ
ಾದಮೊದಲು ವಿಶಾಲವಾಗಿದ್ದ ಕಾವ್ಯವಾಹಿನಿ ಕ್ರಮೇಣ ಸಂಕುಚಿತವಾ
ತ್ತಾ, ಪೌಢಿಮೆಯ ಪರಾಕಾಷ್ಠೆಯನ್ನು ಮುಟ್ಟಿ ಕಡೆಗೆ ಗುಪ್ತಗಾಮಿನಿ
ಾಗಿಬಿಡುತ್ತದೆ; ಅಂದಿನಿಂದ ಇಂದಿನವರೆಗೆ ಪ್ರತಿ ತಲೆಮಾರಿನಲ್ಲೂ ಕಾವ್ಯ
ಂಪ್ರದಾಯದ ಅನುಕರಣೆ ಕಂಡುಬರುತ್ತದಾದರೂ, ಎತ್ತಿ ತೋರಿಸಬೇಕಾದ
ಾವ್ಯಗಳು ಕಡಿಮೆ. ೧೩ ನೇ ಶತಮಾನದಲ್ಲಿ ನಳನ ಕಥೆಯನ್ನೇ ಆಶ್ರಯಿಸಿ
ರೆದ ಕೃಷ್ಣಾನಂದನ 'ಸಹೃದಯಾನಂದ' ಅಮರಚಂದ್ರನ 'ಬಾಲಭಾರತ'
ೇವಪ್ರಭಾಸೂರಿಯ 'ಪಾಂಡವಚರಿತ' ವಾಸುದೇವನ 'ಯುಧಿಷ್ಠಿರವಿಜಯ'
ಗನ್ನೂ, ೧೪ ನೆಯ ಶತಮಾನದಲ್ಲಿ ವೇದಾಂತದೇಶಿಕರ 'ಯಾದವಾಭ್ಯು
ಯ ವನ್ನೂ, ೧೫ ನೆಯ ಶತಮಾನದಲ್ಲಿ ಡಿಂಡಿಮನ 'ಸಾಳ್ವಾಭ್ಯುದಯ'
ನ್ನೂ, ೧೬ ನೆಯ ಶತಮಾನದಲ್ಲಿ ಉತ್ಪ್ರೇಕ್ಷಾವಲ್ಲಭನ 'ಭಿಕ್ಷಾಟನಕಾವ್ಯ'
ನ್ನೂ, ೧೭ ನೆಯ ಶತಮಾನದಲ್ಲಿ ನೀಲಕಂಠ ದೀಕ್ಷಿತನ 'ಶಿವಲೀಲಾವ
ರ್ಣವ', 'ಗಂಗಾವತರಣ' ಗಳನ್ನೂ, ೧೮ ನೆಯ ಶತಮಾನದಲ್ಲಿ ರಾಮಭದ್ರ
ೀಕ್ಷಿತನ 'ಪತಂಜಲಿಚರಿತ'ವನ್ನೂ, ೧೯ ನೆಯ ಶತಮಾನದಲ್ಲಿ ಶ್ರೀ ಕೃಷ್ಣ
ಹ್ಮತಂತ್ರ ಪರಕಾಲಸ್ವಾಮಿಗಳ 'ರಂಗರಾಜವಿಲಾಸ'ವನ್ನೂ, ೨೦ ನೆಯ
ಶಮಾನದಲ್ಲಿ ಪಂಡಿತ ಕ್ಷಮಾರಾವ್ ಅವರ 'ಗಾಂಧೀಗೀತಾ' ಮೊದಲಾದ
ತಿಗಳನ್ನೂ ಹೆಸರಿಸಿ ಸಂಸ್ಕೃತಮಹಾಕಾವ್ಯದ ಧಾರೆ ಅನುಸ್ಯೂತವಾಗಿ
ಂದಿನವರೆಗೂ ಹರಿಯುತ್ತಿರುವುದೆಂದೂ, ಸಜೀವವಾಗಿದೆಯೆಂದೂ ಹೇಳಿ
ಪರಿಚಯವನ್ನು ಮುಗಿಸಬಹುದು. ವಸ್ತುತಃ ಪೂರ್ವದ ಮಹಾಕವಿಗಳ
ಾಸ ಅನುಕರಣೆಗಳೆಂದು ಇವಕ್ಕೆ ಬೆಲೆಯೇ ಹೊರತು, ಅಪೂರ್ವವಾದ
ತಿಭೋನ್ಮೇಷಗಳೆಂದಲ್ಲ. ಅಪವಾದದಂತಿರುವ ನೀಲಕಂಠದೀಕ್ಷಿತನೇ
ಾದಲಾದ ಕೆಲವರನ್ನು ಬಿಟ್ಟರೆ ಸಾಮಾನ್ಯವಾಗಿ ಈ ಉತ್ತರಕಾಲೀನ
ಿಗಳ ಕೌಶಲವೆಲ್ಲ ಭಾಷಾಚಮತ್ಕಾರದಲ್ಲೇ ಹೊರತು ವಸ್ತುನಾವೀನ್ಯದ
ಲ್ಲ. ಹೊಸ ಕಾವ್ಯವಸ್ತುಗಳನ್ನಾರಿಸಿಕೊಂಡು ತಿಳಿಯಾಗಿ ಬರೆದರೆ ಇಂದೂ

ಸಂಸ್ಕೃತಕಾವ್ಯ ಬೆಳೆಯಬಹುದೆಂಬುದನ್ನು ಅನೇಕ ಆಧುನಿಕ ಸಂಸ್ಕೃತ ಕವಿಗಳು ಬರೆದು ತೋರಿಸುತ್ತಿದ್ದಾರೆ.[64]

ಮುಖ್ಯವಾಗಿ ಕಾವ್ಯದ ಕಕ್ಷ್ಯೆಯಲ್ಲಿ ಬರದಿದ್ದರೂ, ಮಹಾಕಾವ್ಯದ ಮಾರ್ಗಾನುಸರಣೆಯಿರುವ ಕಾರಣ **ಐತಿಹಾಸಿಕ ಕಾವ್ಯ**ಗಳ ಪರಿಚಯವೂ ಈ ಅಧ್ಯಾಯಕ್ಕೆ ಪ್ರಸ್ತುತವೇ ಆಗುತ್ತದೆ.

ಆಶ್ರಯದಾತನಾದ ರಾಜನನ್ನು ಕಾವ್ಯ ಶೈಲಿಯಿಂದ ವರ್ಣಿಸುವ ಪರಂಪರೆ ಸಂಸ್ಕೃತದಲ್ಲಿ ಬಹಳ ಪ್ರಾಚೀನಕಾಲದಿಂದಲೂ ಇತ್ತೆಂಬುದಕ್ಕೆ ಈಗ ಸಿಕ್ಕಿರುವ ಅನೇಕ ಶಾಸನಗಳೇ ಸಾಕ್ಷಿ. ರುದ್ರದಾಮನ ಶಿಲಾಲೇಖ (ಕ್ರಿ.ಶ. ೨ ನೆ ಶತಮಾನ), ಹರಿಷೇಣನ ಸಮುದ್ರಗುಪ್ತ ಪ್ರಶಸ್ತಿ (ಕ್ರಿ.ಶ.೪ ನೆ ಶತಮಾನ), ಸ್ಕಂದಗುಪ್ತನ ಜುನಾಗಢ ಶಾಸನ (ಕ್ರಿ.ಶ. ೫ ನೆ ಶತಮಾನ), ವತ್ಸಭಟ್ಟಿಯ ಸೂರ್ಯ ಮಂದಿರವನ್ನು ಕುರಿತ ಪ್ರಶಸ್ತಿ (ಕ್ರಿ.ಶ. ೫ ನೆ ಶತಮಾನ), ಮಂದಸೋರಿನಲ್ಲಿ ಸಿಕ್ಕಿದ ಯಶೋಧರ್ಮನ ಸ್ತಂಭಪ್ರಶಸ್ತಿ (ಕ್ರಿ.ಶ. ೬ ನೆ ಶತಮಾನ), ಐಹೊಳೆಯಲ್ಲಿ ಸಿಕ್ಕಿದ ರವಿಕೀರ್ತಿಕೃತ ಇಮ್ಮಡಿ ಪುಲಕೇಶಿಯ ಪ್ರಶಸ್ತಿ (ಕ್ರಿ.ಶ. ೭ ನೆ ಶತಮಾನ), ಮುಂತಾದುವೆಲ್ಲ "ಪ್ರಶಸ್ತಿ ಕಾವ್ಯ"ವೆಂಬ ಒಂದು ಹೊಸ ಕಾವ್ಯಜಾತಿಯಲ್ಲಿ ಸೇರಿಸುವ ಮಟ್ಟಿಗೆ ಕಾವ್ಯ ಧರ್ಮ ಬಂಧುರವಾಗಿವೆ. ಸುಂದರವಾದ, ಗದ್ಯಪದ್ಯಗಳಲ್ಲಿ ನಿರ್ದಿಷ್ಟ ರಾಜರ ವರ್ಣನೆಗಳು ಅಲ್ಲಿ ಬರುತ್ತವೆ. ಆದರೆ ಅವುಗಳ ಪರಿಮಿತಿ ಚಿಕ್ಕದು , ಮಹಾ ಕಾವ್ಯವೆನಿಸಿಕೊಳ್ಳುವ ಯೋಗ್ಯತೆಯಿಲ್ಲ.

ಪ್ರಸಿದ್ಧ ಗದ್ಯ ಕವಿಯಾದ ಬಾಣಬಟ್ಟನು ತನ್ನ ಪೋಷಕನಾದ ಹರ್ಷ ಚಕ್ರವರ್ತಿಯನ್ನು ಕುರಿತು 'ಹರ್ಷ ಚರಿತ'ವೆಂಬ ಗದ್ಯಕಾವ್ಯವನ್ನು ಬರೆದಂತೆಯೇ ಕನೋಜಿನ ಯಶೋಧರ್ಮನ ಆಶ್ರಿತನಾದ ವಾಕ್ಪತಿರಾಜನು ತನ್ನ ರಾಜನ ವಿಜಯ ಪ್ರಶಸ್ತಿಗಾಗಿ "ಗೌಡವಹೋ" ಎಂಬ ಪ್ರಾಕೃತ ಮಹಾಕಾವ್ಯವನ್ನು ಬರೆದಿದ್ದನು. (ಕ್ರಿ.ಶ. ೭ ನೆ ಶತಮಾನ). ಆದರೆ ಸಂಸ್ಕೃತ ಪದ್ಯಕಾವ್ಯದಲ್ಲಿ ಈ ಪರಂಪರೆ ಮೊದಲು ಕಾಣುವುದು ಪದ್ಮಗುಪ್ತನ 'ನವಸಾಹ

---

64 ಈ ವಿಷಯದ ಮೇಲೆ ವಿಸ್ತಾರವಾದ ಚರ್ಚೆ ಇದೇ ಲೇಖಕನ "ಅಲಂಕಾರಶಾಸ್ತ್ರೇ ಕಾವ್ಯಸ್ವೈವಿಧ್ಯವಾದವಿಮರ್ಶಃ" ಎಂಬ ಸಂಸ್ಕೃತಪ್ರಬಂಧ (ಮೈಸೂರು ವಿಶ್ವವಿದ್ಯಾನಿಲಯ, 1955) ದಲ್ಲಿ ಬಂದಿದೆ.

ಂಕಚರಿತೆ 'ಯಲ್ಲಿ (ಕ್ರಿ.ಶ. ೧೦೦೦). ಪರಮಾರ ವಂಶದ ಸಿಂಧುರಾಜನು
್ರವಾದ ಪಜ್ರಾಂಕುಶನನ್ನು ಸೋಲಿಸಿ ನಾಗರಾಜ ಶಂಖಪಾಲನ ಕನ್ಯೆ
ಪ್ರಭೆಯನ್ನು ವಿವಾಹವಾದ ಘಟನೆಯನ್ನು ವಿಸ್ತಾರವಾಗಿ ೧೮ ಸರ್ಗಗಳಲ್ಲಿ
ವರ್ಣಿಸಿದ್ದಾನೆ. ಈ ವರ್ಣನೆಗಳಲ್ಲಿ ಒಮ್ಮೊಮ್ಮೆ ಅದ್ಭುತ ಘಟನೆಗಳೂ
ುವುದುಂಟು, ಇತಿಹಾಸ ನಿರೂಪಣೆಗಿಂತಲೂ ಕಾವ್ಯ ಸೌಂದರ್ಯವೇ
ುಯ ಗುರಿ. ಭೋಜ, ಮಮ್ಮಟಾದಿ ಲಾಕ್ಷಣಿಕರು ಈ ಕಾವ್ಯದಿಂದ
ದಾಹರಣೆಗಳನ್ನೆತ್ತಿಕೊಂಡಿದ್ದಾರೆ. ಪದ್ಮಗುಪ್ತನ ಶೈಲಿ ಕಾಳಿದಾಸನ ಶೈಲಿ
ನ್ನೇ ಸರಳ ಸುಭಗತೆಯಲ್ಲಿ ಹೋಲುತ್ತದೆ. ಇದು ರಮ್ಯವಾದ ವಿಷಮಾ
ಕಾರದ ಒಂದು ಉದಾಹರಣೆ.—

**ಸದ್ಯಃ ಕರಸ್ಪರ್ಶಮವಾಪ್ಯ ಚಿತ್ರಂ**
**ರಣೇ ರಣೇ ಯಸ್ಯ ಕೃಪಾಣಲೇಖಾ ।**
**ತಮಾಲನೀಲಾ ಶರದಿಂದುಪಾಂಡು**
**ಯಶಸ್ತ್ರಿಲೋಕ್ಯಾಭರಣಂ ಪ್ರಸೂತೇ ॥** (I. 62)

ಂದೊಂದು ಯುದ್ಧದಲ್ಲಿಯೂ ತಮಾಲದಂತೆ ನೀಲವಾದ ಇವನ
ರಸಿಯು ಈತನ ಕೈ ಸೋಂಕಿದೊಡನೆ ಶರದಿಂದುಧವಲವಾದ ಯಶಸ್ಸನ್ನು
ಟ್ಟಿಸಿ ಮೂಜಗಕ್ಕೂ ಅದು ಆಭರಣವಾಗುವಂತೆ ಮಾಡುತ್ತದೆ,
ಶ್ಚರ್ಯವೇ ಸರಿ.'

ಸುಮಾರು ಇದೇ ಕಾಲದ ಬಿಲ್ಹಣನು ಸರಸಕವಿಗಳಲ್ಲಿ ಅಗ್ರಗಣ್ಯ
ದು ಖ್ಯಾತಿಯಾಂತವನು.[65] ಕಾಶ್ಮೀರದಲ್ಲಿ ಹುಟ್ಟಿ, ವಿದ್ಯಾಪಾರಂಗತನಾಗಿ
ಶಾಟನೆಮಾಡುತ್ತಾ ಮಥುರೆ, ಕನೌಜ, ಪ್ರಯಾಗ, ಕಾಶಿ, ಅನ್ಹಿಲವಾಡ,
ೋಮನಾಥ, ರಾಮೇಶ್ವರ, ಮುಂತಾಗಿ ಸರ್ವಪ್ರದೇಶಗಳಲ್ಲೂ ಸಂಚರಿಸಿ,
ತಿಗೆ ಕರ್ಣಾಟಕದ ಕಲ್ಯಾಣದಲ್ಲಿ ಚಾಲುಕ್ಯವಂಶದ ಅರಸಾಗಿದ್ದ
ಭುವನಮಲ್ಲವಿಕ್ರಮಾದಿತ್ಯನ (ಕ್ರಿ. ಶ. ೧೦೭೬-೧೧೨೭) ಆಸ್ಥಾನದಲ್ಲಿ
ಸಿದವನು. ಇಲ್ಲಿ ಅವನಿಗೆ 'ವಿದ್ಯಾಪತಿ'ಯೆಂಬ ಬಿರುದು ದೊರೆಯಿತು.
ರಚಿಸಿದ ಕಾವ್ಯವೇ 'ವಿಕ್ರಮಾಂಕದೇವಚರಿತ'.

ಕಾವ್ಯದ ೧೮ ಸರ್ಗಗಳ ವಸ್ತುವೆಂದರೆ ಯುದ್ಧ ಮತ್ತು ವಿವಾಹ.

---

65. ಈತನ ಶೃಂಗಾರಕಾವ್ಯದ ವಿಮರ್ಶೆ ಮುಂದಿನ ಅಧ್ಯಾಯದಲ್ಲಿ ಬರುತ್ತದೆ.

ಚಾಲುಕ್ಯವಂಶವರ್ಣನೆ, ಆಹವಮಲ್ಲನ ಮರಣ, ರಾಜಕುಮಾರಿ ಚಂದ್ರಲೇಖೆಯೊಡನೆ ರಾಜನ ವಿವಾಹ, ಅವನಿಗೆದುರಾದ ಇಬ್ಬರು ಸೋದರರ ಮತ್ತು ಚೋಳರ ಸೋಲು, ಮುಂತಾದವು ಕಾವ್ಯಮಯವಾಗಿ ವರ್ಣಿತವಾಗಿವೆ. ದೀರ್ಘಸಮಾಸ ಮತ್ತು ಅನುಪ್ರಾಸಗಳ ಮೋಹಕ್ಕೆ ಸಿಕ್ಕದೆ ಬಿಲ್ಹಣನ ಪ್ರಾಸಾದಿಕವಾಣಿ ಮಂಜುಳವಾಗಿ ಹರಿಯುತ್ತದೆ ವೈದರ್ಭರೀತಿಯಲ್ಲೇ ವಿಶಾರದರ ಸಾವಿರಾರು ಪ್ರಬಂಧಗಳಿರಬಹುದು, ಆದರೆ ವೈಚಿತ್ರ್ಯ ಲುಬ್ಧರಾದ ಸಹೃದಯರಿಗೆ ಬಿಲ್ಹಣನ ರಚನೆ ಆಪ್ಯಾಯನ —

**ಸಹಸ್ರಶಃ ಸಂತು ವಿಶಾರದಾನಾಂ ವೈದರ್ಭಲೀಲಾನಿಧಯಃ ಪ್ರಬಂಧಾಃ ।**
**ತಥಾಪಿ ವೈಚಿತ್ರ್ಯರಹಸ್ಯಲುಬ್ಧಾಃ ಶ್ರದ್ಧಾಂ ವಿಧಾಸ್ಯಂತಿ ಸಚೇತಸೋಽತ್ರ ॥** (I. 4)

ಆದರೆ ಇಲ್ಲಿಯೂ ಎಷ್ಟೋ ಕಡೆ ಪೌರಾಣಿಕ ಹಾಗು ಅಲೌಕಿಕ ಪ್ರಸಂಗಗಳ ಅತಿರಂಜಿತವರ್ಣನೆ ಬರುವುದರಿಂದ ಐತಿಹಾಸಿಕ ಮಹತ್ತ್ವ ಅಲ್ಪ. ಗ್ರಂಥ ಮುಗಿಯುವ ಹೊತ್ತಿಗೆ ಕವಿಗೂ ರಾಜನಿಗೂ ಮನಸ್ತಾಪ ಬಂದಂತೆ ಕಾಣುತ್ತದೆ. ಕಡೆಯ ಶ್ಲೋಕವೊಂದು ಹೀಗಿದೆ :—

**ಸರ್ವಸ್ವಂ ಗೃಹವರ್ತಿ ಕುಂತಲಪತಿರ್ಗೃಹ್ಣಾತು ತನ್ಮೇ ಪುನ-**
**ರ್ಭಾಂಡಾಗಾರಮಖಂಡಮೇವ ಹೃದಯೇ ಜಾಗರ್ತಿ ಸಾರಸ್ವತಮ್ ॥**
**ರೇ ಕ್ಷುದ್ರಾಸ್ತ್ಯಜತ ಪ್ರಮೋದಮಚಿರಾದೇಷ್ಯಂತಿ ಮನ್ಮಂದಿರಮ್**
**ಹೇಲಾನ್ದೋಲಿತ ಕರ್ಣತಾಲಕರಟಿಸ್ಕಂಧಾಧಿರೂಢಾಃ ಶ್ರಿಯಃ ॥**

'ನನ್ನ ಮನೆಯಲ್ಲಿರುವುದನ್ನೆಲ್ಲ ಕುಂತಳರಾಜನು ಕಸಿದುಕೊಂಡು ಹೋಗಲಿ, ನನ್ನ ಹೃದಯದಲ್ಲಿರುವ ಸಾರಸ್ವತ ಭಂಡಾರಕ್ಕೇನೂ ಯಾವ ಲೋಪವೂ ಬರುವುದಿಲ್ಲ. ಅಲ್ಪರೇ, ನಿಮ್ಮ ಸಂತೋಷವನ್ನು ಬಿಡಿ. ಕ್ಷಿಪ್ರದಲ್ಲೇ ಮದ್ದಾನೆಗಳ ಮೇಲೆ ಹೇರಿದ ಸಂಪತ್ತು ನನ್ನ ಮನೆ ಬಾಗಿಲಿಗೆ ಹುಡುಕಿಕೊಂಡು ಬಂದೀತು!'

ಈ ಪದ್ಯವು ಬಿಲ್ಹಣನ ಸತ್ತ್ವಯುತವೂ ಸುಪ್ರಸನ್ನವೂ ಆದ ಕಾವ್ಯ ಶೈಲಿಗೂ ಉದಾಹರಣೆಯಾಗಿದೆ.

ಐತಿಹಾಸಿಕ ಮಹಾಕವಿಗಳಿಗೆಲ್ಲ ಕಲಶಪ್ರಾಯನಾದವನು ಕಾಶ್ಮೀರದ ಕಲ್ಹಣ. ಈತನ ಸುಪ್ರಸಿದ್ಧಗ್ರಂಥವೇ 'ರಾಜತರಂಗಿಣಿ.' ಇದರಲ್ಲಿ ಎಂಟು ತರಂಗಗಳಿದ್ದು ಒಟ್ಟು ೭೮೨೬ ಪದ್ಯಗಳಿವೆ. ಈ ಮಹಾಗ್ರಂಥವನ್ನು ಒಂದೇ ವರ್ಷದ ಅವಧಿಯಲ್ಲಿ ಕವಿ ಬರೆದು ಮುಗಿಸಿದನಂತೆ (ಕ್ರಿ. ಶ. ೧೧೪೮-೯). ಸಂಸ್ಕೃತ ಸಾಹಿತ್ಯದಲ್ಲೆಲ್ಲ ಐತಿಹಾಸಿಕ ಘಟನೆಗಳ ಕ್ರಮಬದ್ಧ ಇತಿಹಾಸದ ನಿರೂಪಣೆಗೆಂದು ಪ್ರವೃತ್ತವಾಗಿರುವ ಒಂದೇ ಒಂದು ಗ್ರಂಥ ರಾಜತರಂಗಿಣಿ. ಆದಿಕಾಲದಿಂದ ಹಿಡಿದು ಸ್ವಕಾಲದವರೆಗೂ ಕಾಶ್ಮೀರದ ಸಂಪೂರ್ಣ ಚರಿತ್ರೆಯನ್ನು ಕಲ್ಹಣನು ಬರೆದಿದ್ದಾನೆ, ಪ್ರತಿಯೊಬ್ಬ ರಾಜನ ಆಳಿಕೆಯನ್ನೂ ವಿವರವಾಗಿ ಚಿತ್ರಿಸಿದ್ದಾನೆ. ಇದಕ್ಕಾಗಿ ಪೂರ್ವದ ರಾಜಾವಳೀ ಕಥೆಗಳನ್ನೂ ಅನೇಕಾನೇಕ ದಾನಪತ್ರಗಳು, ಶಿಲಾಲೇಖಗಳು, ಶಾಸನಗಳು, ಪ್ರಶಸ್ತಿಗಳು, ಹಸ್ತಲಿಖಿತಗ್ರಂಥಗಳು, ನಾಣ್ಯಗಳು ಮುಂತಾದ ಆಧಾರಗಳನ್ನೂ ವಿಶೇಷ ಶ್ರಮದಿಂದ ಪರೀಕ್ಷಿಸಿ ತನ್ನ ಸಂಶೋಧಕ ದೃಷ್ಟಿಯನ್ನು ತೋರಿಸಿದ್ದಾನೆ. ಇದರಜತೆಗೆ ಸ್ಥಲಪುರಾಣಗಳನ್ನೂ ಜನಪ್ರವಾದಗಳನ್ನೂ ಸೇರಿಸಿಕೊಂಡಿದ್ದಾನೆ. ಜನಜೀವನದ ವಿವಿಧ ಪ್ರಕಾರಗಳನ್ನೂ ವಿವರಿಸಿದ್ದಾನೆ. ಹೀಗೆ ಐತಿಹಾಸಿಕರಿಗೆ ರಾಜತರಂಗಿಣಿಯು ಅಮೌಲ್ಯವಾದ ಗಣಿ. ೯ ನೆಯ ಶತಮಾನಕ್ಕಿಂತ ಹಿಂದಿನ ಅವನ ಇತಿಹಾಸ ಮುಂದಿನದರಷ್ಟು ನಿಷ್ಕೃಷ್ಟವಾಗಿಲ್ಲವೆನ್ನುವುದೊಂದೇ ಕೊರತೆ.

ಆದರೆ ಕಲ್ಹಣನು ಚರಿತ್ರಕಾರನಷ್ಟೇ ಅಲ್ಲ, ಮಹಾಕವಿಯೂ ಹೌದು. ಸುಧಾಸ್ಯಂದಿಯಾದ ಸುಕವಿಯ ಗುಣವನ್ನು ಅವನು ಆದಿಯಲ್ಲೇ ಪ್ರಸ್ತಾಪಿಸಿ ರಮ್ಯನಿರ್ಮಾಣಶಾಲಿಯಾದ ಕವಿಪ್ರಜಾಪತಿಯಲ್ಲದೆ ಮಿಕ್ಕವನಾರೂ ಅತಿಕ್ರಾಂತಕಾಲವನ್ನು ಪ್ರತ್ಯಕ್ಷ ಮಾಡಿಸಲಾರನೆಂದಿದ್ದಾನೆ. ಅತೀತದರ್ಶಿಯಾದ ಪ್ರತಿಭೆಯೇ ಕವಿಯ ಕಣ್ಣೆಂದಿದ್ದಾನೆ. 'ರಾಗದ್ವೇಷಬಹಿಷ್ಕೃತ' ವಾದ 'ಭೂತಾರ್ಥಕಥನ' ವಿಶ್ರಾಂತವಾದ ಬುದ್ಧಿಯನ್ನು ಸ್ತುತಿಸಿದ್ದಾನೆ. ಹಿಂದೆ ಕ್ಷೇಮೇಂದ್ರನು ಬರೆದಿದ್ದ 'ನೃಪಾವಲಿ'ಯಲ್ಲಿ ಕವಿಕರ್ಮವಿದ್ದರೂ ನಿರ್ದೋಷವಾದ ಒಂದಂಶವೂ ಇಲ್ಲವಾದ್ದರಿಂದ ತಾನು ಹೊಸ ಆಧಾರಗಳನ್ನು ಸಂಗ್ರ

ಹಿಸಿ, 'ನೀಲಮತಪುರಾಣ' ಮುಂತಾದವನ್ನವಲಂಬಿಸಿ ಬರೆಯುವುದಾಗಿ ತಿಳಿಸಿದ್ದಾನೆ.[66] ಹೀಗೆ ಪ್ರಧಾನವಾಗಿ ಇತಿಹಾಸವೇ ಆದರೂ, ಉತ್ತಮವರ್ಗದ ಕಾವ್ಯಸೌಂದರ್ಯವು ರಾಜತರಂಗಿಣಿಯಲ್ಲಿರುವುದು ಆಶ್ಚರ್ಯಕರವಾಗಿದೆ. ಅವನ ಸಂವಾದಗಳು ಸುಂದರವಾಗಿರುವಂತೆ ಓಜಸ್ವಿಯಾಗಿಯೂ ಇವೆ. ಎಲ್ಲಿಯೂ ನೀರಸತ್ವವಿಲ್ಲ. ಕವಿಕಲ್ಪನೆ ಮತ್ತು ರಸಸೇಚನೆಗಳ ಸುಂದರ ಸಮಾವೇಶವಿದೆ. ಆಧುನಿಕ ಅಭಿರುಚಿಗೆ ಇದರ ಕಾವ್ಯಗುಣವು ಅತ್ಯಂತ ಆಕರ್ಷಕವಾಗಿದೆ, ಪಾಂಡಿತ್ಯ ಪ್ರದರ್ಶನದ ಅಭಾವದಿಂದಲೇ. ಒಂದೆರಡು ಉದಾಹರಣೆಗಳನ್ನು ನೋಡಿ —

**ಕ್ಷುತ್ ಕ್ಷಾಮಸ್ತನಯೋ ವಧೂಃ ಪರಗೃಹಪ್ರೇಷ್ಯಾವಸನ್ನಃ**
**ಸುಹೃತ್**
**ದುಗ್ಧಾ ಗೌರಶನಾದ್ಯಭಾವವಿವಶಾ 'ಹಂಬಾ' ರವೋದ್ಗಾರಿಣೀ ।**
**ನಿಷ್ಪಥ್ಯೌ ಪಿತರಾವದೂರಮರಣೌ ಸ್ವಾಮೀ ದ್ವಿಷನ್ನಿರ್ಜಿತೋ**
**ದೃಷ್ಟೋ ಯೇನ ಪರಂ ನ ತಸ್ಯ ನಿರಯೋ ಪ್ರಾಪ್ತವ್ಯಮಸ್ತ್ಯ**
**ಪ್ರಿಯಮ್ ॥**

'ಹಸಿವಿನಿಂದ ಕೃಶನಾದ ಕಂದ, ಕಂಡವರ ಮನೆಯಲ್ಲಿ ದುಡಿಯುವ ಹೆಂಡತಿ, ಕುತ್ತದಲ್ಲಿ ಬಿದ್ದ ಗೆಳೆಯ, ಹುಲ್ಲುನೀರಿಲ್ಲದೆ 'ಅಂಬಾ' ಎನ್ನುತ್ತಿರುವ ಆಕಳು, ಪಥ್ಯಕ್ಕೇನೂ ಇಲ್ಲದೆ ಸಾಯುತ್ತ ಮಲಗಿರುವ ತಾಯ್ತಂದೆಗಳು, ಶತ್ರುವಿನಿಂದ ಪರಾಜಿತನಾದ ಪ್ರಭು, ಇವನ್ನೆಲ್ಲ ನೋಡಿಯಾದವನಿಗೆ ನರಕದಲ್ಲಿ ಇದಕ್ಕಿಂತ ಅಪ್ರಿಯವಾದದ್ದೇನೂ ಸಿಕ್ಕಲಾರದು.'

ಕೊಳ್ಳಿ, ಲೂಟಿ, ಸುಲಿಗೆಗಳು ದಿನಚರ್ಯೆಯಾಗಿದ್ದ ಅಂದಿನ ಜನರ ಕಷ್ಟಜೀವನವನ್ನು ಎಷ್ಟು ಚೆನ್ನಾಗಿ ಕಣ್ಣಿಗೆ ಕಟ್ಟುವಂತೆ ಕವಿ ಚಿತ್ರಿಸಿದ್ದಾನೆ!

ಇದನ್ನೆಲ್ಲಾ ಪ್ರತಿಭೆಯಲ್ಲಿ ಪ್ರತ್ಯಕ್ಷೀಕರಿಸಿದ ಕವಿಗೆ ಜೀವನ ಅಸಾರವೆನಿಸಿದರೆ ಆಶ್ಚರ್ಯವಿಲ್ಲ. ಎಂತೆಂತಹ ರಾಜರೂ ಮಣ್ಣುಪಾಲಾದುದನ್ನು ವರ್ಣಿಸಿ 'ಸಪ್ತಮ ತರಂಗ'ವನ್ನು ಮುಗಿಸುವಾಗ ಮಾನವ ಜೀವನವನ್ನು ಹೀಗೆ ಚಿತ್ರಿಸುತ್ತಾನೆ: —

---

66. ರಾಜತರಂಗಿಣೀ, (I, 3f)

**ನಾದೌ ಕಿಂಚಿದ್ಭವತಿ ನಿಯತಂ ಯಚ್ಚ ಪಶ್ಚಾನ್ನ ಕಿಂಚಿತ್**
**ಮಧ್ಯೇಽಕಸ್ಮಾತ್ ಸಪದಿ ಘಟಯನ್ ಸೌಖ್ಯದೌಃಖ್ಯಾನು**
**ರೋಧಮ್ ।**
**ನಿಃಶೀರ್ಷಾಂಘ್ರಿರ್ನಟ ಇವ ಮುಹುಃ ಕೋಽಪಿ ಜಂತುರ್ನಟಿತ್ವಾ**
**ನೋ ಜಾನೀಮೋ ಭವಜವನಿಕಾಂತರ್ಹಿತಃ ಕ್ವ ಪ್ರಯಾತಿ ॥**

‘ ಮನುಷ್ಯ ಜೀವನದಲ್ಲಿ ಮೊದಲೂ ಏನೂ ಇಲ್ಲ, ಆಮೇಲೂ ಏನೂ ಇಲ್ಲ. ನಡುವೆ ಮಾತ್ರ ಹೇಗೋ ಏನೋ ಸುಖದುಃಖಗಳ ಅನುಭವ ಕಾಣುತ್ತದೆ ತಲೆ, ಕಾಲೂ, ಎರಡೂ ಇಲ್ಲದ ನಟನಂತೆ ಏನೇನೋ ತುಂಬ ಅಭಿನಯ ಮಾಡುತ್ತಾನೆ. ನಟನೆ ಮುಗಿದೊಡನೆ ಭವಜವನಿಕೆಯು ಬೀಳುತ್ತದ ; ಆ ತೆರೆಯ ಹಿಂದೆ ಅವನೆಲ್ಲಿ ಹೋಗುತ್ತಾನೋ ಬಲ್ಲವರಾರು ! ’ [67]

ಇದು ರಾಜರ ವೈಖರಿ —

**ಚಿತ್ರಂ ನೃಪದ್ವಿಪಾಃ ಪೂತಮೂರ್ತಯಃ ಕೀರ್ತಿನಿರ್ಝರೈಃ ।**
**ಭವನ್ತಿ ವ್ಯಸನಾಸಕ್ತಿಪಾಂಸುಸ್ನಾನಮಲೀಮಸಾಃ ॥**

‘ ಆಶ್ಚರ್ಯವೇ ಸರಿ .—ರಾಜರೆಂಬ ಆನೆಗಳು ತಮ್ಮ ಕೀರ್ತಿಯೆಂಬ ನಿರ್ಝರಗಳಲ್ಲಿ ಸ್ನಾನಮಾಡಿ ಪರಿಶುದ್ಧದೇಹರಾಗಿದ್ದರೂ ದುರ್ವ್ಯಸನಗಳೆಂಬ ಧೂಳಿನಲ್ಲಿ ಹೊರಳಿ ಕಳಂಕಿತರಾಗುತ್ತಾರೆ! ’

---

67. ಇದರೊಡನೆ ಭರ್ತೃಹರಿಯ ವೈರಾಗ್ಯಶತಕದ ಈ ಪ್ರಸಿದ್ಧ ಪದ್ಯಗಳನು ಹೋಲಿಸಬಹುದು .—

1. ಯತ್ರಾನೇಕಃ ಕ್ವಚಿದಪಿ ಗೃಹೇ ತತ್ರ ತಿಷ್ಠತ್ಯಥೈಕೋ
ಯತ್ರಾಪ್ಯೇಕಸ್ತದನು ಬಹವಸ್ತತ್ರ ಚಾನ್ತೇ ನ ಚೈಕಃ ।
ಇತ್ಥಂ ಚೇಮೌ ರಜನಿದಿವಸೌ ದೋಲಯನ್ ದ್ವಾವಿವಾಕ್ಷೌ
ಕಾಲಃ ಕಾಲ್ಯಾ ಸಹ ಬಹುಕಲಃ ಕ್ರೀಡತಿ ಪ್ರಾಣಸಾರೈಃ ॥
(No. 171, ಕೋಸಂಬಿ ಅವರ ಸಂಸ್ಕರಣ)

2. ಕ್ಷಣಂ ಬಾಲೋ ಭೂತ್ವಾ ಕ್ಷಣಮಪಿ ಯುವಾ ಕಾಮರಸಿಕಃ
ಕ್ಷಣಂ ವಿತ್ತೈರ್ಹೀನಃ ಕ್ಷಣಮಪಿ ಚ ಸಂಪೂರ್ಣವಿಭವಃ ।
ಜರಾಜೀರ್ಣೈರಂಗೈರ್ನಟ ಇವ ವಲೀಮಂಡಿತತನು-
ರ್ನರಃ ಸಂಸಾರಾಂಕೇ ವಿಶತಿ ಯಮಧಾನೀಜವನಿಕಾಂ ॥
(No. 235, ಅದೇ)

ಇದು ಭವಿತವ್ಯತೆಯ ಬಗೆಗೆ ಕಲ್ಹಣನ ವಿಚಾರ:—

**ಪಲಾಯನೈರ್ನಾಪಯಾತಿ ನಿಶ್ಚಲಾ ಭವಿತವ್ಯತಾ ।**
**ದೇಹಿನಃ ಪುಚ್ಛಸಂಲೀನಾ ವಹ್ನಿಜ್ವಾಲೇವ ಪಕ್ಷಿಣಃ ॥**

'ಅಚಲವಾದ ಭವಿತವ್ಯತೆ ಪಲಾಯನದಿಂದ ತಪ್ಪಲಾರದು, ಹಕ್ಕಿಯ ಪುಕ್ಕದಲ್ಲಿ ಹತ್ತಿಕೊಂಡ ಉರಿಯಂತೆ ಅದು ಮನುಷ್ಯನನ್ನು ಎಲ್ಲಿಹೋದರೂ ಹಿಂಬಾಲಿಸುತ್ತದೆ.'

ಕಾಶ್ಮೀರದ ಮುಂದಿನ ಇತಿಹಾಸವನ್ನು ಜೋನರಾಜ, ಶ್ರೀವರ, ಪ್ರಾಜ್ಯಭಟ್ಟರು ರಾಜತರಂಗಿಣಿಯೆಂಬ ಹೆಸರಿನಿಂದಲೇ ಬರೆದು ಸೇರಿಸಿದ್ದಾರೆ. ಕಡೆಯ ಭಾಗ ಅಕ್ಬರನ ರಾಜ್ಯಕಾಲವನ್ನೂ ಒಳಗೊಂಡಿದೆ. ಇವುಗಳ ಕಾವ್ಯ ಸ್ವಾರಸ್ಯ ಕಡಿಮೆ.

ಪದ್ಮಗುಪ್ತನಂತೆ ಪ್ರತ್ಯೇಕ ರಾಜರನ್ನು ವರ್ಣಿಸುವ ಮತ್ತೆ ಕೆಲವು ಗ್ರಂಥಗಳೆಂದರೆ, ೧೧ ನೆ ಶತಮಾನದ ಜಲ್ಹಣನ **ಸೋಮಪಾಲವಿಲಾಸ**, ಸಂಧ್ಯಾಕರನಂದಿಯ **ರಾಮಪಾಲಚರಿತ**, ಹೇಮಚಂದ್ರನ **ಕುಮಾರ ಪಾಲಚರಿತ**, ಅಜ್ಞಾತಕವಿಯ **ಪೃಥ್ವೀರಾಜವಿಜಯ**, ಸೋಮೇಶ್ವರ ದತ್ತ (೧೨ ನೆ ಶತಮಾನ) ನ **ಸುರಥೋತ್ಸವ**, ಗಂಗಾದೇವಿಯ (೧೪ ನೆಯ ಶತಮಾನ) **ಮಧುರಾವಿಜಯ**, ಶಂಭುಕವಿಯ **ರಾಜೇಂದ್ರಕರ್ಣ ಪೂರ**, ರುದ್ರಕವಿಯ **ರಾಷ್ಟ್ರೌಢವಂಶ**, (ಸು. ಕ್ರಿ. ಶ. ೧೫೦೦), ರಾಮ ಭದ್ರಾಂಬೆಯ **ರಘುನಾಥಾಭ್ಯುದಯ**, ಮುಂತಾದವು. ಕಾವ್ಯದೃಷ್ಟಿ ಯಿಂದ ಇವುಗಳ ಮಹತ್ವ ಅತ್ಯಲ್ಪ.

ಇವುಗಳಲ್ಲಿ 'ಮಧುರಾವಿಜಯ'ವನ್ನು ವಿಜಯನಗರದಿಂದಾಳುತ್ತಿದ್ದ ಕರ್ಣಾಟಕರಾಜ್ಯರಮಾರಮಣ, ಬುಕ್ಕರಾಯನ ಮಗ ಕಂಪಣನ ರಾಣಿ ಗಂಗಾದೇವಿ ಬರೆದಿರುವುದರಿಂದ ಕರ್ಣಾಟಕದ ಇತಿಹಾಸ ಸಂಶೋಧಕರಿಗೆ ಇದು ಗಮನಾರ್ಹವಾಗಿರುವಂತೆ, ಕಾವ್ಯರಸಿಕರಿಗೂ ಆಸ್ವಾದ್ಯವಾಗಿದೆ.

'ಕಂಪರಾಯಚರಿತ'ವೆಂಬುದು 'ಮಧುರಾವಿಜಯ'ಕ್ಕೆ ಇರುವ ಇನ್ನೊಂದು ಹೆಸರು. ಇದು ತಿರುವಾಂಕೂರಿನಲ್ಲಿ ಮುದ್ರಿತವಾಗಿದೆ. (೧೯೨೪). ಕವಿಸಮಯಮಯವಾದ ಶೈಲಿಯಲ್ಲಿ ಹರಿಹರನ ತಮ್ಮ ಬುಕ್ಕರಾಯ, ರಾಜಧಾನಿಯಾದ ತುಂಗಭದ್ರಾತೀರದ 'ವಿಜಯಾನಗರಿ', ಬುಕ್ಕರಾಯನ

ಮೆಚ್ಚಿನರಾಣಿ ಕುಂತಳರಾಜಪುತ್ರಿ ದೇವಯಿ, ಅವರ ಮಗ ಕಂಪಣರಾಯ, ಇವರ ವರ್ಣನೆ ಬರುತ್ತದೆ. ಆಮೇಲೆ ಬರುವ ಐತಿಹಾಸಿಕ ವಸ್ತು ಹೀಗಿದೆ:—ಕಂಪಣನು ತುಂಡೀರಮಂಡಲದ ರಾಜ ಚಂಪರಾಯನನ್ನು ಗೆದ್ದು, ಕಾಂಚಿಯು ವಶವಾದ ಮೇಲೆ ದಕ್ಷಿಣದ ತುರುಕರ ಮೇಲೆ ಸಮಯ ನೋಡಿ ದಂಡೆತ್ತಬೇಕೆಂಬ ತಂದೆಯ ಅಪ್ಪಣೆಯನ್ನು ಪಡೆದು ಕಂಪರಾಯನು ಚತುರಂಗಸೇನಾಸಮೇತನಾಗಿ ಹೊರಡುವನು. ಐದಾರು ದಿನಗಳಲ್ಲೇ ಕರ್ಣಾಟಕ ದೇಶದ ಗಡಿಯನ್ನು ಮುಟ್ಟಿ 'ರಾಜಗಂಭೀರ'ವೆಂಬ ಕೋಟೆಯಲ್ಲಿ ಅಡಗಿದ್ದ ಚಂಪರಾಯನ ಮೇಲೆ ದಾಳಿಗಾರಂಭಿಸುವನು. ಮುತ್ತಿಗೆಯನ್ನು ತಡೆಯಲಾರದೆ ಕಡೆಗೆ ಚಂಪರಾಯನು ದ್ವಂದ್ವಯುದ್ಧಕ್ಕೆ ಸಿದ್ಧನಾಗುವನು. ವೀರ ಕಂಪರಾಯನು ಅವನನ್ನು ಕತ್ತಿಯುದ್ಧದಲ್ಲಿ ಸೋಲಿಸಿ ಕೊಲ್ಲುವನು. ಜಯಭೇರಿ ಹಾಕಿಸಿಕೊಂಡು ಹೋಗಿ ಕಾಂಚಿಯಲ್ಲಿ ರಾಜನಾಗುವನು ಸಿಂಹಳ, ದ್ರಾವಿಡ, ಕೇರಳ, ರಾಜರೆಲ್ಲ ಅವನಿಗೆ ಮಾಂಡಲಿಕರಾಗಿದ್ದರು. ಕಂಪರಾಯನು ಸ್ವಲ್ಪಕಾಲ ಗಂಗಾದೇವಿಯೇ ಮುಂತಾದ ರಾಣಿವಾಸದವರೊಡನೆ ಸುಖಭೋಗದಲ್ಲಿದ್ದನು. ಒಂದು ದಿನ ದೇವತೆಯೊಬ್ಬಳು (?) ಆಸ್ಥಾನಕ್ಕೆ ಬಂದು ಚಿದಂಬರ, ಶ್ರೀರಂಗ, ಮಧುರೆ ಮುಂತಾದ ಕ್ಷೇತ್ರಗಳಲ್ಲಿ ತುರುಕರು ಮಾಡುತ್ತಿದ್ದ ಅತ್ಯಾಚಾರಗಳನ್ನು ವರ್ಣಿಸಿ ಅಗಸ್ತ್ಯದತ್ತವಾದ ಅದ್ಭುತ ಖಡ್ಗವೊಂದನ್ನು ಅವನಿಗಿತ್ತು, ತುರುಕರನ್ನು ನಾಶಮಾಡಿ ವಿಜಯಿಯಾಗೆಂದು ಹರಸಿ ಹೋಗುವಳು. ಮಧುರೆಯ ತುರುಕ ದೊರೆಗೂ ಕಂಪಣನಿಗೂ ಯುದ್ಧವಾಗುವುದು. ಕಡೆಗೆ ಅಲ್ಲಿಯೂ ದ್ವಂದ್ವಯುದ್ಧದಲ್ಲಿ ಕಂಪಣನು ಹಗೆಯನ್ನು ತೀರಿಸಿ ಚೋಳ ಪಾಂಡ್ಯರೆಲ್ಲರಿಂದಲೂ ಮನ್ನಣೆ ಪಡೆಯುವನು.

ಈ ನಿರೂಪಣೆಯಲ್ಲಿ ಐತಿಹಾಸಿಕ ಸಂಗತಿಗಳೊಡನೆ ಅತಿಮಾನುಷ ಘಟನೆಗಳೂ ಕೆಲವು ಸೇರಿವೆ. ಚಂಪರಾಯನು ಸೋತಮೇಲೂ ಮಾಂಡಲಿಕನಾಗಿ ಎಷ್ಟೋ ವರ್ಷಗಳ ಕಾಲ ಉಳಿದಿದ್ದನೆಂದು ಶಾಸನಗಳು ತೋರಿಸುತ್ತವೆ. ಆದ್ದರಿಂದ ಮುಖ್ಯ ವಸ್ತುಗಳನ್ನು ಮಾತ್ರ ಐತಿಹಾಸಿಕವೆನ್ನಬೇಕಾಗಿದೆ.

ಗಂಗಾದೇವಿಯ ಕಾವ್ಯಗುಣ ಮಾತ್ರ ಉತ್ಕೃಷ್ಟವಾದುದು. ವ್ಯಾಸ, ಕಾಳಿದಾಸ, ಬಾಣ, ಭಾರವಿ, ದಂಡಿ, ಭವಭೂತಿಗಳಂತೆ ಆಕೆ 'ಕರ್ಣಾಮೃತ

ಕವಿ', 'ತಿಕ್ಕಯ', 'ಅಗಸ್ತ್ಯ', 'ಗಂಗಾಧರ', 'ವಿಶ್ವನಾಥ'ರೆಂಬ ಕವಿಗಳನ್ನೂ ಸ್ಮರಿಸುತ್ತಾಳೆ. ಪ್ರಾಯಃ ಇವರೆಲ್ಲ ಕರ್ನಾಟಕದ ಕವಿಗಳಿದ್ದಿರಬಹುದು. ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ಅವಶ್ಯವಾಗಿದೆ. ಕವಯಿತ್ರಿಯ ಸುಂದರ ಸುಮಧುರ ಕಾವ್ಯರೀತಿಗೆ ಒಂದೆರಡು ಮಾದರಿಗಳಿವು—

**ತಾರ್ಕಿಕಾ ಬಹವಃ ಸನ್ತಿ ಶಾಬ್ದಿಕಾಶ್ಚ ಸಹಸ್ರಶಃ ।**
**ವಿರಲಾಃ ಕವಯೋ ಲೋಕೇ ಸರಲಾಲಾಪಪೇಶಲಾಃ ॥** (I.22)

[ತಾರ್ಕಿಕರು ಬೇಕಾದಂತೆ ಉಂಟು; ಶಾಬ್ದಿಕರೂ ಸಾವಿರಗಟ್ಟಲೆ ಉಂಟು. ಆದರೆ ಸರಸಾಲಾಪಕುಶಲರಾದ ಕವಿಗಳು ಜಗತ್ತಿನಲ್ಲಿ ವಿರಳ!]

ಇದು ಹಂಪೆಯ ವಿರೂಪಾಕ್ಷನ ವರ್ಣನೆ—

**ಯಚ್ಛಾಖಾನಗರೀಂ ಪಂಪಾಮನೇಕಧನದಾಶ್ರಿತಾಮ್ ।**
**ಅಧಿತಿಷ್ಠನ್ ವಿರೂಪಾಕ್ಷೋ ನ ಸ್ಮರತ್ಯಲಕಾಪುರೀಮ್॥** (I 66)

[ವಿಜಯನಗರದ ಶಾಖೆಯಾದ (suburb) ಪಂಪೆಯಲ್ಲಿ ಅನೇಕ ಕುಬೇರರಿರುವುದರಿಂದ ಅಲ್ಲಿಯೇ ನಿವಾಸಮಾಡುವ ವಿರೂಪಾಕ್ಷನು (ಒಬ್ಬ ಕುಬೇರನಿರುವ) ಅಲಕಾಪಟ್ಟಣವನ್ನು ನೆನೆಯುವುದೂ ಇಲ್ಲ.]

ಮುಳುಗುವ ಸೂರ್ಯನನ್ನು ಕುರಿತ ಶ್ಲಿಷ್ಟಕಲ್ಪನೆಯಿದು—

**ಕಮಲೋದರಸಂಭೃತಂ ಕರೈರ್ಮಧು ಪೀತ್ವಾ ರವಿರುಜ್ಝಿತಾಂಬರಃ ।**
**ಸ್ಪೃಶತಿ ಸ್ಮ ದಿಶಂ ಪ್ರಚೇತಸೋ ನ ಮದಃ ಕಸ್ಯ ವಿಕಾರಕಾರಣಮ್ ॥** (VII 5)

[ಕಮಲಪಾತ್ರೆಯಲ್ಲಿ ತುಂಬಿದ ಮಧುವನ್ನು ಕರ (=ಕೈ ಮತ್ತು ಕಿರಣ) ಗಳಿಂದಲೇ ಕುಡಿದು ರವಿ ಅಂಬರವನ್ನು (=ಆಕಾಶ ಮತ್ತು ವಸ್ತ್ರ) ಬಿಟ್ಟು, ಪಶ್ಚಿಮ ದಿಗಂಗನೆಯನ್ನು ಮುಟ್ಟುತ್ತಿದ್ದನು. ಮದವು ಯಾರಿಗೆ ತಾನೆ ವಿಕಾರವನ್ನುಂಟುಮಾಡುವುದಿಲ್ಲ!]

ಕಾವ್ಯದಲ್ಲಿ ಪೂರ್ವಕವಿಗಳ ಪ್ರಭಾವವನ್ನು ಚೆನ್ನಾಗಿ ಗುರುತಿಸುವಂತಿದೆ!

**ಅಪರಿ ತಾನಿಲ್ಲದಿರೆಯು-**
**ಮಾಪರಿಯಿರ್ಪಂತೆ ವಸ್ತುನಿಕರಮನೆಲ್ಲಂ ।**
**ಸ್ಥಾಪಿಸಿ ಹೃದಯವ ಸೆಳೆವಾ-**
**ಲಾಪಂ ಸುಕವೀಂದ್ರಸಿದ್ಧಮೆಸೆವುದು ಧರೆಯೊಳ್ ||** [68]



68. ಕನ್ನಡ ಧ್ವನ್ಯಾಲೋಕ, (ಪು. ೧೭೨)

# ಅಧ್ಯಾಯ ೭

## ಲಘು ಕಾವ್ಯಗಳು

**೧ ಪ್ರೇಮಗೀತೆಗಳು:**—ಸಂಸ್ಕೃತದ ಪ್ರೇಮಗೀತೆಗಳಿಗೆ ಕಾಳಿದಾಸನೇ ಜನಕನೆಂಬುದನ್ನು ಆಗಲೇ ನೋಡಿದ್ದೇವೆ. ಅವನಿಗಿಂತ ಹಿಂದೆ ಮಹಾಕಾವ್ಯಗಳಲ್ಲೂ ನಾಟಕಗಳಲ್ಲೂ ಭಾವಗೀತೆಯ ಅಂಶವಿದ್ದಿರಬಹುದು; ಆದರೆ ಭಾವಗೀತೆಗೆ ಒಂದು ಸ್ವತಂತ್ರ ಸ್ಥಾನವನ್ನು ಸಾಹಿತ್ಯದಲ್ಲಿ ಕಲ್ಪಿಸಿದವನೆಂದರೆ ಕಾಳಿದಾಸನೇ. ಭಾವ ದೀಪ್ತಿಯಿಂದಲೇ ಮಾತು ಜ್ಯೋತಿಯಾಗುವ ಕಲೆಯನ್ನು ಮೇಘದೂತ, ಋತುಸಂಹಾರಗಳೆರಡರಲ್ಲೂ ನೋಡಿದ್ದೇವೆ. ಕಾಳಿದಾಸನಿಗೆ ಸ್ಫೂರ್ತಿಯನ್ನಿತ್ತ ಪೂರ್ವದ ಭಾವಗೀತೆಗಳಾವುವೆಂದು ವಿಚಾರ ಮಾಡುತ್ತಾ ಹೊರಟರೆ, ಮಹಾರಾಷ್ಟ್ರೀ ಪ್ರಾಕೃತ ಸಾಹಿತ್ಯದ ಅಮರ ಭಾವಗೀತೆಗಳ ಸಂಗ್ರಹವಾದ "ಗಾಥಾಸಪ್ತಶತೀ" ಎಂಬ ಕಾವ್ಯಕೋಶವು ಕಣ್ಣಿಗೆ ಬೀಳುತ್ತದೆ. ಇದು ನಮ್ಮ 'ಗರತಿಹಾಡಿ'ನಂತಹ ಸಾವಿರಾರು 'ಗಾಥೆ'ಗಳ ಸಂಕಲನ. ಸಂಕಲನಕಾರ—ಹಾಲ ಅಥವಾ ಸಾತವಾಹನನೆಂಬ ರಾಜ. ಇವನ ಕಾಲ ಪೌರಾಣಿಕ ವಂಶಾವಳಿಗಳ ಪ್ರಕಾರ ಕ್ರಿ.ಶ. ೧ ಅಥವಾ ೨ ನೆಯ ಶತಮಾನ, ಆದರೆ ಪ್ರಾಕೃತ ಭಾಷೆಯ ಬೆಳೆವಳಿಗೆಯ ದೃಷ್ಟಿಯಿಂದ ಕ್ರಿ.ಶ. ೨೦೦-೪೫೦ ರ ಅವಧಿಯಲ್ಲಿ ಕಾವ್ಯಕೋಶವು ಹುಟ್ಟಿರಬೇಕೆಂದು ಪಾಶ್ಚಾತ್ಯರು ಹೇಳುತ್ತಾರೆ.[1] ಬಾಣನಂತಹ, ಮಹಾಕವಿಯೇ ಈ ಸುಭಾಷಿತಗಳ 'ಅವಿನಾಶಿತ್ವ'ವನ್ನೂ 'ಅಗ್ರಾಮ್ಯತೆಯನ್ನೂ ರತ್ನಗಳೊಡನೆ ಹೋಲಿಸಿ ಹೊಗಳಿದ್ದಾನೆ.[2] ಇಲ್ಲಿ ದಾಂಪತ್ಯದ ರಸ-ವಿರಸಗಳೂ ಪತಿ-ಉಪಪತಿಗಳ ವಿಹಾರ ವಿನೋದಗಳೂ ಹಳ್ಳಿಯ ಹೆಂಗಸರ ಪ್ರಣಯಚಾತುರ್ಯಗಳೂ ಬಹಳ ರಸಭರಿತವಾಗಿ ವರ್ಣಿತವಾಗಿವೆ. ಅರವಟ್ಟಿಗೆ,

---

1. ವ್ಬೀಡರ್ಸ್, ಯಾಕೊಬಿ ಮತ್ತು ಕೀತ್. ಹೋಲಿಸಿ—Keith: History of Sanskrit Literature, p 224.

2 ಅವಿನಾಶಿನಮಗ್ರಾಮ್ಯಮಕರೋತ್ ಸಾತವಾಹನಃ ।
ವಿಶುದ್ಧಜಾತಿಭಿಃ ಕೋಶಂ ರತ್ನೈರಿವ ಸುಭಾಷಿತೈಃ ॥—ಹರ್ಷಚರಿತ.

ಷೇವಾಲಯ, ಗದ್ದೆ, ತೋಟ, ಮನೆ, ಕೆರೆ, ರಸ್ತೆ, ಇವೇ ಈ ಪ್ರಣಯ ನಾಟಕಗಳಿಗೆ ರಂಗಭೂಮಿಗಳು. ಒಂದೊಂದು ಶ್ಲೋಕವೂ ಒಂದೊಂದು ಮುತ್ತಿನಂತೆ ಸ್ವಯಂಪೂರ್ಣವಾದ ಸೊಗಸನ್ನು ಹೊಂದಿರುವುದರಿಂದ 'ಮುಕ್ತಕ'ಗಳೆನಿಸುತ್ತವೆ. ಧ್ವನಿಪ್ರಸ್ಥಾನದ ಲಾಕ್ಷಣಿಕರಿಗೆ ನೂರಾರು ಸುಂದರ ಲಕ್ಷ್ಯಗಳನ್ನೊದಗಿಸುವ ಆಕರವೇ ಗಾಥಾಸಪ್ತಶತಿ. ಕೆಲವು ಉದಾಹರಣೆಗಳನ್ನು ಕೆಳಗೆ ಬರೆದಿದೆ:—

1 ಮಹಿಲಾಸಹಸ್ಸಭರಿಏ ತುಹ ಹಿಅಏ ಸುಹಅ ಸಾ
ಅಮಾಅನ್ತೀ ।
ಅನುದಿನಮಣಣ್ಣಕಮ್ಮಾ ಅಂಗಂ ತಣುಅಂ ವಿ ತಣುಏಇ॥
ವನಿತಾಸಹಸ್ರಮಯಮೆನೆ
ನಿನತೆರ್ದೆಯೊಳ್ ತಾಣಮಿಲ್ಲದಾಗಿರ್ಪುದರಿಂ ।
ದನುದಿನಮವಳುಂ ಸುಭಗನೆ
ತನು ಕೃಶಮೆನೆಯುಂ ಮಗುಳ್ದು ಸವೆಯಿಸುತಿರ್ಪಳ್[3] ॥

2. ಸಿಜ್ಜಇ ರೋಮಂಚಿಜ್ಜಇ ವೇವಇ ರಚ್ಛಾತುಲಗ್ಗ
ಪಡಿಲಗ್ಗೋ ।
ಸೋ ಪಾಸೊ ಅಜ್ಜವಿ ಸುಹಅ ತೀಇ ಜೇಣಾಸಿ
ವೋಲೀಣೋ ॥
ಬೆಮರ್ವಳದಿರ್ವಳ್ ಪುಲಕೋ-
ದ್ಗಮಮಂ ತಳೆವಳ್ ಶರೀರಪಾರ್ಶ್ವದೊಳಿಂದಾ- ॥
ಗಮಿಸುತ ಮಾರ್ಗದೆ ನಿನ್ನಂ-
ಗಮನದು ನಸುಸೋಂಕಿತೆಂದು ತಕ್ಕಡಿತುದಿಯಿಂ[4] ॥

3. ಊರ್ಧ್ವಾಕ್ಷಃ ಪಿಬತಿ ಜಲಂ ಯಥಾ ಯಥಾ
ವಿರಲಾಂಗುಲಿಃ ಪಥಿಕಃ ।
ಪ್ರಪಾಪಾಲಿಕಾಪಿ ತಥಾ ತಥಾ ಧಾರಾಂ ತನುಕಾಮಪಿ
ತನೂಕರೋತಿ ॥ (ಸಂಸ್ಕೃತಛಾಯೆ)

---

3 ಭಾಷಾಂತರ ಇದೇ ಲೇಖಕನದ್ದು ಕನ್ನಡ ಕಾವ್ಯಪ್ರಕಾಶ, IV.

4. ಕನ್ನಡ ಧ್ವನ್ಯಾಲೋಕ, ಪು. ೧೪೦.

ಎತ್ತಿ ಕಣ್ಣನು ಬೆರಳಗಲಿಸಿ ದಾರಿಗ-
ನೆಂತೆಂತು ನೀರೀಂಟುವನೊ ತಡೆದು ; ।
ಅರವಟ್ಟಿಗೆಯ ಬಾಲೆಯುಂತಂತು ಬಿಡುವಳು
ಇನ್ನೂ ತೆಳ್ಳಗೆ ತೆಳುಧಾರೆಯನು[5] ॥

4 ಉಅ ಣಿಚ್ಚಲಣಿಪ್ಪಂದಾ ಭಿಸಿಣೀಪತ್ತಮ್ಮಿ ರೇಹಇ ಬಲಾಆ।
ಣಿಮ್ಮಲ ಮರಗಅ ಭಾಅಣಪರಿಟ್ಠಿಆ ಸಂಖಸುತ್ತಿ ವ್ವ ॥

ತಾವರೆಯ ಎಲೆಯ ಮೇಲಿಹುದದೊ ಬೆಳ್ಳಕ್ಕಿ
ಅಲುಗದೆ ಅಳ್ಳಾಡದಂತೆ ।
ತೊಳೆದೊಂದು ಪಚ್ಚೆಯ ತಟ್ಟೆಯ ಮೇಲಿಟ್ಟ
ಶಂಖದ ಚಿಪ್ಪೆನುವಂತೆ[6] ॥

ಇವುಗಳ ಸ್ವಾರಸ್ಯವು ರಸಿಕರಿಗೆ ಸ್ವಯಂವೇದ್ಯ. ವ್ಯಂಗ್ಯಾರ್ಥವನ್ನು ವಾಚ್ಯಾರ್ಥವಾಡಿಬಿಟ್ಟರೆ ಸ್ವಾರಸ್ಯ ಹೋಗಿ ಗ್ರಾಮ್ಯತ್ವದೋಷ ಬಂದೀತು. 'ಅಮೃತಂ ಪ್ರಾಕೃತಕಾವ್ಯಂ' ಎಂಬ ಮಾತೂ, ಪ್ರಾಕೃತಕಾವ್ಯವನ್ನರಿಯದವರಿಗೆ ಶೃಂಗಾರದ ಸೊಬಗು ತಿಳಿಯದೆಂಬ ನುಡಿಯೂ[7] ಮುಖ್ಯವಾಗಿ ಗಾಥಾಸಪ್ತಶತಿಗೆ ಅನ್ವಯಿಸುತ್ತದೆ. ಸಂಸ್ಕೃತದ ಭಾವಗೀತೆಗಳ ಆವಿರ್ಭಾವ ಹಾಗು ವಿಕಾಸಕ್ಕೆ ಈ ಪ್ರಾಕೃತದ ಶೃಂಗಾರರತ್ನಕೋಶವು ಹೆಚ್ಚಿನ ಪ್ರಭಾವ ಬೀರಿದೆಯೆಂದು ತಿಳಿದರೆ ತಪ್ಪಾಗದು.

ಸಂಸ್ಕೃತದ ಪ್ರಣಯಗೀತೆಗಳೆಲ್ಲವೂ ಪ್ರಾಯಿಕವಾಗಿ ಸಂಕಲನಗಳೆಂದೇ ಹೇಳಬಹುದು. ಒಬ್ಬನೇ ಕವಿಯ ಕೃತಿಗಳೆನ್ನುವುದಕ್ಕಿಂತ ಒಬ್ಬನು ತನ್ನ ಪದ್ಯಗಳೊಡನೆ ಇತರರದನ್ನೂ ಸೇರಿಸಿ ಶತಕ ಮುಂತಾದ ನಿರ್ದಿಷ್ಟ ಸಂಖ್ಯೆಗೆ ತಂದಿಟ್ಟಿರಬಹುದೆಂದು ಸಂಶೋಧಕರು ಊಹಿಸುತ್ತಾರೆ[8]. ಎಂಟು

5 ಭಾಷಾಂತರ ಪ್ರೊ॥ ತೀ.ನಂ ಶ್ರೀಕಂಠಯ್ಯನವರದು, ಒಲುಮೆ. ಪು ೪೩.

6. ಭಾಷಾಂತರ ಶ್ರೀ ಎಸ್. ವಿ ಪರಮೇಶ್ವರಭಟ್ಟರದು, ಪ್ರಬುದ್ಧ ಕರ್ಣಾಟಕ, ಸಂಪುಟ ೩೭, ಸಂಚಿಕೆ ೪, ಪು. ೧೦.

7. ಜಯವಲ್ಲಭನ 'ವಜ್ಜಾಲಗ್ಗ.'

8. ನೋಡಿ ಭರ್ತೃಹರಿ ಶತಕತ್ರಯಕ್ಕೆ ಪ್ರೊ॥ ಡಿ ಡಿ. ಕೋಸಂಬಿ ಅವರ ಪೀಠಿಕೆ. (ಭಾರತೀಯ ವಿದ್ಯಾಭವನ, 1948).

ಚೆನ್ನಾದ ಪದ್ಯಗಳು ಸಿಕ್ಕಿದರೆ ಅದೇ ಒಂದು 'ಅಷ್ಟಕ' ವಾಗುತ್ತಿತ್ತು. ಕಾಳಿದಾಸ, ಭರ್ತೃಹರಿ, ಅಮರು, ಮುಂತಾದ ಪ್ರಸಿದ್ಧ ಕವಿಗಳ ಕೃತಿಗಳೇ ಅವೆಂದು ಪ್ರಚಾರವಾಗುತ್ತಿತ್ತು. ಅಮರು, ಭರ್ತೃಹರಿ ಮುಂತಾದವರ ಶೃಂಗಾರ ಶತಕಗಳಲ್ಲಿ ಎಲ್ಲ ಹಸ್ತಪ್ರತಿಗಳಲ್ಲಿರುವ ಪದ್ಯಗಳನ್ನೂ ಕೂಡಿಸಿದರೆ ನೂರರ ಬದಲು ಇನ್ನೂರು ಸಿಕ್ಕುತ್ತವೆ, ಯಾವುದು ಮೂಲ, ಯಾವುದು ಪ್ರಕ್ಷಿಪ್ತ, ಎಂಬ ವಿವೇಕ ಇಲ್ಲಿ ಅನಗತ್ಯ. ಪದ್ಯದ ಚೆಲುವು ಮಾತ್ರ ಅಂಗೀಕಾರ್ಯ.

ಕಾಳಿದಾಸನ ಹೆಸರಿನಲ್ಲಿ ಪ್ರಚಲಿತವಿರುವ ಒಂದು ಸಂಕಲನ **ಶೃಂಗಾರತಿಲಕ.** ಇದರಲ್ಲಿ ಪ್ರೇಮದ ವರ್ಣನಾಪರವಾದ ೨೩ ಪದ್ಯಗಳಿವೆ. ಒಂದೊಂದೂ ಸೊಗಸಾಗಿದೆ.

ಈ ಅಲಂಕಾರದ ಸರಲತೆಯನ್ನು ನೋಡಿ—

**ಇಯಂ ವ್ಯಾಧಾಯತೇ ಬಾಲಾ**
**ಭ್ರೂರಸ್ಯಾಃ ಕಾರ್ಮುಕಾಯತೇ ।**
**ಕಟಾಕ್ಷಾಶ್ಚ ಶರಾಯನ್ತೇ**
**ಮನೋ ಮೇ ಹರಿಣಾಯತೇ ॥**

'ಈ ಬಾಲೆಯ ವರ್ತನೆ ಬೇಡನಂತಿದೆ, ಇವಳ ಹುಬ್ಬೇ ಬಿಲ್ಲಿಗೆ ಸಮ, ಕಟಾಕ್ಷಗಳೇ ಬಾಣಗಳು, ನನ್ನ ಮನಸ್ಸೇ ಹರಿಣ!

ಇದು ಮುನಿದ ನಲ್ಲೆಯನ್ನು ಬಣ್ಣಿಸುವ ನಾಯಕನ ಮಾತು:

**ಇಂದೀವರೇಣ ನಯನಂ ಮುಖಮಂಬುಜೇನ**
**ಕುಂದೇನ ದಂತಮಧರಂ ನವಪಲ್ಲವೇನ ।**
**ಅಂಗಾನಿ ಚಂಪಕದಲೈಃ ಸ ವಿಧಾಯ ವೇಧಾಃ**
**ಕಾಂತೇ ಕಥಂ ಘಟಿತವಾನುಪಲೇನ ಚೇತಃ ॥**

'ನಿನ್ನ ಕಣ್ಣನ್ನು ಕನ್ನೈದಿಲೆಯಿಂದಲೂ, ಮುಖವನ್ನು ಪದ್ಮದಿಂದಲೂ, ಹಲ್ಲನ್ನು ಕುಂದಕುಸುಮದಿಂದಲೂ, ತುಟಿಯನ್ನು ನವಪಲ್ಲವದಿಂದಲೂ, ಅಂಗಗಳನ್ನು ಚಂಪಕದಳಗಳಿಂದಲೂ ಮಾಡಿದ ವಿಧಾತನೇ ಹೃದಯವನ್ನು ಕಲ್ಲಿನಿಂದ ಮಾಡಿದ್ದಾದರೂ ಹೇಗೆ?'

ಕಾಳಿದಾಸನೇ ಬರೆದನೆಂದು ಕೆಲವರು ಹೇಳುವ ೨೨ ಶ್ಲೋಕಗಳ ಇನ್ನೊಂದು ಪ್ರಣಯ ಗೀತೆಗಳ ಸಂಕಲನ '**ಘಟಕರ್ಪರ.**' ಘಟಕರ್ಪರ ನೆಂಬ ಹೆಸರಿನ ಕವಿಯೇ ಒಬ್ಬನಿದ್ದನೆನ್ನುವುದೂ ಉಂಟು. ಆ ಹೆಸರಿನ ಅರ್ಥ 'ಗಡಿಗೆಯ ಚೂರು.' ಪ್ರತಿಯೊಂದು ಶ್ಲೋಕದಲ್ಲೂ ಯಮಕಾಲಂಕಾರ ವಿದ್ದು, ಕಡೆಯ ಶ್ಲೋಕದಲ್ಲಿ ಕವಿಯ ಪ್ರತಿಜ್ಞೆಯಿದೆ. 'ಯಮಕ ಪ್ರಯೋಗ ದಲ್ಲಿ ಯಾರಾದರೂ ನನ್ನನ್ನು ಮೀರಿಸುವ ಕವಿ ಇದ್ದರೆ ಅವನಿಗೆ ಗಡಿಗೆಯ ಚೂರಿನಲ್ಲಿ ನೀರನ್ನು ಹೊತ್ತುಹಾಕುತ್ತೇನೆಂದು ಕೈಯಲ್ಲಿ ಕುಡಿಯುವ ನೀರಿನ ಆಣೆಮಾಡುತ್ತೇನೆ, ಭಾವಾನುರಕ್ತೆಯಾದ ವನಿತೆಯ ಆಣೆಗೂ ಹೇಳುತ್ತೇನೆ' —

**ಆಲಂಬ್ಯ ವಾಂಬು ತೃಷಿತಃ ಕರಕೋಶಪೇಯಂ**
**ಭಾವಾನುರಕ್ತವನಿತಾ ಸುರತೈಃ ಶಪೇಯಮ್ ।**
**ಜೀಯೇಯ ಯೇನ ಕವಿನಾ ಯಮಕೈಃ ಪರೇಣ**
**ತಸ್ಮೈ ವಹೇಯಮುದಕಂ ಘಟಕರ್ಪರೇಣ ॥**

ಮೇಘದೂತದಂತೆ ಇಲ್ಲಿಯೂ ಮೇಘವು ಪ್ರಣಯ ಸಂದೇಶಹರ, ಆದರೆ ಸಂದೇಶ ಕಳಿಸುವವಳು ನಾಯಿಕೆ, ಇಷ್ಟೇ ವ್ಯತ್ಯಾಸ. ಯಮಕಾಲಂಕಾರ (rhyme) ದ ಸೊಗಸು ಇಲ್ಲಿ ಹೃದಯಂಗಮವಾಗಿದೆ. ಒಂದು ಉದಾ ಹರಣೆ –

**ನಿಚಿತಂ ಖಮುಪೇತ್ಯ ನೀರದೈಃ**
**ಪ್ರಿಯ ಹೀನಾ ಹೃದಯಾವ ನೀರದೈಃ ।**
**ಸಲಿಲೈರ್ನಿಹಿತಂ ರಜಃ ಕ್ಷಿತೌ**
**ರವಿಚಂದ್ರಾವಪಿ ನೋಪಲಕ್ಷಿತೌ ॥**

'ವಿರಹಿಣಿಗಳ ಹೃದಯಗಳನ್ನು ಬಿರಿಸುವ ಮೋಡಗಳು ಗಗನದಲ್ಲಿ ಎದ್ದು ಮಳೆಯಿಂದ ನೆಲವೆಲ್ಲಾ ಕೆಂಪಾಗಿದೆ, ಸೂರ್ಯಚಂದ್ರರೂ ಕಾಣುವುದಿಲ್ಲ.' ಇದರಂತೆಯೇ ಬಾಣನ ಮಾವನಾದ ಮಯೂರಕವಿ ಬರೆದನೆನ್ನುವ ಎಂಟು ಪದ್ಯಗಳು 'ಮಯೂರಾಷ್ಟಕ'ವೆಂಬ ಪ್ರಸಿದ್ಧಿಯನ್ನು ಪಡೆದಿವೆ. ಇವುಗಳಲ್ಲೂ ಶಬ್ದಾಲಂಕಾರಗಳ ವೈಚಿತ್ರ್ಯವುಂಟು. ಈ ಸುಂದರಿಯ ಲೀಲೆಯನ್ನು ನೋಡಿ:—

ಏಷಾ ಕಾ ಸ್ತನಪೀನಭಾರಕಠಿಣಾ ಮಧ್ಯೇ ದರಿದ್ರಾವತೀ
ವಿಭ್ರಾಂತಾ ಹರಿಣೀ ವಿಲೋಲನಯನಾ ಸಂತ್ರಸ್ತಯೂ
ಥೋದ್ಗತಾ ।
ಅಂತಃಸ್ವೇದ ಗಜೇಂದ್ರ ಗಂಡಗಲಿತಾ ಸಂಲೀಲಯಾ
ಗಚ್ಛತಿ
ದೃಷ್ಟ್ವಾ ರೂಪಮಿದಂ ಪ್ರಿಯಾಂಗಗಹನಂ ವೃದ್ಧೋಽಪಿ
ಕಾಮಾಯತೇ ॥

ಕಾಮೋದ್ದೀಪಕವಾದ ಈ ಪದ್ಯಗಳು ಮಗಳ ಸೌಂದರ್ಯವನ್ನೆಲ್ಲ ವರ್ಣಿಸಿದ್ದರಿಂದ ಅವಳ ಶಾಪದ ಫಲವಾಗಿ ತಂದೆಗೆ ಕುಷ್ಠರೋಗ ಬಂದಿತೆಂಬ ಕಥೆಯನ್ನು ಕೂಡಾ ಕಟ್ಟಿದ್ದಾರೆ. ಮುಂದೆ 'ಸೂರ್ಯಶತಕ' ಬರೆದಮೇಲೆ ರೋಗ ನಿವಾರಣೆಯಾಯಿತಂತೆ !

**ಭರ್ತೃಹರಿಯ ಶೃಂಗಾರ ಶತಕ :** ನೂರು ಮುಕ್ತಕಗಳ ಈ ಶತಕವು ಸಂಸ್ಕೃತ ರಸಿಕರಿಗೆಲ್ಲ ಪರಮಪ್ರಿಯವಾದುದು. 'ವಾಕ್ಯಪದೀಯ'ವನ್ನು ಬರೆದ ವೈಯಾಕರಣಿ ಭರ್ತೃಹರಿಯೂ ಇವನೂ ಒಬ್ಬನೋ ಅಲ್ಲವೊ ಇನ್ನೂ ತೀರ್ಮಾನವಿಲ್ಲ. ಇತ್ಸಿಂಗನು ಬೌದ್ಧನಾದ ಭರ್ತೃಹರಿಯು ದಿವಂಗತನಾದ ವರ್ಷ ಕ್ರಿ.ಶ. ೬೫೧ ಎಂದು ಬರೆದಿದ್ದಾನೆ. ಇವನು ರಾಜನೆಂದೂ, ಗೃಹಸ್ಥಾಶ್ರಮದಿಂದ ಸಂನ್ಯಾಸಾಶ್ರಮಕ್ಕೂ ಮತ್ತೆ ಸಂನ್ಯಾಸಾಶ್ರಮದಿಂದ ಗೃಹಸ್ಥಾಶ್ರಮಕ್ಕೂ ಪದೇ ಪದೇ ಬದಲಾಯಿಸುತ್ತಿದ್ದನೆಂದೂ ಪ್ರವಾದಗಳಿವೆ. ಹೇಗೆಯೇ ಇರಲಿ, ಇವನ 'ಶೃಂಗಾರಶತಕ'ದಲ್ಲಿ ಸ್ತ್ರೀ ಪ್ರಶಂಸೆಯಂತೆಯೇ ಸ್ತ್ರೀನಿಂದೆಯೂ ಇದೆ, ಜೀವನದ ಸಾರಸರ್ವಸ್ವವೇ ಶೃಂಗಾರವೆಂದು ಒಮ್ಮೆ ಹೇಳಿದರೆ, ಅದೇ ಎಲ್ಲ ಅನರ್ಥಗಳಿಗೂ ಮೂಲವೆಂದು ಇನ್ನೊಮ್ಮೆ ಹೇಳುತ್ತಾನೆ. ಶ್ಲೋಕಗಳಲ್ಲಿ ಕಾಳಿದಾಸನ ಕೃತಿಗಳಲ್ಲಿರುವ ಏಕ ಸೂತ್ರತೆಯಿರದಿದ್ದರೂ ಪದ್ಯಗಳ ಶೈಲಿ ಸರಸವಾಗಿದೆ, ಲಲಿತ ಮನೋಹರವಾಗಿದೆ.

ಬಹಳ ಶ್ರಮಪಟ್ಟು ಪ್ರೊ॥ ಡಿ. ಡಿ. ಕೋಸಂಬಿಯವರು ಪ್ರಕಟಿಸಿರುವ ಶತಕಗಳ ಪರಿಷ್ಕೃತ ಮುದ್ರಣದ (ಭಾರತೀಯ ವಿದ್ಯಾಭವನ, ೧೯೪೭) ಪೀಠಿಕೆಯನ್ನು ನೋಡಿದರೆ, ಇದರಲ್ಲಿ ಅನೇಕ ಶ್ಲೋಕಗಳು, ಕಾಳಿದಾಸ, ಅಶ್ವಘೋಷ ಮುಂತಾದ ಕವಿಗಳ ಸುಭಾಷಿತಗಳೆಂಬುದು ಸಿದ್ಧವಾಗು

ವಂತೆಯೇ, ನೀತಿ ವೈರಾಗ್ಯಪರವಾದ ಮೂಲಶ್ಲೋಕಗಳಲ್ಲಿ ಕೆಲವನ್ನಾದರೂ ಲಕ್ಷ್ಮೀಕೃಪೆಯಿಲ್ಲದ ಬ್ರಾಹ್ಮಣಕವಿಯೊಬ್ಬನು ಬರೆದಿರಬಹುದೆಂದು ಭಾಸವಾಗುತ್ತದೆ. ಬೌದ್ಧಭರ್ತೃಹರಿಗೂ ಕಥೆಗಳ ಭರ್ತೃಹರಿಗೂ ಜೋಡಿಮಾಡುವುದು ಸಂಶೋಧನೆಯಿಂದ ಪ್ರಮಾಣಿಕವಾಗಿಲ್ಲ. ಕೆಲವು ಪದ್ಯಗಳನ್ನು ನೋಡಿ—

**ತಾವದೇವಾಮೃತಮಯೀ ಯಾವಲ್ಲೋಚನಗೋಚರಾ ।**
**ಚಕ್ಷುಃ ಪಥಾದಪೇತಾ ತು ವಿಷಾದಪ್ಯತಿರಿಚ್ಯತೇ ॥**

[ಕಣ್ಣಿಗೆ ಎಲ್ಲಿಯವರೆಗೆ ಕಾಣಿಸುತ್ತಿರುವಳೋ ಅಲ್ಲಿಯವರೆಗೆ ಮಾತ್ರನಲ್ಲೆ ಅಮೃತಮಯಿ, ಕಣ್ಣೋಲದಿಂದ ದೂರವಾದೊಡನೆ ವಿಷಕ್ಕಿಂತಲೂ ಹೆಚ್ಚು!]

ಇದೊ ಇನ್ನೊಬ್ಬ ಪ್ರಣಯಕಾತರನ ಅವಸ್ಥೆ—

**ವ್ಯಾದೀರ್ಘೇಣ ಚಲೇನ ವಕ್ರಗತಿನಾ ತೇಜಸ್ವಿನಾ ಭೋಗಿನಾ**
**ನೀಲಾಬ್ಜದ್ಯುತಿನಾಹಿನಾ ವರಮಹಂ ದಷ್ಟೋ ನ ತಚ್ಚಕ್ಷುಷಾ ।**
**ದಷ್ಟೇ ಸನ್ತಿ ಚಿಕಿತ್ಸಕಾ ದಿಶಿ ದಿಶಿ ಪ್ರಾಯೇಣ ಧರ್ಮಾರ್ಥಿನೋ**
**ಮುಗ್ಧಾಕ್ಷೀಕ್ಷಣವೀಕ್ಷಿತಸ್ಯ ನ ಹಿ ಮೇ ಮಂತ್ರೋ ನ**
**ಚಾಪ್ಯೌಷಧಮ್ ॥**

[ಅವಳ ಕಣ್ಣಿನ ಆಘಾತಕ್ಕಿಂತಲೂ ನೀಳವಾದ, ಸುರುಳಿಯಾಗಿ ಹರಿಯುತ್ತಿರುವ, ಹೊಳೆಹೊಳೆಯುವ, ಕನ್ನೈದಿಲೆಯ ಬಣ್ಣದ, ಹೆಡೆಯೆತ್ತಿದ ಹಾವು ನನ್ನನ್ನು ಕಚ್ಚಿದರೆ ಲೇಸನ್ನುತ್ತೇನೆ ಹಾವು ಕಚ್ಚಿದರೆ ಸಾಮಾನ್ಯವಾಗಿ ಎಲ್ಲೆಲ್ಲೂ ಧರ್ಮಾರ್ಥವಾಗಿ ಚಿಕಿತ್ಸೆಮಾಡುವ ವೈದ್ಯರಿದ್ದಾರೆ. ಆದರೆ ಚೆಲುವೆಯು ಒಂದು ಕ್ಷಣ ನೋಡಿದರೆ (ಅದರ ಬಾಧೆಯನ್ನು ನಿವಾರಿಸಲು) ಮಂತ್ರವೂ ಇಲ್ಲ, ಔಷಧವೂ ಇಲ್ಲ.]

ಯೌವನಾರಂಭದ ವರ್ಣನೆ.—

**ಸ್ಮಿತಂ ಕಿಂಚಿನ್ಮುಗ್ಧಂ ತರಲಮಧುರೋ ದೃಷ್ಟಿವಿಭವಃ**
**ಪರಿಸ್ಪಂದೋ ವಾಚಾಮಭಿನವವಿಲಾಸೋಕ್ತಿಸರಸಃ ।**
**ಗತೀನಾಮಾರಂಭಃ ಕಿಸಲಯಿತಲೀಲಾಪರಿಕರಃ**
**ಸ್ಪೃಶಂತ್ಯಾಸ್ತಾರುಣ್ಯಂ ಕಿಮಿವ ಹಿ ನ ರಮ್ಯಂ ಮೃಗದೃಶಃ ॥**

**ದರಹಾಸಂ ಮಿಗೆ ಮುಗ್ಧಮುಕ್ಷವಿಭವಂ ಚಾಂಚಲ್ಯ**
**ಮಾಧುರ್ಯಸುಂ-**
**ದರಮಾ ವಾಕ್ಪ್ರಸರಂ ನವೋದ್ಯತವಿಲಾಸೋಕ್ತಂಗಳಿಂ**
**ಬಂಧುರಂ ।**
**ವರಲೀಲಾಗಮನಂ ವಲಂ ಕಿಸಲಯಕ್ರೀಡಾಸಮಾಕರ್ಷಕಂ**
**ಹರಿಣೀನೇತ್ರೆಗೆ ರಮ್ಯಮಲ್ಲದುದೇಂ ತಾರುಣ್ಯಮಂ**
**ಮುಟ್ಟಿರಲ್**[9] **॥**

ಕಾಮಿಯ ಬೆಳಕಾವುದೆಂದರೆ ನಲ್ಲೆಯೇ ಎಂದು ಕವಿ ಹೇಳುವ ರೀತಿಯನ್ನು ನೋಡಿ :—

**ಸತಿ ಪ್ರದೀಪೇ ಸತ್ಯಗ್ನೌ ಸತ್ಸು ತಾರಾಮಣೀಂದುಷು ।**
**ವಿನಾ ಮೇ ಮೃಗಶಾವಾಕ್ಷ್ಯಾ ತಮೋಭೂತಮಿದಂ ಜಗತ್ ॥**

[ದೀಪವಿರಲಿ, ಬೆಂಕಿಯಿರಲಿ, ತಾರೆ, ರತ್ನ, ಚಂದ್ರರೆಲ್ಲರೂ ಇರಲಿ; ನಲ್ಲೆಯಿಲ್ಲದಿದ್ದಮೇಲೆ ಜಗತ್ತೇ ನನಗೆ ಕತ್ತಲೆಯ ಮಯ! ]

ಭರ್ತೃಹರಿ ರಾಗೋನ್ಮತ್ತನ ಮನದಾಸೆಯನ್ನು ಬಿಚ್ಚುಮಾತಿನಿಂದ ಬಣ್ಣಿಸುವಂತೆಯೇ, ವಿರಾಗಿಯ ವಿಚಾರವನ್ನೂ ಅಲ್ಲಲ್ಲಿ ಕೂಡಿಸಿದ್ದಾನೆ,—

**ಕಾಂತೇತ್ಯುತ್ಪಲಲೋಚನೇತಿ ವಿಪುಲಶ್ರೋಣೀಭರೇ**
**ತ್ಯುನ್ನಮತ್**
**ಪೀನೋತ್ತುಂಗಪಯೋಧರೇತಿ ಸುಮುಖಾಂಭೋಜೇತಿ**
**ಸುಭ್ರೂರಿತಿ ।**
**ದೃಷ್ಟ್ವಾ ಮಾದ್ಯತಿ ಮೋದತೇಽಭಿರಮತೇ ಪ್ರಸ್ತೌತಿ ವಿದ್ವಾನಪಿ**
**ಪ್ರತ್ಯಕ್ಷಾಶುಚಿಭಸ್ತ್ರಿಕಾಂ ಸ್ತ್ರಿಯಮಹೋ ಮೋಹಸ್ಯ**
**ದುಶ್ಚೇಷ್ಟಿತಮ್ ॥**

'ಸ್ತ್ರೀಯೆಂಬ ಪ್ರತ್ಯಕ್ಷ ಅಶುಚಿಯ ಚೀಲವನ್ನು ಕಾಂತೆ, ಉತ್ಪಲ ಲೋಚನೆ, ವಿಪುಲಶ್ರೋಣೀಭರೆ, ಪೀನೋತ್ತುಂಗಪಯೋಧರೆ, ಸುವದನಾಂಭೋಜೆ, ಎಂದುಕೊಳ್ಳುತ್ತಾ ನೋಡಿದೊಡನೆ ಬುದ್ಧಿಶಾಲಿಯಾದರೂ

---

9. ಕನ್ನಡ ಧ್ವನ್ಯಾಲೋಕ, ಪು. ೧೭೦.

ಮುಗ್ಧನಾಗುತ್ತಾನೆ, ರಮಿಸುತ್ತಾನೆ, ಹೊಗಳುತ್ತಾನೆ. ಅಬ್ಬಾ, ಮೋಹದ ದುಶ್ಚೇಷ್ಟೆಯೆಷ್ಟು! '

ಋತುಸಂಹಾರದಂತೆ ಇಲ್ಲಿಯೂ ಋತುವರ್ಣನಾಪದ್ಯಗಳೂ ಬರುತ್ತವೆ. ಒಟ್ಟಿನಲ್ಲಿ ಪದ್ಯಗಳು ಸ್ತ್ರೀಸೌಂದರ್ಯದ ವೈಷಯಿಕ ವರ್ಣನೆಗಳೇ ಹೊರತು ಚಿತ್ತವೃತ್ತಿಯ ವಿಲಾಸಗಳನ್ನು ವಿಸ್ತರಿಸುವುದಿಲ್ಲ. ಸಾಧಾರಣವಾಗಿ ಅಭಿವ್ಯಕ್ತವಾಗಿರುವ ಮನೋಭಾವಗಳು ಎರಡೇ—ರಾಗಾಂಧತೆ, ಇಲ್ಲವೆ ವಿಷಯ ವಿರಕ್ತಿ. ಈ ಸ್ಥೂಲಮನೋಭಾವಗಳ ಸಾಧಾರಣ ಚಿತ್ರದಲ್ಲಿ ಸೂಕ್ಷ್ಮವೂ, ಪ್ರತಿಹೃದಯಭಿನ್ನವೂ ಆದ ಚಿತ್ತವೃತ್ತಿತರಂಗಗಳಿಗೆ ಯಾವ ಸ್ಥಾನವೂ ಇಲ್ಲ. ಇಲ್ಲಿ ಕಾಮಿಗಳ ಮೋಹಾಂಧತೆಯನ್ನು ಕಾಣಬಹುದೇ ಹೊರತು ಪ್ರೇಮದ ರಹಸ್ಯ ಕಾಣಲು ಬರುವುದಿಲ್ಲ. ಕವಿಯಲ್ಲಿ ರಾಗಾವೇಶವಿದ್ದರೂ ಅವನು ಪ್ರೇಮದ ಆಳವನ್ನು ಅಳೆದವನಂತೆ ತೋರುವುದಿಲ್ಲ.

**ಅಮರುಶತಕ**. ಭರ್ತೃಹರಿಯ ಈ ಕೊರತೆಗಳನ್ನೆಲ್ಲ ಕಳೆದುಕೊಂಡಿರುವ ಶೃಂಗಾರಶತಕವೇ ಪ್ರಖ್ಯಾತವಾದ ಅಮರುಶತಕ. ಭರ್ತೃಹರಿಯ ಶತಕದಂತೆ ಇದು ಕಾಮಿನಿಯರ ಕಾಯಕಾಂತಾರದಲ್ಲಿ ಮಾತ್ರ ಸಂಚರಿಸುವುದಿಲ್ಲ, ವಿಲಾಸಿನಿಯರ ಅವಿಸ್ಮರಣೀಯ ಪ್ರಣಯಲೋಕದಲ್ಲಿಯೂ ಸುಳಿಯುತ್ತದೆ. ಇಲ್ಲಿ ಸ್ತ್ರೀಜಾತಿಯನ್ನು ಪ್ರಶಂಸಿಸುವುದಾಗಲಿ ನಿಂದಿಸುವುದಾಗಲಿ ಇರದೆ ಪ್ರತ್ಯೇಕ ಕಾಮಿನಿಯ ವಿವಿಧ ಭಾವಭಂಗಿಗಳ ಸೂಕ್ಷ್ಮವರ್ಣನೆಯಿದೆ. ಪ್ರಣಯಪ್ರಪಂಚದ ಅನೇಕಾನೇಕ ಆಕಾರ-ಪ್ರಕಾರಗಳು, ಆಶೆ-ನಿರಾಶೆಗಳು, ವಿರಹ-ವಿಕಲ್ಪಗಳು, ಕೋಪ-ತಾಪಗಳು, ಆನಂದ ಉನ್ಮಾದಗಳು, ಇಲ್ಲಿ ಒಂದೊಂದು ಶ್ಲೋಕದಲ್ಲಿ ಒಂದೊಂದು ಹೊಸ ರೀತಿಯಿಂದ ಅಮರ ಅಭಿವ್ಯಕ್ತಿಯನ್ನು ಪಡೆದಿವೆ. ಇಲ್ಲಿಯ ಶೃಂಗಾರ ಗಾಥಾಸಪ್ತಶತಿಯ ಹಳ್ಳಿಯ ಜನರನ್ನು ಕುರಿತದ್ದಲ್ಲ, ಭರ್ತೃಹರಿಯ ಸಾಧಾರಣ ಜನತೆಯದೂ ಅಲ್ಲ; ನಗರದ ಅಂತಃಪುರಗಳಲ್ಲೂ ವಿಲಾಸ ಭವನಗಳಲ್ಲೂ ರಸಿಕತೆಯನ್ನೊಂದು ಕಲೆಯಾಗಿ ಬೆಳೆಸಿದ್ದ ' ನಾಗರಿಕ 'ರದು, ವಿದಗ್ಧವನಿತೆಯರ ಗೋಷ್ಠಿಯಲ್ಲಿ ಅವರು ಪ್ರದರ್ಶಿಸುತ್ತಿದ್ದ ನಯ, ವಿನಯ, ಚಾತುರ್ಯಗಳು ಇಲ್ಲಿಯ ಪ್ರತಿಪಾದ್ಯ ವಿಷಯ. ಕಾಮತಂತ್ರ ನಿಪುಣರಾದ ನಾಯಕರು ಮುಗ್ಧೆಯರನ್ನೂ ಪ್ರೌಢೆಯರನ್ನೂ ಒಲಿಸಿಕೊಳ್ಳುವ ವಿಧಾನ ವೈಚಿತ್ರ್ಯಗಳೇ

ಈ ಶತಕದವಸ್ತು. ಇದನ್ನೇ ಸೂಚಿಸುತ್ತದೆ, ಅಮರು ಶತಕದ ಬಗೆಗೆ ಪ್ರಚಲಿತ ವಿರುವ ವದಂತಿಯೊಂದು. ಮಂಡನಮಿಶ್ರರೊಡನೆ ವಾದಮಾಡಿ ಗೆದ್ದ ಶಂಕರಾ ಚಾರ್ಯರಿಗೆ ಮಂಡನಮಿಶ್ರರ ಪತ್ನಿಯೂದ ಸರಸ್ವತಿ ಬಂದು ಪತಿಯ ಅರ್ಧಾಂಗಿ ಯಾದ ತನ್ನನ್ನೂ ಗೆದ್ದಲ್ಲದೆ ವಿಜಯ ಮುಗಿಯದೆಂದು ಸಾರಿ, ತಾನೂ ವಾದಕ್ಕೆ ಕುಳಿತು ಕಾಮಶಾಸ್ತ್ರರಹಸ್ಯಗಳನ್ನು ಕುರಿತು ಪ್ರಶ್ನೆಮಾಡಿದಳಂತೆ. ಗೃಹಸ್ಥಾಶ್ರಮವನ್ನೇ ಕಾಣದ ಆಚಾರ್ಯರು ಒಂದು ವರ್ಷದ ಅವಧಿ ಯನ್ನು ಅವಳಿಂದ ಕೇಳಿಕೊಂಡು, ಆಗ ತಾನೆ ಗತಜೀವನಾಗಿದ್ದ ಅಮರುಕ ನೆಂಬ ಕಾಶ್ಮೀರ ರಾಜನ ದೇಹದಲ್ಲಿ ಪರಕಾಯ ಪ್ರವೇಶಮಾಡಿ, ಅವನ ಅಂತಃಪುರದಲ್ಲಿ ಪಡೆದ ಅನುಭವದಿಂದ ಸರಸ್ವತಿಯ ಸಮಸ್ಯೆಗೆ ಉತ್ತರವಾಗಿ ಈ ಶತಕವನ್ನು ಬರೆದರಂತೆ ಇದನ್ನು ಕೇಳಿದೊಡನೆ ಸರಸ್ವತಿಯು 'ನೀನು ಸಂನ್ಯಾಸಧರ್ಮಭ್ರಷ್ಟ'ನಾದ್ದರಿಂದ ವಾದಾನರ್ಹನೆನಲು, ಶಂಕರಾಚಾ ರ್ಯರು ಪ್ರತಿಯೊಂದು ಪದ್ಯಕ್ಕೂ ವೈರಾಗ್ಯಪರವಾದ ಅರ್ಥಹೇಳಿ ಅವಳನ್ನೂ ಸೋಲಿಸಿದರಂತೆ. ಕಥೆಯನ್ನು ಕೈಬಿಟ್ಟರೂ, ಆನಂದವರ್ಧ ನಾದಿಗಳೇ ಅಮರುಕಕವಿಯನ್ನು ಮುಕ್ತಕಂಠದಿಂದ ಹೊಗಳಿರುವುದು ಸತ್ಯ ಅಮರುಕನ ಒಂದು ಶ್ಲೋಕ ನೂರು ಪ್ರಬಂಧಗಳಿಗೆ ಸಮವೆಂದಿದ್ದಾರೆ (ಅಮರುಕಕವೇರೇಕಃ ಶ್ಲೋಕಃ ಪ್ರಬಂಧಶತಾಯತೇ). ಅಮರುಕನ ಕಾಲ ಕ್ರಿ.ಶ. ೭ ನೆಯ ಶತಮಾನವಿರಬಹುದು. ಕಾವ್ಯವನ್ನು 'ಅಮೃತ' ಕಾವ್ಯ ವೆಂದಿದ್ದಾರೆ.

ಇದು ಮುಗ್ಧೆಯೊಬ್ಬಳ ಸಜೀವ ಶಬ್ದಚಿತ್ರ —

**ಮುಗ್ಧೇ ಮುಗ್ಧತಯೈವ ನೇತುಮಖಿಲಃ ಕಾಲಃ ಕಿಮಾರಭ್ಯತೇ**
**ಮಾನಂ ಧತ್ಸ್ವ ಧೃತಿಂ ಬಧಾನ ಋಜುತಾಂ ದೂರೇ ಕುರು**
**ಪ್ರೇಯಸಿ ।**
**ಸಖ್ಯೈವಂ ಪ್ರತಿಬೋಧಿತಾ ಪ್ರತಿವಚಸ್ತಾಮಾಹ ಭೀತಾನನಾ**
**ನೀಚೈಃಶಂಸ ಹೃದಿ ಸ್ಥಿತೋ ಹಿ ನನು ಮೇ ಪ್ರಾಣೇಶ್ವರಃ**
**ಶ್ರೋಷ್ಯತಿ ॥**
**ಕೆಳದೀ ನೂಂಕುವೆಯೇನಣಂ ಸಮಯಮಂ ನೀನಿಂತು**
**ಮುಗ್ಧತ್ವದೊಳ್**

ತಳೆಯಾ ಮಾನಮನಪ್ಪುಕಯ್ ಧೃತಿಯುಮಂ
ಮುಗ್ಧತ್ವಮಂ ಬಿಟ್ಟರಾ ।
ಪತಿಯೊಳ್ ಮೇಣೆನೆ ದೂತಿ ಮಾರ್ನುಡಿದಳಾ ಭೀತಾಸ್ಯೆಯಿಂತೀ
ತೆರಂ-
« ನುಡಿ ನೀಂ ಮೆಲ್ಲನೆಯೆನ್ನ ಹೃದ್ಗತನಿವಂ ಪ್ರಾಣೇಶ್ವರಂ
ಕೇಳ್ದಪಂ ॥[10]

ಇವಳು ಈರ್ಷ್ಯಾಕಷಾಯಿತೆ —

ಸಾ ಪತ್ಯುಃ ಪ್ರಥಮಾಪರಾಧಸಮಯೇ ಸಖ್ಯೋಪದೇಶಂ ವಿನಾ
ನೋ ಜಾನಾತಿ ಸವಿಭ್ರಮಾಂಗವಲನಾವಕ್ರೋಕ್ತಿ ಸಂಸೂ-
ಚನಮ್ ।
ಸ್ವಚ್ಛೈರಚ್ಛಕಪೋಲಮೂಲಗಲಿತೈಃ ಪರ್ಯಸ್ತನೇತ್ರೋತ್ಪಲಾ
ಬಾಲಾ ಕೇವಲಮೇವ ರೋದಿತಿ ಲುಠಲ್ಲೋಲೋದಕೈರ-
ಶ್ರುಭಿಃ ॥

ಕಾಂತನೆ ತಪ್ಪುಗೈಯೆ ಮೊದಲೊಳ್ ಸಖಿ ಪೇಳ್ವಿನಮಾರ್ತಳಿಲ್ಲತಾ-
ನಾರಯಲಂಗಚಾಲನಗಳಿಂ ಕಪಟೋಕ್ತಿಯ ಸೂಚನಂಗಳಂ ।
ಕಣ್ಗಳಿನೆಂತುಮುಳ್ಕಿ ಜಲಮಾಕೆಯ ಶುಭ್ರಕಪೋಲಮೂಲ-
ದೊಳ್
ರೋದಿಪಳಲ್ತೆ ಬಾಲೆ ವಿಕಚೋತ್ಪಲನೇತ್ರೆಯಧೀರೆಯಾ-
ವಗಂ ॥[11]

ಗಂಡ ಪ್ರವಾಸ ಹೊರಟೊಡನೆ ವಿರಹಿಣಿಯ ಸ್ಥಿತಿಯ ವರ್ಣನೆ —

ಪ್ರಸ್ಥಾನಂ ವಲಯೈಃ ಕೃತಂ ಪ್ರಿಯಸಖೈರಸ್ರೈರಜಸ್ರಂ ಗತಂ
ಧೃತ್ಯಾ ನ ಕ್ಷಣಮಾಸಿತಂ ವ್ಯವಸಿತಂ ಚಿತ್ತೇನ ಗಂತುಂ ಪುರಃ ।
ಯಾತುಂ ನಿಶ್ಚಿತಚೇತಸಿ ಪ್ರಿಯತಮೇ ಸರ್ವೇ ಸಮಂ ಪ್ರಸ್ಥಿತಾಃ
ಗಂತವ್ಯೇ ಸತಿ ಜೀವಿತ ಪ್ರಿಯಸುಹೃತ್ಸಾರ್ಥಃ ಕಿಮು
ತ್ಯಜ್ಯತೇ ॥

10. ಕನ್ನಡ ಕಾವ್ಯಪ್ರಕಾಶ, ನಾಲ್ಕನೆಯ ಉಲ್ಲಾಸ.

11. ಕನ್ನಡ ಕಾವ್ಯಪ್ರಕಾಶ, ನಾಲ್ಕನೆಯ ಉಲ್ಲಾಸ.

ಬಳೆಗಳ್ ಪೋದುವು ನೆಚ್ಚಿನಾ ಸಖರೆನಲ್ ಕಣ್ಣೀರ್ಗ-
ಳೋಡಲ್ಕೆ ಮೋಕ್
ಚಣಮುಂ ನಿಲ್ಲದು ಧೈರ್ಯಮಂತೆ ಮನಮುಂ ಮುಂದಾದುದಿಂ।
ತಕ್ಕಟಾ
ಪ್ರಿಯನೀಗಳ್ ಪೊರಮಟ್ಟಿರಲ್ ಜತೆಗೆ ತಾಮೆಲ್ಲರ್ ಪ್ರಯಾ-
ಣೋನ್ಮುಖರ್
ಮಿಗೆ ನೀಂ ಪ್ರಾಣನೆ ಪೋಗದಿಂತುಳಿವರೇ ಸ್ವಾಪ್ತೇಷ್ಟರಂ
ಬಿಟ್ಟಿಹಾ ||[12]

ಅನೇಕ ಸಂಚಾರಿಭಾವಗಳ ಸುಂದರ ಸಮ್ಮಿಶ್ರಣದ ವರ್ಣನೆಯಿದು.—

ದೂರಾದುತ್ಸುಕಮಾಗತೇ ವಿವಲಿತಂ ಸಂಭಾಷಿಣಿ ಸ್ಫಾರಿತಂ
ಸಂಶ್ಲಿಷ್ಯತ್ಯರುಣಂ ಗೃಹೀತವಸನೇ ಕಿಂಚಾಂಚಿತಭ್ರೂಲತಂ।
ಮಾನಿನ್ಯಾಶ್ಚರಣಾನತಿವ್ಯತಿಕರೇ ಬಾಷ್ಪಾಂಬುಪೂರ್ಣೇಕ್ಷಣಂ
ಚಕ್ಷುರ್ಜಾತಮಹೋ ಪ್ರಪಂಚಚತುರಂ ಜಾತಾಗಸಿ ಪ್ರೇಯಸಿ||
ದೂರವಿರೆ ಕಾತರಿಸಿ ಕೆಲಕೆ ಬರೆ ಬಾಗುತ್ತ ನುಡಿಯಿಸಲು
ಹೊಳೆಯುತ್ತಲು,
ಅಪ್ಪುವೆಡೆ ಕೆಂಪಾಗಿ ಸೀರೆಯನು ಪಿಡಿದೊಡನೆ ಭ್ರೂಲತೆಯ
ನಿಳಿಸುತ್ತಲು;
ಮಾನಿನಿಯ ಕಾಲ್ಗೆರಗೆ ಬಾಷ್ಪಾಂಬುವಿಂ ತುಂಬಿ ಕುಡಿನೋಟ-
ವಿನಿದಾದುದು,
ತಪ್ಪುಗೈದಿರೆ ಪ್ರಿಯನು ಮುತ್ತರಳಿತದೆ ಕಣ್ಣು ಪೇಳಲೇ-
ನಚ್ಚರಿಯನು[13]

ಇವಳು ವಿರಹೋತ್ಕಂಠಿತೆ:—

ಅನ್ಯತ್ರ ವ್ರಜತೀತಿ ಕಾ ಖಲು ಕಥಾ ನಾಪ್ಯಸ್ಯ ತಾದೃಕ್
ಸುಹೃತ್
ಯೋ ಮಾಂ ನೇಚ್ಛತಿ ನಾಗತಶ್ಚ ಹಹಹಾ ಕೋಽಯಂ
ವಿಧೇಃ ಪ್ರಕ್ರಮಃ।

12 ಕನ್ನಡ ಕಾವ್ಯಪ್ರಕಾಶ, ನಾಲ್ಕನೆಯ ಉಲ್ಲಾಸ.

13. ಕನ್ನಡ ಕಾವ್ಯಪ್ರಕಾಶ, ನಾಲ್ಕನೆಯ ಉಲ್ಲಾಸ.

ಇತ್ಯಲ್ಪೇತರಕಲ್ಪನಾಕಬಲಿತಸ್ವಾಂತಾ ನಿಶಾಂತಾಂತರೇ
ಬಾಲಾ ವೃತ್ತವಿವರ್ತನವ್ಯತಿಕರಾ ನಾಪ್ನೋತಿ ನಿದ್ರಾಂ ನಿಶಿ ||
ಬೇರೆಡೆ ಪೋಪುದೆಲ್ಲಿ, ಕೆಳೆಯುಂ ಪೆರತೊರ್ವನದಾರುಮಿಲ್ಲ ಮೇ-
ಣಾಗದವಂ ಸಮಂತೆನಗೆ, ಬಾರನಿದೇನಿದು ಭಾಗ್ಯದಾಟಮೋ |
ಈ ಪರಿ ನೂರು ಕಲ್ಪನೆಗಳೊಳ್ ಬಗೆಯುಳ್ಳಿರೆ ಬಾಲೆ ಮಾಡದೊಳ್
ಜಾನಿಸುತಾವಗಂ ನಡೆದುದಂ ತವೆ ನಿದ್ರಿಸಲಾಕೆ ರಾತ್ರಿಯೊಳ್ ||[14]

ಇದು ಒಂದು ಸುಂದರ ಸರಸ-ಸಲ್ಲಾಪ —

ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ
ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ ಸರ್ವೇಽಪರಾಧಾ ಮಯಿ |
ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ
ನನ್ವೇತನ್ಮಮ ಕಾ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ||

[ "' ಬಾಲೆ ! ' ' ನಾಥ ! ' ' ಮಾನಿನಿ, ನಿನ್ನ ಕ್ರೋಧವನ್ನು ಬಿಡು ' ' ಕ್ರೋಧಗೊಂಡು ನಾನು ಮಾಡಿರುವುದಾದರೂ ಏನು ? ' ' ಏನೆ? ನನ್ನ ಹೃದಯದಲ್ಲಿ ಬರಿಸಿರುವ ಖೇದ.' ' ಓ, ಹಾಗೇಕೆ? ನಿನ್ನ ತಪ್ಪು ಏನೂ ಇಲ್ಲ, ಎಲ್ಲಾ ತಪ್ಪೂ ನನ್ನದೇ.' ' ಹಾಗಾದರೆ ಹೀಗೇಕೆ ಬಿಕ್ಕಿ ಬಿಕ್ಕಿ ಅಳುವೆ ?' ' ನಾನು ಯಾರ ಮುಂದೆ ಅತ್ತಿದ್ದೇನೆ? ' ' ಇದೋ, ನನ್ನ ಮುಂದೆ ' ' ನಿನಗೆ ನಾನು ಯಾರು ? ' ' ಪ್ರಿಯತಮೆ.' ' ಅಲ್ಲವಲ್ಲಾ ಎಂದೇ ಅಳುತ್ತಿದ್ದೇನೆ.' " ]

ಹೀಗೆಯೇ ಉದಾಹರಿಸುತ್ತಾ ಹೊರಟರೆ ಅಮರುಕನ ನೂರು ಶ್ಲೋಕಗಳನ್ನೂ ಬರೆದೇ ಮುಗಿಸಬೇಕಾಗುವುದು. ಸ್ಥಳಾಭಾವದಿಂದ ನಿಲ್ಲಿಸಬೇಕಾಗಿದೆ. ' ರಸಿಕಸಂಜೀವಿನೀ ' ಟೀಕೆಯಲ್ಲಿ ಹೇಳಿರುವಂತೆ ಅಮರುಕನ

14. ಕನ್ನಡ ಕಾವ್ಯಪ್ರಕಾಶ, ನಾಲ್ಕನೆಯ ಉಲ್ಲಾಸ.

ಡಮರುಗನಾದವನ್ನಾಕರ್ಣಿಸಿದ ಕಿವಿಗೆ ಇನ್ನಾವ ಶೃಂಗಾರಭಣಿತಿಯೂ ಸೇರಲಾರದು.[15] ಅಮರುಶತಕದ ವ್ಯಂಗ್ಯವೈಭವ ಅನ್ಯವಿಲಕ್ಷಣ.

**ಬಿಲ್ಹಣನ–ಚೋರಪಂಚಾಶಿಕಾ :**—'ಪಂಚಾಶಿಕಾ' ಎಂದರೆ ಐವತ್ತು. ಈ ಅರ್ಧ ಶತಕವನ್ನು ಮಹಾಕವಿಯಾದ ಬಿಲ್ಹಣನೇ ಬರೆದಿರಬಹುದೆಂದು ಊಹಿಸುತ್ತಾರೆ. ಆತನು ರಾಜಕುಮಾರಿಯೊಬ್ಬಳನ್ನು ಗೋಪ್ಯವಾಗಿ ಭೋಗಿಸಿ ಮರಣದಂಡನೆಗೆ ಪಾತ್ರನಾದನೆಂದೂ, ವಧ್ಯಸ್ಥಳಕ್ಕೆ ಹೋಗುವಾಗಲೂ ಬಾಹ್ಯಪರಿಜ್ಞಾನವಿಲ್ಲದೆ ತನ್ನ ಪ್ರಣಯದ ಸ್ಮೃತಿಯನ್ನೇ ಪದ್ಯರೂಪವಾಗಿ ಹಾಡುತ್ತಾ ಹೋದನೆಂದೂ, ರಾಜನು ಕಡೆಗೆ ಕ್ಷಮಾದಾನ ಮಾಡಿದನೆಂದೂ ಕಥೆ ಹೇಳುತ್ತಾರೆ. ಚೋರನೆಂಬುದೇ ಕವಿಯ ಹೆಸರೆನ್ನುವವರೂ ಉಂಟು. ಹೇಗೇ ಇದ್ದರೂ ಈ ೫೦ ಪದ್ಯಗಳೂ ಮೇಘದೂತದಂತೆ ಒಂದೇ ವೃತ್ತದಲ್ಲಿವೆ. ಮಂದಾಕ್ರಾಂತಾವೃತ್ತದ ಬದಲು "ವಸಂತತಿಲಕಾ" ವೃತ್ತ, ಗಾನಯೋಗ್ಯವಾಗಿದೆ, ಪ್ರೇಯಸಿಯ ಸುರತಸ್ಮರಣೆಯನ್ನು ಕೇಂದ್ರೀಕರಿಸಿವೆ, ಭಾಷೆ ಸರಲವೂ ಹೃದಯಸ್ಪರ್ಶಿಯೂ ಆಗಿದೆ. ಶೈಲಿ ಸರಸಮಧುರ. ಆದರೆ ಅಮರುಶತಕದಂತೆ ಇಲ್ಲಿ ಸುಕುಮಾರ ಮನೋಭಾವಗಳ ಸೂಕ್ಷ್ಮ ವಿಶ್ಲೇಷಣವಿಲ್ಲ, ವ್ಯಂಜನಾವಿಶೇಷವೂ ಇಲ್ಲ! ಒಮ್ಮೊಮ್ಮೆ ಶೃಂಗಾರದ ವರ್ಣನೆ ಉಚ್ಛೃಂಖಲವಾಗುವುದೂ ಉಂಟು. ಪ್ರತಿಯೊಂದು ಪದ್ಯವೂ "ಅದ್ಯಾಪಿ ತಾಂ" ಎಂದಾರಂಭವಾಗಿ 'ಸ್ಮರಾಮಿ' ಎಂದು ಪ್ರಾಯಕವಾಗಿ ಮುಗಿಯುವುದು ಈ ಅರ್ಧಶತಕದ ವೈಶಿಷ್ಟ್ಯ. ಒಂದು ಉದಾಹರಣೆ—

> **ಅದ್ಯಾಪಿ ತನ್ಮನಸಿ ಸಂಪರಿವರ್ತತೇ ಮೇ**
> **ರಾತ್ರೌ ಮಯಿ ಕ್ಷುತವತಿ ಕ್ಷಿತಿಪಾಲಪುತ್ರ್ಯಾ ।**
> **ಜೀವೇತಿ ಮಂಗಲವಚಃ ಪರಿಹೃತ್ಯ ಕೋಪಾತ್**
> **ಕರ್ಣೇ ಕೃತಂ ಕಮಲಪತ್ರಮನಾಲಪನ್ತ್ಯಾ ॥**

[ಇನ್ನೂ ಅದು ನನ್ನ ಮನಸ್ಸಿನಲ್ಲಿ ಗಟ್ಟಿಯಾಗಿ ಮೂಡಿದೆ—ಅಂದು ರಾತ್ರಿ ನಾನು ಸೀನಿದಾಗ ರಾಜಕುಮಾರಿಯು 'ದೀರ್ಘಾಯುವಾಗು' ಎಂದು ಹರಸುವ ಬದಲು ಮಾತನಾಡದೆಯೇ ಕೋಪದಿಂದ ಕಮಲದೆಸಳನ್ನು ಕಿವಿಗೊಯ್ದಳು!]

---

15. ಅಮರುಕಕವಿತ್ವಡಮರುಕನಾದೇನ ವಿನಿಹ್ನುತಾ ನ ಸಂಚರತಿ ।
ಶೃಂಗಾರಭಣಿತಿರನ್ಯಾ ಧನ್ಯಾನಾಂ ಶ್ರವಣಯುಗಲೇಷು ॥

ಇಲ್ಲಿ ಕಾಮಾಂಧನ ಉನ್ಮಾದ ಪರ್ಯಾಯವಾಗಿ ಬಂದಿದೆ

## ಗೋವರ್ಧನನ 'ಆರ್ಯಾಸಪ್ತಶತೀ' —

ಗೋವರ್ಧನನು ಬಂಗಾಳದ ರಾಜ ಲಕ್ಷ್ಮಣಸೇನ (ಕ್ರಿ.ಶ. ೧೧೧೬) ನ ಆಶ್ರಯದಲ್ಲಿದ್ದ ಕವಿ. ಈತನು ಹಾಲನ ಗಾಥಾಸಪ್ತಶತಿಯನ್ನು ಸಂಸ್ಕೃತಕ್ಕೆ ತಂದನು. ಅನುವಾದಕ್ಕೆ ಇವನು 'ಆರ್ಯಾ' ಛಂದಸ್ಸನ್ನು ಆರಿಸಿಕೊಂಡು ದರಿಂದ ತನ್ನ ಗ್ರಂಥಕ್ಕೆ 'ಆರ್ಯಾಸಪ್ತಶತೀ' ಎಂದಿದ್ದಾನೆ. ಈತನ ಕೈಯಲ್ಲಿ ಆರ್ಯಾವೃತ್ತವು ಹಿಂದೆಂದೂ ಇರದಿದ್ದ ವಿಲಾಸ, ವಿಕಾಸಗಳನ್ನು ಪಡೆಯಿತು. ಇದು ಕೇವಲ ಅನುವಾದವಲ್ಲ, ಕವಿಯು ಅಲಂಕಾರಾದಿ ಯೋಜನೆಯೂ ಬೇಕಾದಂತೆ ಬಂದಿದೆ. ಆರ್ಯೆಗಳನ್ನು ಅಕಾರಾದಿ ಕ್ರಮ ದಿಂದ ಹೊಸದಾಗಿ ವಿಭಾಗಿಸಿದ್ದಾನೆ. ಇವನ ಸಮಕಾಲೀನನೂ ಸ್ವಯಂ ಉತ್ತಮದರ್ಜೆಯ ಶೃಂಗಾರ ಕವಿಯೂ ಆದ ಜಯದೇವನು ಈತನನ್ನು ಅದ್ವಿತೀಯನೆಂದು ಹೊಗಳಿದ್ದಾನೆ– 'ಶೃಂಗಾರೋತ್ತರ ಸತ್ಪ್ರಮೇಯರಚನೈ ರಾಚಾರ್ಯ ಗೋವರ್ಧನಸ್ಪರ್ಧೀ ಕೋಽಪಿ ನ ವಿಶ್ರುತಃ'. ಪ್ರಾಕೃತದ ಸರಸ ಸೂಕ್ತಿಗಳನ್ನು ಸಂಸ್ಕೃತದಲ್ಲಿ ತರ್ಜುಮೆ ಮಾಡುವುದೆಂದರೆ ಭೂಮಿಯ ಮೇಲೆ ಹರಿಯುವ ಯಮುನೆಯನ್ನು ಗಗನತಲಕ್ಕೆ ಒಯ್ಯುವಂತೆಯೇ ಎಂದು ಗೋವರ್ಧನನೇ ಹೇಳಿದ್ದಾನೆ.[16] ಒಂದರ ಸಹಜಸೌಕುಮಾರ್ಯಕ್ಕೂ ಇನ್ನೊಂದರ ಒಲವಂತ ಪರಿಷ್ಕಾರಕ್ಕೂ ಭೂವ್ಯಾಕಾಶಗಳ ಅಂತರವೇ ಇದೆ. ಗೋವರ್ಧನನ ಆರ್ಯೆಗಳು ವಾಸ್ತವವಾಗಿಯೂ ಅವನೆನ್ನುವಂತೆ 'ಮಸೃಣ ಪದರೀತಿಗತಿ'ಗಳೂ, 'ಸಜ್ಜನಹೃದಯಾಭಿಸಾರಿಕೆ'ಗಳೂ 'ಮದನರಹಸ್ಯೋಪನಿಷತ್ತು'ಗಳೂ ಆಗಿವೆಯೆನ್ನಬಹುದು. ಎರಡು ಉದಾಹರಣೆಗಳನ್ನು ನೋಡಿ:—

**ಸಾ ಸರ್ವಥೈವ ರಕ್ತಾ ರಾಗಂ ಗುಂಜೇವ ನ ತು ಮುಖೇ ವಹತಿ।**
**ವಚನಪಟೋಸ್ತವ ರಾಗಃ ಕೇವಲಮಾಸ್ಯೇ ಶುಕಸ್ಯೇವ॥ (703)**

---

16. ವಾಣೀ ಪ್ರಾಕೃತಸಮುಚಿತ
ರಸಾ ಬಲೇನೈವ ಸಂಸ್ಕೃತಂ ನೀತಾ।
ನಿಮ್ನಾನುರೂಪನೀರಾ
ಕಲಿಂದಕನ್ಯೇವ ಗಗನತಲಮ್ ॥ ೫೨

'ಗುಲಗಂಜಿಯಲ್ಲಿ ಮುಖವೊಂದನ್ನು ಬಿಟ್ಟು ಉಳಿದೆಡೆಯೆಲ್ಲ ಹೇ
ಪೂರ್ಣವಾಗಿ ಕೆಂಪಿನ ಮಯವೋ ಹಾಗೆಯೇ ಅವಳ ಅನುರಾಗ ಮುಖದ
ಸೂಸದಿದ್ದರೂ ಮೈಯನ್ನೆಲ್ಲಾ ಆವರಿಸಿಕೊಂಡಿದೆ, ಆದರೆ ಮಾತುಗಾರನಾ
ನಿನ್ನ ರಾಗ ಮಾತ್ರ ಗಿಳಿಯ ಕೊಕ್ಕಿನಂತೆ ಕೇವಲ ಬಾಯಲ್ಲಿ ಮಾತ್ರ
ವಿಶ್ರಾಂತವಾಗಿದೆ!'

ಈ ಹೋಲಿಕೆಗಳು ಎಷ್ಟು ಸ್ವಭಾವ ರಮಣೀಯವಾಗಿವೆ!

**ಅನ್ಯಮುಖೇ ದುರ್ವಾದೋ ಯಃ ಪ್ರಿಯಮುಖೇ ಸ ಏವ**
**ಹಿ ಪರಿಹಾಸಃ**
**ಇತರೇಂಧನಜನ್ಮಾ ಯೋ ಧೂಮಃ ಸೋऽಗುರುಸಮು-**
**ದ್ಭೂತೋ ಧೂಪಃ** ॥ (67

'ಯಾವುದು ಕಂಡವರ ಬಾಯಲ್ಲಿ ಬಂದರೆ ಕೆಟ್ಟ ಮಾತೋ ಅದೇ
ಪ್ರಿಯನ ಬಾಯಲ್ಲಿ ಬಂದಾಗ ಪರಿಹಾಸ. ಬೇರೆ ಸೌದೆಗಳಿಂದ ಬರುವುದ
ಧೂಮವಾದರೆ ಗಂಧದ ಚಕ್ಕೆಯಿಂದ ಹುಟ್ಟಿದ್ದು ಧೂಪವಾಗುತ್ತದೆ.' ಇಲ್ಲಿಯ
ದೃಷ್ಟಾಂತವೂ ಅಷ್ಟೇ ಪರಿಣಾಮಕಾರಿಯಾಗಿದೆ.

**ಜಯದೇವನ ಗೀತಗೋವಿಂದ:**—ಜಯದೇವನು ಸಂಸ್ಕೃತ
ಗೀತಕಾವ್ಯದಲ್ಲಿ ಹೊಸ ಸಂಪ್ರದಾಯದ ಪ್ರವರ್ತಕ. ಅವನೂ ಗೋವರ್ಧನ
ಸಮಕಾಲೀನನೇ. ಆತನ ಕೃತಿರತ್ನ–ಗೀತಗೋವಿಂದ. ಇದನ್ನು ಗ್ರಾಮ್ಯ
ರೂಪಕ, (pastoral drama), ಗೀತ–ನಾಟಕ (lyric drama)
ಪರಿಷ್ಕೃತಯಾತ್ರಾಪ್ರಬಂಧ, ಸಂಗೀತ–ರೂಪಕ (melodrama), ಸಂಗೀತ
ನಾಟಕ (opera), ಮುಂತಾದ ನಾನಾ ಕಾವ್ಯಜಾತಿಗಳಲ್ಲಿ ಸೇರಿಸುವ ಪ್ರಯ
ತ್ನಗಳು ಪಾಶ್ಚಾತ್ಯರಿಂದ ನಡೆದಿವೆ. ಆದರೆ ಜಯದೇವನು ಇದನ್ನು 'ಕಾವ್ಯ
ವೆಂದು ಕರೆದು 'ಸರ್ಗ'ಗಳನ್ನು ಬರೆದಿದ್ದಾನೆ. ನಾಟಕದಂತೆ ಪ್ರಸ್ತಾವ
ಅಂಕಾದಿಗಳು ಬಂದಿಲ್ಲ. ಕೆಲವರು ಇದಕ್ಕೆ ಶೃಂಗಾರ ಮಹಾಕಾವ್ಯವೆಂ
ಹೆಸರನ್ನೂ ಕೊಟ್ಟಿದ್ದಾರೆ. ವಸ್ತುತಃ ಇದು ಸರ್ವಾಂಗೀಣನಾಟಕವಲ್ಲದಿದ್ದರ
ಸಂಗೀತ, ಅಭಿನಯಾದಿಗಳಿಗಲ್ಲಿ ವಿಶಿಷ್ಟಪ್ರಧಾನ್ಯವಿರುವುದರಿಂದ ಗೀತನೇ ಶ
ಮಾನದಲ್ಲಿ ಬಂದ 'ಕೃಷ್ಣಲೀಲಾತರಂಗಿಣಿ' ಮುಂತಾದ ಸಮಗ್ರ ಸಂಗೀ

ನಾಟಕಗಳಿಗೆ ಇದೇ ಪೂರ್ವರೂಪವೆಂದು ಭಾವಿಸಬಹುದು.[17] ಗೀತಗೋವಿಂದ ದಲ್ಲಿ "ಅಷ್ಟಪದಿ" ಅಥವಾ ಎಂಟು ಪದಗಳುಳ್ಳ ಹಾಡುಗಳಿವೆಯಲ್ಲದೆ ಅವು ಗಳಿಗೆ ಹೊಂದುವ ರಾಗ, ತಾಲಗಳ ಹೆಸರೂ ಸೂಚಿತವಾಗಿದೆ. ಆದ್ದರಿಂದ ಬಂಗಾಲದಲ್ಲಿ ಪ್ರಚಲಿತವಿದ್ದ ಯಾತ್ರಾಮಹೋತ್ಸವಗಳನ್ನು ದೃಷ್ಟಿಯಲ್ಲಿಟ್ಟೇ ಜಯದೇವನು ಇದನ್ನು ರಚಿಸಿರಬಹುದು.

ಗೀತಗೋವಿಂದದಲ್ಲಿ ಪರಂಪರಾಪ್ರಾಪ್ತವಾದ ಸಂಪ್ರದಾಯದ ಅನುಕರಣೆಯಾಗಲಿ ಅನುಸರಣೆಯಾಗಲಿ ಇಲ್ಲ. ಶ್ಲೋಕ, ಗದ್ಯ, ಗೀತ, ಎಲ್ಲವೂ ಕೂಡಿ ಒಂದು ಅಪೂರ್ವವಾದ ರಚನಾಮಾಧುರ್ಯವನ್ನು ತರುತ್ತವೆ. ಶ್ಲೋಕಗಳು ವರ್ಣನಾ ಪ್ರಸಂಗಗಳಲ್ಲಿ ಮಾತ್ರ ಬರುತ್ತವೆ. ಒಂದು ಅವಸ್ಥಾ ವಿಶೇಷವನ್ನೋ, ಒಂದು ಪ್ರಕೃತಿ ಚಿತ್ರವನ್ನೋ, ಒಂದು ಕಥಾಂಶವನ್ನೋ ಪ್ರತಿಪಾದಿಸುವಾಗ ಮಾತ್ರ ಶ್ಲೋಕಗಳು ಉಪಯುಕ್ತವಾಗಿವೆ. ಪಾತ್ರಗಳ ಮನೋಭಾವವನ್ನು ಸೂಚಿಸುವ ಸಂವಾದಗಳಲ್ಲಿ ಮಾತ್ರ ಗದ್ಯವು ಅಲ್ಲಲ್ಲಿ ಬರುತ್ತದೆ. ಭಾವಾನುಭೂತಿಯ ಅಭಿವ್ಯಂಜನೆಗೆ ಗೀತಗಳ ಪ್ರಯೋಗವಿದೆ. ಹೀಗೆ ಗೀತಗೋವಿಂದದ ರಚನೆ ಅಭಿನವವಾದುದು. ಅದರಲ್ಲಿ ವರ್ಣನೆ, ಸಂವಾದ, ಗೀತ, ಮೂರು ಎಳೆಗಳೂ ಸೇರಿ ಒಂದು ದಾರವಾಗಿದೆ.

ಯಮುನಾ ತೀರದಲ್ಲಿ ವಿಹರಿಸುತ್ತಿರುವ ರಾಧಾಮಾಧವರ ಕೇಳಿಗಳೇ 'ಗೀತಗೋವಿಂದ'ದ ವರ್ಣನಾವಿಷಯಗಳು. ಪ್ರಣಯದ ವಿವಿಧ ಅವಸ್ಥೆಗಳಾದ ಆಶೆ, ನಿರಾಶೆ, ಉತ್ಕಂಠೆ, ಹುಸಿಮುನಿಸು, ಈರ್ಷ್ಯೆ, ಕೋಪಪ್ರಸಾದನ, ಅನುನಯ, ಮಿಲನ—ಎಲ್ಲವನ್ನೂ ಜಯದೇವನು ರಾಧಾ-ಕೃಷ್ಣರ ವೃತ್ತಾಂತದ ಮೂಲಕ ಮಧುರಮನೋಹರವಾಗಿ ಚಿತ್ರಿಸಿದ್ದಾನೆ. ಇಲ್ಲಿ ಬರುವ ಪಾತ್ರಗಳು ಮೂರೇ–ರಾಧೆ, ಕೃಷ್ಣ ಮತ್ತು ಸಖಿ. ವೃಂದಾವನದ ಸುಂದರ ಸನ್ನಿವೇಶವೂ, ಮಂದಮಾರುತ, ಪೂರ್ಣಚಂದ್ರ, ಯಮುನಾತೀರಾದಿ ಉದ್ದೀಪಕ ಸಾಮಗ್ರಿಗಳೂ ಗೋಪೀಜನ ವಲ್ಲಭನ ರಾಸಕ್ರೀಡೆಗಳ ಹಿನ್ನೆಲೆಯಾಗಿ ವರ್ಣಿತವಾಗಿವೆ. ಈ ಪ್ರಕೃತಿ ವರ್ಣನೆಯಲ್ಲಿಯೂ ಕವಿ ಐಂದ್ರಿಯಿಕ ಸೌಂದರ್ಯಾನುಭವದ ಅನುಪಮ ತೀವ್ರತೆಯನ್ನು ತೋರಿಸಿದ್ದಾನೆ. ನವವಿಧ

---

17. P. Sambamoorthy: A History of Indian Opera, Krishnaswami Aiyangar Commemoration Volume p. 422

ಭಕ್ತಿಗಳಲ್ಲಿ ಸತಿ–ಪತಿಗಳ ತಲ್ಲೀನತೆಯ ಉತ್ಕರ್ಷವಾದ ಮಧುರಭಾವವೂ ಒಂದೆಂದು ಪರಿಗಣಿತವಾಗಿರುವುದರಿಂದ ಜಯದೇವನ ಪ್ರಣಯಕಾವ್ಯವನ್ನು ಕೇವಲ ಲೌಕಿಕ ದೃಷ್ಟಿಯಿಂದ ಅಳೆಯುವುದು ಸಂಪ್ರದಾಯವಿರುದ್ಧ. ಸಾಂಕೇತಿಕವಾಗಿ ಕೃಷ್ಣನು ಭಕ್ತಿಗಮ್ಯನಾದ ಪರಮಾತ್ಮನೆಂದೂ ಗೋಪಿಯರು ಪರಮಾತ್ಮನನ್ನರಸುತ್ತಿರುವ ಅಗಣಿತ ಜೀವಾತ್ಮಗಳೆಂದೂ ಹೇಳುವವರೂ ಉಂಟು. ಚೈತನ್ಯ ಸಂಪ್ರದಾಯದವರಿಗೆ ಗೀತಗೋವಿಂದವು ಇಂದಿಗೂ ಪೂಜ್ಯವಾಗಿರುವ ಗ್ರಂಥ.

ಗೀತಗೋವಿಂದದ ಶೈಲಿ ಅನುಪಮ; ಅದರ ಮೋಹಕತ್ವ ಅದ್ಭುತ. ಅದರ ಅಗಾಧ ಶೃಂಗಾರಪ್ರವಾಹದ ಅಂತರಾಳದಲ್ಲಿ ಅಮೇಯವಾದ ಮಧುರ ಭಾವವೂ ಅಡಗಿದೆ. ಸಮಗ್ರ ಸಂಸ್ಕೃತ ಸಾಹಿತ್ಯದಲ್ಲೇ ಈ ಮಟ್ಟದ ಮಧುರ ರಚನೆ ಮತ್ತೊಂದಿಲ್ಲ. ಸಂಸ್ಕೃತ ವಾಣಿಯ ಸೌಂದರ್ಯ ಮಾಧುರ್ಯಗಳ ಪರಾಕಾಷ್ಠೆಯನ್ನು ಗೀತಗೋವಿಂದದಲ್ಲಿ ಅವಲೋಕಿಸಬಹುದು. ಅದರ ಶಬ್ದಚಿತ್ರಗಳಲ್ಲಿ ಚೆಲುವಿನ ಬೆಳಕು ಗೊಂಚಲುಗೊಂಚಲಾಗಿ ಮಿಂಚುತ್ತದೆ. ಅದರ ಅಷ್ಟಪದೀಗೀತೆಗಳಲ್ಲಿ ಅಲೌಕಿಕವಾದ ನಾದಾಮೃತವು ಲಹರಿಲಹರಿಯಾಗಿ ತರಂಗಿಸುತ್ತದೆ. ಅದರ ಛಂದೋಬಂಧಗಳಲ್ಲಿ ಅಪೂರ್ವವಾದ ತಾಳಮೇಳವಿಸುತ್ತದೆ. ಶಬ್ದಾರ್ಥಗಳ ಸಾಮಂಜಸ್ಯವಿಲ್ಲಿ ಸಂಪೂರ್ಣವಾಗಿರುವ ಕಾರಣ ಕೇವಲ ಶ್ರವಣಮಾತ್ರದಿಂದಲೇ ಸಂಸ್ಕೃತ ಭಾಷಾಪರಿಚಯವಿಲ್ಲದ ರಸಿಕನಾದರೂ ಅದರ ಭಾವಗ್ರಹಣ ಮಾಡಬಹುದೆಂದು ತೋರುತ್ತದೆ. ವಿಶ್ವದ ಸಾಹಿತ್ಯದಲ್ಲೇ ವಿಲಾಸಕಲಾಕುತೂಹಲಿಗಳಿಗೆ ಇಂಥ ಮಧುರ-ಕೋಮಲ-ಕಾಂತ ಪದಾವಲಿಗಳು ಮತ್ತೆಲ್ಲೂ ದೊರೆಯಲಾರವು. ದೀರ್ಘ ಸಮಾಸಗಳು ಬಂದರೆ ಅರ್ಥವ್ಯಕ್ತಿ ಕುಂಟುವುದು ರೂಢಿ, ಆದರೆ ಇಲ್ಲಿ ದೀರ್ಘಸಮಾಸದ ಗೌಡೀರೀತಿಯಲ್ಲಿಯೂ ಪ್ರಾಸಾದಿಕತೆಯು ಎಷ್ಟು ಮೇಲ್ತರಗತಿಯಿಂದ ಉಕ್ಕಬಹುದೆಂಬುದಕ್ಕೆ ಅಭೂತಪೂರ್ವ ನಿದರ್ಶನವಿದೆ. ಕೋಮಲವಾದ, ಮೃದುಮಧುರವಾದ, ಮನೋಹರವಾದ, ಅನುಪ್ರಾಸಗಳ ಸಂಯೋಜನೆಯಲ್ಲಂತೂ ಜಯದೇವನು ಅದ್ವಿತೀಯ. ಅಂತ್ಯಪ್ರಾಸದಂತೆ ಒಳಪ್ರಾಸಗಳೂ ಸಾಲು ಸಾಲಿನಲ್ಲಿಯೂ ಇದ್ದೇ ಇರುತ್ತವೆ. ಎಲ್ಲಿಯೂ ಪರಿಷ್ಕಾರಗಳ ಕಾರ್ಕಶ್ಯವಿಲ್ಲ, ಎಲ್ಲಿಯೂ ಕ್ಲಿಷ್ಟಸಮಾಸಗಳ ಆರ್ಭಟವಿಲ್ಲ.

ವೃತ್ತಗಳ ಲಾಲಿತ್ಯದಂತೆ ರಾಗಗಳ ಔಚಿತ್ಯವೂ ರಸಭಾವಗಳ ತತ್ಪರತೆಯಂತೆ ಶಬ್ದಾರ್ಥಗಳ ಸಂಪನ್ನತೆಯೂ ಕೂಡಿರುವುದರಿಂದ, ಸಹೃದಯರ ಹೃದಯವನ್ನು ಕಾವ್ಯ ಸೆರೆಹಿಡಿಯುವುದರಲ್ಲಿ ಸಂಶಯವೇ ಇಲ್ಲ. ಗೀತೆಗಳಲ್ಲಿ ಕೆಲವು ಕಡೆ ಮಂದಮಂಥರ ಗತಿಯಿದ್ದರೆ ಕೆಲವು ಕಡೆಗಳಲ್ಲಿ ವೇಗವಾಹಿನಿಯ ಗಂಭೀರಗಮನವೂ ಇದೆ. ಗೀತಗೋವಿಂದದ ಸವಿಯನ್ನು ಸವಿದವರಿಗೆ ಜೇನು ಬೇಡಾಗುವುದು, ದ್ರಾಕ್ಷೆ ಸಪ್ಪೆಯಾಗುವುದು, ಸಕ್ಕರೆ ಕರ್ಕಶವೆನಿಸುವುದು. ಅಮೃತವೂ ಮೃತಪ್ರಾಯವಾಗುವುದು, ಹಾಲು ನೀರಿಗಿಂತ ಕಡೆಯಾಗುವುದು" ಎಂದು ಜಯದೇವನು ಗ್ರಂಥದ ಕಡೆಯಲ್ಲಿ ಹೇಳಿಕೊಂಡರೆ ರಸಿಕರು ಅಲ್ಲವೆನ್ನುವಂತಿಲ್ಲ.

ಇದು ಒಂದು ಅಷ್ಟಪದಿಯ ಉದಾಹರಣೆ.—

**ಚಂದನ-ಚರ್ಚಿತ-ನೀಲ-ಕಲೇವರ-ಪೀತವಸನ-ವನಮಾಲೀ ।**
**ಕೇಲಿ-ಚಲನ್ಮಣಿ-ಕುಂಡಲ-ಮಂಡಿತ-ಗಂಡಯುಗ-ಸ್ಮಿತಶಾಲೀ ॥**
**ಹರಿರಿಹ ಮುಗ್ಧವಧೂನಿಕರೇ ।**
**ವಿಲಾಸಿನಿ ವಿಲಸತಿ ಕೇಲಿಪರೇ ॥ (ಪಲ್ಲವಿ)**
**ಪೀನ-ಪಯೋಧರ-ಭಾರ-ಭರೇಣ ಹರಿಂ ಪರಿರಭ್ಯ ಸರಾಗಮ್ ।**
**ಗೋಪವಧೂರನುಗಾಯತಿ ಕಾಚಿದುದಂಚಿತ-ಪಂಚಮ-ರಾಗಮ್ ॥೨॥**
**ಕಾಪಿ ವಿಲಾಸ-ವಿಲೋಲ-ವಿಲೋಚನ-ಖೇಲನ-ಜನಿತ-ಮನೋಜಮ್ ।**
**ಧ್ಯಾಯತಿ ಮುಗ್ಧವಧೂರಧಿಕಂ ಮಧುಸೂದನ ವದನ-ಸರೋಜಮ್ ॥೩॥**
**ಕಾಪಿ ಕಪೋಲತಲೇ ಮಿಲಿತಾ ಲಪಿತುಂ ಕಿಮಪಿ ಶ್ರುತಿಮೂಲೇ ।**
**ಚಾರು ಚುಚುಂಬ ನಿತಂಬವತೀ ದಯಿತಂ ಪುಲಕೈರನುಕೂಲೇ ॥**
**ಕೇಲಿ-ಕಲಾ-ಕುತುಕೇನ ಚ ಕಾಚಿದಮುಂ ಯಮುನಾ-ಜಲಕೂಲೇ ।**
**ಮಂಜುಲ-ವಂಜುಲ-ಕುಂಜಗತಂ ವಿಚಕರ್ಷ ಕರೇಣ ದುಕೂಲೇ ॥೫॥**

ಕರತಲ-ತಾಲ-ತರಲ-ವಲಯಾವಲಿ-ಕಲಿತ-ಕಲ-ಸ್ವನ-ವಂಶೇ।
ರಾಸರಸೇ ಸಹ ನೃತ್ಯಪರಾ ಹರಿಣಾ ಯುವತಿಃ ಪ್ರಶಶಂಸೇ॥೬॥
ಶ್ಲಿಷ್ಯತಿ ಕಾಮಪಿ ಚುಂಬತಿ ಕಾಮಪಿ ಕಾಮಪಿ ರಮಯತಿ
ರಾಮಾಮ್।
ಪಶ್ಯತಿ ಸಸ್ಮಿತ-ಚಾರುತರಾಮಪರಾಮನುಗಚ್ಛತಿ ವಾಮಾಮ್ ॥೭॥
ಶ್ರೀಜಯದೇವಕವೇರಿದಮದ್ಭುತ-ಕೇಶವ-ಕೇಲಿ-ರಹಸ್ಯಮ್।
ಬೃಂದಾವನ-ವಿಪಿನೇ ಲಲಿತಂ ವಿತನೋತು ಶುಭಾನಿ
ಯಶಸ್ಯಮ್ ॥೮॥
ಚಂದನಲೇಪಿತ ನೀಲಶರೀರದ ಪೀತಾಂಬರ ವನಮಾಲಿಯಿದೋ
ಕ್ರೀಡಾಕಂಪಿತ ಕುಂಡಲಮಂಡಿತ ಮುಖನೆನೆ ಸುಸ್ಮಿತಶಾಲಿ
ಯಿದೋ ॥೧॥

ಹರಿಯೀ ಪೆಣ್ಗಳ ನೆರವಿಯಲಿ।
ರಮಣಿಯ ರಮಿಪನು ಲೀಲೆಯಲಿ ॥ ಪಲ್ಲವಿ ॥

ಪೀನಪಯೋಧರಭಾರದೆ ಭರದಿಂ ಹರಿಯನ್ನಪ್ಪುತೆ ರಾಗದಲಿ।
ಗೋಪಾಂಗನೆಯಿಂಚರದೊಳು ಪಾಡುವಳೊಡನೆಯ ಪಂಚಮ
ರಾಗದಲಿ ॥೨॥
ಈಕೆ ವಿಲಾಸವಿಲೋಲವಿಲೋಕನ ಖೇಲನ ಜನಿತ
ಮನೋಜಳಿನೆ।
ಮುಗುದೆಯು ನೆನೆವಳು ಮಿಗೆ ಮಾಧವನಾ ವಿಕಸಿತವದನ-
ಸರೋಜಮನೆ ॥೩॥
ಈಕೆಯು ಕೆನ್ನೆಯ ಕೂಡಿಸುತೇನನೊ ಕಿವಿಮಾತನು
ಕಾನೊರೆವವೊಲು।
ರಮಣನ ಚುಂಬಿಸಿ ಬಿಂಬಾಧರೆಯಿದೊ ನವಿರನು ಮೈಯೊಳು
ತಳೆದಿಹಳು ॥೪॥
ಕೇಲಿಕುತೂಹಲದಿಂದಿವಳೊಯ್ಯನೆ ಯಮುನೆಯ ತಂಪಿನ
ಮಳಲೆಡೆಗೆ।
ಮಂಜುಲಕುಂಜದಿನಿನಿಯನನೆಳೆವಳು ಪಿಡಿಯುತೆ ಸೆರಗನೆ
ತನ್ನೆದೆಗೆ ॥೫॥

ಕರತಳದಲಿ ಬಳೆಯಸೆದಿರೆ ಪಿಡಿದಾ ಕಲರವಗೈಯುವ
ಕೊಳಲಿರಲು ।
ನರ್ತನದಾಸೆಯು ದಳವೇರಿತ್ತೆನೆ ಕುಣಿವಳನಿನಿಯನೆ
ನುತಿಸಿರಲು ॥೬॥
ತಬ್ಬುವನೊಬ್ಬಳನುಬ್ಬಿಸುತೊಬ್ಬಳನೊಬ್ಬಳನೀ ಹರಿ
ರಮಿಸುವನು ।
ನೋಡು, ಮುಗುಳ್ನಗೆ ಸೂಸುವ ಚೆನ್ನೆಯನನುಸರಿಸುತ್ತಿಹ
ನೀಕೆಯನು ॥೭॥
ಶ್ರೀ ಜಯದೇವಕವೀಶ್ವರವಿರಚಿತ ಮಾಧವರಾಸಕ್ರೀಡೆಯಿದು ।
ಬೃಂದಾವನದೊಳಗಿಂಬಾಗಿರ್ದುದು ಮಂಗಳವೀಯಲಿ
ನೆನೆಯುವುದು ॥೮॥*

ಇದು ಸುಳಿಯುತ್ತಿರುವ ಮಂದಾನಿಲನ ವರ್ಣನೆಯ ಶ್ಲೋಕ.—

ದರ-ವಿದಲಿತ-ಮಲ್ಲೀ-ವಲ್ಲಿ-ಚಂಚತ್-ಪರಾಗ-
ಪ್ರಕಟಿತ-ಪಟವಾಸೈರ್ವಾಸಯನ್ ಕಾನನಾನಿ ।
ಇಹ ಹಿ ದಹತಿ ಚೇತಃ ಕೇತಕೀಗಂಧಬಂಧುಃ
ಪ್ರಸರದಸಮಬಾಣ-ಪ್ರಾಣವದ್ ಗಂಧವಾಹಃ ॥

[ ಅರೆಬಿರಿದ ಮಲ್ಲಿಗೆಯ ಬಳ್ಳಿಗಳ ಪರಿಮಳದ
ಹುಡಿಯಿಂದೆ ಲೇಪಿಸುತೆ ಕಾನನವನಿವನ ।
ಅಹಹ ಸುಡುತಿಹುದಿಲ್ಲಿ ಕೇದಗೆಯ ಕಂಪಿಡಿದು
ಪಂಚಬಾಣನ ಪ್ರಾಣವೆಂದೆನಲು ಪವನ ॥ ]

ಈ ನಾದಮಾಧುರ್ಯ ಭಾಷಾಂತರಕಾರನ ಕೈಗೆ ಎಂದೂ ನಿಲುಕತಕ್ಕದ್ದಲ್ಲ.

ಜಯದೇವನ ಜಯಂತಿಯನ್ನು ಪುಷ್ಯ ಶುಕ್ಲ ಸಪ್ತಮಿಯ ದಿನ ಈಗಲೂ ಬಂಗಾಳದಲ್ಲಿ ಆಚರಿಸುತ್ತಾರೆ. ಅವನು ಹುಟ್ಟಿದ ಊರಿಗೆ ಈಗಲೂ 'ಜಯದೇವಪುರ'ವೆಂಬ ಹೆಸರಿದೆ. ಗೀತಗೋವಿಂದದ ಅನುಕರಣೆಗಳೂ ಮುಂದೆ ಎಷ್ಟೋ ಹುಟ್ಟಿದುವು.—ಗೀತಗಂಗಾಧರ, ಗೀತಗೌರೀಪತಿ,

---

* ಭಾಷಾಂತರ ಇದೇ ಲೇಖಕನದು.

ಗೀತರಾಘವ, ಮುಂತಾಗಿ. ಅವುಗಳ ಯೋಗ್ಯತೆಯೆಲ್ಲಾ ರಂಗನ ಮುಂದೆ ಸಿಂಗನಂತೆಯೇ ಸರಿ.

## ಜಗನ್ನಾಥಪಂಡಿತರಾಜನ 'ಭಾಮಿನೀವಿಲಾಸ'

ಸಂಸ್ಕೃತ ಕಾವ್ಯರಾಜ್ಯದಲ್ಲಿ ಕಡೆಯ ಜಾಜ್ವಲ್ಯರತ್ನವೇ ಜಗನ್ನಾಥ. ತೆಲುಗುನಾಡಿನಲ್ಲಿ ಹುಟ್ಟಿದರೂ ತನ್ನ ವಿದ್ವತ್ತು, ಪ್ರತಿಭೆಗಳಿಂದ ದಿಲ್ಲೀಶ್ವರನಾದ ಷಾಜಹಾನನ ಆಸ್ಥಾನದಲ್ಲಿ 'ಪಂಡಿತರಾಜ'ನೆಂಬ ಬಿರುದನ್ನು ಗಳಿಸಿ, ಅಲ್ಲಿಯೇ ಯವನಸುಂದರಿಯೊಬ್ಬಳನ್ನು ಲಗ್ನವಾಗಿ ನೆಲಸಿದವನು. ಅವನು ಅಲಂಕಾರಶಾಸ್ತ್ರದಲ್ಲೆಲ್ಲ ಮೂರ್ಧನ್ಯವೆನಿಸಿರುವ 'ರಸಗಂಗಾಧರ'ವನ್ನು ಬರೆದಂತೆ ವ್ಯಾಕರಣಶಾಸ್ತ್ರದಲ್ಲಿ ಮೂರ್ಧನ್ಯನೆನಿಸಿದ 'ಸಿದ್ಧಾಂತಕೌಮುದೀ' ಕಾರನಾದ ಭಟ್ಟೋಜಿ ದೀಕ್ಷಿತನನ್ನು ಖಂಡಿಸಿ ಬಾಯಿ ಮುಚ್ಚಿಸಿದ ಧೀರ, ಸರ್ವತಂತ್ರಸ್ವತಂತ್ರರೆನಿಸಿದ್ದ ಅಪ್ಪಯ್ಯದೀಕ್ಷಿತರ ಅನೇಕ ಕೃತಿಗಳನ್ನು ತುಂಡುತುಂಡಾಗಿ ಖಂಡಿಸಿ, ಅವರನ್ನು 'ದ್ರವಿಡಶಿಶು'ವೆಂದು ಉದ್ಗರಿಸಿದ ಉದ್ದಾಮಪಂಡಿತ. ಹಾಗೆಯೇ ಕಾವ್ಯಕ್ಷೇತ್ರದಲ್ಲಿಯೂ ನೂರಾರು ಸುಭಾಷಿತ ರತ್ನಗಳನ್ನೂ ಗಂಗಾದಿಸ್ತೋತ್ರಲಹರಿಗಳನ್ನೂ ಸಿರರ್ಗಳವಾಗಿ ರಚಿಸಿದ ಕವಿವರ್ಯ. ಈತನ ಶ್ಲೋಕಮಾಧುರ್ಯವನ್ನೂ ಪ್ರಾಸಪಾಟವವನ್ನೂ ಇವನ ಶ್ಲೋಕಗಳೆಲ್ಲವೂ ಪ್ರಕಟಿಸುವವು.

ಎಷ್ಟೋ ರಾಜರು ಈತನನ್ನು ತಮ್ಮ ಆಸ್ಥಾನದಲ್ಲಿಟ್ಟುಕೊಳ್ಳಲು ಸ್ಪರ್ಧಿಸುತ್ತಿದ್ದರಂತೆ. ಜಗನ್ನಾಥನ ಉತ್ತರ ಚಮತ್ಕಾರಪೂರ್ಣವಾಗಿದೆ—

**ದಿಲ್ಲೀಶ್ವರೋ ವಾ ಜಗದೀಶ್ವರೋ ವಾ ಮನೋರಥಾನ್**
**ಪೂರಯಿತುಂ ಸಮರ್ಥಃ ।**
**ಅನ್ಯೈರ್ನೃಪಾಲೈಃ ಪರಿದೀಯಮಾನಂ ಶಾಕಾಯ ವಾ**
**ಸ್ಯಾಲ್ಲವಣಾಯ ವಾ ಸ್ಯಾತ್ ॥**

[ದಿಲ್ಲೀಶ್ವರ, ಇಲ್ಲವೆ ಜಗದೀಶ್ವರ—ಇಬ್ಬರಲ್ಲಿ ಒಬ್ಬನು ಮಾತ್ರ ನನ್ನ ಮನೋರಥಗಳನ್ನು ಪೂರೈಸಬಲ್ಲನು. ಉಳಿದ ದೊರೆಗಳು ಕೊಡುವುದೆಲ್ಲ ತರಕಾರಿಗೆ ಸಾಲಬಹುದು. ಇಲ್ಲವೆ ಉಪ್ಪಿಗೆ ಸಾಲಬಹುದು.]

'ಭಾಮಿನೀವಿಲಾಸ'ದಲ್ಲಿ ನಾಲ್ಕು ಅಧ್ಯಾಯಗಳಿವೆ. ಅದರಲ್ಲಿ ಶೃಂಗಾರಕ್ಕೆ ಸಂಬಂಧಿಸಿದ ಅಧ್ಯಾಯಕ್ಕೆ 'ಶೃಂಗಾರವಿಲಾಸ'ವೆಂದು ಹೆಸರು. ಅದರಲ್ಲಿ

ಒಟ್ಟು ೧೦೨ ಪದ್ಯಗಳಿವೆ. ಉಳಿದ ಹಿಂದಿನ ಕವಿಗಳ ಮಾರ್ಗಾನುಸರಣೆಯ ಬದಲು ಪ್ರತಿಯೊಂದು ಪದ್ಯದಲ್ಲಿಯೂ ಹೊಸ ಕಲ್ಪನಾವಿಲಾಸವನ್ನಿಲ್ಲಿ ಕಾಣಬಹುದು. ಅಷ್ಟೇ ಪ್ರಮಾಣದಲ್ಲಿ ಶಬ್ದಚಮತ್ಕಾರವೂ ತುಂಬಿರುತ್ತದೆ. ಅಲಂಕಾರಗಳ ಸೊಗಸಂತೂ ಅಪಾರ. 'ಉಪನಿಷತ್ತು, ಗೀತೆ, ಎಲ್ಲಾ ಓದಿಯಾಯಿತು. ಆದರೆ ಹೆಣ್ಣಿನ ಚಿಂತೆ ತಪ್ಪಲಿಲ್ಲ' ಎಂಬಿಷ್ಟನ್ನೇ ಜಗನ್ನಾಥ ಹೇಳುವ ಅವಿಸ್ಮರಣೀಯ ಪದಾವಲಿಯನ್ನು ನೋಡಿ —

**ಉಪನಿಷದಃ ಪರಿಪೀತಾ ಗೀತಾಪಿ ಚ ಹನ್ತ ಮತಿಪಥಂ ನೀತಾ।**
**ತದಪಿ ನ ಹಾ ವಿಧುವದನಾ ಮಾನಸಸದನಾದ್ ಬಹಿರ್ಯಾತಿ॥**

[ಉಪನಿಷತ್ತುಗಳನ್ನು ಹೀರಿಯಾಯಿತು. ಗೀತೆಯನ್ನೂ ಸ್ಮೃತಿಪಥದಲ್ಲಿ ತಂದುಕೊಂಡಾಯಿತು. ಆದರೆ ಆ ಚಂದ್ರವದನೆ ಮಾತ್ರ ನನ್ನ ಚಿತ್ತಸದನದಿಂದ ಹೊರಗೆ ಹೋಗುವುದಿಲ್ಲ.]

ಒಂದು ಸಂಶಯಾಲಂಕಾರದ ಸೊಬಗನ್ನು ನೋಡಿ :—

**ತೀರೇ ತರುಣ್ಯಾ ವದನಂ ಸಹಾಸಂ**
**ನೀರೇ ಸರೋಜಂ ಚ ಮಿಲದ್ವಿಕಾಸಮ್ ।**
**ಆಲೋಕ್ಯ ಧಾವತ್ಯುಭಯತ್ರ ಮುಗ್ಧಾ**
**ಮರಂದಲುಬ್ಧಾಲಿಕಿಶೋರಮಾಲಾ ॥**

'ಕೊಳದ ತಡಿಯಲ್ಲಿ ತರುಣಿಯ ವದನ ಮಂದಹಾಸವನ್ನು ಸೂಸುತ್ತಿದೆ, ನೀರಿನಲ್ಲಿ ಸರೋಜವು ವಿಕಾಸಗೊಳ್ಳುತ್ತಿದೆ. ಮರಿದುಂಬಿಗಳ ಮಾಲೆ ಮಕರಂದದ ಆಸೆಯಿಂದ ಇಲ್ಲಿಂದಲ್ಲಿ, ಅಲ್ಲಿಂದಿಲ್ಲಿ, ಎರಡು ಕಡೆಗೂ ಓಡಾಡುತ್ತಿದೆ.'

ವೀಣಾಪಾಣಿಯಾದ ವಾಣಿಯೇ ತನ್ನ ಗಾನವನ್ನು ನಿಲ್ಲಿಸಿ ಜಗನ್ನಾಥನ ಕಾವ್ಯಾಮೃತವನ್ನು ಸವಿಯುವಳೆಂದೂ, ಅದನ್ನು ಕೇಳಿಯೂ ತಲೆದೂಗದವನು ಮನುಷ್ಯಪಶು ಅಥವಾ ಪಶುಪತಿಯಾಗಿರಬೇಕೆಂದು ಜಗನ್ನಾಥನೇ ನುಡಿದಿದ್ದಾನೆ.[18] ಇದರ ಔಚಿತ್ಯಕ್ಕೆ ಸಹೃದಯರ ಹೃದಯವೇ ಸಾಕ್ಷಿ.

---

18 ಗಿರಾಂ ದೇವೀ ವೀಣಾಗುಣರಣನಹೀನಾದರಕರಾ
ಯದೀಯಾನಾಂ ವಾಚಾಮಮೃತಮಯಮಾಚಾಮತಿ ರಸಮ್ ।
ವಚಸ್ತಸ್ಯಾಕರ್ಣ್ಯ ಶ್ರವಣಸುಭಗಂ ಪಂಡಿತಪತೇ-
ರಧುನ್ವನ್ ಮೂರ್ಧಾನಂ ನೃಪಶುರಥವಾಽಯಂ ಪಶುಪತಿಃ ॥

ಈ ಪ್ರಸಿದ್ಧ ಕವಿಗಳ ಕೃತಿಗಳಷ್ಟೇ ಸಂಸ್ಕೃತದಲ್ಲಿರುವ ಪ್ರಣಯಗೀತೆಗಳೆಂದು ಭ್ರಮಿಸಲಾಗದು. ನೂರಾರಲ್ಲ, ಸಾವಿರಾರು ಪ್ರಸಿದ್ಧರ ಮತ್ತು ಅಪ್ರಸಿದ್ಧರ ಶೃಂಗಾರಮಯವಾದ ಚಾಟುಪದ್ಯಗಳನ್ನು ಸಂಗ್ರಹಿಸಿರುವ ದೊಡ್ಡ ದೊಡ್ಡ ಸಂಕಲನ ಗ್ರಂಥಗಳು ಪೂರ್ವದಿಂದಲೂ ಸಂಸ್ಕೃತದಲ್ಲಿ ರಚಿತವಾಗಿವೆ. ಇವುಗಳಲ್ಲಿರುವ ಸುಭಾಷಿತಗಳನ್ನೆಲ್ಲ ಲೆಕ್ಕಮಾಡಿದರೆ ಹತ್ತು ಸಾವಿರಕ್ಕಿಂತ ಹೆಚ್ಚಾಗಬಹುದು. ಉಪಲಬ್ಧವಿರುವ ಮುಖ್ಯವಾದ ಪ್ರಾಚೀನ ಸುಭಾಷಿತಸಂಗ್ರಹಗಳು ಇವು —

1. **ಕವೀಂದ್ರವಚನಸಮುಚ್ಚಯ**—ಅತಿ ಪ್ರಾಚೀನ, ಸಂಗ್ರಾಹಕ-ಅಜ್ಞಾತ, ಹಸ್ತಪ್ರತಿಯೇ ೧೨ನೆಯ ಶತಮಾನದ್ದು. ಗ್ರಂಥ ಒಂದುನೂರು ವರ್ಷಗಳಾದರೂ ಹಿಂದಿನದಿರಬಹುದು. ಬುದ್ಧಸ್ತುತಿಯಿಂದಾರಂಭವಾಗುವುದರಿಂದ ಸಂಕಲನಕಾರನು ಬೌದ್ಧನಿದ್ದಿರಬಹುದು. ಇದು ಅಮುದ್ರಿತ ಭೀಮಾರ್ಜುನಸೋಮನ ಸುಭಾಷಿತರತ್ನಕೋಶದ ಒಂದು ಭಾಗವೇ ಎಂಬುದನ್ನು ಟಿಬೆಟ್ಟಿನ ಹಸ್ತಪ್ರತಿಯೊಂದನ್ನು ನೋಡಿ ಶ್ರೀ ಡಿ. ಡಿ. ಕೋಸಂಬಿಯವರು ಈಚೆಗೆ ನಿರ್ಧರಿಸಿದ್ದಾರೆ.
2. ಶ್ರೀಧರದಾಸನ **ಸದುಕ್ತಿಕರ್ಣಾಮೃತ** (ಕ್ರಿ. ಶ. ೧೨೦೫)
3. ಬಿಲ್ಹಣನ **ಸೂಕ್ತಿಮುಕ್ತಾವಲೀ** (ಕ್ರಿ. ಶ. ೧೩ ನೆ ಶತಮಾನ)
4. ಶಾರ್ಙ್ಗಧರನ **ಶಾರ್ಙ್ಗಧರಪದ್ಧತಿ** (ಕ್ರಿ. ಶ. ೧೩೬೩. ಇದರಲ್ಲಿ ೪೬೮೯ ಶ್ಲೋಕಗಳಿವೆ)
5. ವಲ್ಲಭದೇವನ **ಸುಭಾಷಿತಾವಲೀ** (ಕ್ರಿ. ಶ. ೧೫ನೆಯ ಶತಮಾನ. ೩೫೨೭ ಶ್ಲೋಕಗಳಿವೆ)
6. ಅಮಿತಗತಿಯ **ಸುಭಾಷಿತರತ್ನಸಂದೋಹ.**
7. ಶಂಭುನೃಪನ **ಅನ್ಯೋಕ್ತಿಮುಕ್ತಾಲತಾ.**

**ಈ ಸುಭಾಷಿತ ಸಂಗ್ರಹಗಳಲ್ಲಿ ಲಾಟದೇಶದ ಪ್ರಭುದೇವಿ, ಕರ್ಣಾಟಕದ ವಿಜ್ಜಿಕಾ, ಶೀಲಾಭಟ್ಟಾರಿಕಾ, ವಿಕಟನಿತಂಬಾ, ಮೋರಿಕಾ, ಅವಂತಿಸುಂದರೀ ಮುಂತಾದ ಹತ್ತಾರು ಕವಯಿತ್ರಿಯರ ಸುಂದರ ಶ್ಲೋಕಗಳೂ ಬರುತ್ತವೆ.**

ಪುರುಷ ಕವಿಗಳಲ್ಲಿ ಕಾಣದ ಪರಿಹಾಸಪ್ರಿಯತೆಯು ಕವಯಿತ್ರಿಯರ ಪ
ಗಳಲ್ಲಿ ಕಾಣುವುದುಂಟು. ಒಂದು ಉದಾಹರಣೆ —

**ಕಾಲೇ ಮಾಷಂ ಸಸ್ಯೇ ಮಾಸಂ ವದತಿ ಶಕಾಸಂ ಯಶ್ಚ ಸಕಾಶಮ್**
**ಉಷ್ಟ್ರೇ ಲುಂಪತಿ ಷಂ ವಾ ರಂ ವಾ ತಸ್ಮೈ ದತ್ತಾ ವಿಕಟ ನಿತಂಬಾ**

ಮದುವೆಯಾದ ಹೊಸದರಲ್ಲಿ ಗಂಡನ 'ಸಂಸ್ಕೃತಿ'ಯ
ಹೆಂಡತಿಯು ಸಖಿ ಗೇಲಿಮಾಡುವ ಪದ್ಯವಿದು. ಬಾಯಲ್ಲಿ ಅಕ್ಷರಗಳು ಕೂ
ಸರಿಯಾಗಿ ಹೊರಳುವುದಿಲ್ಲ, ಒಂದಕ್ಕೊಂದು ಹೇಳುತ್ತಾನೆಂಬುದನ್ನು ಬಹ
ಚಮತ್ಕಾರವಾಗಿ ನುಡಿಯುತ್ತಾಳೆ—"ತಿಂಗಳು ಎನ್ನುವರ್ಥದಲ್ಲಿ 'ಮಾಷ
ವೆನ್ನುತ್ತಾನೆ, ಉದ್ದಿಗೆ 'ಮಾಸ' ಎನ್ನುತ್ತಾನೆ. 'ಸಕಾಶ' ಎಂಬುದನ
'ಶಕಾಸ' ಎಂದುಚ್ಚರಿಸುತ್ತಾನೆ 'ಉಷ್ಟ್ರ' ಎಂಬುದನ್ನಂತೂ 'ಉಟ್ರ
ಎಂದೋ, ಉಷ್ಟ ಎಂದೋ ರೇಫ ಇಲ್ಲವೆ ಷಕಾರಗಳ ಲೋಪಮಾಡ
ಉಚ್ಚರಿಸಲಾರ. ಇಂತಹವನಿಗೆ ಕೊಟ್ಟಿದೆ ನಮ್ಮ ವಿಕಟನಿತಂಬೆಯನ್ನು."

---

## ೨. ವಿಡಂಬನಕಾವ್ಯಗಳು

ಸಂಸ್ಕೃತದ ಮಹಾಕಾವ್ಯದಲ್ಲಾಗಲಿ, ಪ್ರಣಯಗೀತೆಗಳಲ್ಲಾಗ
ನಿತ್ಯಜೀವನದ ಕ್ಷುದ್ರಾಂಶಗಳ ನಿರೂಪಣೆಗೆ ಸ್ಥಾನವಿಲ್ಲ. ಅವುಗಳ ಗಂಭೀ
ಸರಣಿಯಲ್ಲಿ ವಿಡಂಬನಾತ್ಮಕವಾದ ಲಘುಹಾಸ್ಯಕ್ಕೆ ಎಡೆಯಿಲ್ಲ. ಆದ
ಸಂಸ್ಕೃತದಲ್ಲಿ ಈ ವಿಧವಾದ ರಚನೆಗಳೂ ಇರುತ್ತಿದ್ದುವೆನ್ನಲು ಸುಭಾಷಿ
ಸಂಗ್ರಹಗಳಲ್ಲಿ ಸಿಕ್ಕುವ ಬಿಡಿ ಪದ್ಯಗಳು ಮಾತ್ರವೇ ಪ್ರಮಾಣವಲ್ಲ, ಈಗಲ
ಕೆಲವು ಸ್ವತಂತ್ರ ಗ್ರಂಥಗಳೇ ಸಿಕ್ಕುತ್ತವೆ.

ಕಾವ್ಯದೃಷ್ಟಿಯಿಂದ ಸಂಸ್ಕೃತವಿಡಂಬನ ಸಾಹಿತ್ಯದಲ್ಲೆಲ್ಲ ದಾಮೋದ
ಗುಪ್ತನ "**ಕುಟ್ಟನೀಮತ**"ವು ಅತ್ಯಂತ ಮಹತ್ತ್ವದ ಗ್ರಂಥ. ದಾಮೋದ
ಗುಪ್ತನು ಕಾಶ್ಮೀರದ ರಾಜ ಜಯಾಪೀಡನ (ಕ್ರಿ.ಶ. ೭೫೫–೭೮೬) ಮುಖ

ಮಂತ್ರಿಯಾಗಿದ್ದನು. "ಕುಟ್ಟನಿ" ಎಂದರೆ ಕುಂಟಣಿ ಅಥವಾ ಕುಂಟಲಗಿತ್ತಿ. ಆವಳ "ಮತ" ಎಂದರೆ ಉಪದೇಶ. ಸಂಪಾದನೆಯಿಲ್ಲದೆ ಸೊರಗುತ್ತಿರುವ ಮಾಲತಿಯೆಂಬ ಸೂಳೆಯೊಬ್ಬಳಿಗೆ ನುರಿತ ಕುಂಟಲಗಿತ್ತಿಯಾದ ವಿಕರಾಳೆ ಮಾಡುವ ಉಪದೇಶವೇ ಕಾವ್ಯವಸ್ತು. ಸುಳ್ಳು, ಮೋಸ, ವಂಚನೆಗಳಿಂದ ಎಂತಹ ರಾಜಕುಮಾರರನ್ನಾದರೂ ಹೇಗೆ ಮರುಳು ಮಾಡಬಹುದೆಂಬುದನ್ನು ಅನೇಕ ದೃಷ್ಟಾಂತ ಕಥೆಗಳ ಮೂಲಕ ಇಲ್ಲಿ ನಿರೂಪಿಸಲಾಗಿದೆ. ಹಿಂದಿನ ಜನರ ಡಂಭಾಚಾರಗಳನ್ನೂ, ಲೋಕಸ್ವಭಾವವನ್ನೂ, ಸಾಮಾಜಿಕ ರೀತಿನೀತಿಗಳನ್ನೂ ತಿಳಿಯಬಯಸುವವರಿಗೆ ಈ ಕಾವ್ಯ ಅತ್ಯಂತ ಮಹತ್ವಪೂರ್ಣವಾದುದು. ಇದರಲ್ಲಿ ಕಾಮಶಾಸ್ತ್ರದ ಅನೇಕ ಪ್ರಕ್ರಿಯೆಗಳೂ ವಿವರವಾಗಿ ವರ್ಣಿತವಾಗಿವೆ. ಇದನ್ನೋದಿದವರು ವಿಟ, ವೇಶ್ಯೆ, ಧೂರ್ತರುಗಳಿಂದ ಎಂದೂ ಮರುಳಾಗುವುದಿಲ್ಲವೆಂದು ಕವಿ ಗ್ರಂಥಾಂತ್ಯದಲ್ಲಿ ಅಭಯವನ್ನಿತ್ತಿದ್ದಾನೆ [19] ಹೀಗೆ ಸನ್ನೀತಿಬೋಧೆ ಇದರ ಗೂಢೋದ್ದೇಶ, ಸೂಳೆಗೆ ಉಪದೇಶವಲ್ಲ

ಕಾವ್ಯದಲ್ಲಿ ಒಟ್ಟು ೧೦೫೯ ಆರ್ಯೆಗಳಿವೆ. ಕವಿಗೆ ಸ್ವಾರಸ್ಯವಾಗಿ ಕಥೆಗಳನ್ನು ಹೇಳುವ ಕಲೆಯಿರುವಂತೆಯೇ ಅನುಪ್ರಾಸಾದಿ ಅಲಂಕಾರಗಳಿಂದಲೂ ಅವನ ಶೈಲಿ ಹೃದಯಸ್ಪರ್ಶಿಯಾಗಿದೆ.

ಇದು ವಿರಹಪೀಡಿತೆಯಾದವಳೊಬ್ಬಳ ವರ್ಣನೆ —

**ಅಪಸಾರಯ ಘನಸಾರಂ ಕುರು ಹಾರಂ ದೂರ ಏವ, ಕಿಂ ಕಮಲೈಃ ।**
**ಅಲಮಲಮಾಲಿ ಮೃಣಾಲೈರಿತಿ ವದತಿ ದಿವಾನಿಶಂ ಬಾಲಾ ॥**
(103)

**'ತೆಗೆ ತೆಗೆ ಕರ್ಪೂರಮಂ**
**ನೊಗೆಯಾಚೆಗೆ ಸಖಿಯೆ, ಹಾರಮಂ ತೆಗೆ ಪೂವಂ ।**
**ಮಿಗೆ ಬೇಡ ಮೃಣಾಲಂಗಳ್'—**
**ಪಗಲಿರುಳುಂ ನುಡಿವಳಿಂತಹಾ ಕನ್ನೆಯುವಳ್ ॥**

19 ಕಾವ್ಯಮಿದಂ ಯಃ ಶೃಣುತೇ ಸಮ್ಯಕ್ ಕಾವ್ಯಾರ್ಥಪಾಲನೇನಾಸೌ ।
ನೋ ವಂಚ್ಯತೇ ಕದಾಚಿದ್ ವಿಟವೇಶ್ಯಾಧೂರ್ತಕುಟ್ಟನೀಭಿರಿತಿ ॥

ಪ್ರೇಮದಲ್ಲಿ ವಿರಸದ ಪಾತ್ರ —

**ಕೋಮಲ ಮಾನಕಟುತ್ವಂ ಭಜಮಾನೋ ಭಜತಿ ದೀಪ್ತತಾ**
**ಮಧಿಕಾಮ್ ।**
**ಸಂಚಾಲ್ಯಮಾನದಾರುಃ ಪಾವಕ ಇವ ಸುಪ್ರಭಃ ಸ್ನೇಹಃ ॥**
(716)

[ ಸಣ್ಣ ಕಲಹ ಬಂದರೆ ಅದು ಪ್ರೇಮದ ಗಾಢತೆಯನ್ನೇ ಹೆಚ್ಚಿಸುತ್ತದೆ, ಸೌದೆಯನ್ನು ಅಳ್ಳಾಡಿಸಿದರೆ ಉರಿ ಮತ್ತಷ್ಟು ಚೆನ್ನಾಗಿ ಹೊತ್ತಿಕೊಳ್ಳುವಂತೆ. ]

ವೇಶ್ಯೆಯರ ನಿಜಸ್ಥಿತಿಯ ಚಿತ್ರ —

**ಯಾಸಾಂ ಜಘನಾವರಣಂ ಪರಕೌತುಕವೃದ್ಧಯೇ ನತು**
**ತ್ರಪಯಾ।**
**ಉಜ್ವಲವೇಷಾ ರಚನಾ ಕಾಮಿಜನಾಕೃಷ್ಟಯೇ ನ ತು**
**ಸ್ಥಿತಯೇ ॥**
**ಮಾಂಸರಸಾಭ್ಯವಹಾರಃ ಪುರುಷಾಹತಿಪೀಡಯಾ ನತು**
**ಸ್ಪೃಹಯಾ ।**
**ಆಲೇಖ್ಯಾದೌ ವ್ಯಸನಂ ವೈದಗ್ಧ್ಯಖ್ಯಾತಯೇ ನ ತು**
**ವಿನೋದಾಯ ॥** (306-7)

[ ಪರಕೌತುಕವೃದ್ಧಿಗೋಸ್ಕರ ಅವರ ಜಘನಾವರಣವೇ ಹೊರತು ಮಾನಕ್ಕಲ್ಲ, ಕಾಮಿಜನಾಕರ್ಷಣೆಗಾಗಿ ಉಜ್ವಲ ವೇಷವೇ ಹೊರತು, ಮರ್ಯಾದೆಗಲ್ಲ, ಪುರುಷಾಹತಿಯ ಪೀಡೆಯನ್ನು ಸಹಿಸಲು ಮಾಂಸಾಹಾರವೇ ಹೊರತು ಆಸೆಯಿಂದಲ್ಲ, ವೈದಗ್ಧ್ಯದ ಪ್ರದರ್ಶನಕ್ಕಾಗಿ ಚಿತ್ರಾದಿ ಕಲಾವ್ಯಸನವೇ ಹೊರತು ಸಂತೋಷಕ್ಕಲ್ಲ. ]

ಇದೇ ಜಾತಿಯ ಗ್ರಂಥಗಳನ್ನು ಬರೆದ ಮತ್ತೊಬ್ಬ ಕಾಶ್ಮೀರಕನೇ ಕ್ಷೇಮೇಂದ್ರ. ಈತನ **ದೇಶೋಪದೇಶ ಮತ್ತು ನರ್ಮಮಾಲಾ** ಎಂಬ ಎರಡೂ (ಕ್ರಿ.ಶ. ೧೧ ನೆ ಶತಮಾನ) **ಸಾಮಾಜಿಕ ಲೋಪಗಳನ್ನೂ, ಮೋಸ**

ಗಳನ್ನೂ ಮುಚ್ಚು ಮರೆಯಿಲ್ಲದೆ ಎತ್ತಿ ಹಾಕುವ ಗ್ರಂಥಗಳು. ಖಳ, ಜಿಪುಣ, ಸೂಳೆ, ಕುಟ್ಟನಿ, ವಿಟ, ಬಾಲ, ವಿಧವೆ, ಧೂರ್ತ ವಿದ್ಯಾರ್ಥಿಗಳು, ಹುಡುಗಿಯನ್ನು ಮದುವೆಯಾದ ಮುದುಕ, ವೈದ್ಯ, ಜ್ಯೋತಿಷ್ಕ ಮುಂತಾದ ವೇಷಧಾರಿಗಳು,–ಎಲ್ಲರ ದುರಾಚಾರಗಳನ್ನೂ **ದೇಶೋಪದೇಶ**ದ ಎಂಟು 'ಉಪದೇಶ'ಗಳು ಬಯಲಿಗೆಳೆಯುತ್ತವೆ, **ನರ್ಮಮಾಲೆ**ಯಲ್ಲಿ ಅಧಿಕಾರಿಗಳಾದ ಕಾಯಸ್ಥ(Accountant), ಪರಿಪಾಲಕ(Commissioner), ಲೇಖಕ (Clerk), 'ಗಂಜದಿವಿರ' (Superintendent of Finaces), ನಿಯೋಗಿ (Tahsildar), ಗ್ರಾಮದಿವಿರ (ಪಟ್ವಾರಿ), ಮುಂತಾದವರ ದುರ್ವರ್ತನೆಯೂ, ವೇಷಧಾರಿಗಳ ಮೋಸಗಳೂ ಮೂರು 'ಪರಿಹಾಸ'ಗಳಲ್ಲಿ ಕೆಲವುವೇಳೆ ಗ್ರಾಮ್ಯವೆನಿಸುವ ಭಾಷೆಯಿಂದಲೂ ವರ್ಣಿತವಾಗಿವೆ. ಇದರಂತೆ **ದರ್ಪದಲನ**ವೆಂಬ ಇನ್ನೊಂದು ವಿಡಂಬನ ಕಾವ್ಯದಲ್ಲಿ ಕ್ಷೇಮೇಂದ್ರನು ಮನುಷ್ಯನ ಆಸೆಗಳ ವೈಫಲ್ಯವನ್ನು ಪ್ರದರ್ಶಿಸಿದ್ದಾನೆ, **ಸಮಯಮಾತೃಕಾ ಮತ್ತು ಕಲಾವಿಲಾಸ**ವೆಂಬ ಎರಡು ಗ್ರಂಥಗಳಲ್ಲಿ ಸಾಮಾಜಿಕ ದೋಷಗಳ ಉದ್ಘಾಟನೆಯ ಜತೆಗೆ ಸಾಮಾಜಿಕ ಉನ್ನತಿಯ ಮಾರ್ಗಸೂಚನೆಯನ್ನೂ ಮಾಡಿದ್ದಾನೆ.

ಕ್ಷೇಮೇಂದ್ರನ ಲೇಖಕ —

**ಆಕಾರಶೀರ್ಷಹಾರೀ ನವದರಕಾರೀ ಪದಾರ್ಥಸಂಹಾರೀ ।**
**ಅಕ್ಷರಭಕ್ಷಕಮೇಲಾಲಿಪ್ತಮುಖೋ ಲೇಖಕಃ ಕಾಲಃ ॥**

[ (ಅಕ್ಷರದ) ತಲೆಕಟ್ಟನ್ನೇ ಹಾರಿಸುತ್ತಾನೆ, ಹೊಸ ತೂತು ಮಾಡುತ್ತಾನೆ, ಅಲ್ಲಲ್ಲಿ ಪದದ ಅರ್ಥಗಳನ್ನೇ ಸಾಯಿಸಿಬಿಡುತ್ತಾನೆ. ಅಕ್ಷರಗಳನ್ನು ನುಂಗಿಬಿಡುವ ಮತ್ತು ಜಾಯಿಪತ್ರೆ ಬಾಯಲ್ಲಿರುವ ಲೇಖಕನೇ ಕಾಲಪುರುಷ ! ]

ಇವನು ವೈದ್ಯ —

**ಶಬ್ದಾಟೋಪೈರ್ಭಯಕೃದ್ ದುಸ್ಸಹತರಸಂನಿಪಾತಹತಲೋಕಃ ।**
**ವೈದ್ಯೋ ವಿದ್ಯುದಿವೋಗ್ರಃ ಪತತಿ ನಿಧಾನೇಷು ಸದನೇಷು ॥**

[ ಶಬ್ದಾಟೋಪದಿಂದ ಭಯಂಕರನೂ, ದುಸ್ಸಹವಾದ ಆಗಮನದಿಂದ (ಸಂನಿಪಾತಜ್ವರದಂತೆ) ಲೋಕವನ್ನೇ ಕೊಲ್ಲುವವನೂ, ಮಿಂಚಿನಂತೆ ಉಗ್ರನೂ ಆದ ವೈದ್ಯನು ನಿಧಿಯುಳ್ಳ ಮನೆಗಳಲ್ಲಿ ಹಾರಾಡುವನು ! ]

ಇವನು ಭಟ್ಟ —

**ನೀತ್ವಾ ನಿಖಿಲಾಂ ರಾತ್ರಿಂ ಕ್ಷೀಬೋ ವಾಂತಾಸವಃ ಶ್ವಲೀಢಾಸ್ಯಃ।**
**ಅಭಿವಾದನಪರಿಶುದ್ಧಃ ಪ್ರಾತರ್ಭಟ್ಟೋಽನ್ಯಭಟ್ಟೇಷು ॥**

[ ರಾತ್ರಿಯನ್ನೆಲ್ಲ ಹೆಂಡದ ಮತ್ತಿನಲ್ಲಿ, ಹೆಂಡವನ್ನು ವಾಂತಿಮಾಡಿ ಕೊಳ್ಳುತ್ತಾ, ನಾಯಿಗಳಿಂದ ಮುಖವನ್ನು ನೆಕ್ಕಿಸಿಕೊಳ್ಳುತ್ತಾ ಕಳೆದ ಭಟ್ಟನು ಬೆಳಗಾದಮೇಲೆ ಮಿಕ್ಕ ಭಟ್ಟರಿಗೆ ನಮಸ್ಕಾರಮಾಡಿದ್ದರಿಂದಲೇ ಪರಿಶುದ್ಧನಾಗುತ್ತಾನೆ ! ]

ನೀಲಕಂಠದೀಕ್ಷಿತನ **ಕಲಿವಿಡಂಬನ**ವೆಂಬ ಕಾವ್ಯವೂ ಕ್ಷೇಮೇಂದ್ರನ ಕಾವ್ಯಗಳಂತೆಯೇ ಮಿಥ್ಯಾಚಾರದಿಂದ ಬೇಗ ಕಾರ್ಯಸಿದ್ಧಿ ಪಡೆಯುವ ರಹಸ್ಯ ವನ್ನು ಹಾಸ್ಯಮಯವಾಗಿ ನೂರೊಂದು ಶ್ಲೋಕಗಳಿಂದ ಚಿತ್ರಿಸುತ್ತದೆ.

ವಾದದಲ್ಲಿ ಗೆಲ್ಲುವ ಮರ್ಮವಿದು —

**ಅಸಂಭ್ರಮೋ ವಿಲಜ್ಜತ್ವಂ ಅವಜ್ಞಾ ಪ್ರತಿವಾದಿನಿ ।**
**ಹಾಸೋ ರಾಜ್ಞಃ ಸ್ತವಶ್ಚೇತಿ ಪಂಚೈತೇ ಜಯಹೇತವಃ ॥**

[ ಗಾಬರಿಯಾಗದಿರುವುದು, ನಾಚಿಕೆಯಿಲ್ಲದಿರುವುದು, ಪ್ರತಿವಾದಿಯ ಬಗೆಗೆ ತಿರಸ್ಕಾರ, ನಗೆ, ರಾಜನ ಪ್ರಶಂಸೆ, ಈ ಐದೂ ಜಯದ ಕಾರಣಗಳು. ]

ಉತ್ತಮ ಗುರುವಿನ ರಹಸ್ಯ —

**ವಾಚ್ಯತಾಂ ಸಮಯೋಽತೀತಃ ಸ್ಪಷ್ಟಮಗ್ರೇ ಭವಿಷ್ಯತಿ ।**
**ಇತಿ ಪಾಠಯತಾಂ ಗ್ರಂಥೇ ಕಾಠಿನ್ಯಂ ಕುತ್ರ ವರ್ತತೇ ॥**

[ ಮುಂದಕ್ಕೆ ಓದಿ, ವೇಳೆ ಮೀರಿತು ! ಮುಂದೆಲ್ಲವೂ ಸ್ಪಷ್ಟವಾಗು ತ್ತದೆ. ಹೀಗೆ ಓದಿಸುವವರಿಗೆ ಯಾವ ಗ್ರಂಥದಲ್ಲಿಯೇ ಆಗಲಿ ಕಾಠಿಣ್ಯವೆಲ್ಲಿ ಬಂದೀತು ? ]

ಜೋಯಿಸನಿಗೊಂದು ಕಿವಿಮಾತು .—

**ಪುತ್ರ ಇತ್ಯೇವ ಪಿತರಿ ಕನ್ಯಕೇತ್ಯೇವ ಮಾತರಿ ।**
**ಗರ್ಭಪ್ರಶ್ನೇಷು ಕಥಯನ್ ದೈವಜ್ಞೋ ವಿಜಯೀ ಭವೇತ್ ॥**

[ ಗಂಡುಮಗುವೆಂದೇ ತಂದೆಗೂ, ಹೆಣ್ಣುಮಗುವೆಂದೇ ತಾಯಿಗೂ ಗರ್ಭಿಣಿಯ ವಿಷಯವಾಗಿ ಪ್ರಶ್ನೆ ಹೇಳುವ ಜೋಯಿಸನಿಗೆ ಜಯ ಕಟ್ಟಿಟ್ಟಿದ್ದು. ]

ಹಣದ ಸಂಪಾದನೆಗೆ ಹತ್ತಿರದ ದಾರಿಗಳು :—

**ದೈವಜ್ಞತ್ವಂ ಮಾಂತ್ರಿಕತ್ವಂ ಭೈಷಜ್ಯಂ ಚಾಟುಕೌಶಲಮ್ ।**
**ಏಕೈಕಮರ್ಥಲಾಭಾಯ ದ್ವಿತ್ರಿಯೋಗಸ್ತು ದುರ್ಲಭಃ ॥**

[ ಜ್ಯೋತಿಷ್ಯ, ಮಾಂತ್ರಿಕತ್ವ, ವೈದ್ಯ, ಸವಿನುಡಿಯ ಕೌಶಲ, ಇವುಗಳಲ್ಲಿ ಒಂದೊಂದೂ ಹಣವನ್ನು ತರುವಂಥದು. ಎರಡು ಮೂರು ಒಟ್ಟಿಗೆ ಸೇರುವುದು ವಿರಳ. ]

ಇಂತಹ ಸ್ವತಂತ್ರ ಕೃತಿಗಳಲ್ಲದೆ, ವಿಡಂಬನ ಪ್ರಧಾನವಾಗಿಯೇ ಇರುವ "ಅನ್ಯೋಕ್ತಿ" ಅಥವಾ 'ಅನ್ಯಾಪದೇಶ' ಮಯವಾದ ಸುಭಾಷಿತ ಕಾವ್ಯ ಜಾತಿಯೇ ಒಂದುಂಟು. ಹತ್ತಾರು ಕವಿಗಳು ಅನ್ಯಾಪದೇಶ ಅಥವಾ ಅನ್ಯೋಕ್ತಿ ಪದ್ಯಗಳ ಶತಕಗಳನ್ನೇ ಬರೆದಿದ್ದಾರೆ. ಜಗನ್ನಾಥ ಪಂಡಿತರಾಜ, ನೀಲಕಂಠದೀಕ್ಷಿತ, "ಮಹಿಷಶತಕ" ವನ್ನು ಬರೆದ ಕುಟ್ಟಿಕವಿ ಮುಂತಾದ ವರು ಸ್ವಂತ ಪದ್ಯಗಳನ್ನು ಬರೆದರೆ ಅನೇಕರ ಪದ್ಯಗಳನ್ನು ಸಂಕಲನ ಮಾಡಿರುವ ಶತಕಗಳೂ ಉಂಟು. ಅಪ್ರಸ್ತುತ ಪ್ರಶಂಸಾಲಂಕಾರದಿಂದ ಕಾಗೆ, ಗೂಗೆ, ಎತ್ತು, ಎಮ್ಮೆ, ಮುಂತಾದುವುಗಳನ್ನು ವರ್ಣಿಸುವ ನೆವದಿಂದ ಕವಿ ಗಳು ದೊಡ್ಡಮನುಷ್ಯರೇ ಮುಂತಾದವರ ದೋಷಗಳನ್ನು ಎತ್ತಿಹಾಕುತ್ತಾರೆ. ಈ ಶತಕಗಳಲ್ಲೆಲ್ಲ ಪ್ರಾಚೀನವಾದುದು ಸುಮಾರು ಕ್ರಿ.ಶ. ೮ ನೆ ಶತಮಾನ ದಲ್ಲಿ ಕಾಶ್ಮೀರದಲ್ಲಿ ರಚಿತವಾದ "ಭಲ್ಲಟಶತಕ." ಒಂದು ಉದಾಹರಣೆ.—

**ರೇ ರೇ ರಾಸಭ ವಸ್ತ್ರಭಾರವಹನಾತ್ ಕುಗ್ರಾಸಮಶ್ನಾಸಿ ಕಿಂ**
**ರಾಜಾಶ್ವಾವಸಥಂ ಪ್ರಯಾಹಿ ಚಣಕಾಭ್ಯೂಷಾನ್ ಸುಖಂ-**
**ಭಕ್ಷಯ ।**
**ಸರ್ವೇ ಪುಚ್ಛವತೋ ಹಯಾ ಇತಿ ವದಂತ್ಯತ್ರಾಧಿಕಾರೇ ಸ್ಥಿತಾಃ**
**ರಾಜಾ ತೈರುಪದಿಷ್ಟಮೇವ ಮನುತೇ ಸತ್ಯಂ ತಟಸ್ಥಾಃ ಪರೇ ॥**

[ ಎಲೈ ಕತ್ತೆ ! ಬಟ್ಟೆಯ ಮೂಟೆಯನ್ನು ಹೊತ್ತುಕೊಂಡು ಕಸವನ್ನೇಕೆ ತಿನ್ನುತ್ತಿರುವೆ? ಸುಮ್ಮನೆ ರಾಜನ ಕುದುರೆ ಲಾಯಕ್ಕೆ ಹೋಗಿ ಸುಖವಾಗಿ

ಬಿಸಿ ಕಡಲೆಯನ್ನು ತಿನ್ನು ಬಾಲವಿರುವುದೆಲ್ಲ ಕುದುರೆಯೇ ಎನ್ನುತ್ತಾರೆ ಇಲ್ಲಿಯ ಅಧಿಕಾರಿಗಳು ರಾಜನಿಗೆ ಅವರು ಹೇಳಿದ ಮಾತೇ ಸತ್ಯ. ಉಳಿದವರೆಲ್ಲರೂ ಉದಾಸೀನರು. ]

ಅನ್ಯೋಕ್ತಿ ಕಾವ್ಯಗಳಲ್ಲಿ ವಿಡಂಬನೆಯಂತೆ ಗರ್ವ, ದೈನ್ಯ, ಜುಗುಪ್ಸೆ, ಅಸಹನೆ, ಮುಂತಾದ ಅನೇಕ ಬಗೆಯ ಭಾವಗಳ ಪ್ರಕಟನೆಗೂ ಅವಕಾಶವಿದೆ —

ಮನ್ನಣೆ ಸಿಕ್ಕದ ಕವಿಯ ಆಶಾವಾದವನ್ನಿಲ್ಲಿ ನೋಡಿ :—

**ತಾವತ್ ಕೋಕಿಲ ವಿರಸಾನ್ ಯಾಪಯ ದಿವಸಾನ್ ವನಾಂತರೇ ನಿವಸನ್ ।**
**ಯಾವನ್ಮಿಲದಲಿಮಾಲಃ ಕೋಽಪಿ ರಸಾಲಃ ಸಮುಲ್ಲಸತಿ ॥**[20]

[ ಕೋಗಿಲೆ, ದುಂಬಿಗಳಿಂದ ಅಲಂಕೃತವಾದ ಮಾವಿನ ಮರವೊಂದು ಚಿಗುರುವವರೆಗೂ ವಿರಸವಾದೀ ದಿವಸಗಳನ್ನು ಅಲ್ಲೇ ವನಾಂತರದಲ್ಲೇ ಕಳೆಯುತ್ತಿರು. ]

ಕ್ಷಣಿಕವಾದ ವಿವಿಧ ಚಿತ್ತವೃತ್ತಿಗಳ ಪ್ರಕಟನೆಗೆ ವ್ಯಂಗ್ಯಾರ್ಥತುಂದಿಲವಾದ ಅನ್ಯೋಕ್ತಿಮಾರ್ಗಕ್ಕಿಂತ ಉತ್ತಮವಾದ ಕಾವ್ಯಮಾರ್ಗವೇ ಇಲ್ಲವೆನ್ನಬಹುದು. ಸಂಸ್ಕೃತದಲ್ಲಿ ಇಂತಹ ರಚನೆಗಳಿಗೆ ಸ್ವಲ್ಪವೂ ಕೊರತೆಯಿಲ್ಲ – ಇನ್ನೂ ಕೆಲವು ಮಾದರಿಗಳನ್ನು ನೋಡಿ :—

**ನನ್ವಾಶ್ರಯಸ್ಥಿತಿರಿಯಂ ತವ ಕಾಲಕೂಟ**
**ಕೇನೋತ್ತರೋತ್ತರ ವಿಶಿಷ್ಟಪದೋಪದಿಷ್ಟಾ ।**
**ಪ್ರಾಗರ್ಣವಸ್ಯ ಹೃದಯೇ ವೃಷಲಕ್ಷ್ಮಣೋಽಥ**
**ಕಂಠೇಽಧುನಾ ವಸಸಿ ವಾಚಿ ಪುನಃ ಖಲಾನಾಮ್ ॥**

**(ಭಲ್ಲಟಶತಕ, ೫)**

[ಕಾಲಕೂಟ ವಿಷವೆ! ಒಂದಕ್ಕಿಂತ ಒಂದು ಉತ್ತಮವಾದ ನೆಲೆಗಳನ್ನು ನಿನಗೆ ಹೇಳಿಕೊಟ್ಟವರು ಯಾರು? ಮೊದಲು ಸಮುದ್ರದ ಗರ್ಭದಲ್ಲಿದ್ದ ನೀನು ಮುಂದೆ ಪರಮೇಶ್ವರನ ಕೊರಳಿಗೆ ಬಂದು ಈಗ ದುರ್ಜನರ ಮಾತಿನಲ್ಲಿ ನೆಲೆಸಿರುವೆಯಲ್ಲಾ! ]

---

20. ಜಗನ್ನಾಥನ ಭಾಮಿನೀವಿಲಾಸದಿಂದ.

**ಅಂತಶ್ಛಿದ್ರಾಣಿ ಭೂಯಾಂಸಿ ಕಂಟಕಾ ಬಹವೋ ಬಹಿಃ ।**
**ಕಥಂ ಕಮಲನಾಲಸ್ಯ ಮಾ ಭೂವನ್ ಭಂಗುರಾ ಗುಣಾಃ ॥**

(ಅದೇ, ೨೫)

[ಒಳಗಿನ ಛಿದ್ರಗಳಿಗೆ ಲೆಕ್ಕವಿಲ್ಲ, ಹೊರಗೋ ಮುಳ್ಳುಗಳು ಅನೇಕ ಎಂದಮೇಲೆ ಕಮಲನಾಳದ ಎಳೆಗಳು ಬೇಗ ಮುರಿಯದೆ ಇರುವುವೆಂತು?]

ಒಳಜಗಳಗಳಿಂದಲೂ ಬಾಹ್ಯವೈರಿಗಳಿಂದಲೂ ಭಂಗಿತನಾಗುವ ಗುಣಾನ್ವಿತನ ಚಿತ್ರ ಇಲ್ಲಿ ಬಹಳ ಸೊಗಸಾಗಿ ನಿದರ್ಶಿತವಾಗಿದೆ!

**ವರ್ಷೇ ಸಮಸ್ತ ಏವೈಕಃ ಶ್ಲಾಘ್ಯಃ ಕೋಽಪ್ಯೇಷ ವಾಸರಃ ।**
**ವಿನ್ಯೈರ್ಮಹತ್ತ್ವಯಾ ನೀತೋ ಯೋ ನ ಪೂರ್ವೈರ್ನ ಚಾಪರೈಃ ॥**

(ಅದೇ, ೬೭)

[ವರ್ಷದ ದಿನಗಳಲ್ಲೆಲ್ಲ ಯಾವ ದಿವಸವು ಹಿಂದಿನ ಮತ್ತು ಮುಂದಿನ ದಿನಗಳಿಂದ ಮಹತ್ತ್ವ ಲೇಪವನ್ನು ಪಡೆಯುವುದಿಲ್ಲವೋ ಅದೊಂದೇ ಶ್ಲಾಘ್ಯ!]

ಪೂರ್ವಿಕರ, ಇಲ್ಲವೆ ಸಂತತಿಯ ಮಹತ್ತ್ವನಿರಪೇಕ್ಷವಾದ ಖ್ಯಾತಿಯುಳ್ಳವನೇ ಶ್ಲಾಘ್ಯನೆಂಬುದು ಇಲ್ಲಿ ವ್ಯಂಗ್ಯ

ಯುಕ್ತಾಯುಕ್ತ ವಿವೇಕವಿಲ್ಲದವನನ್ನು ಕುರಿತ ವ್ಯಾಜಸ್ತುತಿಯಿದು –

**ಹೇಮಕಾರ! ಸುಧಿಯೇ ನಮೋಽಸ್ತು ತೇ**
**ದುಸ್ತರೇಷು ಬಹುಶಃ ಪರೀಕ್ಷಿತುಮ್ ।**
**ಕಾಂಚನಾಭರಣಮಶ್ಮನಾ ಸಮಂ**
**ಯತ್ ತ್ವಯೈವಮಧಿರೋಪ್ಯತೇ ತುಲಾಮ್ ॥**

(ಅದೇ, ೨೭)

[ಅಯ್ಯಾ ಅಕ್ಕಸಾಲೆ, ಇತರರಿಗೆ ಬಹಳ ದುಷ್ಕರವಾದುದನ್ನೂ ಪರೀಕ್ಷಿಸುವ ಪಾಂಡಿತ್ಯವುಳ್ಳ ನಿನಗೆ ನಮಸ್ಕಾರ! ಕನಕಾಭರಣವನ್ನೂ ಕಲ್ಲನ್ನೂ ಒಂದೇ ತಕ್ಕಡಿಯಲ್ಲಿಟ್ಟು ತೂಗುವವನೆಂದರೆ ನೀನೊಬ್ಬನೇ!]

## ೩. ನೀತಿ–ವೈರಾಗ್ಯ–ಶತಕಗಳು; ಇತ್ಯಾದಿ

ಲೋಕಾನುಭವವನ್ನೂ ಜೀವನದ ಉನ್ನತಿಗೆ ಸಾಧಕವಾದ ಅಂಶಗಳನ್ನೂ ಕಾವ್ಯದಲ್ಲಿ ಕ್ರೋಡೀಕರಿಸುವ ರೂಢಿ ಮೊದಲಿನಿಂದಲೂ ಭಾರತದಲ್ಲಿದ್ದಿತು. ಮಹಾಭಾರತದಲ್ಲಿಯೇ ನೀತಿಪರವಾದ ನೂರಾರು ಶ್ಲೋಕಗಳು ಗಾದೆಗಳ ಹಾಗೆ ಬರುವುದನ್ನು ನೋಡಿದ್ದೇವೆ. ಪಾಳೀಭಾಷೆಯ 'ಧರ್ಮಪದ'ದಲ್ಲಿಯೂ ಹೀಗೆಯೇ ತತ್ತ್ವಜ್ಞಾನ, ನೀತಿ, ಮುಂತಾದುವನ್ನು ಕುರಿತ ಲೋಕಾನುಭವದ ಸಂಗ್ರಹವು ಕಾಣಬರುತ್ತದೆ. ಸಂಸ್ಕೃತದಲ್ಲಿ ಇಂತಹ ಲೋಕೋಕ್ತಿಗಳ ಮೊದಲ ಸಂಕಲನ ಚಾಣಕ್ಯನ ಹೆಸರಿನಲ್ಲಿ ಪ್ರಚಾರಕ್ಕೆ ಬಂದಿದೆ. 'ವೃದ್ಧಚಾಣಕ್ಯ', 'ಚಾಣಕ್ಯನೀತಿ', 'ರಾಜನೀತಿ ಸಮುಚ್ಚಯ' ಎಂಬ ನಾಮಾಂತರಗಳೆಲ್ಲವೂ ಆ ಒಂದೇ ಸಂಕಲನಕ್ಕಿವೆ. ಇದರ ಕೆಲವು ಸಂಸ್ಕರಣಗಳಲ್ಲಿ ೧೭ ಪ್ರಕರಣಗಳಿದ್ದರೆ, ಇನ್ನು ಕೆಲವಲ್ಲಿ ೧ಲ ಪ್ರಕರಣಗಳಿವೆ. ಲೋಕವ್ಯವಹಾರದ ಪರಿಜ್ಞಾನಕ್ಕೆ ಈ ನೀತಿಕಾವ್ಯದಲ್ಲಿ ಮಾರ್ಮಿಕ ಸಾಮಗ್ರಿಗಳಿವೆ. ಒಂದೊಂದೂ ಒಂದು ಭಿನ್ನ ಉಪದೇಶವಾದ್ದರಿಂದ ಶ್ಲೋಕಗಳಿಗೆ ಪರಸ್ಪರ ಸಂಬಂಧವಿರುವುದಿಲ್ಲ. ಈ ಶ್ಲೋಕಗಳನ್ನು ಭಾರತದ ವ್ಯವಹಾರಜ್ಞಾನದ ಗುಳಿಗೆಗಳೆನ್ನಬಹುದು. ಇವುಗಳು ಅತ್ಯಂತ ಜನಪ್ರಿಯವಾಗಿವೆ

ಉದಾಹರಣೆ —

**೧. ಸಕೃತ್ ಜಲ್ಪಂತಿ ರಾಜಾನಃ ಸಕೃತ್ ಜಲ್ಪನ್ತಿ ಪಂಡಿತಾಃ ।**
**ಸಕೃತ್ ಪ್ರದೀಯತೇ ಕನ್ಯಾ ತ್ರೀಣ್ಯೇತಾನಿ ಸಕೃತ್ ಸಕೃತ್ ॥**

[ ಅರಸರಾಡುವುದು ಒಂದೇ ಬಾರಿ, ಪಂಡಿತರು ನುಡಿಯುವುದು ಒಂದೇಬಾರಿ, ಕನ್ಯಾದಾನ ಮಾಡುವುದೂ ಒಂದೇ ಬಾರಿ, ಈ ಮೂರೂ ಒಂದೊಂದೇ ಬಾರಿ. ]

**ಪರವಾದಂ ಪರದ್ರವ್ಯಂ ಪರಹಾನಿಂ ಪರಸ್ತ್ರಿಯಮ್ ।**
**ಪರವೇಶ್ಮನಿವಾಸಂ ಚ ದೂರತಃ ಪರಿವರ್ಜಯೇತ್ ॥**

[ ಪರದೂಷಣೆ, ಪರದ್ರವ್ಯ, ಪರಹಾನಿ, ಪರಸ್ತ್ರೀ, ಪರಗೃಹವಾಸ, ಇವನ್ನು ದೂರದಿಂದಲೇ ತೊರೆಯಬೇಕು. ]

**ಲುಬ್ಧಮರ್ಥೇನ ಗೃಣ್ಹೀಯಾತ್ ಸ್ತಬ್ಧಮಂಜಲಿಕರ್ಮಣಾ ।**
**ಮೂರ್ಖಂ ಛನ್ದಾನುವೃತ್ತ್ಯಾ ಚ ಯಾಥಾತಥ್ಯೇನ ಪಂಡಿತಂ ॥**

[ಲೋಭಿಯನ್ನು ದುಡ್ಡಿನಿಂದ ವಶಮಾಡಿಕೊಳ್ಳಬೇಕು; ತಟಸ್ಥನನ್ನು ಕೈಮುಗಿಯುವ ಕೆಲಸದಿಂದ, ಮೂರ್ಖನನ್ನು ಅನುಸರಣೆಯಿಂದ; ಪಂಡಿತನನ್ನು ಸತ್ಯದಿಂದ!]

**ಅನಾಯಕೇ ನ ವಸ್ತವ್ಯಂ ನ ವಸೇದ್ ಬಹುನಾಯಕೇ ।**
**ಸ್ತ್ರೀನಾಯಕೇ ನ ವಸ್ತವ್ಯಂ ನ ವಸೇದ್ ಬಾಲನಾಯಕೇ ॥**

[ಅನಾಯಕವಾದ ಪ್ರದೇಶದಲ್ಲಿ ವಾಸಮಾಡಬಾರದು, ಬಹಳ ನಾಯಕರಿದ್ದ ಪ್ರದೇಶದಲ್ಲಿಯೂ ವಾಸಮಾಡಬಾರದು. ಹೆಂಗಸು ಅಥವಾ ಹುಡುಗನಾಳುವ ಕಡೆಯೂ ವಾಸಮಾಡಬಾರದು.]

ಹೀಗೆಯೇ ವರರುಚಿ, ಘಟಕರ್ಪರ, ವೇತಾಲಭಟ್ಟ ಮುಂತಾದವರ ಹೆಸರಿನಲ್ಲಿಯೂ 'ನೀತಿರತ್ನ' 'ನೀತಿಸಾರ', 'ನೀತಿಪ್ರದೀಪ' ಮುಂತಾದ ಸಂಗ್ರಹಗಳಿವೆ. ಎಲ್ಲಕ್ಕಿಂತಲೂ ಪ್ರಸಿದ್ಧವಾದವು ಭರ್ತೃಹರಿಯ ನೀತಿ ಮತ್ತು ವೈರಾಗ್ಯ ಶತಕಗಳು. ಇವುಗಳ ಪರಿಚಯವಿಲ್ಲದ ಸಂಸ್ಕೃತ ವಿದ್ಯಾರ್ಥಿಯೇ ಇಲ್ಲವೆನ್ನಬಹುದು. ಭರ್ತೃಹರಿಯ ಶೈಲಿ ಅಷ್ಟು ಸುಲಭವೂ ಸುಂದರವೂ ಆಗಿರುವುದೇ ಕಾರಣ. ನೀತಿಶತಕದಿಂದ ಒಂದು ಉದಾಹರಣೆ:—

**ಯದಾ ಕಿಂಚಿಜ್ಞೋಽಹಂ ಗಜ ಇವ ಮದಾಂಧಃ ಸಮಭವಂ**
**ತದಾ ಸರ್ವಜ್ಞೋಽಸ್ಮೀತ್ಯಭವದವಲಿಪ್ತಂ ಮಮ ಮನಃ ।**
**ಯದಾ ಕಿಂಚಿತ್ ಕಿಂಚಿತ್ ಬುಧಜನಸಕಾಶಾದವಗತಂ**
**ತದಾ ಮೂರ್ಖೋಽಸ್ಮೀತಿ ಜ್ವರ ಇವ ಮದೋ ಮೇ**
**ವ್ಯಪಗತಃ ॥**

'ನಾನು ಅಲ್ಪಜ್ಞನಾಗಿದ್ದಾಗ ಮದ್ದಾನೆಯಂತೆ ಮದಾಂಧನಾಗಿದ್ದೆ. ಆಗ ನಾನೇ ಸರ್ವಜ್ಞನೆಂದು ಮನಸ್ಸಿನಲ್ಲಿ ಗರ್ವಿಸುತ್ತಿದ್ದೆ. ಆದರೆ ಸ್ವಲ್ಪ ಸ್ವಲ್ಪವಾಗಿ ವಿದ್ವಾಂಸರ ಕಡೆಯಿಂದ ವಿಷಯಗಳು ತಿಳಿಯಲಾರಂಭಿಸಿದೊಡನೆ ನಾನು ಮೂರ್ಖನೆಂಬ ಅರಿವಾಯಿತು, ಜ್ವರದಂತೆ ನನ್ನ ಮದವೆಲ್ಲ ಇಳಿದುಹೋಯಿತು.'

ಪೂರ್ವದ ನೀತಿವಾಕ್ಯಗಳಲ್ಲಿ ಕಾವ್ಯಾಂಶ ಕಡಿಮೆ, ಕವಿಯ ಸ್ವಾನುಭವದ ಸಾಧಾರಣ ಪ್ರಕಟನೆಯುಂಟೇ ಹೊರತು, ವೈಯಕ್ತಿಕವಾದ ಅಂಶಗಳ ಅಭಿವ್ಯಕ್ತಿಯೇ ಇಲ್ಲ. ಇಲ್ಲಿ ಕವಿಯ ಆತ್ಮೀಯತೆಯು ಸೇರಿ ಕಾವ್ಯಾಂಶ

ಹೆಚ್ಚುತ್ತದೆ. ಯಥೋಚಿತವಾಗಿ ದೃಷ್ಟಾಂತಗಳನ್ನೂ ಹೋಲಿಕೆಗಳನ್ನೂ ಕೊಡುವ ಕವಿಯ ಕಲೆಯೂ ವ್ಯಕ್ತವಾಗಿದೆ.

ಭರ್ತೃಹರಿಯ ಆತ್ಮೀಯ ಭಾವಗಳು ಇನ್ನೂ ಹೆಚ್ಚು ಪ್ರಭಾವ ಶಾಲಿಯಾದ ಅಭಿವ್ಯಕ್ತಿಯನ್ನು ಪಡೆದಿವೆ—ಅವನ **ವೈರಾಗ್ಯಶತಕದಲ್ಲಿ.** ಯಾವ ರಾಗಾವೇಶದಿಂದ ಶೃಂಗಾರಶತಕ ರಚಿತವಾಯಿತೋ ಅದೇ ಮಟ್ಟದ ಆವೇಶವಿದೆ, ಇವನ ವಿರಾಗದ ಪ್ರತಿಪಾದನೆಯಲ್ಲಿಯೂ. ಮನುಷ್ಯನ ಮನೋಧರ್ಮದಲ್ಲಿ ಅತಿ ಮುಖ್ಯವಾದ, ಅದವ್ಯವಾದ, ಎರಡು ವಿರುದ್ಧ ಪ್ರವೃತ್ತಿಗಳೆಂದರೆ—ರಾಗ ಮತ್ತು ವಿರಾಗ. ಎಂತಹ ಶೃಂಗಾರಿಗೂ ಒಮ್ಮೆ ಯಾದರೂ ವಿರಾಗದ ಛಾಯೆ ಉದಿಸದೆ ಹೋಗುವುದಿಲ್ಲ. ಅದೇ ಸಣ್ಣ ಕಿಡಿಯಾಗಿದ್ದುದು ದೊಡ್ಡ ಕೆಂಡವಾಗಿ ಬಹಳ ಹೆಚ್ಚಿನ ಉರಿಯೂ ಆಗಬಹು ದೆಂಬುದನ್ನು ಭರ್ತೃಹರಿಯ ವೈರಾಗ್ಯಶತಕವು ತೋರುತ್ತದೆ. ವೈರಾಗ್ಯವೂ ಕಾಮದಂತೆಯೇ ಸರ್ವಸಾಧಾರಣವಾದ ಮಾನವಪ್ರವೃತ್ತಿಯಲ್ಲದೆ ಹೋಗಿ ದ್ದರೆ, ಬುದ್ಧಾದಿ ಧರ್ಮಬೋಧಕರೆಲ್ಲರೂ ಮೂರ್ಖಶಿಖಾಮಣಿಗಳಾಗು ತ್ತಿದ್ದರು. ವಸ್ತುತಃ ಅವರನ್ನು ಮೂರ್ಖರೆಂದು ಪ್ರಪಂಚ ಇನ್ನೂ ಸಿದ್ಧ ಪಡಿಸಲಿಲ್ಲ. ಕೋಟ್ಯಂತರ ಕಾಮಾತುರರು ಹುಟ್ಟಿ ಸತ್ತರೂ ಈ ವೈರಾಗ್ಯದ ಸಾಮಗ್ರಿಯಿಂದ ಉತ್ತಮ ಕಾವ್ಯವು ಸಾಧ್ಯವೆಂಬುದನ್ನು ತೋರಿಸಿರುವ ಶ್ರೇಯಸ್ಸು ಸಂಸ್ಕೃತಕಾವ್ಯದ ವೈಶಿಷ್ಟ್ಯ. ಒಂದು ಉದಾಹರಣೆಯನ್ನು ನೋಡಿ —

ಪಡಬಾರದ ಪಾಡನ್ನೆಲ್ಲ ಪಟ್ಟರೂ ಸುಖವನ್ನರಿಯದ ಆಶಾಪಿಶಾಚ ಗ್ರಸ್ತನೊಬ್ಬನ ಚಿತ್ರ —

**೧ ಭ್ರಾಂತಂ ದೇಶಮನೇಕದುರ್ಗವಿಷಮಂ ಪ್ರಾಪ್ತಂ ನ ಕಿಂಚಿತ್ ಫಲಂ**
**ತ್ಯಕ್ತ್ವಾ ಜಾತಿಕುಲಾಭಿಮಾನಮುಚಿತಂ ಸೇವಾ ಕೃತಾ ನಿಷ್ಫಲಾ ।**
**ಭುಕ್ತಂ ಮಾನವಿವರ್ಜಿತಂ ಪರಗೃಹೇಷ್ವಾಶಂಕಯಾ ಕಾಕವತ್**
**ತೃಷ್ಣೇ ಜೃಂಭಸಿ ಪಾಪಕರ್ಮಪಿಶುನೇ ನಾದ್ಯಾಪಿ ಸಂತುಷ್ಯಸಿ ॥**

‘ ಕಾಡುಮೇಡುಗಳಲ್ಲೆಲ್ಲಾ ದೇಶವನ್ನೆಲ್ಲ ಅಲೆದಾಯಿತು , ಫಲವೇನೂ ಬರಲಿಲ್ಲ. ಯೋಗ್ಯವಾದ ಜಾತಿ, ಕುಲ, ಮುಂತಾದ ಅಭಿಮಾನಗಳನ್ನೆಲ್ಲ ನೀಗಿ ನೀಚರ ಸೇವೆ ಮಾಡಿದ್ದಾಯಿತು , ಅದೂ ನಿಷ್ಫಲವೇ. ಕಾಗೆಯಂತೆ ಮಾನ ಗೆಟ್ಟು, ಕಂಡವರ ಮನೆಯಲ್ಲಿ ಅಂಜಿಕೊಂಡು ಉಂಡಾಯಿತು. ಹಾಳು ದುರಾ ಸೆಯೇ, ಇನ್ನೂ ನೀನು ಹಿಂಗಿಲ್ಲ, ದುಷ್ಕಾರ್ಯಗಳಿಗೆ ಪ್ರೇರಿಸುತ್ತಲೇ ಇರುವೆ! ’

ಭರ್ತೃಹರಿಯ ವೈರಾಗ್ಯಶತಕದ ಅನುಕರಣೆಯಲ್ಲಿಯೇ ಶಿಲ್ಹಣನ ‘ ಶಾಂತಿ ಶತಕ ’ವೂ ರಚಿತವಾಗಿದೆ. ಶಂಕರಾಚಾರ್ಯರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ‘ ಶತಶ್ಲೋಕೀ ’, ‘ ಮೋಹಮುದ್ಗರ ’, ‘ ಚರ್ಪಟಪಂಜರಿಕಾ ’, ಮುಂತಾ ದವೂ ವಿರಕ್ತಿಭಾವದ ಸುಂದರ ಅಭಿವ್ಯಕ್ತಿಮಯವಾದ ಕಾವ್ಯಗಳೇ. ಇವು ಗಳಲ್ಲಿ ಸಂಸ್ಕೃತದ ಗಂಭೀರ ಅಕ್ಷರವೃತ್ತಗಳ ಜತೆಗೆ ಗಾನಯೋಗ್ಯವಾದ ಪ್ರಾಕೃತ ಮಾತ್ರಾವೃತ್ತಗಳೂ ಅಂತ್ಯಪ್ರಾಸಗಳೂ ಸೇರಿರುವುದರಿಂದ ಜನರ ಆದರಕ್ಕೆ ಇನ್ನೂ ಹೆಚ್ಚು ಪಾತ್ರವಾಗಿವೆ. ಈಚೀಚಿನವರೆಗೂ ಭಾರ ತೀಯರೆಲ್ಲರ ಬಾಯಲ್ಲಿಯೂ ಇರುತ್ತಿದ್ದ ಕೆಲವು ಪದ್ಯಗಳಿವು ,

**ದಿನಮಪಿ ರಜನೀ ಸಾಯಂಪ್ರಾತಃ**
**ಶಿಶಿರವಸಂತೌ ಪುನರಾಯಾತಃ ।**
**ಕಾಲಃ ಕ್ರೀಡತಿ ಗಚ್ಛತ್ಯಾಯುಃ**
**ತದಪಿ ನ ಮುಂಚತ್ಯಾಶಾವಾಯುಃ ॥**

(ಚರ್ಪಟ ಪಂಜರಿಕಾ)

೧. [ಬೆಳಗು–ಇರುಳು, ಸಂಜೆ–ಹಗಲು, ಶಿಶಿರ–ವಸಂತ, ಮತ್ತೆ ಮತ್ತೆ ಬರುತ್ತಲೇ ಇರುತ್ತವೆ. ಕಾಲ ಆಡುತ್ತದೆ, ಆಯುಷ್ಯ ಹೋಗುತ್ತದೆ. ಆದರೂ ಆಶಾಭೂತ ಮಾತ್ರ ಬಿಡುವುದಿಲ್ಲ.]

**ಮೂಢ ಜಹೀಹಿ ಧನಾಗಮ ತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಂ ॥**

(ಮೋಹಮುದ್ಗರ)

೨. [ಮೂಢನೆ, ಹಣವನ್ನು ಕೂಡಿಸುವಾಸೆಯನ್ನು ಬಿಡು. ಮನಸ್ಸಿನ ಆಶೆಯನ್ನು ತೊರೆದು ಸದ್ಬುದ್ಧಿಯನ್ನು ಪಡೆ. ನಿನ್ನ ಕರ್ಮಾಯತ್ತವಾಗಿ ಬಂದಷ್ಟು ವಿತ್ತದಿಂದಲೇ ಚಿತ್ತಶಾಂತಿಯನ್ನು ಹೊಂದು.]

ಇವುಗಳಲ್ಲೆಲ್ಲ ಛಂದಸ್ಸಿನ ಸೊಬಗು, ಶಬ್ದದ ಚೆಲುವು, ಅರ್ಥದ ಸರಲತೆಗಳು ಕೂಡಿಕೊಂಡು ಭಾವದೀಪ್ತಿಗೆ ಕಾರಣವಾಗುತ್ತವೆ. ಜಗನ್ನಾಥ ಪಂಡಿತ-ರಾಜನ **ಭಾಮಿನೀವಿಲಾಸ**ದಲ್ಲಿಯೂ ಕಡೆಯ ಭಾಗವಾದ 'ಶಾಂತಿ ವಿಲಾಸ'ವು ಈ ಜಾತಿಗೇ ಸೇರುತ್ತದೆ. ಒಂದು ಉದಾಹರಣೆ :—

**ಭೂತಿರ್ನೀಚಗೃಹೇಷು ವಿಪ್ರಸದನೇ ದಾರಿದ್ರ್ಯಕೋಲಾಹಲಃ**
**ನಾಶೋಹನ್ತ ಸತಾಮಸತ್ಪಥಜುಷಾಮಾಯುಃ ಶತಾನಾಂ ಶತಮ್ ।**
**ದುರ್ನೀತಿಂ ತವ ವೀಕ್ಷ್ಯ ಕೋಪದಹನಜ್ವಾಲಾಜಟಾಲೋಽಪಿ ಸನ್**
**ಕಿಂ ಕುರ್ವೇ ಜಗದೀಶ ಯತ್ಪುನರಹಂ ದೀನೋ ಭವಾನೀಶ್ವರಃ ॥**

[ಅಷ್ಟೈಶ್ವರ್ಯವೂ ನೀಚರ ಮನೆಯಲ್ಲೇ, ವಿಪ್ರರ ಮನೆಗಳಲ್ಲಿ ದಾರಿದ್ರ್ಯದ್ದೇ ಕೋಲಾಹಲ. ಸತ್ಪುರುಷರಿಗೆಲ್ಲ ವಿನಾಶ, ದುರ್ಮಾರ್ಗಿಗಳ ಆಯುಸ್ಸು ಒಂದು ನೂರಲ್ಲ, ನೂರು ನೂರು. ಹೀಗೆ ನಿನ್ನ ಅನ್ಯಾಯವನ್ನು ಕಂಡು ಕಿಡಿಕಿಡಿಯಾಗಿದ್ದೇನೆ, ಆಗಿ ತಾನೇ ನಾನೇನು ಮಾಡಬಲ್ಲೆ? ನಾನು ದೀನ, ನೀನು ಈಶ್ವರ!]

ಈ ಜಾತಿಯ ರಚನೆಗಳೂ ಸಂಸ್ಕೃತದಲ್ಲಿ ಅಗಣಿತವಾಗಿವೆ. ಸ್ಥಲ ಸಂಕೋಚದಿಂದ ಕೇವಲ ದಿಗ್ದರ್ಶನ ಮಾತ್ರ ಇಲ್ಲಿ ಸಾಧ್ಯವಾಗಿದೆ.

## ೪. ಸ್ತೋತ್ರ-ಕಾವ್ಯಗಳು

ಮಹಾಭಾರತದಲ್ಲೂ, ಅಷ್ಟಾದಶಪುರಾಣಗಳಲ್ಲೂ ಸಾವಿರಾರು ದೇವತಾ ಸ್ತೋತ್ರರಚನೆಗಳು ಕಂಡುಬರುತ್ತವೆ. ಕಾಳಿದಾಸ, ಭಾರವಿ, ಮಾಘ, ರತ್ನಾಕರ, ಮುಂತಾದವರ ಮಹಾಕಾವ್ಯಗಳಲ್ಲೂ ಸುದೀರ್ಘ ಸ್ತೋತ್ರಗಳು ಬರುತ್ತವೆ. ಅಶ್ವಘೋಷನೇ ಆದಿಯಾಗಿ ಬೌದ್ಧರಿಂದಲೂ ಸ್ತೋತ್ರಗಳು ರಚಿತವಾಗಿವೆ. ಆದರೆ ಎಲ್ಲವನ್ನೂ ಕಾವ್ಯವೆಂದು ಏಕವಿಧವಾಗಿ ಪರಿಗಣಿಸು

ವಂತಿಲ್ಲ. ಧಾರ್ಮಿಕ ದೃಷ್ಟಿಯಿಂದ ಪರಮಪೂಜ್ಯವಾದ ಅಪರಿಮಿತ ಸ್ತೋತ್ರಗಳಲ್ಲಿ ಕಾವ್ಯಗುಣ ಕಾಣುವುದೇ ವಿರಳ. ಇಷ್ಟದೇವತೆಯ ನೂರೆಂಟೋ ಸಾವಿರದೆಂಟೋ ಹೆಸರುಗಳ ಅಷ್ಟೋತ್ತರಶತನಾಮಗಳೂ ಸಹಸ್ರನಾಮಗಳೂ ಕಾವ್ಯದ ವ್ಯಾಪ್ತಿಯಲ್ಲಿ ಸೇರುವುದಿಲ್ಲ. ಕೇವಲ ಶುದ್ಧಭಕ್ತಿಯ ಉದ್ಗಾರಗಳಾದರೂ ಅದರ ಅಭಿವ್ಯಕ್ತಿಯಲ್ಲೊಂದು ನಾವೀನ್ಯವೂ ಚಮತ್ಕಾರವೂ ಇಲ್ಲದಿದ್ದರೆ ಕಾವ್ಯವೆನ್ನುವಂತಿಲ್ಲ ಈ ದೃಷ್ಟಿಯಿಂದ ಸ್ತೋತ್ರಗಳಿಗೆ ಕಾವ್ಯತ್ವವನ್ನು ತರುವುದು ಬಹಳ ಕಷ್ಟವಾದ ಕೆಲಸ. ಸಂಸ್ಕೃತ ಕವಿಗಳು ಮೂರು ಭಿನ್ನರೀತಿಗಳಿಂದ ಕಾವ್ಯತ್ವವನ್ನು ತರಲು ಪ್ರಯತ್ನಿಸಿದ್ದನ್ನು ಕಾಣಬಹುದು. ಸ್ತೋತ್ರಶತಕಗಳನ್ನು ಬರೆದ ಬಾಣ (ಚಂಡೀಶತಕ), ಮಯೂರ (ಸೂರ್ಯಶತಕ), ಆನಂದವರ್ಧನ (ದೇವೀಶತಕ) ಮುಂತಾದವರು ಅರ್ಥನಾವೀನ್ಯದ ಕೊರತೆಯನ್ನು ಶ್ಲೇಷಯಮಕಾನುಪ್ರಾಸಾದಿ ಶಬ್ದಾಲಂಕಾರಗಳ ಚಮತ್ಕಾರದಿಂದ ತುಂಬಿಕೊಳ್ಳಲು ಯತ್ನಿಸಿದರು. ಲೀಲಾಶುಕ, ವೇದಾಂತದೇಶಿಕ ಮುಂತಾದವರು ಇಷ್ಟದೇವತೆಗಳ ಶೃಂಗಾರಾದಿಭಾವಗಳ ವರ್ಣನೆಯಿಂದ ಈ ಕೊರತೆಯನ್ನು ನಿವಾರಿಸಲು ಹೊರಟರು. ಶಂಕರಾಚಾರ್ಯರೇ ಮುಂತಾದವರು ವೇದಾಂತಾದಿ ಶಾಸ್ತ್ರಪ್ರಕ್ರಿಯೆಯ ಸಾರವನ್ನು ಸರಲವಾಗಿ ಬೋಧಿಸಲು ಈ ಮಾರ್ಗವನ್ನಾಶ್ರಯಿಸಿದರು. ಬ್ರಾಹ್ಮಣರಂತೆ ಜೈನರೂ ನೂರಾರು ಸ್ತೋತ್ರಗಳನ್ನು ರಚಿಸಿದ್ದಾರೆ ದಿಗ್ದರ್ಶನಕ್ಕಾಗಿ ಬೇರೆ ಬೇರೆ ರೀತಿಯ ನಮೂನೆಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ —

೧ ನೋ ಕಲ್ಪಾಪಾಯವಾಯೋರದಯದಲತ್ ಕ್ಷ್ಮಾಧರ
ಸ್ಯಾಪಿ ಶಮ್ಯಾ
ಗಾಢೋದ್ಗೀರ್ಣೋಜ್ಜ್ವಲಶ್ರೀರಹನಿ ನ ರಹಿತಾ ನೋ ತಮಃ
ಕಜ್ಜಲೇನ।
ಪ್ರಾಪ್ತೋತ್ಪತ್ತಿಃ ಪತಂಗಾನ್ನ ಪುನರುಪಗತಾ ಮೋಷ
ಮುಷ್ಣತ್ವಿಷೋ ವೋ
ವರ್ತಿಃ ಸೈವಾನ್ಯರೂಪಾ ಸುಖಯತು ನಿಖಿಲದ್ವೀಪ
ದೀಪಸ್ಯ ದೀಪ್ತಿಃ ॥[21]

---

21. ಮಯೂರನ ಸೂರ್ಯಶತಕ.

ಚಂಡರಭಸದೆ ದೊಡ್ಡ ಬೆಟ್ಟಗಳನ್ನೆ ಭೇದಿಪ ಕಲ್ಪದ
ವಿಲಯಕಾಲದ ಗಾಳಿಯಿಂದಲು ಸ್ವಲ್ಪವಾದರು ಸಗ್ಗದ,
ಹಗಲಿನಲ್ಲಿಯೆ ಗಾಢದೀಪ್ತಿಯ ಸೊಬಗನೆಲ್ಲೆಡೆ ಹರಡುವ,
ಎಣ್ಣೆಗಪ್ಪಿನ ಸೋಂಕು ಕೊಂಚವು ಎಂದಿಗೂ ತಾನಿಲ್ಲದ,
ತವೆ ಪತಂಗದ ಕಾರ್ಯರೂಪದೆ ಪುಟ್ಟಿ ಬೆಳಕನು ಬೀರುವ,
ಬೇರೆ ಸೂರ್ಯನ ಶಾಂತಿಯಿಂದಲಿ ಎಂದಿಗೂ ಕಳೆಗುಂದದ,
ನಿಖಿಲ ಭೂಮಿಯ ಖಂಡವೆಲ್ಲಕು ಒಂದೆ ದೀಪವದಾಗಿಹ,
ಬೇರೆ ರೂಪದ ರವಿಯ ದೀವಿಗೆಯೆಮಗೆ ಸುಖವನು ತೋರಲಿ.[22]

ಇಲ್ಲಿ ನಮ್ಮ ದೀಪಕ್ಕೂ ಸೂರ್ಯನೆಂಬ ದೀಪಕ್ಕೂ ವೈಷಮ್ಯವನ್ನು ಒಂದೊಂದಾಗಿ ತೋರಿಸುವ ವ್ಯತಿರೇಕವೆಂಬ ಅರ್ಥಾಲಂಕಾರವೂ ಸೇರಿದೆ, ಶಬ್ದಾಲಂಕಾರಗಳ ಜತೆಗೆ.

೨. **ಅರ್ಧೋನ್ಮೀಲಿತ ಲೋಚನಸ್ಯ ಪಿಬತಃ ಪರ್ಯಾಪ್ತ**
**ಮೇಕಂ ಸ್ತನಂ**
**ಸದ್ಯಃ ಪ್ರಸ್ನುತದುಗ್ಧದಿಗ್ಧಮಪರಂ ಹಸ್ತೇನ ಸಂಮಾರ್ಜತಃ ।**
**ಮಾತ್ರಾ ಚಾಂಗುಲಿಲಾಲಿತಸ್ಯ ಚಿಬುಕೇ ಸ್ಮೇರಾಯಮಾಣೇ**
**ಮುಖೇ**
**ವಿಷ್ಣೋಃ ಕ್ಷೀರಕಣಾಂಬುಧಾಮಧವಲಾ ದಂತದ್ಯುತಿಃ-**
**ಪಾತು ವಃ ॥**[23]

[ 'ಅರೆತೆರೆದ ಕಣ್ಣಿನಿಂದ ತಾಯಿಯ ಒಂದು ಮೊಲೆಯನ್ನು ಹೊಟ್ಟೆ ತುಂಬ ಕುಡಿದು, ಒಡನಯೇ ಹಾಲು ಸೋರುತ್ತಿರುವ ಇನ್ನೊಂದನ್ನು ಕೈಯಿಂದ ಸವರುತ್ತಿರುವಾಗ, ಬೆರಳುಗಳನ್ನು ತಾಯಿ ಮುದ್ದಿಸಲು, ಮುಗುಳ್ನಗೆ ಬೀರುವ ಬಾಲಕೃಷ್ಣನ ಕ್ಷೀರಧವಲವಾದ ದಂತದ್ಯುತಿ ನಮ್ಮನ್ನು ಕಾಪಾಡಲಿ' ]

ಇಲ್ಲಿ ಕಾವ್ಯವಿರುವುದು ಮಧುರವಾದ ಶಿಶುಸ್ವಭಾವೋಕ್ತಿಯಲ್ಲಿಯೇ ಹೊರತು ಭಕ್ತಿಭಾವಾಭಿವ್ಯಕ್ತಿಯಲ್ಲಲ್ಲ.

---

22 ಕನ್ನಡ ಧ್ವನ್ಯಾಲೋಕ, ಪುಟ. ೪೬.

23. ಲೀಲಾಶುಕನ ಕೃಷ್ಣಕರ್ಣಾಮೃತ.

೩ ದೃಷ್ಟಾಂತೋ ನೈವ ದೃಷ್ಟಃ ತ್ರಿಭುವನಜಠರೇ
ಸದ್ಗುರೋರ್ಜ್ಞಾನದಾತುಃ
ಸ್ಪರ್ಶಶ್ಚೇತ್ತತ್ರ ಕಲ್ಪ್ಯಃ ಸ ನಯತಿ ಯದಹೋ ಸ್ವರ್ಣ-
ತಾಮಶ್ಮಸಾರಂ।
ನ ಸ್ಪರ್ಶತ್ವಂ ತಥಾಪಿ ಶ್ರಿತಚರಣಯುಗೇ ಸದ್ಗುರೋಃ
ಸ್ವೀಯಶಿಷ್ಯೇ
ಸ್ವೀಯಂ ಸಾಮ್ಯಂ ವಿಧತ್ತೇ ಭವತಿ ನಿರುಪಮಸ್ತೇನ
ವಾಲೌಕಿಕೋಽಪಿ ॥[24]

'ಮೂಜಗದಲ್ಲಿಯೂ ಜ್ಞಾನದಾತನಾದ ಗುರುವಿಗೆ ಸರಿಯಾದ ದೃಷ್ಟಾಂತ ಸಿಕ್ಕಲಾರದು. ಸ್ಪರ್ಶಮಣಿಯನ್ನು ದೃಷ್ಟಾಂತವೆಂದು ಕಲ್ಪಿಸಿಕೊಂಡರೆ, ಅದು ಕಲ್ಲನ್ನು ಚಿನ್ನ ಮಾಡಬಲ್ಲುದೇ ಹೊರತು, ತನ್ನಂತೆ ಸ್ಪರ್ಶ ಮಣಿಯಾಗಿ ಮಾಡಲಾರದು. ಆದರೆ ತನ್ನ ಚರಣಾಶ್ರಿತನಾದ ಶಿಷ್ಯನಿಗೆ ಸದ್ಗುರು ತನ್ನ ಯೋಗ್ಯತೆಯನ್ನೇ ತಂದುಕೊಡುತ್ತಾನೆ. ಆದ್ದರಿಂದಲೇ ಸದ್ಗುರು ನಿರುಪಮ ಮತ್ತು ಲೋಕಾತೀತ.'

ಇಲ್ಲಿ ವ್ಯತಿರೇಕಾಲಂಕಾರದ ಜತೆಗೆ ಅದ್ವೈತತತ್ತ್ವವೂ ಭಂಗಿಯಿಂದ ಪ್ರತಿಪಾದಿತವಾಗಿದೆ ಸಂಸ್ಕೃತದ ಸ್ತೋತ್ರಸಾಹಿತ್ಯದ ವಿಸ್ತಾರ ಮಹಾ ಸಮುದ್ರದಂತೆ ಪ್ರತಿಯೊಬ್ಬ ವಿಖ್ಯಾತ ಭಾರತೀಯ ಆಚಾರ್ಯನ ಹೆಸರಿನಲ್ಲಿಯೂ ಅಗಣಿತವಾದ ಸ್ತೋತ್ರಗಳು ಪ್ರಚಾರದಲ್ಲಿವೆ ಶಂಕರಾಚಾರ್ಯರು ಬರೆದುದೆನ್ನುವ ನೂರಾರು ರಚನೆಗಳಲ್ಲಿ ನಿಜವಾಗಿ ಅವರೇ ಬರೆದುದನ್ನು ಗೊತ್ತುಮಾಡಲು ಶೈಲಿಯ ಅಂತಃಪ್ರಮಾಣವನ್ನು ಬಿಟ್ಟರೆ ಬಾಹ್ಯಪ್ರಮಾಣ ವಾವುದೂ ಇಲ್ಲ. ಹೀಗೆ ಧರ್ಮ, ಕಾವ್ಯಗಳೆರಡೂ ಭಾರತೀಯ ಜೀವನದಲ್ಲಿ ಅವಿಭಕ್ತ ಹಾಗು ಅವಿಭಾಜ್ಯ ಭಾವದಿಂದ ಸಂಪೃಕ್ತವಾಗಿರುವುದರಿಂದ ಕೇವಲ ಕಾವ್ಯದೃಷ್ಟಿಯಿಂದ ವಿಮರ್ಶೆ ಮಾಡುವುದೇ ಅಸಂಗತವೂ ಅಪ್ರಸ್ತುತವೂ ಆಗುತ್ತದೆ. ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ಹೇಳುವಂತೆ —

24. ಶಂಕರಾಚಾರ್ಯರ ಶತಶ್ಲೋಕೀ.

**ಚಿತ್ರಂ ವಟತರೋರ್ಮೂಲೇ ವೃದ್ಧಾಃ ಶಿಷ್ಯಾಃ ಗುರುರ್ಯುವಾ**
**ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಚ್ಛಿನ್ನ**
**ಸಂಶಯಾಃ ||**[25]

ಪರಮಾರ್ಥಬೋಧೆಗೆ ಮೌನವೇ ಮಹತ್ತಮ ಸಾಧನ, ಸ್ತೋತ್ರವಲ್ಲ. ಆದರೆ ಭಜನೆಯೇ ಮುಂತಾದ ಸಾಮೂಹಿಕ ಪ್ರಾರ್ಥನೆಗಳಿಗೆ ಕಾವ್ಯಗುಣ ಪೂರ್ಣವಾದ ಸ್ತೋತ್ರಗಳು ಸಹಾಯಕಗಳೂ ಭಕ್ತಿಪ್ರಬೋಧಕಗಳೂ ಆಗಬಲ್ಲವು

**" ಮಾಣಿಕ್ಯವೀಣಾಮುಪಲಾಲಯನ್ತೀಂ**
**ಮದಾಲಸಾಂ ಮಂಜುಳವಾಗ್ವಿಲಾಸಾಮ್ |**
**ಮಾಹೇಂದ್ರನೀಲದ್ಯುತಿಕೋಮಲಾಂಗೀಂ**
**ಮಾತಂಗಕನ್ಯಾಂ ಮನಸಾ ಸ್ಮರಾಮಿ || "**

ಎಂಬ ಶ್ಲೋಕವನ್ನು ರಾಗಮಾಲಿಕೆಯಲ್ಲಿ ಹಾಡುವಾಗ ರಸಿಕನ ಚಿತ್ತದಲ್ಲಿ ಸುಳಿಯುವ ಮನೋಧರ್ಮವೇ ಸಂಸ್ಕೃತ ಸ್ತೋತ್ರಕಾವ್ಯಗಳ ಜೀವಾಳ ವೆಂದು ಹೇಳಿ ಈ ಅಧ್ಯಾಯವನ್ನು ಮುಗಿಸುತ್ತೇವೆ.[26]



25 ಈ ಚಿತ್ರವು ಶಿವನಿಗಿಂತ ಹೆಚ್ಚಾಗಿ ದಯಾಸಿಂಧುವಾದ ಭಗವಾನ್ ಬುದ್ಧನಿಗೆ ಅನ್ವಯಿಸುವುದೆಂದು ಈ ಲೇಖಕನಿಗೆ ತೋರುತ್ತದೆ ಸಂಹಾರಕರ್ತನಾದ ಶಿವನು ಭೂಲೋಕದಲ್ಲಿ ವಟವೃಕ್ಷದ ಕೆಳಗೆ ವೃದ್ಧರಿಗೆ ಜ್ಞಾನದಾನಮಾಡುವ ಯುವಕನಾಗಿ ಕುಳಿತ ವಿಶ್ವಾಸಾರ್ಹ ಕಥೆಯಲ್ಲೂ ಪರಿಚಿತವಾಗಿಲ್ಲ "ಅವಚನಂ ಬುದ್ಧವಚನಂ" ಎಂಬುದರೊಡನೆ ಇದನ್ನು ಹೋಲಿಸಬಹುದು ಬುದ್ಧನೂ ಅಮರದಲ್ಲಿ ಹೇಳಿರುವಂತೆ "ಅದ್ವಯವಾದಿ". ದಕ್ಷಿಣಾಮೂರ್ತಿಯ ಕಲ್ಪನೆ ಎಷ್ಟು ಪ್ರಾಚೀನವೆಂಬುದು ನಿಷ್ಕೃಷ್ಟವಾಗಿ ಗೊತ್ತಿಲ್ಲ. ಶಂಕರಾಚಾರ್ಯರಿಗೇ ಈ ಶ್ಲೋಕವನ್ನು ಅನ್ವಯಿಸುವ ವಾಡಿಕೆಯಿದೆ

26. ಪುಷ್ಪದಂತನ 'ಮಹಿಮ್ನಸ್ತೋತ್ರ', ಮೂಕಕವಿಯ 'ಪಂಚಶತಿ', ಶಂಕರಾಚಾರ್ಯರ 'ಸೌಂದರ್ಯಲಹರಿ', ಕುಲಶೇಖರನ 'ಮುಕುಂದಮಾಲಾ', ಲೀಲಾಶುಕನ 'ಕೃಷ್ಣಕರ್ಣಾಮೃತ', ವೇದಾಂತದೇಶಿಕರ 'ಲಕ್ಷ್ಮೀಸಹಸ್ರ', ಜಗನ್ನಾಥಪಂಡಿತನ 'ಗಂಗಾಲಹರೀ' ಇವು ಪ್ರಸಿದ್ಧವಾದ ಸ್ತೋತ್ರಗ್ರಂಥಗಳಲ್ಲಿ ಕೆಲವು

# ಅಧ್ಯಾಯ ೮

## ಗದ್ಯ ಕಾವ್ಯಗಳು

೧- **ಕಥಾಸಾಹಿತ್ಯ** —ಆರ್ಷಕಾವ್ಯಗಳಾದ ರಾಮಾಯಣ, ಮಹಾಭಾರತ, ಮತ್ತು ಪುರಾಣಗಳು ಸಂಸ್ಕೃತದ ಪರಿಷ್ಕೃತ ಪದ್ಯರೂಪಗಳಿಗೆಲ್ಲ ಸಾಮಗ್ರಿಯನ್ನೊದಗಿಸಿದಂತೆ, ಪುರಾತನ ಪ್ರಾಕೃತಗಾಥೆಗಳು ಸಂಸ್ಕೃತದಲ್ಲೂ ಪ್ರಣಯಸಾಹಿತ್ಯದ ಸೃಷ್ಟಿಗೆ ಪ್ರೇರಕವಾದಂತೆ, ಅಷ್ಟೇ ಪುರಾತನವೂ ಅಷ್ಟೇ ಮಹತ್ತ್ವಪೂರ್ಣವೂ ಆದ "ಬೃಹತ್ಕಥೆ"ಯೆಂಬ ಗ್ರಂಥವು ಸಂಸ್ಕೃತದಲ್ಲಿ ಗದ್ಯ ಕೃತಿಗಳ ಪ್ರಾದುರ್ಭಾವ ಹಾಗು ವಿಶಿಷ್ಟ ವಿಕಾಸಗಳಿಗೆ ಸ್ಫೂರ್ತಿಯನ್ನಿತ್ತಿತು. ಇದನ್ನು ಬರೆದವನು ಗುಣಾಢ್ಯ, ಅವನು ಬರೆದ ಭಾಷೆ ಸಂಸ್ಕೃತವಲ್ಲ; ತನ್ನ ಪ್ರಾಂತದಲ್ಲಿ ಆಡುಮಾತಾಗಿದ್ದ ಪೈಶಾಚಿಯೆಂಬ ಪ್ರಾಕೃತ. ಇದರಲ್ಲಿ ಕಥೆಗಳು ದೇವತೆಗಳ ಪ್ರಭಾವಾತಿಶಯಕ್ಕೆ ಮಾತ್ರ ಮೀಸಲಲ್ಲ; ಸಾಮಾನ್ಯ ಜನರ ನಿತ್ಯಜೀವನದ ಕನಸುಮನಸುಗಳಿಗೂ ಇಲ್ಲಿ ಸ್ಥಾನವಿದೆ. ಕಥೆಯೆಂಬ ಸಾಹಿತ್ಯ ಪ್ರಕಾರದಲ್ಲಿ ಎಷ್ಟು ಭೇದಗಳು ಸಾಧ್ಯವೋ, ಕಟ್ಟುಕಥೆ, ಅದ್ಭುತಕಥೆ, ಮಾಯಾಲೋಕದ ಕಥೆ, ಪಶುಪಕ್ಷಿಗಳ ಕಥೆ, ಧೂರ್ತವಂಚಕರ ಕಥೆ, ಸೂಳೆ ಸಂನ್ಯಾಸಿಗಳ ಕಥೆ, ಬಡವ ಬಲ್ಲಿದರ ಕಥೆ, ಯಕ್ಷ ರಾಕ್ಷಸರ ಕಥೆ, ರಾಜರಾಣಿಯರಕಥೆ, ನೀತಿಕಥೆ, ಧರ್ಮಕಥೆ, ಕಾಮಕಥೆ, ಇತ್ಯಾದಿ—ಆ ಎಲ್ಲ ಬಗೆಗಳಿಗೂ ನಿದರ್ಶನವಾಗಬಹುದಾದ ನೂರಾರು ಕಥೆಗಳ ಮಹಾಸಾಗರವೇ ಬೃಹತ್ಕಥೆ ಧರ್ಮಾಚಾರಗಳ ಅಂಧಶ್ರದ್ಧೆಯೆಂಬ ಹುಚ್ಚುಹೊಳೆಯಲ್ಲಿ ಸಾಹಿತ್ಯ ವೃಷ್ಟಿಯಿಂದ ಅನರ್ಘ್ಯವೆನಿಸುವ ಎಷ್ಟೋ ಲೌಕಿಕ ಗ್ರಂಥಗಳು ಮುಳುಗಿ ಹೋದುವು, ಬಹಳ ಹಗುರಾದ ಜಳ್ಳುಪೊಳ್ಳುಗಳೂ ಕಸಕಡ್ಡಿಗಳೂ ತೇಲಿ ಬಂದುವು. ಜನತೆಯ ಅತ್ಯಾದರಕ್ಕೆ ಮತಕಥೆಗಳೂ ಭಕ್ತವಿಜಯಗಳೂ ಪಾತ್ರವಾಗುತ್ತ ಬಂದಂತೆಲ್ಲ, ಕೇವಲ ಮನೋವಿನೋದಕ್ಕೆಂದಿದ್ದ ಎಷ್ಟೆಷ್ಟೋ ಮಹಾಕಥೆಗಳು ಅನಾದರಕ್ಕೆ ಪಕ್ಕಾದುವು. ಇಂತಹ ಮಹಾಕಥೆಗಳಲ್ಲಿ ಗುಣಾಢ್ಯನ ಬೃಹತ್ಕಥೆಯು ಅತ್ಯಂತ ಮುಖ್ಯವಾದುದು. ಇದರಂತೆ ರಾಮಿಲ

ಸೋಮಿಲರ ಶೂದ್ರಕ ಕಥೆ, ಪತಂಜಲಿ ಹೆಸರಿಸುವ ‘ ಸುಮನೋತ್ತರಾ ’, ‘ ವಾಸವದತ್ತಾ ’, ‘ ಭೈಮರಥೀ ’ ಮೊದಲಾದ ಆಖ್ಯಾಯಿಕೆಗಳು, ಶ್ರೀಪಾಲಿತನ ‘ ತರಂಗವತೀ,’ ಬಾಣನು ಹೇಳುವ ಭಟ್ಟಾರ ಹರಿಚಂದ್ರನ ಗದ್ಯಕಥೆ ಮುಂತಾದುವೊಂದೂ ಈಗ ಸಿಕ್ಕುವುದಿಲ್ಲ. ಭಾಸ, ಕಾಳಿದಾಸ, ದಂಡಿ, ಹರ್ಷ, ಸುಬಂಧು, ಬಾಣಭಟ್ಟ ಮುಂತಾದ ಮಹಾಕವಿಗಳೇ ಋಣಿಗಳಾಗಿರುವ ಮತ್ತು ಮುಕ್ತಕಂಠದಿಂದ ನುತಿಸಿರುವ ಗುಣಾಢ್ಯನ ಮೂಲಕೃತಿಯೇ ಲುಪ್ತವಾಗಿ ಹೋಗಿದೆ. ಗಂಗರಾಜನಾದ ದುರ್ವಿನೀತನು ಸಂಸ್ಕೃತಕ್ಕೆ ಇದನ್ನು ಪರಿವರ್ತಿಸಿದ್ದನಂತೆ. ಅದೂ ಉಪಲಬ್ಧವಿಲ್ಲ. ತಮಿಳಿನಲ್ಲಿ “ ಪೆರುಂಗತೈ” ಎಂಬುದರಲ್ಲಿ ಕೆಲವು ಭಾಗಗಳು ಮಾತ್ರ ಸಿಕ್ಕುತ್ತವೆ. ಆದರೆ ಕ್ರಿ.ಶ. ೧೧ನೆಯ ಶತಮಾನದಲ್ಲಿ ಕಾಶ್ಮೀರದ ಕ್ಷೇಮೇಂದ್ರನು ‘ ಬೃಹತ್ಕಥಾಮಂಜರಿ ’ಯೆಂಬ ಸಂಗ್ರಹವನ್ನೂ ಸೋಮದೇವನು ‘ ಕಥಾಸರಿತ್ಸಾಗರ ’ವೆಂಬ ಸಂಗ್ರಹವನ್ನೂ ಇದರ ಆಧಾರದ ಮೇಲೆ ಬರೆದಿರುವರು. ಅವೂ, ನೇಪಾಳದಲ್ಲಿ ಅಪೂರ್ಣವಾಗಿ ಸಿಕ್ಕಿರುವ ಬುಧಸ್ವಾಮಿಯೆಂಬವನ ಬೃಹತ್ಕಥಾಶ್ಲೋಕಸಂಗ್ರಹವೂ ಈಗ ಉಪಲಬ್ಧವಿವೆ (ಸುಮಾರು ೮-೯ನೇ ಶತಮಾನ). ಗುಣಾಢ್ಯನ ಮೂಲ ಗದ್ಯದಲ್ಲೇ ಇದ್ದಿರಬಹುದು ; ಆದರೆ ಈ ಮೂರು ಸಂಗ್ರಹಗಳೂ ಶ್ಲೋಕರೂಪವಾಗಿವೆ. ಇವನ್ನು ಗುಣಾಢ್ಯನ ಗ್ರಂಥದ ವಿಶ್ವಸನೀಯ ಅನುವಾದಗಳೆಂದೂ ತಿಳಿಯುವಂತಿಲ್ಲ.ವೇತಾಳ ಪಂಚವಿಂಶತಿ, ಪಂಚತಂತ್ರ ಮುಂತಾದ, ಮೂಲಕ್ಕೆ ಸಂಬಂಧವಿಲ್ಲದ ಕಥೆಗಳೂ ಕಾಶ್ಮೀರಕರ ಕೃತಿಗಳಲ್ಲಿ ಸೇರಿಕೊಂಡಿವೆ. ಸುಬಂಧು, ಬಾಣ, ಮುಂತಾದ ಪ್ರಾಚೀನರ ಮಾತುಗಳಿಂದ ಬೃಹತ್ಕಥೆಯ ಮುಖ್ಯ ಕಥಾನಾಯಕ ನರವಾಹನದತ್ತನೆಂದೂ ಅವನ ಅಸಂಖ್ಯ ಪ್ರಣಯ, ವಿವಾಹಗಳೇ ಮುಖ್ಯ ಕಥಾಸೂತ್ರವೆಂದೂ ತಿಳಿಯುತ್ತದೆ. ಆದರೆ ಪ್ರಾಸಂಗಿಕವಾಗಿ ಎಲ್ಲ ಜಾತಿಯ ಕಥೆ, ಉಪಕಥೆಗಳೂ ಮೂಲವನ್ನು ಮರೆಸುವ ಮಟ್ಟಿಗೆ ಸೇರಿ, ಆ ಸಂಸ್ಕೃತ ರೂಪಾಂತರಗಳು, ದೊಡ್ಡ ಕಥಾಕೋಶಗಳೆಂಬ ಹೆಸರಿಗೆ ಹೆಚ್ಚು ಯೋಗ್ಯವಾಗಿವೆ. ಹೇಗೇ ಇರಲಿ; ಬೃಹತ್ಕಥೆಯ ಕಥನಕಲೆಯ ವೈಶಿಷ್ಟ್ಯಗಳಾದ ಮಾಯೆಯ ಕುದುರೆ, ಮಾತಾಡುವ ಗಿಳಿ, ಶಾಪ, ಆಕಾಶವಾಣಿ, ಪುನರ್ಜನ್ಮ, ವಿದ್ಯಾಧರಿಯರ ಪ್ರೇಮ, ಸ್ವಪ್ನಾನುರಾಗ, ಆಕಾಶಗಮನ, ಮುಂತಾದ

ಅದ್ಭುತ ವೃತ್ತಾಂತಗಳು ಸಂಸ್ಕೃತ ಗದ್ಯಕವಿಗಳಿಗೆಲ್ಲ ನೂತನ ಕಾವ್ಯರಚನೆಗೆ ಸ್ಫೂರ್ತಿಯಿತ್ತುದರಲ್ಲಿ ಸಂದೇಹವಿಲ್ಲ. ಈ ಅಲೌಕಿಕ ಕಲ್ಪನಾಲೋಕದ ಪ್ರಜಗಳ ಜತೆಜತೆಗೇ ಬೃಹತ್ಕಥೆಯಲ್ಲಿ ವಿಟರು, ವಿದೂಷಕರು, ಕಳ್ಳರು, ಜೂಜುಗಾರರು, ತುಂಟರು, ಪುಂಡರು, ದಡ್ಡರು, ಮುಂತಾದವರು ಓಡಾಡುತ್ತಾ ಕಥೆಗಳಿಗೊಂದು ಅನ್ಯಾದೃಶವಾದ ವಾಸ್ತವಿಕ ಸ್ವಾರಸ್ಯವನ್ನು ತಂದೀಯುತ್ತಾರೆ. ದಂಡಿಯು ಪಾತ್ರಚಿತ್ರಣದ ಈ ಅಂಶವನ್ನೂ ತನ್ನ 'ದಶಕುಮಾರಚರಿತೆ'ಯಲ್ಲಿ ಉಳಿಸಿಕೊಂಡಿದ್ದಾನೆ.[1]

ಈ ಮಾದರಿಯನ್ನನುಸರಿಸಿ ಕೇವಲ ಕಥಾಸ್ವಾರಸ್ಯದ ದೃಷ್ಟಿಯಿಂದ ರಚಿತವಾದ ಸಂಸ್ಕೃತದ ಗದ್ಯರಚನೆಗಳೆಂದರೆ, ಪ್ರಸಿದ್ಧವಾದ 'ವೇತಾಲ ಪಂಚವಿಂಶತಿ,' ಶೃಂಗಾರದ ೭೦ ಕಥೆಗಳ ಸಂಕಲನವಾದ 'ಶುಕಸಪ್ತತಿ' ಮತ್ತು 'ಸಿಂಹಾಸನ ದ್ವಾತ್ರಿಂಶಿಕಾ' ಅಥವಾ ಪ್ರಖ್ಯಾತವಾದ ಬತ್ತೀಸ ಪುತ್ಥಳಿ ಕಥೆಗಳು.[2] ಇವು ಎಲ್ಲವೂ ಬೇರೆ ಬೇರೆ ಸಂಸ್ಕರಣಗಳಲ್ಲಿ ಸಿಕ್ಕುವುದರಿಂದ ಸಂಕಲನಗ್ರಂಥಗಳೆಂದೇ ತೋರುತ್ತವೆ. ಈ ಕಥೆಗಳು ಬಾಲಕರ ಮನೋರಂಜನೆಗೆ ಕಾರ್ಯಕಾರಿಯಾಗುವಂತೆ, ಪ್ರೌಢರನ್ನು ಮೆಚ್ಚಿಸುವ ಗುಣಗಳನ್ನು ಪಡೆದಿಲ್ಲ ಇವುಗಳ ಭಾಷೆಯಲ್ಲಿಯೂ ಹೇಳುವಂತಹ ಕಾವ್ಯಗುಣವೇನೂ ಇಲ್ಲ.

ಈ ಅದ್ಭುತಕಥೆಗಳ ಜತೆಯಲ್ಲಿ ಪ್ರಾಚೀನಕಾಲದಿಂದಲೇ ಬೌದ್ಧರ ಮತ್ತು ಜೈನರ ಧರ್ಮಕಥೆಗಳ ಸಾಹಿತ್ಯವೂ ಬೆಳೆಯಿತು. ಮೊದಲ್ಮೊದಲು ಪ್ರಾಕೃತದಲ್ಲಿರುತ್ತಿದ್ದ ಇವು ಕ್ರಮೇಣ ಸಂಸ್ಕೃತಕ್ಕೂ ಪರಿವರ್ತಿತವಾದುವು. ಬೌದ್ಧರ 'ಸಂಮಿಶ್ರ ಸಂಸ್ಕೃತ' ರಚನೆಗಳಾದ ಅವದಾನ ಶತಕ, ದಿವ್ಯಾವದಾನ, ಜಾತಕಮಾಲಾ, ಎಂಬವನ್ನೂ ಜೈನರ 'ಉಪಮಿತಿ ಭವಪ್ರಪಂಚಕಥಾ,' 'ಪರಿಶಿಷ್ಟಪರ್ವ' (ಹೇಮಚಂದ್ರ), 'ಕಥಾಕೋಶ' ಮುಂತಾದುವನ್ನೂ ಈ ಸಂದರ್ಭದಲ್ಲಿ ಹೆಸರಿಸಬಹುದು. ಆದರೆ ಇವು

---

1 ಇದರ ವಿಷಯದಲ್ಲಿ ಹೆಚ್ಚಿನ ವಿವರಗಳಿಗೆ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳ 'ಕಥಾಮೃತ' ಮತ್ತು ಅದರ ವಿಸ್ತೃತ ಪೀಠಿಕೆಯನ್ನು ಓದಿ.

2. ಈ ಕಥೆಗಳೆಲ್ಲವೂ ಕನ್ನಡಿಗರಿಗೆ ಪರಿಚಿತವಾದ್ದರಿಂದ ಇಲ್ಲಿ ವಿವರಗಳನ್ನು ಕೈಬಿಟ್ಟಿದೆ.

ಗಳಿಂದ ಕಾವ್ಯವೆನಿಸುವ ಗದ್ಯರೂಪದ ಬೆಳೆವಣಿಗೆಗೆ ಹೆಚ್ಚಿನ ಪ್ರಭಾವವೇನೂ ಬಿದ್ದಂತಿಲ್ಲ.

ಆದರೆ ಭಾರತದ ಲೋಕಪ್ರಿಯ ಕಥೆಗಳಲ್ಲಿ 'ಬೃಹತ್ಕಥೆ'ಗೆ ಕಡಿಮೆಯಲ್ಲದ ಮಹತ್ವವನ್ನುಳ್ಳ ಮತ್ತೊಂದು ಸಂಸ್ಕೃತ ಕಥಾಸಂಗ್ರಹವೆಂದರೆ ವಿಶ್ವವಿಖ್ಯಾತವಾದ ಪಂಚತಂತ್ರ. ಮನೋರಂಜನೆ ಬೃಹತ್ಕಥೆಯ ಉದ್ದೇಶವಾದರೆ ರಾಜನೀತಿ ಮತ್ತು ಲೋಕನೀತಿಗಳನ್ನು ಪರ್ಯಾಯವಾಗಿ ಉಪದೇಶಿಸುವುದು ಪಂಚತಂತ್ರದ ಧ್ಯೇಯ. ಉಪದೇಶಪರವಾದ ಪಶುಪಕ್ಷಿ ಕಥೆಗಳು ಆರ್ಷಕಾಲದಿಂದಲೂ ಭಾರತದಲ್ಲಿ ಪ್ರಚಲಿತವಿದ್ದುದನ್ನು ಮಹಾಭಾರತವೂ ಬೌದ್ಧರ ಜಾತಕಕಥೆಗಳೂ ತೋರಿಸುತ್ತವೆ. ಇವುಗಳ ಜತೆಗೆ ಚಾಣಕ್ಯ, ಶುಕ್ರ, ಬೃಹಸ್ಪತಿ ಮುಂತಾದವರ ನೀತಿಶಾಸ್ತ್ರತತ್ವಗಳನ್ನು ಸೇರಿಸಿಕೊಂಡು ಪಂಚತಂತ್ರದ ರಚನೆಯಾಯಿತೆಂದು ಕಾಣುತ್ತದೆ. ಪಂಚತಂತ್ರವನ್ನು ನೀತಿಶಾಸ್ತ್ರವೆಂದೂ ಹೇಳಿದೆ ಇದರ ಮೂಲರೂಪ ಹೇಗಿತ್ತೆಂದು ತಿಳಿಯುವುದೂ ಇಂದು ಅಸಾಧ್ಯಪ್ರಾಯವಾಗುವಂತೆ ದೇಶದಲ್ಲಿ ಹತ್ತಾರು ಸಂಸ್ಕರಣಗಳು ಸಿಕ್ಕುತ್ತವೆ. ಇವುಗಳಲ್ಲೆಲ್ಲ "ತಂತ್ರಾಖ್ಯಾಯಿಕಾ"[3] ಎಂಬ ಕಾಶ್ಮೀರಪಾಠವೇ ಪ್ರಾಚೀನತಮವೆಂದು ಸಂಶೋಧಕರು ಭಾವಿಸುತ್ತಾರೆ. ಪ್ರೊ|| ಎಜರ್ಟನ್ ಅವರ ಅಭಿಪ್ರಾಯದಂತೆ ಭಿನ್ನ ಸಂಸ್ಕರಣಗಳ ವಂಶವೃಕ್ಷವನ್ನು ಮುಂದಿನ ಪುಟದಲ್ಲಿ ತೋರಿಸಿದೆ.

ಇವುಗಳಲ್ಲಿ ಸಾಮಾನ್ಯವಾಗಿ ಪರಸ್ಪರ ಸಂಪರ್ಕಗಳೂ ಸೇರಿರುವುದು ಸಂಶೋಧನೆಯ ಕಡೆಯ ಮಾತನ್ನು ಹೇಳದಂತೆ ಮಾಡಿದೆ. ಪಂಚತಂತ್ರದ ಮೂಲಲೇಖಕ ವಿಷ್ಣುಶರ್ಮನೆಂದು ಪ್ರತೀತಿಯಿದೆ. ಇದರ ಕಾಲ ಕ್ರಿ. ಶ. ಮೂರನೆಯ ಶತಮಾನಕ್ಕಿಂತ ಅರ್ವಾಚೀನವಲ್ಲವೆನ್ನಬಹುದು. ಆದರೆ ಒಂದೊಂದು ಸಂಸ್ಕರಣದ ಕಾಲವೂ ಬೇರೆಬೇರೆ, ಸಂಸ್ಕರಣಕಾರರೂ ಬೇರೆ ಬೇರೆ. ಮಿತ್ರಭೇದ, ಮಿತ್ರಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ,

3. 'ತಂತ್ರಾಖ್ಯಾಯಿಕ'ವೆಂಬ ಹ್ರಸ್ವಾಂತರೂಪವನ್ನು 'ಕುಟ್ಟನೀಮತ'ದ ಅರ್ವಾಚೀನ ವ್ಯಾಖ್ಯಾಕಾರರಾದ ತನಸುಖರಾಮಶರ್ಮರು ಬಳಸಿದ್ದಾರೆ ಒಂದು ವೇಳೆ ಈ ಸ್ತ್ರೀಲಿಂಗೇತರರೂಪವು ಕೆಲವು ಹಸ್ತಪ್ರತಿಗಳಲ್ಲಿದೆಯೆಂದರೂ, ಚಿರಪ್ರಸಿದ್ಧವಾದ ದೀರ್ಘಾಂತ ಸ್ತ್ರೀಲಿಂಗರೂಪವನ್ನು ಬಿಟ್ಟು ಇದನ್ನೇ ಸರಿಯೆನ್ನುವುದಕ್ಕೆ ತಕ್ಕಷ್ಟು ಪ್ರಬಲಪ್ರಮಾಣಗಳಾವುವೂ ಲೇಖಕನ ಗಮನಕ್ಕೆ ಬಂದಿಲ್ಲ.




---

4. '*' ಈ ಗುರುತು ಈಗ ಉಪಲಬ್ಧವಿಲ್ಲದಿದ್ದರೂ ಹಿಂದೆ ಇದ್ದಿರಬೇಕೆಂದು ಊಹಾಕಲ್ಪಿತವಾದ ಪಾಠವನ್ನು ಸೂಚಿಸುತ್ತದೆ.

*

ಅಸಮೀಕ್ಷ್ಯಕಾರಿತ್ವ, ಈ ಐದೂ ಸೇರಿ "ಪಂಚತಂತ್ರ"ವೆನಿಸುತ್ತವೆ. ಪಂಚತಂತ್ರದ ಶೈಲಿ ಬಾಲಕರಿಗೆ ಅತ್ಯಂತ ಮೋಹಕವಾಗಿವೆ. ಗದ್ಯಪದ್ಯ ಗಳೆರಡೂ ಮಿಶ್ರವಾಗಿದ್ದು, ಪದ್ಯಗಳು ಕಂಠಪಾಠಯೋಗ್ಯವಾಗಿವೆ

'ಸುಕುಮಾರ' ಮತಿಗಳಾದ ರಾಜಪುತ್ರಾದಿಗಳ ಶಿಕ್ಷಣಕ್ಕೆ ಈ ಕಥೆಗಳು ಅತ್ಯಂತ ಉಪಯುಕ್ತವಾಗಿರುವುದನ್ನು ಎಂದಿನಿಂದಲೂ ನಮ್ಮ ಆಲಂಕಾರಿಕರು ಅಂಗೀಕರಿಸಿದ್ದಾರೆ ಬಾಲರ ಚೇತೋವಿನೋದಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳೂ ಇಲ್ಲಿ ಅಡಕವಾಗಿವೆ ಕುತೂಹಲವನ್ನು ಕೆರಳಿಸುವ ಜತೆಗೆ ಬುದ್ಧಿವಂತಿಕೆಯನ್ನೂ ಕುದುರಿಸುವ ಜಾಣ್ಮೆ ಲೇಖಕನಲ್ಲಿ ವಿಪುಲವಾಗಿದೆ ಗುರಿ ನೀತಿಬೋಧೆಯೇ ಆದರೂ ಬೋಧೆಯ ಕ್ರಮ ಮಾತ್ರ ಬಹಳ ಆಕರ್ಷಕವಾಗಿದೆ. ರಾಜನೀತಿಯ, ಸದಾಚಾರದ, ಪ್ರಕಟನೆಗೆ ಪ್ರಾಶಸ್ತ್ಯವಿರುವುದರಿಂದ ಶೃಂಗಾರಕಥೆಗಳಿಗೆ ಇಲ್ಲಿ ಹೆಚ್ಚಿನ ಪ್ರವೇಶವಿಲ್ಲ. ಪ್ರಾಚೀನಭಾರತದ ಅನುಭವಸಾರವನ್ನೇ ಬಟ್ಟಿಯಿಳಿಸಿದಂತಿವೆ ಪಂಚತಂತ್ರದ ಶ್ಲೋಕಗಳು.

ವಿಶ್ವದ ಪ್ರಮುಖ ಭಾಷೆಗಳಿಗೆಲ್ಲ ಅತಿ ಪ್ರಾಚೀನಕಾಲದಲ್ಲೇ ಅನುವಾದಿತವಾದ ಒಂದೇ ಗ್ರಂಥ ಪಂಚತಂತ್ರ. ಭಾರತ ಸಂಸ್ಕೃತಿಯ ವಿಶ್ವವಿಜಯದ ಈ ಇತಿಹಾಸವನ್ನು ಆಧುನಿಕ ಸಂಶೋಧಕರು ಪ್ರಕಾಶಪಡಿಸಿದ್ದಾರೆ ಮೊದಲು ಪರ್ಶಿಯಾದೇಶ, ಅನಂತರ ಸಿರಿಯ, ಅಲ್ಲಿಂದ ಅರೇಬಿಯಾ, ಅಲ್ಲಿಂದ ಯೂರೋಪ್ ಖಂಡದ ಬೇರೆ ಬೇರೆ ಭಾಗಗಳು, ಹೀಗೆ, ದಿಗ್ದಿಗಂತ ಗಳಲ್ಲಿಯೂ ಪ್ರಚಾರವನ್ನೂ ಪ್ರಖ್ಯಾತಿಯನ್ನೂ ಅಷ್ಟು ಪೂರ್ವಕಾಲದಲ್ಲಿಯೇ ಪಡೆದ ಗ್ರಂಥ ವಿಶ್ವದಲ್ಲೇ ಮತ್ತೊಂದಿಲ್ಲ. ಹೀಗೆ ಭಾಷೆಯಿಂದ ಭಾಷೆಗೆ ಪರಿವರ್ತಿತವಾಗುತ್ತ, ಪರಿವರ್ಧಿತವಾಗುತ್ತ, ಕಡೆಗೆ ಗುರುತು ಸಿಕ್ಕದ ರೂಪದಲ್ಲಿದ್ದರೂ ಷೇಕ್ಸ್‌ಪಿಯರ್ ಮುಂತಾದ ಪಾಶ್ಚಾತ್ಯ ಮಹಾಕವಿಗಳಿಗೂ ಸ್ಫೂರ್ತಿಯನ್ನಿತ್ತುದನ್ನು ಇಂದಿನ ವಿದ್ವಾಂಸರು ಶ್ರಮಪಟ್ಟು ಕಂಡು ಹಿಡಿದಿದ್ದಾರೆ. ಪಂಚತಂತ್ರದ ವಿಶ್ವಪರ್ಯಟನವನ್ನು ನಕ್ಷೆಯ ರೂಪದಲ್ಲಿ ಮುಂದಿನ ಪುಟದಲ್ಲಿ ಬರೆದಿದೆ. ವಿಶ್ವದ ಕಥಾಸಾಹಿತ್ಯಕ್ಕೆ ಸಂಸ್ಕೃತವೇ ಜನನಿಯೆಂಬುದನ್ನು ಇದು ಸ್ಪಷ್ಟವಾಗಿ ತೋರಿಸುತ್ತದೆ:—

---

5. ಇವು ದುರ್ಗಸಿಂಹನ ಕಾಲದಿಂದಲೂ ಕನ್ನಡಿಗರಿಗೆ ಪರಿಚಿತ ದುರ್ಗಸಿಂಹನು ವಸುಭಾಗಭಟ್ಟನ ಕಥೆಯನ್ನು ಕನ್ನಡದಲ್ಲಿ ಬರೆದಂತೆ ಹೇಳಿಕೊಂಡಿದ್ದಾನೆ.




6. ಈ ನಕ್ಷೆಯಲ್ಲಿ ಈ ಎರಡು ಶತಮಾನಗಳಲ್ಲಿ ಬಂದಿರುವ ಭಾಷಾಂತರಗಳನ್ನು ಗಮನಿಸಿಲ್ಲ; ಪೂರ್ವದ ಪ್ರಸಿದ್ಧ ಭಾಷಾಂತರಗಳನ್ನು ಮಾತ್ರ ನಿರ್ದೇಶಿಸಿದೆ.

**೨. ಗದ್ಯಕಾವ್ಯದ ಲಕ್ಷಣ** —ಇದುವರೆಗೆ ನಾವು ಸ್ಥೂಲವಾಗಿ ನೋಡಿದ ಕಥೆಗಳಲ್ಲಿ ಕಥಾಸ್ವಾರಸ್ಯವಿದ್ದರೂ , ಲಾಕ್ಷಣಿಕರ ದೃಷ್ಟಿಯಲ್ಲಿ ಇವಾವುವೂ ಗದ್ಯಕಾವ್ಯಗಳಲ್ಲ. ಭಾಮಹಾದಿ ಲಾಕ್ಷಣಿಕರು ಗದ್ಯಕಾವ್ಯದಲ್ಲಿ ಒಪ್ಪುವ ಎರಡು ಜಾತಿಗಳೆಂದರೆ ೧. ಆಖ್ಯಾಯಿಕೆ ಮತ್ತು ೨. ಕಥೆ. ಸಂಸ್ಕೃತದಲ್ಲಿ ಮಾತ್ರ ಲಲಿತ ಹಾಗು ಮಧುರವಾದ ಶಬ್ದಾರ್ಥಗಳಿಂದ ತುಂಬಿದ ಸಮಾಸಮಯವಾದ ಗದ್ಯದಲ್ಲಿದ್ದು, ಉದಾತ್ತವಾದ ವಿಷಯಗಳ ನ್ನೊಳಗೊಂಡು, 'ಉಚ್ಛ್ವಾಸ'ವೆಂಬ ಹೆಸರಿನ ಪ್ರಕರಣಗಳು ಇರುತ್ತಿದ್ದರೆ ಅದು ಆಖ್ಯಾಯಿಕೆ. ಅದರಲ್ಲಿ ನಾಯಕನು ತನ್ನ ಹಿಂದಿನ ಚರಿತ್ರೆಯನ್ನೆಲ್ಲ ತಾನೇ ಬಾಯಿಂದ ಹೇಳಿಕೊಳ್ಳುತ್ತಾನೆ 'ವಕ್ತ್ರ' ಮತ್ತು 'ಅಪರವಕ್ತ್ರ'ವೆಂಬ ಛಂದಸ್ಸಿನ ಪದ್ಯಗಳು ಭಾವ್ಯರ್ಥಸೂಚನೆಗೆ ಬರುತ್ತವೆ. ಕವಿಯ ಅಭಿಪ್ರಾಯ ವನ್ನು ಸೂಕ್ಷ್ಮವಾಗಿ ಒಳಗೊಂಡ ಕೆಲವು 'ಮುದ್ರೆ'ಗಳಿಂದಲೂ ಅದು ಗರ್ಭಿತವಾಗಿರುವುದು. 'ಕನ್ಯಾಹರಣ', 'ಯುದ್ಧ', 'ವಿರಹ', ನಾಯಕನ ಅಭ್ಯುದಯ, ಇವುಗಳೇ ವಸ್ತು. "ಕಥೆ"ಯಲ್ಲಿ ವಕ್ತ್ರಾಪರವಕ್ತ್ರಗಳಿರುವುದಿಲ್ಲ ; ಉಚ್ಛ್ವಾಸಗಳೂ ಇರುವುದಿಲ್ಲ. ಸಂಸ್ಕೃತದಂತೆ ಪ್ರಾಕೃತಾದಿ ಭಾಷೆಗಳಲ್ಲೂ ರಚಿತವಾಗಿರಬಹುದು ಇಲ್ಲಿ ನಾಯಕನ ವೃತ್ತಾಂತವನ್ನು ಇತರರು ಹೇಳು ತ್ತಾರೆ. ನಾಯಕನು ಹೇಳುವುದಿಲ್ಲ.[7] ಈ ವಿಭಾಗದಲ್ಲಿ ಔಚಿತ್ಯವೇನೂ ಇಲ್ಲವೆಂದೂ, ವಸ್ತುದೃಷ್ಟಿಯಿಂದ ನೋಡಿದರೂ ಕನ್ಯಾಹರಣಾದಿಗಳು ಮಹಾಕಾವ್ಯಕ್ಕೂ ಗದ್ಯಕಾವ್ಯಕ್ಕೂ ಸಮಾನವಾಗಿ ಅನ್ವಯಿಸುವುವೆಂದೂ ದಂಡಿ ತನ್ನ ಅಭಿಪ್ರಾಯವನ್ನು ಬರೆದಿದ್ದಾನೆ.[8] ಆದರೆ ಬಾಣನಿಗೂ ಈ ಲಕ್ಷಣಗಳ ಪರಿಜ್ಞಾನವಿದ್ದುದು ಆತನ ಮಾತುಗಳಿಂದ ಧ್ವನಿತವಾಗುತ್ತದೆ.[9] 'ಆಖ್ಯಾಯಿಕೆ'ಯೆಂದು ಹೆಸರು ಬರಲು ಪೂರ್ವದ ಗದ್ಯಕಾವ್ಯ ಕೃತಿಗಳಲ್ಲಿ ನಾಯಕನೇ ತನ್ನ ಪೂರ್ವಚರಿತೆಯನ್ನು ಹೇಳಿಕೊಳ್ಳುತ್ತಿದ್ದ ರೂಢಿ ಕಾರಣ

---

7. 'ಕನ್ನಡ ಕಾವ್ಯಾಲಂಕಾರ' ಪುಟ ೧೧-೧೪.

8. 'ಕನ್ನಡ ಕಾವ್ಯಾಲಂಕಾರ' ಅನುಬಂಧ ಪುಟ ೧೪೬-೧೪೭.

9. ಉಚ್ಛ್ವಾಸಾನ್ತೇಽಪ್ಯಖಿನ್ನಾಸ್ತೇ ಯೇಷಾಂ ವಕ್ತ್ರೇ ಸರಸ್ವತೀ ।
ಕಥಮಾಖ್ಯಾಯಿಕಾಕಾರಾ ನ ತೇ ವಂದ್ಯಾಃ ಕವೀಶ್ವರಾಃ ॥

ಇಲ್ಲಿ ಉಚ್ಛ್ವಾಸ, ವಕ್ತ್ರ, ಆಖ್ಯಾಯಿಕಾ ಮೂರೂ ಶಬ್ದಗಳೂ ಶ್ಲಿಷ್ಟ ಮತ್ತು ಗಮನಾರ್ಹ.

ವಾಗಿದ್ದಿರಬಹುದು. ಆದರೆ ದಂಡಿ, ಬಾಣರ ಕಾಲಕ್ಕೆ ಈ ನಿಯಮ ಸಡಿಲವಾಗಿತ್ತು.

ಈ ಲಕ್ಷಣಗಳಲ್ಲಿ ವಿವಾದವಿಲ್ಲದ ಒಂದು ಮುಖ್ಯಾಂಶವೆಂದರೆ ಶೈಲಿ ಸಂಸಂಸ್ಕೃತವೂ, ಸಮಾಸಮಯವೂ ಆಗಿರಬೇಕೆಂಬುದು, ವಸ್ತು ಉದಾತ್ತವಾಗಿಯೂ ವೀರಾದ್ಭುತರಸಪೋಷಕವಾಗಿಯೂ ಇರಬೇಕೆಂಬುದು. ಈ ವಿಷಯದಲ್ಲಿ ದಂಡಿಭಾಮಹರಿಗೆ ಯಾವ ಮತಭೇದವೂ ಇಲ್ಲ. ದಂಡಿ ಓಜೋಗುಣವನ್ನು 'ಸಮಾಸಭೂಯಸ್ತ್ವ'ವೆಂದು ವಿವರಿಸಿ ಇದೇ "ಗದ್ಯದ ಜೀವಿತ" ಎಂದು ನಿಸ್ಸಂದಿಗ್ಧವಾಗಿ ಹೇಳಿದ್ದಾನೆ[10] ಸುಂದರ ಸಮಾಸಮಯವಾದ ಶೈಲಿಯಿದ್ದಲ್ಲದೆ ಕಾವ್ಯವು ಗದ್ಯಕಾವ್ಯವೆನಿಸಲಾರದೆಂದಂತಾಯಿತು. ಈ ಅಭಿಪ್ರಾಯವಿದ್ದುದರಿಂದಲೇ ಲಾಕ್ಷಣಿಕರಾರೂ ಪಂಚತಂತ್ರ, ಶುಕಸಪ್ತತಿ, ಮುಂತಾದುವನ್ನು ಗದ್ಯಕಾವ್ಯದ ಪರಿಧಿಯಲ್ಲಿ ಸೇರಿಸುವುದಿಲ್ಲ. ಪೂರ್ವದ ಗದ್ಯಕಾವ್ಯಪ್ರಬಂಧಗಳೆಲ್ಲವೂ ಲುಪ್ತವಾಗಿರುವುದು ನಮ್ಮ ದೌರ್ಭಾಗ್ಯವೇ ಸರಿ. ಇವುಗಳಲ್ಲೆಲ್ಲ ಪೂರ್ವೋಕ್ತ ಓಜೋಗುಣವು ತುಂಬಿಯೇ ಇತ್ತೆನ್ನಲು ಕ್ರಿ.ಶ ೧೫೦ ರಲ್ಲಿ ರಚಿತವಾಗಿ ನಮಗೆ ಸಿಕ್ಕಿರುವ ರುದ್ರದಾಮನ ಶಿಲಾಲೇಖವೇ ಪ್ರಮಾಣ. ಇದರ ಶೈಲಿಯು ಸಮಾಸಮಯವೂ ಅಲಂಕೃತವೂ ಆಗಿರುವುದಲ್ಲದೆ, ಸ್ಪಷ್ಟವಾಗಿ 'ಸ್ಫುಟ-ಲಘು-ಮಧುರ-ಚಿತ್ರ-ಕಾಂತ-ಶಬ್ದ-ಸಮಯೋದಾರಾಲಂಕೃತ-ಗದ್ಯ'ವೆಂಬ ಮಾತೂ ಬರುತ್ತದೆ. ಇದೇ ರೀತಿ ಅದೇ ಕಾಲದ ಪುಲಮಾಯಿಯ ಪ್ರಾಕೃತ ಗದ್ಯಶಾಸನವೂ, ಮುಂದೆ ಹರಿಷೇಣನ ಸಮುದ್ರಗುಪ್ತಪ್ರಶಸ್ತಿಯ ಗದ್ಯವೂ ಈ ಕಾವ್ಯಗದ್ಯದ ಶೈಲಿಯ ಸಾಕ್ಷಿಗಳಾಗಿವೆ. ಹೀಗೆ ಸಂಸ್ಕೃತದ ಗದ್ಯಕಾವ್ಯವನ್ನು ವಿಮರ್ಶಿಸುವ ಮೊದಲು ಅದರ ಮೂಲಭೂತ ಸಂಪ್ರದಾಯವನ್ನು ಮರೆಯಬಾರದು. ಮರೆತರೆ, "ಇವನಲ್ಲಿ ಸಮಾಸಗಳು ಕಡಿಮೆ, ಆದ್ದರಿಂದ ಇವನು ಅತಿಯಾದ ಸಮಾಸಗಳಿಂದ ತುಂಬಿದ ಅವನಿಗಿಂತ ಈಚಿನ ಗದ್ಯಕವಿ,' ಎಂದು ಮುಂತಾಗಿ ತಪ್ಪು ವಿಮರ್ಶೆಗಳನ್ನು ಬರೆಯುವ ಸಂಭವವಿರುತ್ತದೆ. ಇಂದಿನ ಅಭಿರುಚಿಗೆ ಸಮಾಸರಾಹಿತ್ಯವು ಗದ್ಯಗುಣಗಳಲ್ಲೊಂದಾದರೂ ಪ್ರಾಚೀನರ ಅಭಿರುಚಿ ಇದಕ್ಕೆ ವಿರುದ್ಧವಾಗಿದ್ದಿತು. ಗದ್ಯರಹಿತ ರಚನೆ ಕೇವಲ ಬಾಲೋಪಯೋಗಿಯೆಂದು ಅವರು ಭಾವಿಸುತ್ತಿದ್ದರು.

---

10 'ಕನ್ನಡ ಕಾವ್ಯಾಲಂಕಾರ' ಅನುಬಂಧ, ಪುಟ ೧೫೭.

'ಶುಕಸಪ್ತತಿ,' ಮುಂತಾದುವುಗಳು ಇಂತಹ ಕೃತಿಗಳು. ಸಮಾಸ ಗಳಿಂದಲೇ ಉಂಟಾಗುವ ಸೌಂದರ್ಯ ಸಂಸ್ಕೃತ ಗದ್ಯಕಾವ್ಯದ ಜೀವಾಳ, ಕವಿಗಳು ಶ್ರಮಪಟ್ಟು ಸಾಧಿಸಲು ಬಯಸಿದ ಧ್ಯೇಯ. ಮಹಾಕಾವ್ಯದಲ್ಲಿ ಕಥೆ ಹೇಗೆ ಗೌಣವಾಗಿ ಸಾಲಂಕಾರವೂ ಸರಸವೂ ಆದ ವರ್ಣನೆ ಪ್ರಧಾನ ವಾಗುವುದೋ, ಹಾಗೆಯೇ ಗದ್ಯಕಾವ್ಯದಲ್ಲಿಯೂ ಕಥೆಗಿಂತ ಶ್ಲೇಷಾದ್ಯಲಂಕಾರ ಭೂಯಿಷ್ಠವಾದ ವರ್ಣನಾಚಮತ್ಕಾರಕ್ಕೇ ಪ್ರಾಧಾನ್ಯ. ಮಹಾಕಾವ್ಯದಲ್ಲಿ ಒಂದು ಅಲಂಕಾರದ ಒಂದೆರಡು ವಿಶೇಷಣಗಳಿಂದ ಮುಗಿಸಬೇಕಾದ ವರ್ಣನೆ ಯನ್ನು ಅಂತಹ ಯಾವ ನಿಯಂತ್ರಣವೂ ಇಲ್ಲದೆ ನೂರಾರು ವಿಶೇಷಣ ಗಳಿಂದ ವರ್ಣಿಸಿ ಪ್ರತಿಭಾಕೌಶಲವನ್ನು ಮೆರೆಯುವ ವಿವಕ್ಷೆ ಗದ್ಯಕವಿಯದು. ಈ ದೃಷ್ಟಿಯಿಂದ ಕಲ್ಪನಾಚಮತ್ಕಾರದ ಪ್ರಕಾಶನಕ್ಕೆ ಮಹಾಕಾವ್ಯಕ್ಕಿಂತಲೂ ಗದ್ಯಕಾವ್ಯ ಹೆಚ್ಚು ಸಹಾಯಕ. ಹಾಗೆಯೇ ಪ್ರತಿಭಾದೌರ್ಬಲ್ಯವೂ ಮಹಾ ಕಾವ್ಯಕ್ಕಿಂತ ಬಹುಬೇಗ ಗದ್ಯಕಾವ್ಯದಲ್ಲಿ ಎದ್ದು ಕಾಣುವುದು. ಬಾಹ್ಯಾ ಲಂಕಾರಗಳಿಗೆಲ್ಲ ಪ್ರಾಣಸಂಚಾರ ಮಾಡಿಸುವ ಪ್ರತಿಭಾಪ್ರಕರ್ಷವಿಲ್ಲದಿದ್ದರೆ ಗದ್ಯಕಾವ್ಯವು ಕೇವಲ ಚಿತ್ರಕಾವ್ಯವಾಗಿಬಿಡುವುದು. ಈ ಕಾರಣದಿಂದಲೇ ಪೂರ್ವದ ಲಾಕ್ಷಣಿಕರು "ಗದ್ಯವೇ ಕವಿಗಳ ಕವಿತ್ವಸಿದ್ಧಿಯನ್ನಳೆಯುವ ಒರೆಗಲ್ಲು" ಎನ್ನುತ್ತಿದ್ದರು[11]. ಮುಕ್ತಕ, ಮಹಾಕಾವ್ಯಗಳಿಗಿಂತ ಹೆಚ್ಚಿನ ಕವಿತ್ವಶಕ್ತಿಯನ್ನು ತೋರಿಸಿದವರನ್ನು ಮಾತ್ರ ಗದ್ಯಕವಿಗಳೆಂದು ಗೌರವಿಸು ತ್ತಿದ್ದರು. ಈ ದುಷ್ಕರ ಪರೀಕ್ಷೆಯಲ್ಲಿ ಯಶಸ್ವಿಗಳಾದ ಮಹಾಕವಿಗಳು ಮೂವರೇ -ಸುಬಂಧು, ಬಾಣ ಮತ್ತು ದಂಡಿ. ಮೂವರೂ ಹೆಚ್ಚು ಕಡಿಮೆ ಒಂದೇ ಕಾಲದವರು (ಕ್ರಿ. ಶ. ೭ ನೆಯ ಶತಮಾನ). ಈ ಮೂವರಲ್ಲಿ ಸುಬಂಧು ಪ್ರತಿಭಾದೌರ್ಬಲ್ಯಕ್ಕೆ ನಿದರ್ಶನವಾದರೆ ಬಾಣ ಪ್ರತಿಭಾಪ್ರವಾಹದ ಪರಾಕಾಷ್ಠೆಗೆ ದೃಷ್ಟಾಂತ. ದಂಡಿ ಕಾವ್ಯಸಂಪ್ರದಾಯದ ಕಟ್ಟನ್ನು ಬಿಡಿಸಿ ಕೊಂಡು ಬೃಹತ್ಕಥೆಯ ಸ್ವಾರಸ್ಯವನ್ನೇ ಹೊಸರೀತಿಯಿಂದ ತಂದ ಸಾಹಸಿ ಈ ಮೂವರ ಆಸ್ತಿಯೇ ಸಂಸ್ಕೃತಗದ್ಯಕಾವ್ಯದ ಸಾಮ್ರಾಜ್ಯವೆನ್ನಬಹುದು ಇವರ ಕೃತಿಗಳ ವಸ್ತುವನ್ನು ಪ್ರಾಚೀನ ಗ್ರೀಸಿನ Romance ಅಥವಾ

---

11 'ಗದ್ಯಂ ಕವೀನಾಂ ನಿಕಷಂ ವದನ್ತಿ'—ವಾಮನನ ಕಾವ್ಯಾಲಂಕಾರ ಸೂತ್ರವೃತ್ತಿ.

ಅದ್ಭುತಕಥೆಗಳೊಡನೆ ಹೋಲಿಸುವುದುಂಟು. ಆದರೆ ಇವುಗಳ ಸುಪರಿಷ್ಕೃತ ವರ್ಣನಾಶೈಲಿಯು ರಿನೇಸಾನ್ಸ್ ಯುಗದಲ್ಲಿ ಇಂಗ್ಲಿಷ್ ಗದ್ಯರಚನೆಯನ್ನು ಪರಿಷ್ಕರಿಸಿದ ಲಿಲಿಯ Euphues ಮುಂತಾದ ಕೃತಿಗಳ ಕೃತ್ರಿಮ ಶೈಲಿಯನ್ನು ಇನ್ನೂ ಹೆಚ್ಚಾಗಿ ಹೋಲುತ್ತದೆ ಗ್ರೀಸಿನವರ ಪ್ರಭಾವದಿಂದಲೇ ಸಂಸ್ಕೃತ ಗದ್ಯಕಾವ್ಯಗಳು ಅಂಕುರಿಸಿದುವೆಂಬ ಕೆಲವು ಪಾಶ್ಚಾತ್ಯರ ವಾದವು ಸಾಧಾರಣವಾಗಿ ಅಂಗೀಕೃತವಾಗಿಲ್ಲ[12]

**ಸುಬಂಧು** —ಇವನ ಕೃತಿ "ವಾಸವದತ್ತಾ" ಎಂಬ 'ಕಥೆ'. ಇದರಲ್ಲಿ "ನ್ಯಾಯಸ್ಥಿತಿಮಿವೋದ್ಯೋತಕರಸ್ವರೂಪಾಂ" ಎಂದಿರುವುದರಿಂದ ಕಾಲ ಪ್ರಸಿದ್ಧ ನೈಯಾಯಿಕನಾದ ಉದ್ದ್ಯೋತಕರ (ಕ್ರಿ. ಶ ೬ ಅಥವಾ ೭ ನೆಯ ಶತಮಾನ) ನಿಗಿಂತ ಹಿಂದಲ್ಲ ೮ ನೆಯ ಶತಮಾನದ ವಾಮನನು ಇದರಿಂದ ಉದಾಹರಿಸುವುದರಿಂದ ಸುಬಂಧು ಅದಕ್ಕಿಂತ ಈಚಿನವನೂ ಅಲ್ಲ "ಶ್ರೀಪರ್ವತ ಇವ ಸನ್ನಿಹಿತ ಮಲ್ಲಿಕಾರ್ಜುನೋ"[13] ಎಂಬಲ್ಲಿ ಶ್ರೀಶೈಲದ ಮಲ್ಲಿಕಾರ್ಜುನನನ್ನು ಹೆಸರಿಸುವುದರಿಂದ ದಾಕ್ಷಿಣಾತ್ಯನಿದ್ದರೂ ಇರಬಹುದು ಹರ್ಷಚರಿತೆಯಲ್ಲಿ ಬಾಣನು—'ಕರ್ಣನಿಗೆ ಶತ್ರುನಿಷೂದಕವಾದ ಶಕ್ತ್ಯಾಯುಧ ಇಂದ್ರನಿಂದ ದೊರೆತೊಡನೆ ಪಾಂಡುಪುತ್ರರ ದರ್ಪವೆಲ್ಲಾ ಅಡಗಿದಂತೆ, "ವಾಸವದತ್ತೆ"ಯಿಂದ ಕವಿಗಳ ದರ್ಪವೆಲ್ಲಾ ಅಡಗಿತು' ಎಂದು ಚಮತ್ಕಾರವಾಗಿ ಹೊಗಳುವುದು ಸುಬಂಧುವಿನ ಕೃತಿಯಾಗಿಯೂ ಇರಬಹುದು, ಆಗದೆಯೂ ಇರಬಹುದು[14] ಹಾಗೆಯೇ ಕಾದಂಬರಿಯಲ್ಲಿ ಎರಡನ್ನು ಮೀರಿಸುವ ಕಥೆಯಿದೆನ್ನುವಾಗ ("ಅತಿದ್ವಯೀ ಕಥಾ") ವ್ಯಾಖ್ಯಾಕಾರನಾದ ಭಾನುದತ್ತನು ಎರಡರಲ್ಲಿ ಸುಬಂಧುವಿನ ಕೃತಿ ಒಂದೆನ್ನುತ್ತಾನೆ. ಆದರೆ

---

12. ಪೀಟರ್‌ಸನ್, ಲಕೋಟೆ, ಸಿಲ್ವಾನ್ ಲೇವಿ, ಮುಂತಾದ ವಿದ್ವಾಂಸರು ಈ ಚರ್ಚೆಗಳನ್ನು ನಡೆಸಿದ್ದಾರೆ

13, ವಾಸವದತ್ತಾ, ಪುಟ 46. (ಜೀವಾನಂದ ವಿದ್ಯಾಸಾಗರರ ಕಲ್ಕತ್ತಾ ಸಂಸ್ಕರಣ 1874)

14. 'ವಾಸವದತ್ತಾ' ಎಂಬ ಹೆಸರಿನ ಪ್ರಾಚೀನ ಆಖ್ಯಾಯಿಕೆಯೊಂದನ್ನು ಪತಂಜಲಿಯೇ ಮಹಾಭಾಷ್ಯದಲ್ಲಿ ಹೆಸರಿಸುವುದರಿಂದ. ಸುಬಂಧುವಿನ ಕೃತಿ 'ಕಥೆ' 'ಆಖ್ಯಾಯಿಕೆ'ಯಲ್ಲ ಹರ್ಷಚರಿತೆ 'ಆಖ್ಯಾಯಿಕೆ'ಯಾದ್ದರಿಂದ ಅಲ್ಲಿ ಪೂರ್ವದ 'ಆಖ್ಯಾಯಿಕೆ'ಯ ಪ್ರಶಂಸೆಯೇ ಹೆಚ್ಚು ಪ್ರಸ್ತುತ.

ಸುಬಂಧುವಿನ ಕೃತಿಯಲ್ಲಿ ಭವಭೂತಿಯ ಛಾಯೆಯನ್ನೂ ವಿದ್ವಾಂಸರು ತೋರಿಸುತ್ತಾರೆ.[15] ಇವರಲ್ಲಿ ಯಾರು ಯಾರಿಗೆ ಋಣಿಗಳೆಂದು ಹೇಳುವುದು ಕಷ್ಟ. ಕವಿರಾಜನು ರಾಘವಪಾಂಡವೀಯದಲ್ಲಿ ವಕ್ರೋಕ್ತಿಮಾರ್ಗ ನಿಪುಣರನ್ನು ಹೇಳುವಾಗ "ಸುಬಂಧು, ಬಾಣಭಟ್ಟ, ಕವಿರಾಜ" ಎಂಬಲ್ಲಿ ಕಾಲಾನುಕ್ರಮವನ್ನನುಸರಿಸಿರುವನೆಂದು ನಂಬಿದರೆ ಸುಬಂಧುವೇ ಬಾಣನಿಗಿಂತ ಮುಂಚೆ ಕಾವ್ಯವನ್ನು ಮುಗಿಸಿರಬೇಕೆಂದು ಹೇಳಬೇಕಾಗುತ್ತದೆ. ಆರಂಭಪದ್ಯವೊಂದರಲ್ಲಿ 'ವಿಕ್ರಮಾದಿತ್ಯನು ಕೀರ್ತಿಶೇಷನಾದಮೇಲೆ ರಸವತ್ತೆ ಅಡಗಿತು, ಹೊಸಬರು ಹೆಚ್ಚಿಕೊಂಡರು, 'ಕಂಕ'ನೂ ಇಲ್ಲ – ಕೊಳದಲ್ಲಿ ಸೂರ್ಯ ಮುಳುಗಿದ ಮೇಲೆ ಸಾರಸಗಳೂ, ಬಕಗಳೂ, ನೀರ್ವಕ್ಕಿಗಳೂ ಆಟವನ್ನು ನಿಲ್ಲಿಸಿದಂತೆ'[16] ಎಂದು ಶ್ಲಿಷ್ಟೋಪಮೆಯಿಂದ ಸೂಚಿಸುವ ವಿಕ್ರಮಾದಿತ್ಯನಾರೆಂಬ ನಿರ್ಣಯವೂ ಇಲ್ಲ.

ಸುಬಂಧುವಿನ ಗದ್ಯಕಾವ್ಯದ ಕಥೆ ಬಹಳ ಸಣ್ಣನಾದುದು — ಚಿಂತಾಮಣಿಯೆಂಬ ಮಹಾರಾಜನ ಮಗ–ಕಂದರ್ಪಕೇತು. ಒಂದು ದಿನ ಅವನು ಕನಸಿನಲ್ಲಿ ಪರಮಸುಂದರಿಯಾದ ಹದಿನೆಂಟು ವರ್ಷದ ಕನ್ಯೆಯನ್ನು ಕಂಡು ಅವಳಲ್ಲಿ ಅನುರಕ್ತನಾಗುತ್ತಾನೆ. ಪ್ರಿಯಸಖನಾದ ಮಕರಂದನು ಎಷ್ಟು ಹೇಳಿದರೂ ಅವನ ಮನಸ್ಸಿಗೆ ಅವಳಿಲ್ಲದೆ ಶಾಂತಿ ಬರುವುದಿಲ್ಲ. ಪರಿಜನರಾರಿಗೂ ತಿಳಿಯದಂತೆ ಕಂದರ್ಪಕೇತು ಮಕರಂದರು ನಗರವನ್ನು ಬಿಟ್ಟು ನಡೆಯುತ್ತಾ ರಾತ್ರಿಯಾಗಲು ಘೋರಾರಣ್ಯದ ಒಂದು ಮರದ ಕೆಳಗೆ ವಿಶ್ರಮಿಸುತ್ತಾರೆ. ಅದೇ ಮರದ ಮೇಲೆ ಗಂಡುಗಿಳಿ ಹೆಣ್ಣುಗಿಳಿಗೆ ಒಂದು ಕಥೆ ಹೇಳುತ್ತಿರುವುದು ಕೆಳಗೆ ನಿದ್ರೆಯಿಲ್ಲದೆ ಮಲಗಿದ ಇವರಿಗೆ

---

15 ಹೋಲಿಸಿ —ಹೃದಯಂ ವಿಲಿಖಿತಮಿವ ಉತ್ಕೀರ್ಣಮಿವ ಪ್ರತ್ಯುಪ್ತಮಿವ ಕೀಲಿತಮಿವ ... ವಜ್ರಲೇಪಘಟಿತಮಿವ ... ವರ್ಮಾಂತರಸ್ಥಿತಮಿವ .. ಕಂದರ್ಪಕೇತುಂ ಮನ್ಯಮಾನಾ (ವಾಸವದತ್ತಾ) ಮತ್ತು—

ಲೀನೇವ ಪ್ರತಿಬಿಂಬಿತೇವ ಲಿಖಿತೇವೋತ್ಕೀರ್ಣರೂಪೇವ ಸಾ
ಪ್ರತ್ಯುಪ್ತೇವ ಚ ವಜ್ರಲೇಪಘಟಿತೇವಾನ್ತರ್ನಿಖಾತೇವ ಚ । ...

—ಮಾಲತೀಮಾಧವ V 10.

16. ಸಾ ರಸವತ್ತಾ ವಿಹತಾ ನವಕಾ ವಿಲಸನ್ತಿ ಚರತಿ ನೋ ಕಂಕಃ ।
ಸರಸೀವ ಕೀರ್ತಿಶೇಷಂ ಗತವತಿ ಭುವಿ ವಿಕ್ರಮಾದಿತ್ಯೇ ॥

ಕೇಳಿಸುತ್ತದೆ —'ಕುಸುಮಪುರದಲ್ಲಿ ರಾಜನಾದ ಶೃಂಗಾರಶೇಖರನ ಪುತ್ರಿ ವಾಸವದತ್ತೆ. ಪ್ರಾಪ್ತವಯಸ್ಕಳಾದ ಅವಳಿಗೆ ರಾಜನು ಸ್ವಯಂವರವನ್ನೇರ್ಪಡಿಸಿದನು ಕನ್ಯೆ ನೆರೆದ ರಾಜಕುಮಾರರಾರನ್ನೂ ವರಿಸಲಿಲ್ಲ. ಆ ರಾತ್ರೆ ಕನಸಿನಲ್ಲಿ ಮನ್ಮಥನಂತಹ ಯುವಕನೊಬ್ಬನನ್ನು ಕಂಡು ಮೆಚ್ಚಿಕೊಂಡಳು. ಕನಸಿನಲ್ಲಿಯೇ ಅವನ ಕುಲೋತ್ತರಗಳನ್ನು ವಿಚಾರಿಸಿ ತಿಳಿದುಕೊಂಡು ತನ್ನ ಅರಗಿಳಿಯಾದ ತಮಾಲಿಕೆಯನ್ನು ಕಂದರ್ಪಕೇತುವಿನ ಬಳಿಗೆ ಕಳುಹಿಸಿದ್ದಾಳೆ. ಅದೂ ಇಲ್ಲೇ ನನ್ನೊಡನೆ ಬಂದಿದೆ." ಅರಗಿಳಿ ತಂದ ಪ್ರೇಮಪತ್ರವನ್ನೋದಿ ಆನಂದಭರದಿಂದ ಮೈಯುಬ್ಬಿದ ನಾಯಕನು ಕೂಡಲೆ ಕುಸುಮಪುರವನ್ನು ನೇರಿದನು. ಮಾರನೆಯ ದಿನವೇ ಪುಷ್ಪಕೇತುವೆಂಬ ವರನೊಡನೆ ವಾಸವದತ್ತೆಯ ವಿವಾಹ ನಿಶ್ಚಿತವಾಗಿದ್ದುದರಿಂದ ಗೋಪ್ಯವಾಗಿ ಅವಳನ್ನೊಪ್ಪಿಸಿ ನಾಯಕನು 'ಮನೋಜವ'ವೆಂಬ ಕುದುರೆಯ ಮೇಲೆ ಅವಳೊಡನೆ ಊರಿನಿಂದ ತಪ್ಪಿಸಿಕೊಂಡು ಹೊರಟು ಅರಣ್ಯವನ್ನು ನೇರಿದನು. ಒಂದು ಮರದ ಕೆಳಗೆ ಇಬ್ಬರೂ ಮಲಗಿದರು. ಬೆಳಿಗ್ಗೆ ಎದ್ದು ಕಂದರ್ಪಕೇತು ನೋಡಿದರೆ ವಾಸವದತ್ತೆಯೇ ಇಲ್ಲ. ಎಲ್ಲೆಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ. ಕಡೆಗೆ ನಿರುಪಾಯನಾಗಿ ಸಮುದ್ರದವರೆಗೂ ನಡೆದು ಅಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳಬೇಕೆಂಬ ಹೊತ್ತಿಗೆ 'ನಿನಗೆ ಮುಂದೆ ಪ್ರಿಯೆಯ ಸಮಾಗಮವಾಗುವುದು, ದುಡುಕಬೇಡ', ಎಂದು ಆಕಾಶವಾಣಿಯಾಗುತ್ತದೆ. ಹೇಗೋ ವಿರಹವ್ಯಥೆಯಲ್ಲಿ ಕೆಲವು ತಿಂಗಳನ್ನಲ್ಲೇ ಅರಣ್ಯದಲ್ಲಿ ಕಳೆಯುತ್ತಿರುವಾಗ ವಾಸವದತ್ತೆಯ ಆಕಾರದ ಶಿಲಾಮೂರ್ತಿ ಕಾಣುತ್ತದೆ. ಅದನ್ನು ಅವನು ಸೋಂಕಿದೊಡನೆ ವಾಸವದತ್ತೆಯೇ ಆಗಿಬಿಡುತ್ತಾಳೆ. ಅವಳು ತನ್ನ ಕಥೆಯನ್ನು ಆಗ ಹೇಳುತ್ತಾಳೆ —'ನಾನು ಸ್ವಲ್ಪ ಮೊದಲೇ ಎದ್ದು ಹಣ್ಣುಗಳನ್ನು ತರಲೆಂದು ಕಾಡನ್ನು ಹೊಕ್ಕೊಡನೆ, ಒಂದು ಕಿರಾತ ಸೈನ್ಯದ ಅಧಿಪತಿಯ ಕಣ್ಣಿಗೆ ಬಿದ್ದೆ. ಅಷ್ಟರಲ್ಲೇ ಮತ್ತೊಂದು ಕಿರಾತ ಸೈನ್ಯ ಬಂದಿತು. ಇಬ್ಬರಿಗೂ ನನ್ನ ಸಲುವಾಗಿ ಘೋರ ಕದನವಾಗಿ ಎಲ್ಲರೂ ಹತರಾದರು. ಆದರೆ ಆ ತಪೋವನದ ಋಷಿಯು ಬಂದವನೇ ಆಶ್ರಮವೆಲ್ಲ ನಿನ್ನಿಂದಲೇ ಹಾಳಾಯಿತೆಂದು ರೇಗಿ ಕಲ್ಲಾಗುವಂತೆ ಶಪಿಸಿಬಿಟ್ಟನು. ಕಡೆಗೆ ನಾನು ನಿರಪರಾಧಿನಿಯೆಂದು ತಿಳಿದು 'ನೀನು ಸೋಂಕುವವರೆಗೆ' ಎಂದು ಶಾಪಾಂತ್ಯವನ್ನೂ ತಿಳಿಸಿದ್ದನು.' ಹೀಗೆ ಇಬ್ಬರೂ ಸೇರಿ ಸುಖಿಗಳಾದರು.

ಇದು ಕಥಾಸಂಗ್ರಹವಲ್ಲ, ಸಂಪೂರ್ಣ ಗದ್ಯಕಾವ್ಯದ ಕಥಾಭಾಗದ ಸಮಗ್ರ ನಿರೂಪಣೆ. ಇಂದಿನ ದೃಷ್ಟಿಯಿಂದ ಈ ಕಥೆ ಎಷ್ಟು ಅದ್ಭುತವೋ, ಎಷ್ಟು ಅವಾಸ್ತವಿಕವೋ, ಅಷ್ಟೇ ಶುಷ್ಕ. ಬೃಹತ್ಕಥೆಯಲ್ಲಿ ಬರುವ ಅದ್ಭುತ ಕಥಾತಂತ್ರಗಳೆಲ್ಲವೂ—ಸ್ವಪ್ನ, ಆಕಾಶವಾಣಿ, ಶಾಪ, ಗಿಳಿಗಳ ಮಾತು, ಬೊಂಬೆ ಜೀವಂತವಾಗುವುದು[17] ಇತ್ಯಾದಿ—ಇಲ್ಲೂ ಬಂದಿವೆ. ಆದರೆ ಬೃಹತ್ಕಥೆಯಲ್ಲಿರುವಂತೆ ಕುತೂಹಲವನ್ನು ಕೆರಳಿಸುವ ಅಂಶಗಳು ಅತ್ಯಲ್ಪ. ಈ ಲೋಪವನ್ನು ಕವಿ ತನ್ನ ವರ್ಣನಾಚಮತ್ಕಾರಗಳಿಂದ ತುಂಬಿಕೊಂಡಿದ್ದಾನೆ. ನಗರ, ರಾಜ, ಸ್ವಪ್ನಸುಂದರಿಯ ಅಂಗಾಂಗಗಳು, ಬುದ್ಧಿವಾದ, ಘೋರಾರಣ್ಯ, ವಸಂತಕಾಲ, ಮಲಯಾನಿಲ, ಸ್ವಯಂವರ, ಪೂರ್ವಾನುರಾಗ, ಸೂರ್ಯಾಸ್ತಮಯ, ಚಂದ್ರೋದಯ, ಪ್ರಯಾಣ, ಯುದ್ಧ, ಸಮುದ್ರ, ಸಮಾಗಮ, ಇವುಗಳ ಸುದೀರ್ಘವರ್ಣನೆಗಳೇ ನಿಜವಾಗಿ ಕಾವ್ಯವಸ್ತು. ಒಂದೊಂದನ್ನೂ ವಿರಾಮವಾಗಿ, ವಿಧವಿಧವಾಗಿ, ವಿಸ್ತಾರವಾಗಿ ಕವಿ ಲಂಬಿಸುತ್ತಾನೆ. ಈ ಚಿತ್ರಗಳು ಸ್ವತಃ ಚಮತ್ಕಾರಪೂರ್ಣವಾಗಿದ್ದರೂ ಇವು ಪಾತ್ರಗಳ ಸ್ವಭಾವಾಭಿವ್ಯಕ್ತಿಗೆ, ಸಹಾಯಕಗಳಾಗದೆ ಇರುವ ಪ್ರಯುಕ್ತ ಓದುಗರ ಮನಸ್ಸನ್ನು ಮುಗ್ಧಗೊಳಿಸುವುದಿಲ್ಲ. ಇತ್ತ ನಿತ್ಯಜೀವನದ ವಾಸ್ತವಿಕತೆಯ ಗಾಳಿಗೆ ಪ್ರವೇಶವಿಲ್ಲ, ಅತ್ತ ಕಲ್ಪನೆಯ ಲೋಕದ ಅದ್ಭುತ ಸೌಂದರ್ಯದ ನೇಚನೆಯೂ ಸಾಕಷ್ಟಿಲ್ಲ. ಪಾತ್ರಗಳಲ್ಲಿ ತಮ್ಮದೇ ಆದ ವ್ಯಕ್ತಿತ್ವವಿಲ್ಲ, ಕಥೆಯಲ್ಲಿ ಘಟನೆಗಳ ಬಾಹುಲ್ಯವಾಗಲಿ, ಸಂಯೋಜನೆಯಾಗಲಿ ಒಂದೂ ಇಲ್ಲ. ಹೀಗೆ ಎಲ್ಲ ದೃಷ್ಟಿಗಳಿಂದಲೂ ನ್ಯೂನತೆಗಳೇ ತುಂಬಿರುವ ಈ ಗದ್ಯಕಾವ್ಯ ಕೂಡ ಓದುಗನಲ್ಲಿ ಒಂದು ಅಭೂತಪೂರ್ವವಾದ ಶಬ್ದಸೌಂದರ್ಯಾನುಭೂತಿಯನ್ನು ಉಂಟುಮಾಡುತ್ತದೆ, ಬುದ್ಧಿಗೆ ವಿಸ್ಮಯವನ್ನು ಮಾಡುತ್ತದೆ. ಕವಿಗೆ ಇದ್ದ ಗುರಿಯೆಲ್ಲಾ ಇಷ್ಟೇ. ಪ್ರತಿ ಅಕ್ಷರದಲ್ಲೂ ಶ್ಲೇಷೆಯ ಪ್ರಯೋಗದ ವೈದಗ್ಧ್ಯವನ್ನು ಕಾಣುವಂತೆ ಬರೆಯಬೇಕೆಂಬುದು ಅವನ ಧ್ಯೇಯ.[18] ಸರಸ್ವತಿಯ ವರಪ್ರಸಾದದಿಂದ

---

17. ಇದನ್ನು ಬೃಹತ್ಕಥೆಯ ಮುಖ್ಯ ತಂತ್ರವೆಂದು ಸುಬಂಧು ಪರಿಗಣಿಸಿದ್ದಂತೆ ತೋರುತ್ತದೆ ಹೋಲಿಸಿ—"ಬೃಹತ್ಕಥಾರಂಭೈರಿವ ಶಾಲಭಂಜಿಕೋಪೇತ ವೃತ್ತೈಃ"—ವಾಸವದತ್ತ, ಪುಟ 58 (ಜೀಬಾನಂದರ ಸಂಸ್ಕರಣ).

18. ಪ್ರತ್ಯಕ್ಷರಶ್ಲೇಷಮಯಪ್ರಬಂಧವಿನ್ಯಾಸವೈದಗ್ಧ್ಯನಿಧಿರ್ನಿಬಂಧಮ್ ।
ಸರಸ್ವತೀದತ್ತವರಪ್ರಸಾದಶ್ಚಕ್ರೇ ಸುಬಂಧುಃ ಸುಜನೈಕಬಂಧುಃ ॥

ಕವಿಗೆ ಆ ಆದರ್ಶ ಸಿದ್ಧಿಸಿದೆ. ಶ್ಲೇಷಾದಿ ಶಬ್ದಚಮತ್ಕಾರಪ್ರಿಯರಾದ ಸುಜನರಿಗೆ ಸುಬಂಧು ವಸುಧೈಕಬಾಂಧವ. ಅರ್ಥಗುಣಗಳು ಇರದಿದ್ದರೂ ಸತ್ಕವಿಯ ಶಬ್ದಮಾಧುರ್ಯವೇ ಕಿವಿಗೆ ಅಮೃತಪ್ರಾಯವಾಗಿರುವುದೆಂಬುದು ಅವನ ನಂಬಿಕೆ. ಪರಿಮಳವಿಲ್ಲದಿದ್ದರೂ ಕಣ್ಗೆನಿದಾಗಿರುವ ಮಾಲತೀ ಮಾಲೆಯ ದೃಷ್ಟಾಂತವನ್ನು ಸುಬಂಧುವೇ ಕೊಟ್ಟಿದ್ದಾನೆ.[19] ಸೂಕ್ಷ್ಮಮತಿ ಗಳಾದ ಕವಿಗಳಿಗೆ ಕರತಲಾಮಲಕದಂತೆ ಭುವನತ್ರಯವನ್ನೂ ತೋರಿಸುವ ಸರಸ್ವತಿಯನ್ನು ಮೊದಲು ಸ್ತುತಿಸಿ ಒಡನೆಯೇ ಹರಿಯನ್ನು ಸ್ತೋತ್ರ ಮಾಡುತ್ತಾ ಅವನು ಕೊಡುವ ಚಿತ್ರವಿದು —"ನಿನಗೆ ಬೆಟ್ಟವನ್ನು ಹೊತ್ತು ಆಯಾಸವಾಗಿದೆ ; ನಾವೀಗ ಸ್ವಲ್ಪ ಹೊತ್ತುಕೊಳ್ಳುತ್ತೇವೆ' ಎಂದು ಗೋಪರು ಹೇಳಿದಾಗ ಸ್ವಲ್ಪ ಹೆಗಲನ್ನು ಸಡಿಲಮಾಡಿದನೋ ಇಲ್ಲವೋ ಅವರ ತೋಳುಗಳು ಅದರ ಭಾರದಿಂದ ಜಜ್ಜಿಹೋದುವು. ಆಗ ನಗುತ್ತ ನಿಂತ ಹರಿ ನಮ್ಮನ್ನು ಕಾಪಾಡಲಿ." ಸುಬಂಧು ಹೊತ್ತಿರುವ ಶ್ಲೇಷಾದಿ ಚಮತ್ಕಾರ ಶೈಲಭಾರವಾದರೂ ಹರಿಯ ಭಾರದಂತೆಯೇ. ಇತರರು ಅದರ ಶತಾಂಶವನ್ನೂ ಹೊರಲಾರರು. ಅವನು ಬಳಸುವ ಯಮಕ, ದೀಪಕ ರೂಪಕ, ಉಪಮಾ, ಉತ್ಪ್ರೇಕ್ಷಾ, ವಿರೋಧಾಭಾಸ, ಪರಿಸಂಖ್ಯಾ ಮುಂತಾದ ಅಲಂಕಾರಗಳೆಲ್ಲಕ್ಕೂ ಶ್ಲೇಷೆಯೇ ಜೀವಾಳ. ರಾಜಪುತ್ರನ ಸಾಹಸವರ್ಣನೆಯ ಶೃಂಖಲಾರೂಪವಾದ ಮಾಲಾದೀಪಕಾಲಂಕಾರದ ಚಮತ್ಕಾರವನ್ನು ನೋಡಿ :—

೧. 'ಯಸ್ಯ ಚ ಸಮರಭುವಿ ಭುಜದಂಡೇನ ಕೋದಂಡಂ, ಕೋದಂಡೇನ ಶರಾಃ, ಶರೈರರಿಶಿರಃ, ತೇನಾಪಿ ಭೂಮಂಡಲಂ, ತೇನ ಚಾನನುಭೂತಪೂರ್ವೋ ನಾಯಕೋ, ನಾಯಕೇನ ಕೀರ್ತಿಃ, ಕೀರ್ತ್ಯಾ ಚ ಸಪ್ತಸಾಗರಾಃ, ಸಾಗರೈಃ ಕೃತಯುಗಾದಿರಾಜಚರಿತಸ್ಮರಣಂ, ಅನೇನ ಚ ಸ್ಥೈರ್ಯಮಮುನಾ ಚ ಪ್ರತಿಕ್ಷಣಮಾಶ್ಚರ್ಯಮಾಸಾದಿತಮ್.'[20]

---

19. ಅವಿದಿತಗುಣಾಪಿ ಸತ್ಕವಿಭಣಿತಿಃ ಕರ್ಣೇಷು ವಮತಿ ಮಧುಧಾರಾಂ ।
ಅನಧಿಗತಪರಿಮಲಾಪಿ ಹಿ ಹರತಿ ದೃಶಂ ಮಾಲತೀಮಾಲಾ ॥

20. ವಾಸವದತ್ತ, ಪುಟ 23 ಇದರೊಡನೆ "ಸಂಗ್ರಾಮಾಂಗಣಮಾಗತೇನ ಭವತಾ ಚಾಪೇ ಸಮಾರೋಪಿತೇ .." ಎಂಬ ಪದ್ಯವನ್ನು ಹೋಲಿಸಿ—'ಕನ್ನಡ ಕಾವ್ಯಪ್ರಕಾಶ, VIII.

'ಅವನ ಭುಜದಂಡವು ಕೋದಂಡವನ್ನೂ, ಕೋದಂಡವು ಶರಗಳನ್ನೂ, ಶರಗಳು ಶತ್ರುಶಿರಗಳನ್ನೂ, ಶತ್ರುಶಿರಗಳು ಭೂಮಂಡಲವನ್ನೂ, ಭೂಮಂಡಲವು ಅಭೂತಪೂರ್ವನಾದ ನಾಯಕನನ್ನೂ, ನಾಯಕನು ಕೀರ್ತಿಯನ್ನೂ, ಕೀರ್ತಿಯು ಸಪ್ತಸಾಗರಗಳನ್ನೂ, ಸಾಗರಗಳು ಕೃತಯುಗಾದಿ ರಾಜರ ಚರಿತೆಯ ಸ್ಮರಣೆಯನ್ನೂ, ಆ ಸ್ಮರಣೆ ಸ್ಥೈರ್ಯವನ್ನೂ, ಅದು ಪ್ರತಿಕ್ಷಣವೂ ಆಶ್ಚರ್ಯವನ್ನೂ ಮುಟ್ಟಿ ಎತ್ತುತ್ತಿದ್ದುವು.'

ಇಲ್ಲಿ ಕಡೆಯ ಕ್ರಿಯೆಯು ಅರ್ಥಶ್ಲೇಷೆಯಿಂದ ಉಳಿದೆಲ್ಲ ಕರ್ತೃಗಳಿಗೂ ಅನ್ವಯಿಸುವುದೇ ಅರ್ಥಚಮತ್ಕಾರಕ್ಕೆ ಮೂಲ. "ಕೋದಂಡೇನ ಶರಾಃ ಶರೈರರಿಶಿರಸ್ತೇನಾಪಿ ಭೂಮಂಡಲಮ್" ಎಂಬುದು ಶಾರ್ದೂಲವಿಕ್ರೀಡಿತ ವೃತ್ತದ ಪಾದವಾದ್ದರಿಂದ ಗದ್ಯವು ವೃತ್ತಗಂಧಿಯಾಗಿಯೂ ಇದೆ.

[ಇದರಂತೆ 'ವರ್ಣಗ್ರಂಥನಾಸು ಶೃಂಖಲಾಬಂಧಃ'[21] ಎಂದು ಕವಿಯೇ ಸೂಚಿಸುವ ಸಂಘಟನಾ ಕೌಶಲವನ್ನು ಕೆಳಗಿನ ಸಾಲುಗಳಲ್ಲಿ ನೋಡಿ —

೨. ರಾಜಸೇನರಹಿತೋ ರಾಜಸೇ ನರಹಿತೋ, ಧ್ರುವಂ ವಿಶಾರದಾ ವಿಶಾರದಾಭ್ರವಿಶದಾ, ವಿಶದಾತ್ಮನೀನ ಮಹಿಮಾ ಮಹಿಮಾನರಕ್ಷಣ ಕ್ಷಮಾ, ಕ್ಷಮಾತಿಲಕ ಧೀರತಾಧೀರತಾ ಮನಸಿ ಭೂತತಾಭೂತತಾ ವಚಸಿ[22] .... .ಇತ್ಯಾದಿ. ]

ಇಲ್ಲಿ ಸರಪಳಿಯಂತೆ ಯಮಕಾಲಂಕಾರ ಬಂದು ಚಮತ್ಕಾರಕಾರಿಯಾಗಿದೆ. ಅದಕ್ಕೆ ಪೋಷಕವಾಗಿ 'ರಾಜಸೇನ-ರಹಿತ', 'ರಾಜಸೇ ನರಹಿತ' ಮುಂತಾದ ಸಭಂಗ ಹಾಗು ಅಭಂಗಶ್ಲೇಷೆಗಳೂ ಪ್ರತಿಪದದಲ್ಲಿಯೂ ಉಪಸ್ಥಿತವಾಗಿವೆ.

ಶಬ್ದಶ್ಲೇಷಮೂಲವಾದ ಕೆಲವು ಉಪಮೆಗಳನ್ನು ನೋಡಿ ; ರಾಜನು—

೩. ಜಲನಿಧಿರಿವ ವಾಹಿನೀಶತನಾಯಕಃ, ಸಮಕರಪ್ರಚಾರಶ್ಚ , ಹರ ಇವ ಮಹಾಸೇನಾನುಗತೋ ನಿವರ್ತಿತಮಾರಶ್ಚ ; ಮೇರುರಿವ ವಿಬುಧಾಲಯೋ ವಿಶ್ವಕರ್ಮಾಶ್ರಯಶ್ಚ , ರವಿರಿವ ಕ್ಷಣದಾನಪ್ರಿಯಃ ,

---

21. ಅದೇ, ಪುಟ 66

22. ಅದೇ, ಪುಟ 106

ಛಾಯಾಸಂತಾಪಹರಶ್ಚ, ಕುಸುಮಕೇತುರಿವ ಜನಿತಾನಿರುದ್ಧಸಂಪ ದ್ರತಿಸುಖಪ್ರದಶ್ಚ.

[ಜಲನಿಧಿಯಂತೆ ವಾಹಿನೀ (ನದಿ ಮತ್ತು ಸೇನೆ) ಶತಗಳ ನಾಯಕ; ಸಮವಾದ ಕರ (=ತೆರಿಗೆ) ವಿಧಿಸುವವನು (ಜಲನಿಧಿಯು ಸ+ಮಕರ ಪ್ರಚಾರ=ಮೊಸಳೆಗಳ ಸಂಚಾರದಿಂದ ತುಂಬಿದುದು). ಹರನಂತೆ ಮಹಾ ಸೇನಾನುಗತ (ಷಣ್ಮುಖ ಮತ್ತು ಮಹಾಸೈನ್ಯ) ಮತ್ತು ನಿವರ್ತಿತಮಾರ (ಮಾರ=ಮನ್ಮಥ ಮತ್ತು ಕಾಮುಪ್ರವೃತ್ತಿ). ಮೇರುವಿನಂತೆ ವಿಬುಧರಿಗೆ (=ಸುರರು ಮತ್ತು ಪಂಡಿತರು) ಆಲಯ ಮತ್ತು ವಿಶ್ವಕರ್ಮಾಶ್ರಯ (ವಿಶ್ವಕರ್ಮನೆಂಬ ದೇವತೆ ಮತ್ತು ಸಕಲ ಕಾರ್ಯಗಳು). ರವಿಯಂತೆ ಕ್ಷಣದಾನಪ್ರಿಯ (=ರಾತ್ರಿಯ ಅಹಿತ, ಮತ್ತು ಪ್ರತಿಕ್ಷಣವೂ ದಾನಪ್ರಿಯ) ಮತ್ತು ಛಾಯಾಸಂತಾಪಹರ (=ಛಾಯಾದೇವಿಯ ರಮಣ ಮತ್ತು ನೆರಳಿನಲ್ಲೂ ಚಾಮರ ಬೀಸಿಸಿಕೊಳ್ಳುವವನು?) ಮನ್ಮಥನಂತೆ ಜನಿತಾ ನಿರುದ್ಧಸಂಪದ (=ಅನಿರುದ್ಧನ ತಂದೆ ಮತ್ತು ಅನಿರುದ್ಧಸಂಪತ್ತಿನ ಜನಕ) ಮತ್ತು ರತಿಸುಖಪ್ರದ (=ರತಿಗೆ ಮತ್ತು ರತಿಸುಖಕ್ಕೆ).]

ಇದು ಶ್ಲೇಷಮೂಲವಾದ ವಿರೋಧಾಭಾಸ:

ವಿದ್ಯಾಧರೋऽಪಿ ಸುಮನಾ, ಧೃತರಾಷ್ಟ್ರೋऽಪಿ ಗುಣಪ್ರಿಯಃ, ಕ್ಷಮಾನುಗತೋऽಪಿ ಸುಧರ್ಮಾಶ್ರಿತೋ ಬೃಹನ್ನಲಾನುಭಾವೋऽ ಪ್ಯಂತಃಸರಲೋ, ಮಹಿಷೇ ಸಂಭವೋऽಪಿ ವೃಷೋತ್ಪಾದೀ, ಅತರ ಲೋऽಪಿ ಮಹಾನಾಯಕೋ ರಾಜಾ.

[ವಿದ್ಯಾಧರನಾದರೂ (ವಿದ್ಯಾಧರ ಮತ್ತು ವಿದ್ಯೆಗಳನ್ನು ಕಲಿತವ) ಸುಮನ(=ದೇವತೆ ಮತ್ತು ಸುಚಿತ್ತದವನು), ಧೃತರಾಷ್ಟ್ರ (=ದುರ್ಯೋ ಧನನ ತಂದೆ ಮತ್ತು ರಾಜ್ಯವನ್ನು ಆಳುವವನು) ನಾದರೂ ಗುಣಪ್ರಿಯ. ಕ್ಷಮಾನುಗತನಾದರೂ (=ಭೂಲೋಕದಲ್ಲಿದ್ದರೂ ಮತ್ತು ಕ್ಷಮಾಗುಣ ವುಳ್ಳವನಾದರೂ) ಸುಧರ್ಮಾಶ್ರಿತ (=ಸುಧರ್ಮವೆಂಬ ಲೋಕ ಮತ್ತು ಸದ್ಧರ್ಮ) ]

ಇದು ಶ್ಲೇಷಮೂಲವಾದ ಪರಿಸಂಖ್ಯಾಲಂಕಾರ —

‘ಯತ್ರ ಚ ಶಾಸತಿ ಧರಣಿಮಂಡಲಂ ಛಲನಿಗ್ರಹಪ್ರಯೋಗೋ ವಾದೇಷು, ನಾಸ್ತಿಕತಾ ಚಾರ್ವಾಕೇಷು, ಕಂಟಕಪ್ರಯೋಗೋ

ನಿಯೋಗೇಷು, ಪರೀವಾದೋ ವೀಣಾಸು, ಖಲಸಂಯೋಗಃ ಶಾಲಿಷು'
ಇತ್ಯಾದಿ.

೧. [ ಅವನು ಭೂಮಂಡಲವನ್ನಾಳುತ್ತಿರುವಾಗ ಮೋಸ, ನಿಗ್ರಹ ಸ್ಥಾನ—ಎಲ್ಲವೂ ವಾದಗಳಲ್ಲಿ ಮಾತ್ರ ಇರುತ್ತಿದ್ದುವು (ರಾಜ್ಯದಲ್ಲಲ್ಲ) ; ನಾಸ್ತಿಕತೆ (ಮತ್ತು ಏನೂ ಇಲ್ಲದಿರುವಿಕೆ) ಚಾರ್ವಾಕರಲ್ಲಿ ಮಾತ್ರ ಇರುತ್ತಿದ್ದಿತು, ಕಂಟಕಯೋಗವು (ವೈರಿಗಳ ಶೋಧನೆ ಮತ್ತು ಮುಳ್ಳುಗಳ ಸಂಪರ್ಕ) ರಾಜದೂತರಲ್ಲಿ ಮಾತ್ರ, ಪರೀವಾದ (ನಿಂದೆ ಮತ್ತು ವಾದನೆ) ವೀಣೆಗಳಲ್ಲಿ ಮಾತ್ರ, ಖಲಸಂಯೋಗ (ದುರ್ಜನಸಂಗ ಮತ್ತು ಒರಳಿನ ಸಂಪರ್ಕ) ಭತ್ತಗಳಲ್ಲಿ ಮಾತ್ರ ಕಾಣುತ್ತಿದ್ದುವು. ]

ಇದು ಚಂದ್ರೋದಯವನ್ನು ವರ್ಣಿಸುವ ರೂಪಕಮಾಲೆ ಮತ್ತು ಉತ್ಪ್ರೇಕ್ಷಾಪರಂಪರೆ :

'ಕ್ಷಣೇನ ಚ ಕ್ಷಣದಾರಾಜಕನ್ಯಕಾಕಂದುಕಃ, ಕಂದರ್ಪಕನಕ ದರ್ಪಣಃ, ಉದಯಗಿರಿ ಬಾಲಮಂದಾರ ಪುಷ್ಪಸ್ತಬಕಾಕೃತಿಃ, ಪ್ರಾಚೀ ಲಲಾಟತಟ ಕುಂಕುಮಬಿಂದುಚಕ್ರಾಕಾರಃ, ಕನಕಕುಂಡಲಮಿವ ನಭಃಶ್ರಿಯಃ, ದಿವ್ಯವಧೂಪ್ರಸಾಧಿಕಾ ಹಸ್ತಸ್ರಸ್ತಾಲಕ್ತಕಪಟಲಮಿವ, ಗಗನಸೌಧಕನಕಕುಂಭ ಇವ, ಪ್ರಸ್ಥಾನಕಕಲಶ ಇವ ತ್ರಿಭುವನ ವಿಜಯವಿನಿರ್ಗತಸ್ಯ ಮಕರಕೇತೋಃ ರಜನೀಪತಿರುದಯು ಮಾಸಸಾದ.'

೨. [ ಮರುಕ್ಷಣವೇ ರಾತ್ರಿ ರಾಜಕನ್ಯೆಯ ಚೆಂಡು, ಮನ್ಮಥನ ಚಿನ್ನಗನ್ನಡಿ, ಉದಯಾಚಲದ ಬಾಲಮಂದಾರ ಪುಷ್ಪದ ಮೊಗ್ಗು, ಪೂರ್ವ ದಿಗಂಗನೆಯ ಹಣೆಯ ಕುಂಕುಮದ ಬೊಟ್ಟು ಎನಿಸುತ್ತ, ನಭೋಲಕ್ಷ್ಮಿಯ ಕನಕಕುಂಡಲದಂತೆಯೂ, ಸುರಾಂಗನೆಯರು ಸಿಂಗರಿಸಿಕೊಳ್ಳುವಾಗ ಕೈಯಿಂದ ಜಾರಿದ ಅರಗಿನ ತೊಟ್ಟಿನಂತೆಯೂ, ಗಗನಸೌಧದ ಹೊಂಗಳಸದಂತೆಯೂ, ತ್ರಿಭುವನವಿಜಯಕ್ಕೆಂದು ಹೊರಟ ಮನ್ಮಥನ ಪ್ರಸ್ಥಾನಕಲಶದಂತೆಯೂ, ರಜನೀಕಾಂತನು ಉದಯಿಸಿದನು. ]

ಇದು ಕತ್ತಲೆಯನ್ನು ಕುರಿತ ಉತ್ಪ್ರೇಕ್ಷೆ:

ಮುದಿತಮಿವಾತಿಮತ್ತಮಾತಂಗಮನೋಹರಗಂಡಮಂಡಲೇ,
ಫಲಿತಮಿವಾತಿಸಾಂದ್ರಬಹಲಚ್ಛದವಿತತತಮಾಲತಮಾಲಕಾನನೇ,'
ಸ್ಫುರಿತಮಿವಾತಿ ಕಾಂತಕಾಂತಾಜನಘನತರಕೇಶಪಾಶಸಂಹತೌ,
ಮಿಲಿತಮಿವೇಂದ್ರನೀಲಮಣಿರಶ್ಮಿಭಿಃ .

೩. [ ಮತ್ತಮಾತಂಗಗಳ ಮನೋಹರ ಗಂಡಮಂಡಲದಲ್ಲಿ ಮೋದ ಮಾಂತಂತೆಯೂ, ಅತಿ ವಿಶಾಲ ತಮಾಲಕಾನನದಲ್ಲಿ ಫಲಿಸಿದಂತೆಯೂ, ಅತಿ ರಮಣೀಯ ಕಾಂತಾಜನದ ಘನಕೇಶಪಾಶರಾಶಿಯಲ್ಲಿ ಸ್ಫುರಿಸಿದಂತೆಯೂ, ಇಂದ್ರನೀಲರತ್ನದ ಕಿರಣಗಳೊಡನೆ ಕಲೆತುಹೋದಂತೆಯೂ . . . ]

ಹೀಗೆ ಶ್ಲೇಷಾನುಪ್ರಾಣಿತವಾದ ಸುಬಂಧುವಿನ ಶೈಲಿ ಶಬ್ದಚಮತ್ಕಾರ ಲೋಲರಿಗೆ ಆತನ ಸ್ವಪ್ನಸುಂದರಿಯಂತೆಯೇ—ಕೌತುಕದ ತ್ರಿಭುವನ ವಿಜ ಯದ ಪತಾಕೆ, ಮದನನ ಆವಿರ್ಭೂತಿ, ಮನದ ಅಭಿಭೂತಿ, ಇಂದ್ರಿಯಗಳ ಮೋಹನಶಕ್ತಿ, ಮನ್ಮಥನ ವಿಹಾರಸ್ಥಲ, ಸೌಂದರ್ಯದ ಏಕಾಯತನಶಾಲೆ, ಸೌಭಾಗ್ಯದ ಉತ್ಪತ್ತಿಸ್ಥಾನ, ಲಾವಣ್ಯದ ಆಕರ್ಷಣಸಿದ್ಧಿ, ಎಂದು ತೋರ ಬಹುದು. ಅವನ ಸಮಾಸಗಳು ಅರ್ಥಕ್ಕೆ ತೊಡಕಾಗುವಷ್ಟು ಉದ್ದವಾಗಿರು ವುದಿಲ್ಲವೆಂಬುದೂ ಮೇಲಿನ ಉದಾಹರಣೆಗಳಿಂದಲೇ ಸ್ಪಷ್ಟ. ದೀರ್ಘ ಸಮಾಸರಹಿತವಾದ ಎಷ್ಟೋ ಭಾಗಗಳೂ ಉಂಟು

'ಕೃತಾಪಕಾರೇಣಾಪಿ ವಿಧಿನೋಪಕೃತಿರೇವ ಕೃತಾ ಯದಯಂ ಲೋಚನ ಗೋಚರತಾಂ ನೀತಃ ಸಮುದ್ರಃ. ತದತ್ರ ದೇಹ ಮುತ್ಸೃಜ್ಯ ಪ್ರಿಯಾವಿರಹಾಗ್ನಿಂ ನಿರ್ವಾಪಯಾಮಿ. ಯದಪ್ಯನಾತು ರಸ್ಯ ದೇಹತ್ಯಾಗೋ ನ ವಿಹಿತಸ್ತಥಾಪಿ ಕಾರ್ಯಃ. ನ ಖಲು ಸರ್ವಃ ಕಾರ್ಯಮಕಾರ್ಯಂ ವಾ ಕರೋತಿ. ಇತ್ಯಸಾರೇ ಕೇನ ಕಿಂ ವಾ ನ ಕೃತಮ್. ತಥಾಹಿ, ಗುರುದಾರಗ್ರಹಣಂ ದ್ವಿಜರಾಜೋಽಕರೋತ್.'

೪. [ ಅಪಕಾರ ಮಾಡಹೊರಟ ವಿಧಿಯೂ ಈ ಸಮುದ್ರವನ್ನು ಕಾಣಿಸಿದ್ದರಿಂದ ಉಪಕಾರವನ್ನೇ ಮಾಡಿದಂತಾಯಿತು. ಆದುದರಿಂದ ಇಲ್ಲೇ ದೇಹವನ್ನು ತೊರೆದು ಪ್ರಿಯಾವಿರಹವೆಂಬ ಬೆಂಕಿಯನ್ನಾರಿಸುವೆನು. ವ್ಯಾಧಿಗ್ರಸ್ತನಲ್ಲದವನಿಗೆ ದೇಹತ್ಯಾಗ ವಿಹಿತವಲ್ಲದಿದ್ದರೂ ಕರ್ತವ್ಯವೇ ಸರಿ. ಎಲ್ಲರೂ ಕಾರ್ಯವನ್ನೇ ಇಲ್ಲವೆ ಅಕಾರ್ಯವನ್ನೇ ಮಾಡುವುದು ಶಕ್ಯವಿಲ್ಲ.

ಇಷ್ಟು ಅಸಾರವಾದ ಈ ಸಂಸಾರದಲ್ಲಿ ಯಾರು ಏನನ್ನು ಮಾಡಿಲ್ಲ? ಉದಾಹರಣೆಗೆ—ಚಂದ್ರನೇ ಗುರುಪತ್ನೀಗಮನ ಮಾಡಿದನು . . . ]

ಉತ್ಪ್ರೇಕ್ಷಾವಲ್ಲಭನಾದ ಕವಿಚಕ್ರವರ್ತಿ ಬಾಣನ ಮುಂದೆ ಸುಬಂಧುವಿನ ಉತ್ಪ್ರೇಕ್ಷೆಗಳು ಮಂಕಾದರೂ, ಶ್ಲೇಷಚಾತುರ್ಯದಲ್ಲಿ ಸುಬಂಧುವೇ ಒಂದು ಕೈ ಹೆಚ್ಚು. ನಾನಾರ್ಥಕೋಶಗಳೆಲ್ಲ ಅವನಿಗೆ ಕರತಲಾಮಲಕ. ಆದರೆ ಅದ್ಭುತ ಮಾಯಾಲೋಕದ ಸೃಷ್ಟಿಗೆ ಶ್ಲೇಷಕ್ಕಿಂತ ಉತ್ಪ್ರೇಕ್ಷೆಯೇ ಹೆಚ್ಚು ಪ್ರಯೋಜಕವೆಂಬುದನ್ನು ಮನಗಂಡ ಕೀರ್ತಿ ಬಾಣನದು. ಆದರೆ ಶ್ಲೇಷೆಯಂತೆ ಉತ್ಪ್ರೇಕ್ಷೆಯಲ್ಲಿಯೂ ಸುಬಂಧುವಾಗಲೇ ಉತ್ತಮ ಪ್ರಯೋಗಗಳನ್ನು ಮಾಡಿಯಾಗಿದ್ದುದು 'ವಾಸವದತ್ತೆ'ಯಲ್ಲಿಯೇ ಕಾಣುತ್ತದೆ. ದಂಡಿಯ ಹಾಸ್ಯ ಮತ್ತು ಧೂರ್ತರ ಚಿತ್ರಣಗಳು ಮಾತ್ರ ಸುಬಂಧುವಿನಲ್ಲಿ ಸುತರಾಂ ಕಾಣುವುದಿಲ್ಲ. ಆದರೆ ಗದ್ಯಕಾವ್ಯದ ಒಂದು ನೂತನ ಸಂಪ್ರದಾಯವನ್ನು ತನ್ನ ಪ್ರಯೋಗದಿಂದ ಪ್ರಚಾರದಲ್ಲಿ ತಂದು 'ವಕ್ರೋಕ್ತಿಮಾರ್ಗನಿಪುಣ'ನೆಂಬ ಪ್ರಸಿದ್ಧಿಪಡೆದ ಕೀರ್ತಿ ಸುಬಂಧುವಿಗೆ ಸಲ್ಲಬೇಕು. ಮಹಾಕವಿ ಬಾಣನೇ ಇವನನ್ನು ಗೌರವಿಸುವನೆಂದ ಮೇಲೆ ಅದಕ್ಕಿಂತ ಹೆಚ್ಚಿನ ಗೌರವವಿನ್ನೇನು ಬೇಕು?

### ಬಾಣಭಟ್ಟ --

**ಶ್ಲೇಷೇ ಕೇಚನ ಶಬ್ದಗುಂಫವಿಷಯೇ ಕೇಚಿದ್ರಸೇ ಚಾಪರೇಽ-**
**ಲಂಕಾರೇ ಕತಿಚಿತ್ ಸದರ್ಥವಿಷಯೇ ಚಾನ್ಯೇ ಕಥಾವರ್ಣನೇ।**
**ಆ ಸರ್ವತ್ರ ಗಭೀರಧೀರ ಕವಿತಾ ವಿಂಧ್ಯಾಟವೀ ಚಾತುರೀ-**
**ಸಂಚಾರೀ ಕವಿಕುಂಭಿಕುಂಭ ಭಿದುರೋ ಬಾಣಸ್ತು**
**ಪಂಚಾನನಃ ॥**

—ಶ್ರೀ ಚಂದ್ರದೇವ

'ಕೆಲವರು ಶ್ಲೇಷದಲ್ಲಿ ಮಾತ್ರ ಪ್ರವೀಣರು (ಸುಬಂಧುವಿನಂತೆ), ಕೆಲವರು, ಶಬ್ದ ಸಂಘಟನೆಯಲ್ಲಿ ಕುಶಲರು (ಜಯದೇವನಂತೆ), ಕೆಲವರು ರಸದಲ್ಲಿ ಪ್ರವೀಣರು (ಕಾಳಿದಾಸನಂತೆ), ಕೆಲವರು ಅಲಂಕಾರದಲ್ಲಿ ಅಗ್ರಗಣ್ಯರು (ಶ್ರೀಹರ್ಷನಂತೆ), ಆದರೆ ಕವಿತಾವಿಂಧ್ಯಾಟವಿಯ ಸರ್ವದಿಕ್ಕುಗಳಲ್ಲೂ ಒಂದೇ ಗಂಭೀರಧೀರ ಗಮನದಿಂದ ಸಂಚಾರಮಾಡುತ್ತಾ ಕವಿಗಜಗಳನ್ನೆಲ್ಲ

ಕುಟ್ಟಿ ಕೆಡಹುವ ಪಂಚಾನನನೆಂದರೆ ಬಾಣನೊಬ್ಬನೇ.' ಬಾಣನು ಮುಟ್ಟದ ಕವಿತಾ ವಿಷಯವಿಲ್ಲ; ಮುಟ್ಟಿದ್ದೆಲ್ಲವೂ ಚಿನ್ನವೇ. "ಬಾಣೋಚ್ಛಿಷ್ಟಂ ಜಗತ್ಸರ್ವಂ"–ಉಳಿದ ಕವಿಗಳೆಲ್ಲ ಬಾಣನ ಎಂಜಲಿಗೆ ಕೈಯಾನುವವರೆಂಬ ಮಟ್ಟಿಗೆ ಪ್ರಾಚೀನರು ಬಾಣನನ್ನು ಮೆಚ್ಚಿ ಹೊಗಳಿದ್ದಾರೆ. ಬಾಣನೇ ಹೇಳಿರುವಂತೆ—

**ನವೋಽರ್ಥೋ ಜಾತಿರಗ್ರಾಮ್ಯಾ ಶ್ಲೇಷೋಽಕ್ಲಿಷ್ಟಃ ಸ್ಫುಟೋ ರಸಃ।**
**ವಿಕಟಾಕ್ಷರಬಂಧಶ್ಚ ಕೃತ್ಸ್ನಮೇಕತ್ರ ದುಷ್ಕರಮ್॥**

'ನವೀನವಾದ ಕಥಾವಸ್ತು, ಗ್ರಾಮ್ಯವಲ್ಲದ ಸ್ವಭಾವೋಕ್ತಿ, ಕ್ಲಿಷ್ಟವಲ್ಲದ ಶ್ಲೇಷ, ಸ್ಫುಟವಾದ ರಸ, ಬೆರಗಾಗಿಸುವಂತಹ ಅಕ್ಷರಬಂಧ–ಇವೆಲ್ಲವೂ ಒಂದೇ ಎಡೆ ಕೂಡುವುದು ಕಠಿಣ', ಆದರೆ ಬಾಣನಲ್ಲಿ ಕೂಡಿವೆ. 'ಹಿಂದೆ ದ್ರುಪದ ರಾಜನಿಗೆ ಹೆಣ್ಣಾಗಿ ಹುಟ್ಟಿದವಳು (ಪೂರ್ವಜನ್ಮದಲ್ಲಿ ಅಂಬೆ) ಭೀಷ್ಮಾದಿಗಳನ್ನೆದುರಿಸುವ ಹೆಚ್ಚಿನ ಪ್ರಾಗಲ್ಭ್ಯಕ್ಕಾಗಿ ಗಂಡಿನ ರೂಪನ್ನು ತಳೆದು ಶಿಖಂಡಿಯಾದಂತೆ, ಸರಸ್ವತೀದೇವಿಯೇ ಬಾಣನ ರೂಪನ್ನು ತಳೆದು ಹೆಚ್ಚಿನ ಶಕ್ತಿಯನ್ನು ಸಾಧಿಸಿದಳು'[23] ಎಂದು ಗೋವರ್ಧನನು ಬಾಣನಿಗೆ ನಮಸ್ಕಾರ ಮಾಡಿದ್ದಾನೆ. ವೀಣಾಪಾಣಿಯಾದ ವಾಣಿಯ ಹೃದಯಹಾರಿಣಿಯಾದ ನಿಕ್ವಾಣವೇ ಭಟ್ಟಬಾಣನ ಭಾರತಿಯೆಂದು ಗಂಗಾದೇವಿ ನುತಿಸಿದರೆ, ಅದನ್ನೇ ಧರ್ಮದಾಸನು 'ರುಚಿರವರ್ಣಪದೆ', 'ರಸಭಾವವತಿ', 'ಜಗನ್ಮೋಹಿನಿ', ಎಂಬ ಕಾಂತಾಸಮಾನ ವಿಶೇಷಣಗಳಿಂದ ಕೀರ್ತಿಸಿದ್ದಾನೆ. ವಾಗೀಶ್ವರನೆಂದು ಅಭಿನಂದನನ್ನೂ,[24] ಅರ್ಥೇಶ್ವರನೆಂದು ವಾಕ್ಪತಿರಾಜನನ್ನೂ, ರಸೇಶ್ವರನೆಂದು ಕಾಳಿದಾಸನನ್ನೂ ವಂದಿಸುವ ಸೋಡ್ಢಲನೇ[25] ಬಾಣನನ್ನು "ಸರ್ವೇಶ್ವರ"ನೆಂದು ಹೇಳಿ ಅಡ್ಡ ಬೀಳುತ್ತಾನೆ. ಹೀಗೆ ಭಾರತದ ಕವಿಗಳ ಮನೋಭೂಮಿಕೆಯಲ್ಲಿ ಬಾಣನ ಮಹೋನ್ನತಿ ಅಜರಾಮರವಾದುದು.

---

23. ಜಾತಾ ಶಿಖಂಡಿನೀ ಪ್ರಾಗ್ಯಥಾ ಶಿಖಂಡೀ ತಥಾವಗಚ್ಛಾಮಿ।
ಪ್ರಾಗಲ್ಭ್ಯಮಧಿಕಮಾಪ್ತುಂ ವಾಣೀ ಬಾಣೋ ಬಭೂವೇತಿ॥
—ಆರ್ಯಾಸಪ್ತಶತೀ.

24. ಇವನ ಮಹಾಕಾವ್ಯದ ಹೆಸರು 'ರಾಮಚರಿತ.'

25. ಇವನ ಕೃತಿ—ಉದಯಸುಂದರೀಕಥೆ.

ಬಾಣನ ಕಾಲದೇಶಾದಿಗಳ ವಿಷಯದಲ್ಲಿಯೂ ಸಹ ಸಂದೇಹಗಳಿಲ್ಲ-ಹರ್ಷಚಕ್ರವರ್ತಿಯ ಆಸ್ಥಾನದಲ್ಲಿ (ಕ್ರಿ. ಶ. ೬೦೬-೬೪೭) ಮನ್ನಣೆಪಡೆದ ಮಹಾಕವಿ ಬಾಣ. ಮನ್ನಣೆಯೆಂದರೆ ಅದೂ ಅಸಾಧಾರಣವಾದ ಮನ್ನಣೆ. 'ಕನಕ ಕೋಟಿಶತ'ದಿಂದ ಸಭೆಯಲ್ಲಿ ಹರ್ಷನೇ ಬಾಣನನ್ನು ಪೂಜಿಸಿದ ನಂತೆ.[26] ಆ ಚಿನ್ನದ 'ಭಾರ'ಗಳಂತೆ ಆನೆಗಳ ಹಿಂಡನ್ನೂ ಹರ್ಷನು ಅವನಿಗಿತ್ತಿದ್ದನು. ಆ ಅಪೂರ್ವ ಸಮಕಾಲೀನ ಗೌರವದ ಪ್ರತಿಭೆಗಿಂತ ಅನೇಕ ಶತಮಾನಗಳ ರಸಿಕರ ಹೃದಯ ಪೀಠದಲ್ಲಿ ಬೆಳಗಿರುವ ಆತನ ಕೀರ್ತಿಪ್ರಕಾಶ ಮತ್ತೂ ಹೆಚ್ಚಿನದು.[27] ಈತನ ಗದ್ಯ ಕೃತಿಗಳು ಎರಡು.—(೧) ಹರ್ಷಚರಿತೆ ಮತ್ತು (೨) ಕಾದಂಬರಿ. ಎರಡರಲ್ಲಿಯೂ ಬಾಣನೇ ತನ್ನ ಜೀವನವೃತ್ತಾಂತವನ್ನು ತಿಳಿಸಿದ್ದಾನೆ. ಇವನು ವಾತ್ಸ್ಯಾಯನ ಗೋತ್ರದ ಬ್ರಾಹ್ಮಣ. ದುರ್ವಾಸ ಋಷಿಗಳ ಶಾಪದಿಂದ ಸರಸ್ವತಿಯೇ ಮನುಷ್ಯ ಲೋಕದಲ್ಲಿ ಅವತರಿಸಿದಾಗ ಪಡೆದ ಆಕಾರ ವಂಶದ ಮೂಲ ಪುರುಷನಾದ ವತ್ಸನದು. ಅದೇ ಗೋತ್ರದಲ್ಲಿ ಗುಪ್ತಸಾರ್ವಭೌಮರಿಂದ ಪೂಜಿತನಾದ 'ಕುಬೇರ'ನು ಹುಟ್ಟಿದನು. ಕುಬೇರನ ಮಗ ಅರ್ಥಪತಿ, ಮೊಮ್ಮಗ ಚಿತ್ರಭಾನು ಇವನ ಮಗನೇ ಬಾಣ. ತಾಯಿಯ ಹೆಸರು ರಾಜದೇವಿ. ಶೋಣನದದ ತೀರದಲ್ಲಿ 'ಪ್ರೀತಿಕೂಟ'ವೆಂಬುದೇ ಇವನ ಜನ್ಮಸ್ಥಳ. ಬಾಣನಿಗೆ ಬಾಲ್ಯದಲ್ಲಿಯೇ ಮಾತೃವಿಯೋಗವಾಯಿತು, ಹದಿನಾಲ್ಕನೆಯ ವರ್ಷದಲ್ಲಿ ಪಿತೃವಿಯೋಗವೂ ಒದಗಿತು. ಶೋಕವನ್ನು ಮರೆಯಲೆಂದು ಮನೆ ಬಿಟ್ಟವನು ಜೀವನದ ಪಾಠಶಾಲೆಯಲ್ಲಿ ಬೇಕಾದಂತೆ ಜ್ಞಾನಾರ್ಜನೆ ಮಾಡಿದಂತೆ ಕಾಣುತ್ತದೆ. ಕವಿಗಳು, ವೈದ್ಯರು, ನಾನಾ ಕಲಾಕುಶಲರು, ನಟವಿಟಾದಿಗಳು, ಮುಂತಾದವರ ಸಹವಾಸದಲ್ಲಿ 'ಮಹಾಭುಜಂಗ'ನೆಂಬ ಕುಪ್ರಸಿದ್ಧಿಯುಂಟಾಗುವವರೆಗೂ ದೇಶಾಟನೆ ಮಾಡಿದ. ಊರಿಗೆ ತಿರುಗಿ ಬಂದ ಕವಿಯನ್ನು ಹರ್ಷನು ವಿಚಾರಣೆಗೆ

---

26. 'ಶ್ರೀಹರ್ಷ ಏಷ ನಿಜಸಂಸದಿ ಯೇನ ರಾಜ್ಞಾ
ಸಂಪೂಜಿತಃ ಕನಕಕೋಟಿಶತೇನ ಬಾಣಃ'—ಸೋಡ್ಢಲ

27. ಹೇಮ್ನೋ ಭಾರಶತಾನಿ ವಾ ಮದಮುಚಾಂ ವೃಂದಾನಿ ವಾ ದಂತಿನಾಂ
ಶ್ರೀಹರ್ಷೇಣ ಸಮರ್ಪಿತಾನಿ ಕವಯೇ ಬಾಣಾಯ ಕುತ್ರಾದ್ಯ ತತ್ ।
ಯಾ ಬಾಣೇನ ತು ತಸ್ಯ ಸೂಕ್ತಿನಿಕರೈರುಟ್ಟಂಕಿತಾಃ ಕೀರ್ತಯ-
ಸ್ತಾಃ ಕಲ್ಪಪ್ರಲಯೇಽಪಿ ಯಾಂತಿ ನ ಮನಾಙ್ಮನ್ಯೇ ಪರಿಮ್ಲಾನತಾಂ ॥

ಕರೆಸುವಂತಾಯಿತು. ಆದರೆ ಶಿಕ್ಷೆಯ ಬದಲು ಕವಿಯ ಪ್ರತಿಭಾಪ್ರಕರ್ಷವನ್ನು ಮೆಚ್ಚಿದ ಹರ್ಷನಿಂದ ಅವನಿಗೆ ಅಭೂತಪೂರ್ವ ಸನ್ಮಾನವೇ ದೊರೆಯಿತು.

ಹರ್ಷನ ಈ ಸನ್ಮಾನದಿಂದ ಉಕ್ಕಿದ ಕೃತಜ್ಞತೆಯ ಫಲವೇ ಬಾಣನ **ಹರ್ಷಚರಿತೆ.** ಈ ಕೃತಿಯಿಂದ ಹರ್ಷನ ಹೆಸರೂ ಅಜರಾಮರವಾಗುವಂತಾಯಿತು. ಇದನ್ನು ಸ್ಥೂಲವಾಗಿ 'ಆಖ್ಯಾಯಿಕೆ'ಯೆನ್ನಬಹುದು. ಇಡಿಯ ಸಂಸ್ಕೃತ ಸಾಹಿತ್ಯದಲ್ಲಿ ಒಬ್ಬ ಐತಿಹಾಸಿಕ ವ್ಯಕ್ತಿಯ ಜೀವನಚರಿತ್ರೆಯನ್ನು ನಿರೂಪಿಸಹೊರಟ ಮೊದಲ ಗ್ರಂಥವೇ ಹರ್ಷಚರಿತೆ. ಇದರಲ್ಲಿ ಕವಿಚರಿತ್ರೆಯಂತೆ, ನೃಪಚರಿತ್ರೆಯೂ, ಸಾಮಾಜಿಕ ಚರಿತ್ರೆಯಂತೆ ಅದ್ಭುತ ಚಿತ್ರಣವೂ ಕೂಡಿ ಬರುತ್ತವೆ.

**ಚಾರಿತ್ರಿಕ ಅಂಶಗಳು** —ಕ್ರಿ.ಶ. ೫ ನೆಯ ಶತಮಾನದ ಕಡೆಗೆ ತೋರಮಾನ ಮುಂತಾದ ಹೂಣರು ಗುಪ್ತಸಾಮ್ರಾಜ್ಯವನ್ನು ಧೂಳೀಪಟ ಮಾಡಿದ ಮೇಲೆ ಅನೇಕ ಸಣ್ಣ ಸಣ್ಣ ರಾಜ್ಯಗಳು ಹುಟ್ಟಿಕೊಂಡುವು. ಇವುಗಳಲ್ಲಿ ಸ್ಥಾಣೇಶ್ವರದಲ್ಲಿ ಪುಷ್ಪಭೂತಿಯೆಂಬವನು ಸ್ಥಾಪಿಸಿದ ರಾಜ್ಯವೂ ಒಂದು. ಈತನೇ ಹರ್ಷನ ವಂಶದ ಮೂಲಪುರುಷ ದಕ್ಷಿಣದ ಶೈವ ಮುನಿಯಾದ ಭೈರವಾಚಾರ್ಯನು ಈ ರಾಜನ ಸಹಾಯಕನಾಗಿದ್ದನು. ಅವನ ಪ್ರಭಾವದಿಂದ ಲಕ್ಷ್ಮಿ ಪ್ರಸನ್ನಳಾಗಿ ಹರ್ಷನೆಂಬ ಮಹಾಚಕ್ರವರ್ತಿ ಈ ವಂಶದಲ್ಲಿ ಹುಟ್ಟುವನೆಂದು ವರವಿತ್ತಳಂತೆ. ರಾಜ್ಯವನ್ನು ಮೊದಲು ವಿಸ್ತರಿಸಿದವನು ಇವನಿಂದ ನಾಲ್ಕನೆಯ ತಲೆಯವನಾದ ಪ್ರಭಾಕರವರ್ಧನ. ಗುರ್ಜರರು, ಮಾಳವರು, ಹೂಣರು, ಎಲ್ಲರನ್ನೂ ಈತನು ಗೆದ್ದು ಪ್ರತಾಪಶೀಲನೆಂಬ ಬಿರುದನ್ನು ಧರಿಸಿದನು. ಕಾನ್ಯಕುಬ್ಜದ ಮೌಖರಿ ವಂಶದ ರಾಜನಾದ ಅವಂತಿವರ್ಮನು ಈತನ ಮಿತ್ರನಾಗಿದ್ದನು. ಪ್ರಭಾಕರವರ್ಧನನ ರಾಣಿ ಯಶೋವತಿ. ಇವರಿಗೆ ಕ್ರಮವಾಗಿ ರಾಜ್ಯವರ್ಧನ, ಹರ್ಷವರ್ಧನ, ರಾಜ್ಯಶ್ರೀ ಎಂಬ ಇಬ್ಬರು ಪುತ್ರರೂ ಒಬ್ಬಳು ಕನ್ಯೆಯೂ ಹುಟ್ಟಿದರು. ಪ್ರಾಪ್ತವಯಸ್ಕಳಾದ ರಾಜ್ಯಶ್ರೀಯನ್ನು ಅವಂತಿವರ್ಮನ ಮಗ ಗ್ರಹವರ್ಮನಿಗೆ ಕೊಟ್ಟು ವಿವಾಹಮಾಡಿದರು. ಆಗ (ಸು. ಕಿ.ಶ. ೬೦೫) ಹೂಣರು ಉತ್ತರದಿಂದ ರಾಜ್ಯದ ಮೇಲೆ ದಾಳಿಮಾಡಿದರು. ವೃದ್ಧರಾಜನು 'ಕವಚ

ಹರ'ನಾಗಿದ್ದ ರಾಜ್ಯವರ್ಧನನನ್ನು ದೊಡ್ಡ ಸೇನೆಯೊಂದಿಗೆ ಕಳುಹಿಸಿದನು. ಚಿಕ್ಕವನಾದರೂ ಹರ್ಷನೂ ಜತೆಯಲ್ಲಿ ಹೋಗಿ ಹಿಮಾಲಯದ ತಪ್ಪಲು ಗಳಲ್ಲಿ ಮೃಗಯಾವಿಹಾರ ಮಾಡುತ್ತಿದ್ದನು. ಅಲ್ಲಿರುವಾಗ ತಂದೆಗೆ ಚಿಂತಾ ಜನಕವಾದ ಖಾಯಿಲೆಯಾಗಿರುವ ವರ್ತಮಾನ ಬಂದಿತು. ಕೂಡಲೇ ಸ್ಥಾಣೇಶ್ವರಕ್ಕೆ ಧಾವಿಸಿದನು. ತಂದೆ ಬದುಕುವಂತೆ ಕಾಣಲಿಲ್ಲ. ರಾಜ್ಯ ವರ್ಧನನಿಗೆ ಬೇಗ ಬರುವಂತೆ ದೂತರನ್ನಟ್ಟಿಯಾಯಿತು. ಆದರೆ ಆತನು ಬರುವುದರೊಳಗೆ ಪ್ರಭಾಕರನ ಇಹಲೋಕಯಾತ್ರೆ ಮುಗಿದಿತ್ತು. ಪತಿವ್ರತೆ ಯಾದ ಯಶೋವತಿ ಸಹಗಮನ ಮಾಡಿದಳು. ವಿಜಯಿಯಾಗಿ ಹಿಂದಿರುಗಿದ ರಾಜ್ಯವರ್ಧನನಿಗೆ ಪಟ್ಟವಾಗಬೇಕಾಗಿತ್ತು. ಆದರೆ ಅವನಿಗೆ ಅದರಲ್ಲಿ ಆಸೆ ಯಿರಲಿಲ್ಲ. ಇಷ್ಟರಲ್ಲಿ ಮಾಳವರಾಜನು ಆಗಲೇ ಕಾನ್ಯಕುಬ್ಜದ ಮೇಲೆ ದಂಡೆತ್ತಿ ಹೋಗಿ ಗ್ರಹವರ್ಮನನ್ನೂ ಕೊಂದು ರಾಜ್ಯಶ್ರೀಯನ್ನು ಸೆರೆಹಿಡಿದು ಕೊಂಡು ಹೋದನೆಂದೂ ಸ್ಥಾಣೇಶ್ವರದ ಮೇಲೂ ಏರಿಬರುವ ಸೂಚನೆಯಿದೆ ಯೆಂದೂ ಸುದ್ದಿ ಬಂದಿತು. ರಾಜ್ಯವರ್ಧನನು ರಾಜ್ಯಾಧಿಕಾರವನ್ನು ತಮ್ಮ ನಾದ ಹರ್ಷನಿಗೊಪ್ಪಿಸಿ ಸೋದರಮಾವನ ಮಗ ಭಂಡಿಯ ಕೈಕೆಳಗೆ ದೊಡ್ಡ ಸೈನ್ಯದೊಡನೆ ಹೊರಟು ಮಾಳವರಾಜನನ್ನು ಸೋಲಿಸಿದನು. ಆದರೆ ಮಾಳವರಾಜನ ಸಹಾಯಕ್ಕೆಂದು ಬಂದಿದ್ದ ಗೌಡರಾಜನು ಮೋಸದಿಂದ ರಾಜ್ಯವರ್ಧನನನ್ನು ಸಂಹರಿಸಿಬಿಟ್ಟನು. ಇದನ್ನು ಕೇಳಿದ ಹರ್ಷನು ಕಿಡಿಕಿಡಿ ಯಾಗಿ, ತಾನಿನ್ನೂ ಹದಿನಾರೇ ವರ್ಷದವನಾದರೂ ಪ್ರತೀಕಾರಪ್ರತಿಜ್ಞೆ ಮಾಡಿ, ಸಿಂಹನಾದನೆಂಬ ಸೇನಾಧಿಪತಿಯೊಡನೆ ದಿಗ್ವಿಜಯ ಯಾತ್ರೆಯನ್ನು ಕೈಗೊಂಡನು. ಕಾನ್ಯಕುಬ್ಜದ ದಾರಿಯಲ್ಲಿ ಕಾಮರೂಪದ ರಾಜನು ಸ್ನೇಹ ಕ್ಕಾಗಿ ಅಟ್ಟಿದ ದೂತನನ್ನು ಸಂಧಿಸಿದನು. ಗೌಡರಾಜನನ್ನು ಇಕ್ಕಡೆಗಳಿಂದಲೂ ಒತ್ತಲು ಈ ಒಪ್ಪಂದವು ಅನುಕೂಲವಾಗಿತ್ತು. ದುಃಖಾಕ್ರಾಂತನಾಗಿ ಹಿಂದಿರು ಗುತ್ತಿದ್ದ ಭಂಡಿಯೂ ಸ್ವಲ್ಪ ಮುಂದೆ ಸಿಕ್ಕಿದನು. ರಾಜ್ಯಶ್ರೀಯು ಆ ಕಲ ಕಲದಲ್ಲಿ ಸೆರೆಯಿಂದ ತಪ್ಪಿಸಿಕೊಂಡು ಅಂತಃಪುರದವರೊಡನೆ ವಿಂಧ್ಯಾರಣ್ಯ ವನ್ನು ಪ್ರವೇಶಿಸಿದಳೆಂಬ ಸುದ್ದಿ ಭಂಡಿಯಿಂದ ತಿಳಿಯಿತು. ಕೂಡಲೇ ಗೌಡ ರಾಜನಮೇಲೆ ಬೀಳಲು ಭಂಡಿಯನ್ನೇ ಕಳುಹಿಸಿ ಸಣ್ಣ ಅಶ್ವಬಲದೊಡನೆ ತಾನು ವಿಂಧ್ಯಾಟವಿಗೆ ಬಂದನು. ಅಲ್ಲಿ ನಿರ್ಘಾತನೆಂಬ ಶಬರನಾಯಕನು ಗ್ರಹವರ್ಮನ ಮಿತ್ರನಾದ ದಿವಾಕರ ಮಿತ್ರನೆಂಬ ಬೌದ್ಧ ಭಿಕ್ಷುವಿನ ಆಶ್ರ

ಮಕ್ಕೆ ಕರೆತಂದನು. ಅಷ್ಟರಲ್ಲೀ ಮಹಾಕುಲಪ್ರಸೂತಿಯಾದ ಹೆಂಗಸೊಬ್ಬಳು ಅಗ್ನಿಪ್ರವೇಶಮಾಡುತ್ತಿರುವಳೆಂಬ ಸುದ್ದಿಯನ್ನು ಅವನ ಶಿಷ್ಯರು ತಂದರು. ಹರ್ಷನು ಬೇಗ ಧಾವಿಸಿ ಕಾಲ ಮಿಂಚುವುದರೊಳಗೆ ತಂಗಿಯನ್ನು ಳಿಸಿದನು. ರಾಜ್ಯಶ್ರೀಯು ಬಿಕ್ಷುಣಿಯಾಗಲು ಆತುರ ತೋರಿಸಿದರೂ ಹರ್ಷನು ತಾವಿಬ್ಬರೂ ಪ್ರತೀಕಾರ ಕಾರ್ಯ ಮುಗಿದೊಡನೆ ಬೌದ್ಧಧರ್ಮವನ್ನು ಅಂಗೀಕರಿಸುವುದು ಉಚಿತವೆಂದು ಸಮಾಧಾನಮಾಡಿ ಒಪ್ಪಿಸಿದನು. ದಿವಾಕರಮಿತ್ರನೂ ತನ್ನ ಉಪದೇಶದಿಂದ ಅವಳ ಮನಸ್ಸಿಗೆ ಸ್ವಲ್ಪ ಶಾಂತಿ ಸಿಕ್ಕುವಂತೆ ಮಾಡುತ್ತಿದ್ದನು. ಇಲ್ಲಿಗೆ ಬಾಣನ ಹರ್ಷಚರಿತೆಯು ತಟ್ಟನೆ ಮುಗಿದುಹೋಗುತ್ತದೆ. ಬಾಣನೇ ಇದನ್ನು ತನ್ನ ಹಳ್ಳಿಯ ನೆಂಟರಿಷ್ಟರ ಸಲುವಾಗಿ ಹೇಳಿದಂತೆ ಸನ್ನಿವೇಶ ರಚಿತವಾಗಿದೆ.

ಸಂಸ್ಕೃತ ಸಾಹಿತ್ಯದಲ್ಲೀ ಅಪೂರ್ವವಾದ ಪಾತ್ರಚಿತ್ರಣ ಕೌಶಲವನ್ನು ಹರ್ಷಚರಿತೆಯಲ್ಲಿ ನೋಡಬಹುದು. ಶ್ರೀ ಹರ್ಷನ ಪಾತ್ರವು ಉಜ್ಜ್ವಲ ಕಾಂತಿಯಿಂದ ಎಲ್ಲ ಪಾತ್ರಗಳನ್ನೂ ಮೀರಿಸುತ್ತದೆ. ಅವನ ಪಿತೃಭಕ್ತಿ, ಮಾತೃವಾತ್ಸಲ್ಯ, ಭ್ರಾತೃಪ್ರೇಮ, ಮೃದುಹೃದಯ, ಶತ್ರುಪ್ರತೀಕಾರದ ಅದಮ್ಯ ಛಲ, ಕಲಾವಿನೋದರಸಿಕತೆ, ಧರ್ಮಶ್ರದ್ಧೆ, ಕರ್ತವ್ಯಪರತೆ, ಮುಂತಾದವು ಒಂದೊಂದು ಘಟನೆಯಲ್ಲಿಯೂ ಕಣ್ಣಿಗೆ ಕಟ್ಟುತ್ತವೆ. ಇಲ್ಲಿಯ ವರ್ಣನೆಗಳಲ್ಲೂ ವಾಸ್ತವಿಕಾಂಶಗಳ ಸಹಜ ರಮ್ಯತೆಯು ರಸಾನುಕೂಲವಾಗಿ ಪರಿಣಮಿಸುತ್ತದೆ. ಪ್ರಭಾಕರವರ್ಧನನ ಅಂತಿಮ ಕ್ಷಣಗಳ ವರ್ಣನೆಯೂ ಯಶೋವತಿಯು ಸಹಗಮನ ಮಾಡುವಾಗ ಹೇಳುವ ಧೀರವಾಕ್ಯಗಳೂ ಸಂಸ್ಕೃತ ಸಾಹಿತ್ಯದಲ್ಲೆಲ್ಲ ಅನ್ಯತ್ರ ದೊರೆಯಲಾರದ ಅನರ್ಘ್ಯರತ್ನಗಳು. ಒಂದರಲ್ಲಿ ಮಹಾರಾಜನ ಮಹಾನುಭಾವವೂ ಇನ್ನೊಂದರಲ್ಲಿ ವೀರ ಪುತ್ರಿಯೂ, ವೀರಪತ್ನಿಯೂ, ವೀರಮಾತೆಯೂ ಆದ ಭಾರತೀಯ ರಮಣಿಯ ಆದರ್ಶವೂ ಉಜ್ವಲವಾಗಿಯೂ ಕರುಳು ಕರಗುವಂತೆಯೂ ಚಿತ್ರಿತವಾಗಿವೆ. ಸೇನಾಪ್ರಯಾಣದ ಕೋಲಾಹಲವಾಗಲಿ, ತಪೋವನದ ಪ್ರಶಾಂತ ರಮ್ಯತೆಯಾಗಲಿ, ರಾಜರ ಮೆರೆವಣಿಗೆಯಾಗಲಿ, ಮರಣಕಾಲದ ಪ್ರಸಂಗವಾಗಲಿ, ಯುದ್ಧದ ಭೀಕರತೆಯಾಗಲಿ, ಕಲೆಯ ವಿನೋದವಾಗಲಿ, ಸೇನಾಶಿಬಿರ, ಅರಮನೆ, ಅಂತಃಪುರ, ಹಳ್ಳಿ, ಪಟ್ಟಣ, ಮುಂತಾದುವುಗಳ ಸೂಕ್ಷ್ಮ ಚಿತ್ರ

ವಾಗಲಿ, ಎಲ್ಲವನ್ನೂ ಒಂದೇ ವಿಧವಾದ ಪ್ರಾಗಲ್ಭ್ಯದಿಂದ ಚಿತ್ರಿಸಬಲ್ಲ ಭಾಷಾಪ್ರಭುತ್ವವನ್ನು ಬಾಣನಲ್ಲಿ ಕಾಣಬಹುದು. ಒಂದೊಂದು ಪಾತ್ರದ ಉಕ್ತಿಗಳಲ್ಲಿಯೂ ವಕ್ತೃತ್ವಕಲೆಯ ಉಜ್ಜ್ವಲ ಉದಾಹರಣೆಗಳನ್ನು ಕಾಣಬಹುದು. ಸಮಯಾನುಸಾರವಾಗಿ ಸಂವಾದಗಳಲ್ಲಿ ಅನುನಯ, ವಿನಯ, ಸತ್ತ್ವ, ಕ್ಷಾತ್ರ, ಮುಂತಾದುವು ಬೇರೆಬೇರೆಯಾಗಿ ಬೆಳಗುವುವು. ಹರ್ಷನು ರಾಜ್ಯವಹಿಸಿಕೊಳ್ಳುವಂತೆ ರಾಜ್ಯವರ್ಧನನು ಅವನ ಮನವೊಲಿಸುವ ಪ್ರಸಂಗದಲ್ಲಿ ಆತನ ಅನುನಯವಚನವು ಎಷ್ಟು ಮೃದುಮಂಜುಲವಾಗಿರುವುದೋ ಅದೇ ತಂಗಿಯ ಅಪಮಾನ, ಅಪಾಯಗಳನ್ನು ಕೇಳಿದ ಆತನೇ ಕಿಡಿಯನ್ನು ಕಾರುತ್ತಾ ಘುಡುಘುಡಿಸುವ ಭಾಷಣವು ಭೀಮಭೀಷಣವಾಗಿದೆ. ಹರ್ಷನು ಮಾಂಡಲಿಕ ರಾಜರಿಗೆ ಕೊಡುವ ನಿರೂಪವು ಎಷ್ಟು ರಾಜಗಂಭೀರವಾಗಿದೆಯೋ, ದಿವಾಕರಮಿತ್ರನು ಹರ್ಷನನ್ನು ಸ್ವಾಗತಿಸುವ ಮಾತುಗಳು ಅಷ್ಟೇ ವಿನಯಸಂಪನ್ನವಾಗಿವೆ. ಹೀಗೆ ರಸದೃಷ್ಟಿ ಮೊದಲಿನಿಂದ ಕಡೆಯವರೆಗೂ ಮಸಕಾಗದಿರುವುದು ಬಾಣನ ವೈಶಿಷ್ಟ್ಯ. ವೀರ ಕರುಣಾದ್ಭುತ ರಸಗಳನ್ನು ಬಾಣನಂತೆ ನಿರರ್ಗಳವಾಗಿ ಯಶಸ್ವಿಯಾಗಿ ಮತ್ತಾರೂ ಚಿತ್ರಿಸಿಲ್ಲ. ಶೈಲಿಯೂ ಕೂಡ ರಸೋಚಿತವಾಗಿ ರಮ್ಯತೆಯನ್ನು ಪಡೆದಿದೆ. ಪ್ರತಿಪಾದ್ಯ ವಿಷಯವನ್ನೇ ಮರೆಯಿಸಿಬಿಡುವಂತೆ ಶ್ಲೇಷಾದಿ ವರ್ಣನಾಡಂಬರಗಳು ಅತಿಯಾಗಿ ಇಲ್ಲಿ ಬರುವುದಿಲ್ಲ. ಉದಾತ್ತಪಾತ್ರಗಳಿಗನುಗುಣವಾದ ವಾತಾವರಣವನ್ನು ಕಲ್ಪಿಸಲು ಪ್ರಕೃತಿಸನ್ನಿವೇಶಗಳ ವರ್ಣನೆಯೆಷ್ಟು ಬೇಕೋ ಅಷ್ಟು ಮಾತ್ರ ಸಾಲಂಕಾರವಾದ ಭಾಷೆಯಲ್ಲಿ ಬರುತ್ತದೆ. ಸಮಾಸಗಳ ಪ್ರಯೋಗವೆಲ್ಲೂ ಕಥಾಸ್ವಾರಸ್ಯವನ್ನು ಕುಂಟಿಸುವುದಿಲ್ಲ. ಎಲ್ಲಕ್ಕಿಂತಲೂ ಹೆಚ್ಚಾಗಿ ಬಾಣನ ಅನುಭವಸಾರದ ಪ್ರಕಟನಾಪ್ರಣಾಲಿಗಳಾದ ಅರ್ಥಾಂತರನ್ಯಾಸಗಳೂ ಲೋಕೋಕ್ತಿಗಳೂ ರಚನೆಗೆ ಅಪೂರ್ವವಾದ ಕಳೆಯನ್ನು ತರುತ್ತವೆ ಒಂದೆರಡು ಉದಾಹರಣೆಗಳು,

ಇದು ಸೇನಾಪ್ರಯಾಣ ಸಮಯದ ಮೋಹಕ ಶಬ್ದಮಯ ಚಿತ್ರ :—

**ತತೋ ರಟತ್‌ಪಟಹೇ, ನಂದನ್ನಾಂದೀಕೇ, ಗುಂಜತ್‌ಕುಂಜೇ, ಕೂಜತ್‌ಕಾಹಲೇ, ಶಬ್ದಾಯಮಾನಶಂಖೇ, ಕ್ರಮೋಪಚೀಯಮಾನ ಕಟಕಕಲಕಲೇ, ಪರಿಜನೋತ್ಥಾಪನವ್ಯಾಪೃತವ್ಯವ**

ಹಾರಿಣಿ, ದ್ರುತದ್ರುಘಣಘಾತಘಟ್ಯಮಾನಕೋಣಿಕಾಕೀಲಕೋಲಾ
ಹಲಕಲಿತಕಕುಭಿ, ಬಲಾಧಿಕೃತಬಧ್ಯಮಾನಪಾಟೀಪತಿಪೇಟಕೇ, ಜನ
ಜ್ವಲಿತೋಲ್ಕಾಸಹಸ್ರಾಲೋಕಲುಪ್ಯಮಾನತ್ರಿಯಾಮಾತಮಸಿ, . .

[ ಅನಂತರ ನಗಾರಿಗಳು ಹೊಡೆಯುತ್ತಿರಲು, ಮಂಗಳವಾದ್ಯಗಳು ಮೊಳಗುತ್ತಿರಲು, ಕೊಂಬು ಭೋರಿಡುತ್ತಿರಲು, ಕಾಹಳೆಗಳು ಅಬ್ಬರಿಸುತ್ತಿರಲು, ಶಂಖಗಳು ಪೂರಯ್ಸುತ್ತಿರಲು, ಕ್ರಮಕ್ರಮವಾಗಿ ಶಿಬಿರದ ಕೋಲಾಹಲವು ಹೆಚ್ಚುತ್ತಿರಲು, ಆಳುಗಳು ಪರಿಜನರನ್ನೆಬ್ಬಿಸುವುದರಲ್ಲಿ ನಿರತರಾಗಿರಲು, ಬೇಗ ಬೇಗ ಬಡಿಯುತ್ತಿದ್ದ ತಮಟೆ ಕೊಂಬುಗಳ ಕೋಲಿನ ಕೋಲಾಹಲದಿಂದ ದಿಕ್ತಟಗಳೆಲ್ಲವೂ ತುಂಬಿರಲು, ಅಧಿಕಾರಿಗಳ ಆಜ್ಞೆಯಂತೆ ಶಿಬಿರದ ವಸ್ತುಗಳನ್ನೆಲ್ಲ ಕಟ್ಟಿಡುತ್ತಿರಲು, ಜನರು ಹಚ್ಚಿಕೊಂಡ ಸಾವಿರಾರು ಪಂಜುಗಳಿಂದ ರಾತ್ರಿಯ ಕತ್ತಲು ಕರಗಿರಲು ]

ಹರ್ಷನಿಗೊದಗಿದ ಕಷ್ಟಪರಂಪರೆಯನ್ನು ಬಾಣ ಚಿತ್ರಿಸುವ ಒಂದೇ ವಾಕ್ಯವಿದು

ಅಥ ತಥಾಗತೇ ಭ್ರಾತರಿ, ಉಪರತೇ ಚ ಪಿತರಿ, ಪ್ರೋಷಿತಜೀವಿತೇ
ಚ ಜಾಮಾತರಿ, ಮೃತಾಯಾಂ ಚ ಮಾತರಿ, ಸಂಯತಾಯಾಂ ಚ
ಸ್ವಸರಿ, ಸ್ವಯೂಥಭ್ರಷ್ಟ ಇವ ವನ್ಯಃ ಕರೀ ದೇವೋ ಹರ್ಷಃ ಕಥಂ
ಕಥಮಪ್ಯೇಕಾಕೀ ಕಾಲಂ ತಮನ್ವೈಷೀತ್.

[ ಅಣ್ಣನು ಅಂತಾಗಲು, ತಂದೆ ದಿವಂಗತನಾಗಲು, ಅಳಿಯನು ಗತಪ್ರಾಣನಾಗಲು, ತಾಯಿ ಸಾಯಲು, ತಂಗಿ ಸೆರೆಯಲ್ಲಿರಲು, ತನ್ನ ಹಿಂಡನ್ನಗಲಿದ ಕಾಡಾನೆಯಂತೆ ಹರ್ಷದೇವನು ಹೇಗೋ ಏಕಾಕಿಯಾಗಿ ಆ ಕಾಲವನ್ನು ಕಳೆದನು. ]

ಒಂದೇ ತೂಕದ ಪದವೃಂದಗಳು, ಕಾಣದಂತೆ ಕಿವಿಗಿಂಪಾಗಿರುವ ಪ್ರಾಸದ ಸಮಾನಶ್ರುತಿ—ಇವು ಇಲ್ಲಿಯ ವಿಶೇಷಗಳು.

ಅಣ್ಣನು ಮೋಸಕ್ಕೆ ಬಲಿಯಾದುದನ್ನು ಕೇಳಿ ಕೆಂಡವಾಗುವ ಹರ್ಷನ ಚಿತ್ರ:—

ಶ್ರುತ್ವಾ ಚ ಮಹಾತೇಜಸ್ವೀ ಪ್ರಚಂಡ ಕೋಪ ಪಾವಕ ಪ್ರಸರ-
ಪರಿಚೀಯಮಾನ ಶೋಕಾವೇಗಃ ಸಹಸೈವ ಪ್ರಜಜ್ವಾಲ. ತತಶ್ಚ

ಅಮರ್ಷ ವಿಧುತ ಶಿರಃ ಶೀರ್ಯಮಾಣ ಶಿಖಾಮಣಿಶಕಲಾಂಗಾರಕಿ-ತಾಂಗಮಿವ ರೋಷಾಗ್ನಿಮುದ್ವಮನ್ ಅನವರತಸ್ಫುರಿತೇನ ಪಿಬನ್ನಿವ ಸರ್ವ ತೇಜಸ್ವಿನಾಮಾಯೂಂಷಿ, ರೋಷನಿರ್ಭುಗ್ನೇನ ದಶನಚ್ಛದೇನ ಲೋಹಿತಾಯಮಾನಲೋಚನಾಲೋಕವಿಕ್ಷೇಪೈರ್ದಿಗ್ದಾಹಾನಿವ ದರ್ಶಯನ್, ರೋಷಾನಲೇನಾಪ್ಯಸಹ್ಯಸಹಜಶೌರ್ಯೋಷ್ಮದಹನ ದಹ್ಯಮಾನೇನೇವ ವಿತನ್ಯಮಾನಸ್ವೇದಸಲಿಲಶೀಕರಾಸಾರದುರ್ದಿನಃ, ಸ್ವಾವಯವೈರಪ್ಯದೃಷ್ಟಪೂರ್ವಪ್ರಕೋಪಭೀತೈರಿವ ಕಲ್ಪ್ಯಮಾನೈರು ಪೇತಃ, ಹರ ಇವ ಅಪರತೇಜಃಪ್ರಸರದರ್ಶನಪ್ರಜ್ವಲಿತಃ, ಕ್ಷಯ ದಿವಸ ಇವೋದಿತದ್ವಾದಶನಿಕರದುರ್ನಿರೀಕ್ಷ್ಯಮೂರ್ತಿಃ, ಮಹೋ ತ್ಪಾತಮಾರುತ ಇವ ಸಕಲ ಭೂಭೃತ್ಕಂಪಕಾರೀ, ವಿಂಧ್ಯ ಇವ ವಿವ ರ್ಧಮಾನವಿಗ್ರಹೋತ್ಸೇಧಃ, ಮಹಾಶೀವಿಷ ಇವ ದುರ್ನರೇಂದ್ರಾಭಿ ಭವರೋಷಿತಃ . . . ವೃಕೋದರ ಇವ ರಿಪುರುಧಿರತೃಷಿತಃ, ಪೂರ್ವಾ ಗಮ ಇವ ಪೌರುಷಸ್ಯ, ಉನ್ಮಾದ ಇವ ಮದಸ್ಯ, ಆವೇಗ ಇವಾವ ಲೇಪಸ್ಯ, ತಾರುಣ್ಯಾವತಾರ ಇವ ತೇಜಸಃ, ಸರ್ವೋದ್ಯೋಗ ಇವ ದರ್ಪಸ್ಯ, ಯುಗಾಗಮ ಇವ ಯೌವನೋಷ್ಮಣಃ, ರಾಜ್ಯಾಭಿಷೇಕ ಇವ ರಣರಸಸ್ಯ, ನೀರಾಜನ ದಿವಸ ಇವಾಸಹಿಷ್ಣುತಾಯಾಃ ಪರಾಂ ಭೀಷಣತಾಮುಯಾಸೀತ್.

[ ಕೇಳಿದೊಡನೆ ಮಹಾತೇಜಸ್ವಿಯಾದ ಹರ್ಷನ ಪ್ರಚಂಡಕೋಪಾ ಗ್ನಿಯ ಉರವಣೆಯಿಂದ ಶೋಕಾವೇಗವೇರುತ್ತಿರಲು, ಅವನು ತಟ್ಟನೆ ಉರಿ ದೆದ್ದನು. ಕ್ರೋಧಾವೇಶದಲ್ಲಿ ತೂಗಿದ ತಲೆಯಿಂದ ಸಿಡಿದ ಶಿರೋರತ್ನದ ತುಂಡೇ ಕೆಂಡವೆನಿಸಲು ರೋಷಾಗ್ನಿಯನ್ನು ಕಾರುವಂತೆಯೂ, ಎಡೆಬಿಡದೆ ಸುರಿವ ಬೆಂಕಿಯಿಂದ ಸಕಲ ತೇಜಸ್ವಿಗಳ ಆಯುಷ್ಯವನ್ನು ಹೀರುವಂತೆಯೂ, ಕೋಪದಿಂದ ತುಟಿಗಚ್ಚಿರಲು ಕೆಂಗಣ್ಣುಗಳ ಬೆಂಕಿಯನ್ನೆಸೆದು ದಿಕ್ಕುಗಳ ನ್ನೆಲ್ಲ ಉರಿಸುವವನಂತೆಯೂ, ತನ್ನ ದುಸ್ಸಹ ಪ್ರತಾಪವಹ್ನಿಯಿಂದ ಕಾವೇ ರಿದ ರೋಷಾನಲನಿಂದಲೋ ಎಂಬಂತೆ ಉತ್ಪನ್ನವಾದ ಬೆವರುಹನಿಗಳ ಮಳೆ ಯನ್ನು ಸುರಿಸುವ ದುರ್ದಿನವೇ ಇವನೆನಿಸಿ, ಹಿಂದೆಂದೂ ಇಂತಹ ಕೋಪ ವನ್ನು ಕಂಡರಿಯದ ತನ್ನ ಅವಯವಗಳೇ ಹೆದರಿಕೆಯಿಂದ ನಡುಗುತ್ತಿರು

ವವೋ ಎನಿಸಲು, ಹರನಂತೆ ಭೈರವಾಕಾರವನ್ನು ತಳೆದು, ಹರಿಯಂತೆ ಪ್ರತ್ಯಕ್ಷನರಸಿಂಹನಾಗಿ, ಅನ್ಯ ತೇಜೋತ್ಕರವನ್ನು ಕಂಡು ಭುಗಿಲೆಂದುರಿವ ಸೂರ್ಯಕಾಂತಪರ್ವತದಂತೆಯೂ, ಪ್ರಲಯದಿವಸದಂತೆ ದ್ವಾದಶಾದಿತ್ಯ ದೀಪ್ತಿಯಿಂದ ಕಣ್ಣನ್ನು ಕುಕ್ಕುತ್ತ, ಮಹೋತ್ಪಾತಮಾರುತದಂತೆ ಸಕಲ ಭೂಭೃತ್ಕಂಪಕಾರಿಯಾಗಿ, ವಿಂಧ್ಯಾಚಲದಂತೆ ಯುದ್ಧದಾಸೆಯು ಎತ್ತರವಾಗಿ ಬೆಳೆಯುತ್ತಿರಲು, ಮಹಾಸರ್ಪದಂತೆ ದುರ್ನರೇಂದ್ರನಿಂದ (ಕೆಟ್ಟ ಮಾಂತ್ರಿಕ ಮತ್ತು ದೊರೆ) ಆದ ಅವಮಾನಕ್ಕೆ ಖತಿಗೊಂಡು . . . ವೃಕೋದರನಂತೆ ರಿಪುರಕ್ತಪಿಪಾಸುವಾಗಿ, ಪೌರುಷದ ಕರ್ಮಕಾಂಡದಂತೆ, ಮದದ ಉನ್ಮಾದ ದಂತೆ, ಗರ್ವದ ಆವೇಗದಂತೆ, ತೇಜಸ್ಸಿನ ತಾರುಣ್ಯಾವತಾರದಂತೆ, ದರ್ಪದ ಉದ್ಯೋಗದಂತೆ, ಗಂಡುತನದ ಯುಗವೇ ಬಂದಂತೆ, ರಣರಸಕ್ಕೆ ರಾಜ್ಯಾಭಿ ಷೇಕವಾದಂತೆ, ಅಸಹಿಷ್ಣುತೆಗೆ ನೀರಾಜನ ದಿವಸದಂತೆ, ಅತ್ಯಂತ ಭೀಷಣಾ ಕಾರವನ್ನು ತಳೆದನು. ]

ಇಂತಹ ಒಂದು ಗದ್ಯಚಿತ್ರದಲ್ಲಿರುವ ಜಾಜ್ವಲ್ಯಮಾನಪ್ರಭೆ, ಪದ ಪ್ರಯೋಗಪ್ರಾಗಲ್ಭ್ಯ, ಅಲಂಕಾರಗಳ ಸಾರ್ಥಕತೆ, ಪದ್ಯಕಾವ್ಯದ ಪರಿಮಿತಿ ಯಲ್ಲಿ ವಿರಳ. ಸುಬಂಧುವಿನ ಮಾರ್ಗದಲ್ಲಿಯೇ ಯಥೋಚಿತ ರಸಸೇಚನೆ, ಪ್ರತಿಭಾಸಂಚಾರಗಳಾದರೆ ಎಂತಹ ಸಿದ್ಧಿ ಬರಬಹುದೆಂಬುದನ್ನು ಬಾಣ ತೋರಿಸಿದ್ದಾನೆ. ಸಹಗಮನಕ್ಕೆ ಮುಂಚೆ ಯಶೋವತಿಯ ಚರಮ ಸಂದೇಶವಿದು —

> ವತ್ಸ, ನಾಸಿ ನ ಪ್ರಿಯೋ ನಿರ್ಗುಣೋ ವಾ ಪರಿತ್ಯಾಗಾರ್ಹೋ ವಾ ಸ್ತನ್ಯೇನೈವ ಸಹ ತ್ವಯಾ ಪೀತಂ ಮೇ ಹೃದಯಮ್ . . . ಪರಂ ಕುಲಕಲತ್ರಮಸ್ಮಿ ಚಾರಿತ್ರಧನಾ ಧರ್ಮಧವಲೇ ಕುಲೇ ಜಾತಾ. ವೀರಜಾ ವೀರಜಾಯಾ ವೀರಜನನೀ ಚ ಮಾದೃಶೀ ಪರಾಕ್ರಮ ಕ್ರೀತಾ ಕಥಮನ್ಯಥಾ ಕುರ್ಯಾತ್. ಮರ್ತುಮವಿಧವೈವ ವಾಂಛಾಮಿ . . . .

[ ಕಂದ, ನೀನು ಪ್ರಿಯನಲ್ಲವೆಂದಾಗಲಿ, ನಿರ್ಗುಣನೆಂದಾಗಲಿ, ಪರಿ ತ್ಯಾಗಕ್ಕೆ ಯೋಗ್ಯನೆಂದಾಗಲಿ ನನ್ನ ಅಭಿಪ್ರಾಯವಲ್ಲ. ನನ್ನ ಸ್ತನ್ಯದೊಂದಿಗೆ ಹೃದಯವನ್ನೂ ನೀನು ಹೀರಿರುವವನು . . . ಆದರೆ ಧರ್ಮಧವಳ ಕುಲದಲ್ಲಿ

ಜನಿಸಿದ ನಾನು ಚಾರಿತ್ರ್ಯಧನಳಾದ ಕುಲಪತ್ನಿಯಲ್ಲವೆ? ವೀರಪುತ್ರಿಯೂ, ವೀರಪತ್ನಿಯೂ, ವೀರಜನನಿಯೂ, ಪರಾಕ್ರಮಕ್ರೀತಳೂ ಆದ ನನ್ನಂತ ಹವಳು ಮತ್ತೇನು ತಾನೆ ಮಾಡಿಯಾಳು! ಸುಮಂಗಲಿಯಾಗಿಯೇ ಸಾಯಲು ಬಯಸುತ್ತೇನೆ . . . . ]

ಬಾಣನ ಶಬ್ದಭಂಡಾರದ ಸಂಗ್ರಹ ಅಮೇಯ. ಶಬ್ದಪುನರುಕ್ತಿಯಿಲ್ಲದೆ ಅವನು ಒಂದೇ ಅರ್ಥವನ್ನು ಇಪ್ಪತ್ತು ವಾಕ್ಯಗಳಲ್ಲಿ ಹೊಸಹೊಸವೆನಿಸುವಂತೆ ಹೇಳಬಲ್ಲನು. ಎಲ್ಲಿಯೂ ಪ್ರಾಸಕ್ಕೆ ಹ್ರಾಸ ಮಾತ್ರ ಬರುವುದಿಲ್ಲ. ಹರ್ಷ ಚರಿತೆಯ ಶಕ್ತಿಯನ್ನು ಪರಿಭಾವಿಸಿದ ಕವಿಗಳು ತಮ್ಮ ಕವಿತಾಸ್ತ್ರವನ್ನು ಕೆಳಗಿಟ್ಟುಬಿಡುವಂತೆಯೇ ಆಗುವುದೆಂದು ಹೇಳುವ ಸೋಡ್ಢಲನ ಮಾತು ಸುಳ್ಳಲ್ಲ.[೨೮] ಇಂದಿಗೂ ಬಾಣನು ಪ್ರಭಾವಶಾಲಿಯಾದ ಗದ್ಯ ಶೈಲಿಗೆ ಮಾರ್ಗದರ್ಶಕನಾಗಬಲ್ಲನು.

**ಕಾದಂಬರೀ —**

ಇದೂ ಸುಬಂಧುವಿನ ವಾಸವದತ್ತೆಯಂತೆ 'ಕಥೆ'. ಯಕ್ಷ, ಗಂಧರ್ವ, ಕಿನ್ನರರೂ, ಚಂದ್ರಶಂಕರಾದಿ ದೇವತೆಗಳೂ, ತಾಪಸತಾಪಸಿಯರೂ, ರಾಜ ಕುಮಾರಕುಮಾರಿಯರೂ, ಮಾಯಾಶ್ವಾದಿ ದಿವ್ಯಮೃಗಗಳೂ, ಜಾತಿಸ್ಮರ ಗಳಾದ ಪಕ್ಷಿಗಳೂ, ಕೈಲಾಸಗಂಧಮಾದನಾದಿ ಕಲ್ಪನಾಶೈಲಗಳಲ್ಲಿ ನಿರಾತಂಕ ವಾಗಿ ನಿತ್ಯಕರ್ಮಗಳಲ್ಲಿ ಆಸಕ್ತರಾಗುವ ಮಾಯಾಲೋಕವೇ 'ಕಾದಂ ಬರಿ'ಯ ಲೋಕ. ಈ ಕಲ್ಪನಾರಾಜ್ಯದಲ್ಲಿ ಹರ್ಷಚರಿತೆಯಂತೆ ಲೌಕಿಕವಾದ ವೀರಕರುಣಾದಿ ರಸಗಳಿಗೆ ಎಡೆಯಿಲ್ಲ. ಇಲ್ಲಿ ಶೃಂಗಾರಕ್ಕೇ ಪ್ರಧಾನ ಪಟ್ಟ, ಉಳಿದುದೆಲ್ಲವೂ ಅದಕ್ಕೆ ಅಧೀನ. ಈ ಶೃಂಗಾರದಲ್ಲಿ ಕೂಡ ಪ್ರಾಪಂಚಿಕವಾದ ಕ್ಷುದ್ರ ಸಂಗತಿಗಳಿಗೆ ಸ್ಥಾನವಿಲ್ಲ. ಇಲ್ಲಿಯ ನಾಯಕರು ಪ್ರಥಮಾನುರಾಗದ ಬೇಗೆಯನ್ನು ಪ್ರೇಯಸಿಯ ಆಗಮನದವರೆಗೆ ಕೂಡ ತಡೆಯಲಾರದೆ ಪ್ರಾಣವನ್ನೇ ಬಿಟ್ಟುಬಿಡುವಂತಹ ಮೃಣಾಲಕೋಮಲಹೃದಯರು. ಪ್ರೇಯಸಿಯರಾದರೂ ಪ್ರೇಮಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡುವಂತಹ ದೇವಿಯರು. ಒಂದೊಂದು ಕಮಲ, ಒಂದೊಂದು ಮಲಯಾನಿಲನ ಸ್ಪರ್ಶ,

---

28. ಬಾಣಸ್ಯ ಹರ್ಷಚರಿತೇ ನಿಶಿತಾಮುದೀಕ್ಷ್ಯ
ಶಕ್ತಿಂ ನ ಕೇಽತ್ರ ಕವಿತಾಸ್ತ್ರಮದಂ ತ್ಯಜನ್ತಿ ।

ಒಂದೊಂದು ಚಕ್ರವಾಕದ ಕ್ರೇಂಕಾರವೇ ಅವರ ಹೃದಯಗಳನ್ನು ಬಿರಿಸ ಬಲ್ಲುದು. ಒಂದು ಜನ್ಮದಲ್ಲಿ ನಿರಂತರ ವ್ಯಾಪಿಯಾಗಿರುವುದು ಸಾಲದೆ, ಜನ್ಮದಿಂದ ಪುನರ್ಜನ್ಮಕ್ಕೆ, ಮತ್ತೆ ಮುಂದಿನ ಜನ್ಮಕ್ಕೂ ಕೂಡ ಎಡೆಬಿಡದೆ ಬರುವ ಪ್ರೇಮಬಂಧನದ ಬಂಧುರ ಕಾವ್ಯ–ಕಾದಂಬರಿ. ಇದರ ಕಥೆ ನಾಗವರ್ಮನ ಕಾಲದಿಂದಲೂ ಕನ್ನಡಿಗರಿಗೆ ಚಿರಪರಿಚಿತವಾಗಿರುವುದರಿಂದ ಇಲ್ಲಿ ಅದನ್ನು ಸಂಗ್ರಹಿಸಬೇಕಾದ ಅಗತ್ಯವಿಲ್ಲ. ಅದರ ಲೋಕೋತ್ತರ ಸ್ವರೂಪದ ಸ್ಮರಣೆಗಾಗಿ ಮುಖ್ಯ ಸೂತ್ರಗಳನ್ನು ಕೆಲವೇ ಮಾತುಗಳಲ್ಲಿ ಹೀಗೆ ಹೇಳಬಹುದು, ಶೂದ್ರಕರಾಜನ ಸಭೆಗೆ ರೂಪವತಿಯಾದ ಚಂಡಾಲ ಕನ್ಯೆಯೊಬ್ಬಳು ಮಾತನಾಡುವ ಗಿಳಿಯೊಂದನ್ನು ತರುತ್ತಾಳೆ. ಅದು ತಾನು ಹುಟ್ಟಿ, ಸಾಯುವ ಅವಸ್ಥೆಯಲ್ಲಿದ್ದಾಗ ಋಷಿಪುತ್ರ ಹಾರೀತನು ಉಳಿಸಿ ಜಾಬಾಲಿಮುನಿಗಳ ಆಶ್ರಮಕ್ಕೆ ಕರೆತಂದ ಕಥೆಯನ್ನು ಹೇಳಿ, ತನ್ನನ್ನು ಕಂಡೊಡನೆ ಜಾಬಾಲಿಗಳು ಹೇಳಿದ ತನ್ನ ಪೂರ್ವಜನ್ಮದ ಕಥೆಯನ್ನೂ ವಿವರವಾಗಿ ವರ್ಣಿಸಿ ಹೇಳುತ್ತದೆ. ಉಜ್ಜಯಿನಿಯ ರಾಜರಾಣಿಯರಾದ ತಾರಾಪೀಡ, ವಿಲಾಸವತಿಯರ ಮಗ ಚಂದ್ರಾಪೀಡ ಇವನು ಚಂದ್ರಾಂಶ ಸಂಭೂತ. ಅವರ ಮಂತ್ರಿ ಶುಕನಾಸನ ಮಗ ವೈಶಂಪಾಯನ. ಇಬ್ಬರೂ ಪ್ರಾಣಸ್ನೇಹಿತರಾಗಿ ಬೆಳೆದು, ದೊಡ್ಡವರಾದರು. ಯುವರಾಜನಾದ ಚಂದ್ರಾಪೀಡ ಸ್ನೇಹಿತನೊಡನೆ ದಿಗ್ವಿಜಯಕ್ಕೆ ಹೊರಟನು. ಹಿಮಾಲಯದ ಹತ್ತಿರ ಒಂದು ಸುಂದರ ಕಿನ್ನರ ಮಿಥುನವನ್ನು ನೋಡಿದ ಚಂದ್ರಾಪೀಡನು ಒಬ್ಬನೇ ತನ್ನ ಅದ್ಭುತಾಶ್ವವಾದ ಇಂದ್ರಾಯುಧದ ಮೇಲೆ ಕುಳಿತು ಅವುಗಳ ಬೆನ್ನಟ್ಟಿ ಬಹಳ ದೂರ ಹೋಗಿ ಅಚ್ಛೋದ ಸರಸ್ಸಿನ ಬಳಿ ಬಂದನು. ಅಲ್ಲೊಂದು ಶಿವಾಲಯವಿತ್ತು. ಅದರಲ್ಲಿ ಮಹಾಶ್ವೇತೆಯೆಂಬ ತಪಸ್ವಿನಿ ಕಂಡಳು. ತನ್ನ ಕಥೆಯನ್ನು ಹೇಳಿದಳು —ತಾನು ವಿದ್ಯಾಧರ ರಾಜಪುತ್ರಿ. ಅದೇ ಸರಸ್ಸಿನ ಬಳಿ ಹಿಂದೆ ಪುಂಡರೀಕನೆಂಬ ಋಷಿಕುಮಾರನನ್ನು ಕಾಮಿಸಿ, ತಾನು ಅವನನ್ನು ನೋಡಲು ಮತ್ತೆ ಬರುವುದರೊಳಗಾಗಿ ಅವನು ವಿರಹ ತಾಪದಿಂದ ಗತಜೀವನಾಗಿದ್ದನು. ತಾನು ಸಹಗಮನಮಾಡುವುದಕ್ಕೆ ಹೊರಡಲು ಮತ್ತೆ ಕಾಂತಸಮಾಗಮವಾಗುವುದೆಂಬ ಆಕಾಶವಾಣಿ ತಡೆಯಿತು. ಚಂದ್ರಬಿಂಬದಿಂದ ಒಬ್ಬ ದಿವ್ಯ ಪುರುಷನು ಬಂದು ಪುಂಡರೀಕನ ದೇಹವನ್ನು ಕೊಂಡುಹೋಗಲು, ಅವನ ಗೆಳೆಯನಾದ ಕಪಿಂಜಲನು ಆತನನ್ನು ಹುಡುಕಿ

ಕೊಂಡು ಹೋಗಿದ್ದವನು ಇನ್ನೂ ಬಂದಿರಲಿಲ್ಲ. ತಪವನ್ನಾಚರಿಸುತ್ತಾ ಅವರ ಆಗಮನನಿರೀಕ್ಷೆಯಲ್ಲಿ ತಾನು ಕಾಲ ಕಳೆಯುತ್ತಿದ್ದಳು. ಅವಳ ಕಥೆಯನ್ನು ಕೇಳುತ್ತಿರುವಾಗಲೇ ಅವಳ ಸ್ನೇಹಿತೆ ಗಂಧರ್ವರಾಜಪುತ್ರಿಯಾದ ಕಾದಂಬರಿಯು ಮಹಾಶ್ವೇತೆ ತಪಸ್ವಿನಿಯಾಗಿರುವವರೆಗೆ ತಾನೂ ಬ್ರಹ್ಮಚರ್ಯದಲ್ಲಿರುವ ನಿರ್ಧಾರಕ್ಕೆ ಬಂದಿರುವ ಸುದ್ದಿ ಬರುತ್ತದೆ. ಚಂದ್ರಾಪೀಡನನ್ನೂ ಕರೆದುಕೊಂಡು ಮಹಾಶ್ವೇತೆ ಕಾದಂಬರಿಯ ಅರಮನೆಗೆ ಬರುತ್ತಾಳೆ. ನೋಡಿದೊಡನೆ ಚಂದ್ರಾಪೀಡ ಕಾದಂಬರಿಯರಲ್ಲಿ ಗಾಢ ಪ್ರಣಯ ಅಂಕುರಿಸುತ್ತದೆ. ಅಷ್ಟರಲ್ಲೇ ಉಜ್ಜಯಿನಿಯಿಂದ ತಂದೆಯ ಕರೆ ಬರುವುದರಿಂದ ಚಂದ್ರಾಪೀಡನು ಊರಿಗೆ ಹೊರಡಬೇಕಾಗುತ್ತದೆ. ವಿರಹತಪ್ತೆಯಾದ ಕಾದಂಬರಿಗೂ ದೂರದ ಚಂದ್ರಾಪೀಡನಿಗೂ ಪ್ರೇಮದ ಸಂದೇಶ ಪ್ರತಿಸಂದೇಶಗಳು ದೂತರ ಮೂಲಕ ಬರುತ್ತವೆ. ಇಲ್ಲಿಗೆ ಬಾಣನ ರಚನೆಯಾದ 'ಕಾದಂಬರಿ' ಅರ್ಧದಲ್ಲೇ ಮುಗಿಯುತ್ತದೆ. ಅವನ ಮಗನಾದ ಭೂಷಣ ಅಥವಾ ಪುಲಿಂದನು ಇದನ್ನು ಮುಂದುವರಿಸಿ ಹೆಚ್ಚಿನ ಘಟನೆಗಳನ್ನು ಸೇರಿಸಿದ್ದಾನೆ. ವೈಶಂಪಾಯನನು ಉಜ್ಜಯಿನಿಗೆ ಬಂದೇ ಇರಲಿಲ್ಲ. ಅವನನ್ನು ಹುಡುಕುತ್ತಾ ಚಂದ್ರಾಪೀಡನು ಮತ್ತೆ ಮಹಾಶ್ವೇತಾಶ್ರಮಕ್ಕೆ ಬರುತ್ತಾನೆ. ಅಲ್ಲಿ ವೈಶಂಪಾಯನನು ಮಹಾಶ್ವೇತೆಯನ್ನು ರಾಗಾಂಧನಾಗಿ ಮೋಹಿಸಿ ಅವಳ ಶಾಪದಿಂದ ಗಿಳಿಯಾದ ವಿಷಯ ತಿಳಿಯುತ್ತದೆ. ಗೆಳೆಯನ ಹೆಣವನ್ನು ನೋಡಿ ಚಂದ್ರಾಪೀಡನೂ ಸತ್ತಂತೆ ಒರಗುತ್ತಾನೆ. ಅಲ್ಲಿಗೆ ಬಂದ ಕಾದಂಬರಿ ಇದನ್ನು ನೋಡಿ ತಾನೂ ಪ್ರಾಣತ್ಯಾಗ ಮಾಡಲು ಹೊರಟಾಗ ಆಕಾಶವಾಣಿ ಅವಳನ್ನು ತಡೆದು ಪುನಸ್ಸಮಾಗಮದ ಆಶೆಯನ್ನು ಕೆರಳಿಸುತ್ತದೆ. ಇದಿಷ್ಟು ಜಾಬಾಲಿಯ ಕಥೆ. ಗಿಳಿ ಮತ್ತೆ ಹೇಳುತ್ತದೆ--'ನನ್ನ ಪೂರ್ವಕಥೆ ತಿಳಿದೊಡನೆ ಮತ್ತೆ ಕಾಂತೆಯ ಬಳಿ ಓಡಿಹೋಗಲು ಆತುರವಾಗಿದ್ದೆ. ಆದರೆ ಈ ಚಂಡಾಲ ಕನ್ಯೆ ಬಿಡದೆ ತಂದಿದ್ದಾಳೆ,' ಚಂಡಾಲ ಕನ್ಯೆ ಹೇಳುತ್ತಾಳೆ–'ನಾನೇ ಲಕ್ಷ್ಮಿ. ಈ ಪುಂಡರೀಕನ ಜನ್ಮಾಂತರದಲ್ಲಿ—ವೈಶಂಪಾಯನ ಮತ್ತು ಗಿಳಿ—ತಾಯಿ. ನೀನೇ ಚಂದ್ರಾಪೀಡ. ಇಲ್ಲಿಗೆ ಶಾಪದ ಅವಧಿ ಮುಗಿಯಿತು', ಎಂದು. ಕಾದಂಬರಿಯ ಸ್ಪರ್ಶದಿಂದ ಅತ್ತ ಚಂದ್ರಾಪೀಡನು ಜೀವಿಸಿ ಏಳುತ್ತಾನೆ. ಗಿಳಿಯೂ ಪುಂಡರೀಕನ ರೂಪಿನಿಂದ ಮಹಾಶ್ವೇತೆಯ ಹತ್ತಿರ ಬರುತ್ತಾನೆ. ಎಲ್ಲ ಪ್ರಣಯಿಗಳೂ ಸುಖವಾಗಿರುತ್ತಾರೆ.

ಈ ಕಥೆಯಲ್ಲಿ ಹೀಗೆ ಎರಡು ಅಥವಾ ಮೂರು ಜನ್ಮಗಳ ಅದ್ಭುತ ಹಾಗೂ ಅಲೌಕಿಕ ಪ್ರೇಮಗಳ ವರ್ಣನೆಯಿದೆ. ಕಥೆಯ ಅಸ್ಥಿಪಂಜರ ಗುಣಾಢ್ಯನ ಬೃಹತ್ಕಥೆಯಲ್ಲಿಯೇ ಬಾಣನಿಗೆ ಸಿಕ್ಕಿದುದು ನಿರ್ವಿವಾದ. ಈಗಲೂ ಕಥಾಸರಿತ್ಸಾಗರದಲ್ಲಿ ದೊರೆಯುವ ಮನೋರಥಪ್ರಭೆಯ ವೃತ್ತಾಂತವೇ ಇದಕ್ಕೆ ಸಾಕ್ಷಿ.[29] ಆದರೆ ಇಲ್ಲಿಯ ಕಥಾಯೋಜನೆಯಲ್ಲಿ ಕುತೂಹಲಕಾರಿತ್ವ ಹೆಚ್ಚಾಗಿದೆ. ಸುಬಂಧುವಿನ ಕಥಾಭಾಗದಂತೆ ಬಾಣನು ಬರೆದಿರುವ ಅಪೂರ್ಣ ಕಥಾಭಾಗದಲ್ಲೂ ಹರ್ಷಚರಿತೆಯಲ್ಲಿರುವಂತಹ ಲೌಕಿಕ ಸ್ವಾರಸ್ಯವೇನೂ ಇಲ್ಲ. ಬಾಣನು ನಾಯಿಕೆಯಾದ ಕಾದಂಬರಿಯನ್ನು ಕಥೆಯಲ್ಲಿ ಇನ್ನೇನು ತಂದನೋ ಇಲ್ಲವೋ ಎನ್ನುವ ಹೊತ್ತಿಗೆ ಗ್ರಂಥ ಮುಗಿದಂತಾಗುತ್ತದೆ. ಈಗಿರುವಂತೆ ಕಥೆಗೆ 'ಕಾದಂಬರೀ' ಎಂಬ ಹೆಸರೇ ಸಮಂಜಸವೆನಿಸುವುದಿಲ್ಲ. ಇರುವುದರ ಬಹುಭಾಗವೆಲ್ಲ ವೈಶಂಪಾಯನನ ಎರಡು ಜನ್ಮವೃತ್ತಾಂತಗಳು. ನಾಯಿಕೆಯ ಹೆಸರನ್ನು ಗ್ರಂಥಕ್ಕೆ ಕೊಡಬೇಕಾದರೆ 'ಮಹಾಶ್ವೇತಾ' ಎಂದೇ ಕರೆಯುವುದು ಹೆಚ್ಚು ಅನ್ವಿತವಾಗಬಹುದು. ಆದರೆ ಇಲ್ಲಿ ಪಾತ್ರದೃಷ್ಟಿಯಿಂದಲೂ ಕಥಾವಿಕಾಸದ ದೃಷ್ಟಿಯಿಂದಲೂ, ವಿಮರ್ಶೆಗೆ ಹೊರಡುವುದೇ ಸರಿಯಲ್ಲ. ಸುಬಂಧುವಿನಂತೆ ಬಾಣನ ಉದ್ದೇಶವೂ ವರ್ಣನೆಯ ಭವ್ಯತೆಯನ್ನು ಕುರಿತುದೇ ಹೊರತು ಕಥೆಯ ಘಟನಾಸ್ವಾರಸ್ಯವನ್ನಲ್ಲ. ಇದು ಬೃಹತ್ಕಥೆಯಲ್ಲೇ ಯಥೇಚ್ಛವಾಗಿದೆ. ಆದರೆ ಬೃಹತ್ಕಥೆಯಲ್ಲಿಲ್ಲದ ವರ್ಣನಾಚಮತ್ಕಾರವನ್ನು ತೋರಿಸುವುದೇ ಬಾಣ ಮಹಾಕವಿಯ ಮುಖ್ಯ ಧ್ಯೇಯ. ಇದನ್ನು ಒಪ್ಪದಿದ್ದರೆ ಕಥಾವಿಕಾಸವನ್ನು ಮತ್ತೂ ಸುಂದರವಾಗಿ ಸಂಯೋಜಿಸಿರುವ ಬಾಣನ ಮಗನನ್ನೇ ಬಾಣನಿಗಿಂತ ಉತ್ತಮಕವಿಯೆಂದು ಪರಿಗಣಿಸಬೇಕಾಗುತ್ತದೆ. ಹೀಗೆ ಒಂದು ವೇಳೆ ಇಂದು ನಾವು ಹೇಳಿಕೊಳ್ಳಬಹುದಾದರೂ ಭೂಷಣಭಟ್ಟನಿಗೆ ಅಂತಹ ಭ್ರಾಂತಿಯೇನೂ ಇರಲಿಲ್ಲ. ತಂದೆಯ ಯೋಗ್ಯತೆ

---

29. ಶಕ್ತಿಯಶೋಲಂಬಕ, ಮೂರನೆಯ ತರಂಗ

30 ಯಾತೇ ದಿವಂ ಪಿತರಿ ತದ್ವಚಸೈವ ಸಾರ್ಧಂ
ವಿಚ್ಛೇದಮಾಪ ಭುವಿ ಯಸ್ತು ಕಥಾಪ್ರಬಂಧಃ ।
ದುಃಖಂ ಸತಾಂ ತದಸಮಾಪ್ತಿಕೃತಂ ವಿಲೋಕ್ಯ
ಪ್ರಾರಬ್ಧ ಏಷ ಸ ಮಯಾ ನ ಕವಿತ್ವದರ್ಪಾತ್ ॥

ತನ್ನಲ್ಲಿಲ್ಲವೆಂದು ಅವನು ಸ್ಪಷ್ಟವಾಗಿ ತಿಳಿಸಿದ್ದಾನೆ.[30] ಮನುಷ್ಯನಿಗೆ ಊಹಾತೀತವಾದ ಅದ್ಭುತ ಘಟನಾಪರಂಪರೆಗಳನ್ನು ನಾಟಕೀಯವಾಗಿ ತಂದರೆ ಕಥಾಸ್ವಾರಸ್ಯ ಹೆಚ್ಚುವುದೆಂದು ಬಾಣಾದಿಗಳು ಭಾವಿಸುತ್ತಿದ್ದಂತೆ ಕಾಣುತ್ತದೆ. ಆದರೆ ಒಂದು ಪ್ರಣಯವೃತ್ತಾಂತದ ಬದಲು ಎರಡು ಪ್ರಣಯ ಕಥೆಗಳು ಪರಸ್ಪರವಾಗಿ ಕೂಡಿರುವ ವಸ್ತುವನ್ನಾರಿಸಿಕೊಂಡುದು ಬಾಣನ ಚಾತುರ್ಯಕ್ಕೆ ದ್ಯೋತಕವೆಂದು ಹೇಳಬಹುದು. ಎಷ್ಟಾದರೂ ಜನರೆಲ್ಲರೂ ಮಂತ್ರಮುಗ್ಧರಾಗುವುದು ಕಾದಂಬರಿಯ ಕಾವ್ಯರಸಕ್ಕೆ ; ಕಥಾವಿಸ್ತಾರಕ್ಕಲ್ಲ. ಭೂಷಣಭಟ್ಟನು —

**ಕಾದಂಬರೀರಸಭರೇಣ ಸಮಸ್ತ ಏವ ।**
**ಮತ್ತೋ ನ ಕಿಂಚಿದಪಿ ಚೇತಯತೇ ಜನೋಽಯಮ್ ॥**

ಎಂದು ನುಡಿದುದನ್ನೇ ಮುಂದಿನ ಸಹೃದಯರು —

**‘ ಕಾದಂಬರೀರಸಜ್ಞಾನಾಮಾಹಾರೋಽಪಿ ನ ರೋಚತೇ ’**

[ಕಾದಂಬರಿಯ ರಸಜ್ಞರಿಗೆ ಆಹಾರವೂ ರುಚಿಸುವುದಿಲ್ಲ.]

ಎಂಬ ಸೂಕ್ತಿಯಲ್ಲಿ ಸ್ಥಿರೀಕರಿಸಿದ್ದಾರೆ. ‘ ಕಾದಂಬರಿ ’ಯೆಂದರೆ ಸಂಸ್ಕೃತದಲ್ಲಿ ‘ ಮದ್ಯ ’, ‘ ಬಾಣನ ಕೃತಿ ’— ಈ ಎರಡರ್ಥಗಳೂ ಇವೆ. ಬಾಣನ ವರ್ಣನಾ ಪರವಶರಾದವರು ಮಧುಪಾನಪರವಶರಿಗೆ ಸಮಾನವೆಂದು ಇಲ್ಲಿ ಸೂಚಿತ ವಾಗುತ್ತದೆ. ಈ ಸಾಮ್ಯ ಕೇವಲ ಬಾಹ್ಯಾರ್ಥಪ್ರಜ್ಞೆಯನ್ನು ತಪ್ಪಿಸುವ ಅಂಶದಲ್ಲಿ ಮಾತ್ರವೆಂದು ಹೇಳಬೇಕಾಗಿಲ್ಲ.

ಕಾದಂಬರಿಯಲ್ಲಿ ಬಾಣನ ಶಬ್ದಾರ್ಥಪ್ರಭುತ್ವವು ಪರಿಪಾಕಕ್ಕೆ ಬಂದಿರುವುದನ್ನು ಕಾಣಬಹುದು. ನಾಟಕಗಳಲ್ಲಿ ಮನಃಪೂರ್ವಕವಾಗಿ ಅಪನಂಬಿಕೆಯನ್ನು ರಸಿಕರು ಅದುಮಿಕೊಳ್ಳುವಂತೆ (Willing suspension of disbelief) ಕಾದಂಬರಿಯಂತಹ ಗದ್ಯಕಾವ್ಯಗಳನ್ನೋದು ವಾಗಲೂ ಮೇಲಾಗದಂತೆ ನೋಡಿಕೊಂಡರೆ ಮಾತ್ರ ಮಹಾಕವಿಯ ಅದ್ಭುತ ಪ್ರತಿಭೆಯು ನಮ್ಮನ್ನು ಕರೆದೊಯ್ಯುವ ಎತ್ತರಗಳನ್ನು ಮುಟ್ಟ ಬಹುದು. ಆ ತಲ್ಲೀನತೆ ಬಾರದಿದ್ದರೆ ಒಂದೊಂದು ವಾಕ್ಯವೂ ಒಂದೊಂದು ಅನಗತ್ಯವಾದ ಕಸರತ್ತಾಗಿ ಕಾಣುತ್ತದೆ. “ ಕಥೆಯ ಮಧ್ಯೆ ವರ್ಣನೆ ಬಂದರೆ

ಆ ವರ್ಣನೆಯಲ್ಲಿಯೇ ಮಗ್ನನಾಗಿ ಅದನ್ನು ಬೆಳೆಸುತ್ತಾ ವರ್ಣಿಸುತ್ತಾ ಶಬ್ದಾರ್ಥಾಲಂಕಾರಗಳ, ಶ್ಲೇಷವಿರೋಧಾಭಾಸಗಳ, ಮರುಭೂಮಿಯಲ್ಲಿ ನಡೆದು ಓದುಗರನ್ನೂ ಎಳೆದುಕೊಂಡು ಹೋಗುತ್ತಾನೆ. ಈ ವರ್ಣನೆಯಿಂದ ಪಾರಾಗಿ ಬರುವ ಹೊತ್ತಿಗೆ ಕಥಾಸೂತ್ರವು ಅನೇಕವೇಳೆ ಹರಿದು ಹೋಗಿರುತ್ತದೆ"[31] ಎನ್ನುವಂತಾಗುತ್ತದೆ. ವಸ್ತುತಃ ನಾವು ಈಗಾಗಲೇ ಹೇಳಿರುವಂತೆ ಬಾಣನು ಹೇಳಬೇಕಾದ ಕಥಾಭಾಗ ಅತ್ಯಲ್ಪ. ಅವನ ವಿವಕ್ಷೆಯೆಲ್ಲಾ ವರ್ಣನಾಭಾಗವೇ. ಪ್ರಾಚೀನರ ದೃಷ್ಟಿಯಲ್ಲಿ ಕಥೆ-ವರ್ಣನೆಗಳಿಗೆ ನಾವಿಂದು ಕಲ್ಪಿಸುತ್ತಿರುವ ಪರಸ್ಪರ ಭೇದವೇ ಅಸಂಗತ ಮತ್ತು ಅಸ್ವೀಕಾರ್ಯ. ರಸಾಭಿವ್ಯಕ್ತಿಗೆ ಕಥೆಯ ಬೆಲೆ ಚಿತ್ರಕ್ಕೆ ಭಿತ್ತಿಯಷ್ಟೇ. ಭಿತ್ತಿಯೆಷ್ಟು ಚೆನ್ನಾಗಿದ್ದರೂ ಚಿತ್ರ ಹೇಗೆ ಕೆಡಬಹುದೋ ಹಾಗೆಯೇ ಕಥೆಯೆಷ್ಟು ಚೆನ್ನಾಗಿದ್ದರೂ ಕಾವ್ಯವೆನಿಸದೆ ಹೋಗಬಹುದು. ಚಿತ್ರದಲ್ಲಿ ಭಾವಾಭಿವ್ಯಕ್ತಿ ಹೇಗೆ ಪ್ರಧಾನವೋ ಕಾವ್ಯಕಥೆಯಲ್ಲಿಯೂ ಹಾಗೆಯೇ ರಸಾಭಿವ್ಯಕ್ತಿ ಪ್ರಧಾನ. ಈ ಅಭಿವ್ಯಕ್ತಿಗೆ ವಿಭಾವ, ಅನುಭಾವ, ಸಂಚಾರಿ ಭಾವಗಳ ಪರಿಪುಷ್ಟಿಯೊಂದೇ ಸಾಧನ. ಲೌಕಿಕ ಸನ್ನಿವೇಶಗಳಲ್ಲಿ ಇವುಗಳ ಪುಷ್ಟಿ ಅರಕೆಯಾಗಿ ಉಳಿದೀತೇ ಹೊರತು, ಆದರ್ಶಪರಿಪೂರ್ಣತೆಯನ್ನು ಪಡೆಯಲಾರದೆಂಬುದು ಪ್ರಾಚೀನರ ಸಿದ್ಧಾಂತ. ಅದರಿಂದಲೇ 'ಉದಾತ್ತ' ಅಥವಾ 'ಆದರ್ಶ' ಕಾವ್ಯಜಾತಿಗಳಾದ ಮಹಾಕಾವ್ಯ, ಗದ್ಯಕಾವ್ಯ, 'ನಾಟಕ', ಮುಂತಾದುವುಗಳಲ್ಲೆಲ್ಲೂ ಕ್ಷುದ್ರವಾದ ಸಾಂಸಾರಿಕ ಘಟನೆಗಳಿಗೆ ಕಾವ್ಯವಸ್ತುವಾಗುವ ಯೋಗ್ಯತೆಯನ್ನು ಒಪ್ಪಿಲ್ಲ. ಲಘುಕಾವ್ಯಗಳಲ್ಲಿ ಮಾತ್ರ, ಪ್ರಹಸನಾದಿ ಲಘುರೂಪಕಗಳಲ್ಲಿ ಮಾತ್ರ, ಅವಕ್ಕೆ ಸ್ಥಾನ. ಗದ್ಯಕಾವ್ಯದ ಕಥೆ ಅಲೌಕಿಕವೂ ಅದ್ಭುತಾಂಶಮಯವೂ ಆಗಿರುವುದಕ್ಕೆ ಪರಿಪೂರ್ಣರಸ ಪ್ರಕಟನೆಯ ಆದರ್ಶವೇ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಇದನ್ನರ್ಥ ಮಾಡಿಕೊಂಡರೆ ಮೇಲೆ ಪ್ರಸ್ತಾಪಿಸಿದಂತಹ ಟೀಕೆಗಳಿಗೆ ಅವಕಾಶ ವಿರುವುದಿಲ್ಲ. ಇಂದಿನಂತೆ ಒಬ್ಬ ಸಾಮಾನ್ಯ ವ್ಯಕ್ತಿಯ, ಕ್ಷುದ್ರಭಾವಾತಿರೇಕಗಳನ್ನೆಲ್ಲ ಬಗೆಬಗೆಯಾಗಿ ಚಿತ್ರಿಸುವ ಬದಲು ಮಾನವಸಾಧಾರಣವಾದ

---

31 ಪ್ರೊ|| ಟಿ. ಎಸ್. ವೆಂಕಣ್ಣಯ್ಯನವರು, 'ಕರ್ಣಾಟಕ ಕಾದಂಬರೀ ಸಂಗ್ರಹ, ಪೀಠಿಕೆ.'

ಮೂಲಭಾವಗಳನ್ನು ಮಾತ್ರ ಸಮಗ್ರವಾಗಿ ಚಿತ್ರಿಸುವುದು ಹಿಂದಿನವರ ಧ್ಯೇಯವಾಗಿದ್ದಿತು. ಇಂದಿನ ಕಥೆಗಳನ್ನು ಬಾಣನ ಕಾದಂಬರಿಯೊಡನೆ ಹೋಲಿಸುವುದೇ ಅನುಚಿತ. ಆ ಪವಿತ್ರ ಕಾವ್ಯರತ್ನದ ಅಮರನಾಮಧೇಯ ವನ್ನು ಕ್ಷುದ್ರ ಕಥಾನಕಗಳಿಗೆಲ್ಲ ಇಂದು ಅನ್ವಯಿಸುವಂತೆ ಮಾಡಿದರೆ ಬಾಣಕೃತಿಯ ವೈಶಿಷ್ಟ್ಯ ಕಣ್ಮರೆಯಾಗುತ್ತದೆ. ಬಾಣನ ವರ್ಣನೆಯೇ ಕಥೆ, ಆತನ ಕಥೆಯೇ ವರ್ಣನೆ. ಇವೆರಡರ ಅಭಿನ್ನ ಪಾಕವೇ ಕಾದಂಬರಿ. ಆ ಅಭಿನ್ನಪಾಕದಿಂದ ನೂರಾರು ತಲೆಮಾರುಗಳ ರಸಿಕರು ಸವಿದಿರುವುದೇ ಸಂಸ್ಕೃತ ಕಾದಂಬರಿಯ ಸಿದ್ಧರಸ. ಶೃಂಗಾರದ ಆ ಪರಿಶುದ್ಧರಸ ಬಾಣನಿಗಿಂತ ಹಿಂದಿನವರಲ್ಲೂ ಆ ಪಾಕದಲ್ಲಿಲ್ಲ, ಮುಂದಿನವರಲ್ಲಿಯೂ ಇಲ್ಲ.

ಒಂದು ಮಾತಿನಿಂದ ನಮ್ಮನ್ನು ಸೌಂದರ್ಯಲೋಕಕ್ಕೆ ಒಯ್ಯುವ ಕಲೆ ಬಾಣನದು. ಒಂದು ವಾಕ್ಯದಿಂದ, ಅವನು ಸಾಧಿಸುವ ಸಿದ್ಧಿ ಅಭೂತಪೂರ್ವ, ಒಂದು ವರ್ಣನೆಯ ಪ್ರಭಾವದಿಂದ ಅವನು ನಮ್ಮ ಇಹಲೋಕವ್ಯಾಪಾರ ಗಳನ್ನೆಲ್ಲ ಮರೆಸಿ ಸೌಂದರ್ಯೈಕಸಾರವಾದ ಗಂಧರ್ವಲೋಕದ ಪ್ರಜೆಗಳನ್ನಾಗಿ ಮಾಡಿಬಿಡುತ್ತಾನೆ. ನಮ್ಮ ದೈನಂದಿನ ಪ್ರಪಂಚದ ಎಲ್ಲ ಸುಖಗಳಿಗಿಂತಲೂ ಹೆಚ್ಚಿನ ಸುಖ ಬಾಣನ ಕಲ್ಪನೆಯ ಆ ಮಾಯಾಪ್ರಪಂಚದಲ್ಲಿರುವುದನ್ನು ರಸಿಕರ ಹೃದಯವೇ ಬಲ್ಲುದು ಮರುಭೂಮಿಯಲ್ಲಿ ಬಾವಿತೋಡುವ ಇಂದಿನ ಪ್ರಯತ್ನಗಳಿಗೆ ಪ್ರತಿಯಾಗಿ ಸ್ವರ್ಗವನ್ನೇ ಭೂಮಿಗೆ ತಂದಿಳಿಸುವ ಮಾರ್ಗ ಬಾಣನದು. ಭಾರತದಲ್ಲಿ ಕಾಳಿದಾಸಾದಿ ಮಹಾಕವಿಗಳೆಲ್ಲ ಶ್ರಮಿಸಿದುದು ಈ ದಿಕ್ಕಿನಲ್ಲಿಯೇ. ಎಲ್ಲರಿಗಿಂತಲೂ ಹೆಚ್ಚಿನ ಸಿದ್ಧಿ ಬಾಣನಿಗೆ ಸಿಕ್ಕಿತು. ಬಾಣನೊಬ್ಬನ ಶಬ್ದಗಾರುಡಿಯ ಅನುಭವಕ್ಕಾಗಿ, ಬಾಣನೊಬ್ಬನ ಶೃಂಗಾರಲೋಕದ ರಸನಿಮಿಷಗಳಿಗಾಗಿ, ಸಂಸ್ಕೃತ ಭಾಷೆಯನ್ನು ಇಂದೂ ಭಾರತೀಯರು ಕಲಿಯಬೇಕೆಂದರೆ ಅತಿಶಯೋಕ್ತಿಯೆಂದು ತಿಳಿಯಲಾಗದು. ಸಂಸ್ಕೃತ ಸಂಸ್ಕಾರ ಸಾಲದ ಪಾಶ್ಚಾತ್ಯಪಂಡಿತರು ಸಮಾಸಗಳಿಗೆ ಬೆದರಿ, ಅಲಂಕಾರಗಳಿಗೆ ಅಂಜಿ, ಬಾಣನ ಗದ್ಯವೊಂದು ದಂಡಕಾರಣ್ಯವೆಂದೂ, ಅಲ್ಲಿ ಪಾಠಕನು ಪ್ರತಿಹೆಜ್ಜೆಗೂ ಮರಗಿಡಗಳನ್ನು ಕಡಿದು ದಾರಿಮಾಡಿಕೊಂಡಲ್ಲದೆ ಪ್ರವೇಶವೇ ದುರ್ಲಭವೆಂದೂ, ಅಷ್ಟಾದರೂ ಅಜ್ಞಾತಪದಗಳೆಂಬ ಕ್ರೂರ ಮೃಗಗಳು ಅವನನ್ನು ಕೊಂದು ತಿನ್ನಲು ಕಾಯುತ್ತಲೇ ಇರುವುವೆಂದೂ

ಹೇಳಿದ್ದುಂಟು.[32] ಭಾರತೀಯರಿಗೆ ಸಮಾಸಗಳ ಕಾಲ್ತೊಡಕಾಗಲಿ, ಅಲಂಕಾರಗಳ ಕೈತೊಡಕಾಗಲಿ, ಪೌರಾಣಿಕ ಕಥಾನಕಗಳ ಮಾತೊಡಕಾಗಲಿ ಅನುಭವಕ್ಕೆ ಬರುವ ಸಂಭವ ಕಡಿಮೆ.

ಬಾಣನ ವರ್ಣನಾಪ್ರವಾಹವು ಅವನ ಅಚ್ಛೋದ ಸರಸ್ಸಿನಂತೆಯೇ ತ್ರೈಲೋಕ್ಯಲಕ್ಷ್ಮಿಯ ಮಣಿದರ್ಪಣ. ಭಾರತವರ್ಷದ ಅಸಂಖ್ಯಪುಷ್ಪಲತೆಗಳು, ಫಲವೃಕ್ಷಗಳು, ಪಕ್ಷಿಜಾತಿಗಳು, ಮತ್ತು ಪಶುವರ್ಗಗಳೊಂದೊಂದರಲ್ಲೂ ಅಗಾಧವಾದ ಆತ್ಮೀಯಪರಿಚಯವುಳ್ಳ ಚರಾಚರ ಜೀವಲೋಕವೊಂದು. ಯಕ್ಷರಾಕ್ಷಸ, ಕಿನ್ನರ ಕಿಂಪುರುಷ, ಸುರೋರಗ, ಋಷಿನೃಪಾಲಾದಿಗಳ ಕಥಾಮಯವಾದ ಪೌರಾಣಿಕಲೋಕ ಎರಡನೆಯದು. ಸ್ತ್ರೀಪುರುಷರ ಹೃದಯಾಂತರಾಳದಚಿತ್ತವೃತ್ತಿಗಳೂ, ಅವುಗಳಿಗೆ ಉದ್ದೀಪಕಗಳಾಗುವ ವಸಂತ, ಮಂದಾನಿಲ, ಗಿರಿನದೀವನಾಂತಾದಿ ನಿಸರ್ಗವಸ್ತುಗಳೂ ಕೂಡಿ ಆಗುವ ಪ್ರಕೃತಿಪರಿವೃತವಾದ ಮನುಷ್ಯಲೋಕ ಮೂರನೆಯದು. ಈ ಮೂರು ಲೋಕಗಳಲ್ಲೂ ಕವಿಗೆ ಪ್ರತ್ಯಕ್ಷವಲ್ಲದ ಒಂದುಸಣ್ಣವಸ್ತುವೂ ಇಲ್ಲ. ಎಲ್ಲಕ್ಕೂ ಸೌಂದರ್ಯಸೇಚನೆ ಮಾಡುವ ಸಾಮರ್ಥ್ಯ ಬಾಣನ ಅಸಾಧಾರಣ ಕಾವ್ಯಗುಣ. ಒಂದೊಂದು ವಸ್ತುವೂ ಆ ಸರಸ್ಸಿನಲ್ಲಿ ತೇಲುವ ರಾಜಹಂಸಗಳಂತೆಯೂ, ಚಕ್ರವಾಕ ಮಿಥುನಗಳಂತೆಯೂ, ಕ್ರೌಂಚಸಾರಸಗಳಂತೆಯೂ ಇಂಚರಗೈಯುತ್ತಾ ಸುಳಿದು ಮನಸ್ಸನ್ನು ಸೆಳೆಯುತ್ತವೆ. ಒಂದೊಂದೂ ಅತಿ ಮನೋಹರ, ಮನಸ್ಸಿಗೆ ಆಹ್ಲಾದಕ. ಬಾಣನ ಸರ್ವವಿದ್ಯಾಪರಿಚಯವು ಅವನ ಶ್ಲೇಷೆಗಳಲ್ಲಿಯೂ ವಕ್ರೋಕ್ತಿಗಳಲ್ಲಿಯೂ ಕಂಗೊಳಿಸುತ್ತದೆ. ಬಾಣನ ಕಾದಂಬರಿಯ ಪ್ರತಿಯೊಂದು ಅಲಂಕಾರವನ್ನೂ ಮನನ ಮಾಡಿದವನಿಗೆ ಅಗಾಧವೂ ಅಪಾರವೂ ಆದ ಸಂಸ್ಕೃತ ಜ್ಞಾನರಾಶಿಯ ಬಹುಭಾಗವು ಅರಿವಿಲ್ಲದೆಯೇ

---

32. " Bāna's prose is an Indian wood where progress is impossible through the undergrowth until the traveller cuts out a path for himself, and where even then he is confronted by malicious wild beasts in the shape of unknown words to terrify him "

—*Weber Indische Studien*

ತನ್ನದಾಗುವುದರಲ್ಲಿ ಸಂದೇಹವಿಲ್ಲ. ಅವನ ಶೈಲಿಯ ಮೋಹಕತ್ವ ಇಂದ್ರ ಚಾಪದ ಸಿರಿಯಂತೆ ವಿವಿಧ ವರ್ಣರಂಜಿತ, ಚಂದ್ರೋದಯದ ತಂಪಿನಂತೆ ವಿಶುದ್ಧ. ಕಲ್ಪಪಾದಪದ ಕುಸುಮಪ್ರಸವದಂತೆ ಅದ್ವಿತೀಯ. ನಿಸರ್ಗ ರಮಣೀಯವಾದ ವಸ್ತುಗಳು ಬಾಣನ ಕೈಯಲ್ಲಿ ದ್ವಿಗುಣವಾದ ರಮಣೀಯತೆಯನ್ನು ಪಡೆಯುತ್ತವೆ. ಹರ್ಷಚರಿತೆಯಲ್ಲಿ ಅಲ್ಲಲ್ಲಿ ಮಿನುಗುವ ಅವನ ಶಬ್ದರಾಶಿಯ ಇಂದ್ರಜಾಲವಿದ್ಯೆಯು ಕಾದಂಬರಿಯಲ್ಲಿ ಒಂದೇ ಹೊಂಬೆಳಗಿನಿಂದ ಕಡೆತನಕ ಹೊಳೆಯುತ್ತದೆ. ಸುಬಂಧುವಿನಂತೆ ಬಾಣನೂ 'ಉತ್ಕೃಷ್ಟ ಕವಿಗದ್ಯಮಿವ ವಿವಿಧ ವರ್ಣಶ್ರೇಣೀಪ್ರತಿಪಾದ್ಯಮಾನಾನೇಕನೂತ್ನಾರ್ಥ ಸಂಚಯಮ್' ಎನ್ನುವಾಗ ಅವನ ದೃಷ್ಟಿ ವರ್ಣವಿನ್ಯಾಸಗಳ ಹಾಗು ನಾನಾರ್ಥ ಸಂಶ್ಲೇಷಗಳ ಕಡೆಗೆ ಹೆಚ್ಚು ಬದ್ಧಲಕ್ಷ್ಯವಾಗಿದೆಯೆಂಬುದು ಸಿದ್ಧವಾಗುತ್ತದೆ. ಅವನ ಕಾವ್ಯಾಲಾಪ 'ಅಭಿನವ ಸುಭಾಷಿತ ಸುಧಾವರ್ಷಿ', ಅವನ ಅಲಂಕಾರಪ್ರೇಮ ಅಪಾರ:—

**ಹರನ್ತಿ ಕಂ ನೋಜ್ಜ್ವಲ ದೀಪಕೋಪಮೈ**
**ರ್ನವೈಃ ಪದಾರ್ಥೈರುಪಪಾದಿತಾಃ ಕಥಾಃ ।**
**ನಿರಂತರ ಶ್ಲೇಷಘನಾಃ ಸುಜಾತಯಃ**
**ಮಹಾಸ್ರಜಃ ಚಂಪಕಕುಡ್ಮಲೈರಿವ ॥** (ಕಾದಂಬರೀ)

[ಒತ್ತಾಗಿ ಒಳ್ಳೆಯ ಜಾಜಿ, ಸಂಪಿಗೆ ಮೊಗ್ಗುಗಳಿಂದ ಕಟ್ಟಿದ ಮಾಲೆಯಂತೆಯೇ ಉಜ್ವಲವಾದ ದೀಪಕ, ಉಪಮೆ, ಶ್ಲೇಷೆಗಳಿಂದಲೂ ನವನವ ಪದಾರ್ಥಗಳಿಂದಲೂ, ನಿರೂಪಿತವಾದ ಕಥೆಗಳು ಯಾರ ಮನಸ್ಸನ್ನು ತಾನೆ ಸೂರೆಗೊಳ್ಳುವುದಿಲ್ಲ ?]

ಆದರೆ ರಸಾಭಿವ್ಯಕ್ತಿಗೆ ಅಲಂಕಾರಗಳು ಅಂಗವೇ ಹೊರತು ತಾವೇ ಮುಖ್ಯವಲ್ಲವೆಂಬ ಅರಿವೂ ಚೆನ್ನಾಗಿತ್ತು : —

**ಸ್ಫುರತ್ಕಲಾಲಾಪ ವಿಲಾಸಕೋಮಲಾ ಕರೋತಿ ರಾಗಂ ಹೃದಿ**
**ಕೌತುಕಾಧಿಕಮ್ ।**
**ರಸೇನ ಶಯ್ಯಾಂ ಸ್ವಯಮಭ್ಯುಪಾಗತಾ ಕಥಾ ಜನಸ್ಯಾಭಿ**
**ನವಾ ವಧೂರಿವ ॥**

ಆ ಕಲಾಲಾಪದ ಕೋಮಲ ವಿಲಾಸಕ್ಕೆ ಅಲಂಕಾರಗಳು ಪ್ರಭಾತಿಶಯವನ್ನು ಬೀರುತ್ತವೆ. ಗದ್ಯಬಂಧದ ಔಚಿತ್ಯವೇ ದೀರ್ಘಸಮಾಸವೆಂದು ಆಡಂಬರ ವಿರೋಧಿಯಾದ ಆನಂದವರ್ಧನನೇ ಒಪ್ಪಿ ವಿಪ್ರಲಂಭಶೃಂಗಾರ ಕರುಣಗಳ ಅಭಿವ್ಯಕ್ತಿಗೆ ಮಾತ್ರ ಅವುಗಳು ಅಗತ್ಯವಿಲ್ಲವೆಂದು ಹೇಳಿದ್ದಾನೆ. ಬಾಣನು ಈ ವಿವೇಕವನ್ನೂ 'ಕಾದಂಬರಿ'ಯಲ್ಲಿ ತೋರಿಸಿದ್ದಾನೆ. ಪ್ರಕೃತಿ ವರ್ಣನೆಯ ಭವ್ಯ ಪ್ರಸಂಗಗಳಲ್ಲಿ ಅವನ ಕಲ್ಪನೆ ಗಗನಗಾಮಿಯಾಗಿ ಸಮಾಸಗಳ ಸಂಗೀತವನ್ನು ಸುರಿಸುವುದೇ ಹೊರತು ಸುಕುಮಾರಭಾವಪ್ರದರ್ಶನದ ಕಾಲದಲ್ಲಿ ರಸವಿರೋಧಿಯಾಗಿ ಸಮಾಸಗಳು ಬರುವುದಿಲ್ಲ.

ರಾಜಭವನದಂತೆ ಭವ್ಯವಾದ, ಅನೇಕ ದಿವ್ಯಚತುಶ್ಶಾಲೆಗಳಿಂದ ರಂಜಿತವಾದ, ವಿವಿಧ ಮನೋಹರ ಪಶುಪಕ್ಷಿ ಕುಸುಮಲತೆಗಳಿಗೆ ಬೀಡಾದ, ಚತುರ ವನಿತಾ ವಿಹಾರಗೋಷ್ಠೀ ರಮ್ಯವಾದ, ನೃತ್ಯ ವಾದ್ಯಗೀತಾದಿ ಕಲಾತರಂಗಿತವಾದ, ಮಂತ್ರಿಪುರೋಹಿತಾದಿಮಹಾನುಭಾವಭಾಜನವಾದ, ಬಾಣನಕಾವ್ಯ-ಸೌಧವನ್ನು ಪರಿಚಯಮಾಡಿಕೊಡುವ ಕೆಲಸ ಅಸಾಧ್ಯಪ್ರಾಯವಾದುದು. ಆದರೆ ಬಾಣನೇ ಪರ್ಯಾಯವಾಗಿ ತನ್ನ ಕಾವ್ಯವನ್ನು ವಕ್ರೋಕ್ತಿಮಾರ್ಗದಿಂದ ವಿವರಿಸಿದ್ದಾನೆ. ಅವನು ವರ್ಣಿಸುವ ರಾಜಕುಲದಂತೆಯೇ ಅದು ಸಂಧ್ಯಾಸಮಯದಹಾಗೆ ದೃಶ್ಯಮಾನಚಂದ್ರಾಪೀಡೋದಯ, ನಾರಾಯಣನ ವಕ್ಷಃಸ್ಥಲದ ಹಾಗೆ 'ಶ್ರೀ ರತ್ನಪ್ರಭಾ ಭಾಸಿತದಿಗಂತ; ಬಲಭದ್ರನ ಹಾಗೆ 'ಕಾದಂಬರೀ ರಸ ವಿಶೇಷ ವರ್ಣನಾಕುಲ', ಬ್ರಾಹ್ಮಣನ ಹಾಗೆ 'ಪದ್ಮಾಸನೋಪದೇಶದರ್ಶಿತ ಭೂಮಂಡಲ', ಸ್ಕಂದನಂತೆ 'ಶಿಖಿಕ್ರೀಡಾರಂಭ ಚಂಚಲ', 'ಕುಲಾಂಗನಾ ಪ್ರಚಾರ'ದಂತೆ 'ಸರ್ವದೋಪಜಾತಶಂಕ' ವೇಶ್ಯಾಜನದಂತೆ 'ಉಪಚಾರ ಚತುರ', ಅಂತ್ಯಜಜನದಂತೆ 'ಅಗಮ್ಯ ವಿಷಯಾಭಿಲಾಷ', ಅಗಮ್ಯವಿಷಯಾಸಕ್ತವಾದರೂ ಪ್ರಶಂಸನೀಯ'; ಅಂತಕಭಟಗಣದಂತೆ 'ಕೃತಾಕೃತಸುಕೃತ ವಿಚಾರ ನಿಪುಣ', ಸುಕೃತದಂತೆ 'ಆದಿಮಧ್ಯಾವಸಾನ ಕಲ್ಯಾಣಕರ' ಬಾಣನ ಈ ವಿಶೇಣಗಳನ್ನು ಬಿಟ್ಟರೆ ನಮ್ಮ ವಿಶೇಷಣಗಳಿಂದ ಅವನ ಕಾವ್ಯದಮಹತ್ತ್ವವನ್ನೂ ಔನ್ನತ್ತ್ಯವನ್ನೂ ವೈವಿಧ್ಯವನ್ನೂ ವೈಪುಲ್ಯವನ್ನೂ ವಿವರಿಸುವುದು ಅಶಕ್ಯ.

ಈ ಕಾವ್ಯವೆಂಬ ಭವ್ಯರಾಜಮಂದಿರದಲ್ಲಿ ಯಾವುದೋ ಒಂದು ವಾಕ್ಯವೃಂದದ ಕಡೆಗೆ ಬೆರಳು ಮಾಡಿದರೆ, ಆನೆಯನ್ನು ಮುಟ್ಟಿ ತಿಳಿದ

ಏಳು ಜನ ಕುರುಡರು ಇತರರಿಗೆ ಅದರ ಸ್ವರೂಪವನ್ನು ವಿವರಿಸಿದ ಕಥೆಯೇ ಆಗುತ್ತದೆ. ಆ ಕೆಲಸಕ್ಕಿಲ್ಲಿ ಹೊರಡದೆ ಬಾಣನ ಕಲ್ಪನೆಯು ಏರುವ ಎತ್ತರಗಳ ಒಂದು ದಿಕ್ಸೂಚನೆಯನ್ನು ಮಾತ್ರ ತಾನಾಗಿ ಕೈಗೆ ಬಂದ ಒಂದು ಉದಾಹರಣೆಯಿಂದ ಮಾಡಲಾಗಿದೆ :—

ಕ್ರಮೇಣ ಚ ಪ್ರತೀಚೀಕರ್ಣಪೂರರಕ್ತೋತ್ಪಲೇ ಲೋಕಾಂತರ ಮುಪಗತೇ ಭಗವತಿ ಗಭಸ್ತಿಮಾಲಿನಿ, ಸಮುಲ್ಲಸಿತಾಯಾಮಂಬರ ತಟಾಕವಿಕಚಕಮಲಿನ್ಯಾಂ ಸಂಧ್ಯಾಯಾಂ, ಕೃಷ್ಣಾಗುರುಪಂಕಪತ್ರ ಲತಾಸ್ವಿವ ತಿಮಿರಲೇಖಾಸು ಸ್ಫುರಂತೀಷು ದಿಶಾಂ ಮುಖೇಷು, ಅಲಿಕುಲಮಲಿನೇನ ಕುವಲಯವನೇನೇವ ರಕ್ತಕಮಲಾಕರೇ ತಿಮಿರ ನಿಕರೇಣೋತ್ಸಾರ್ಯಮಾಣೇ ಸಂಧ್ಯಾರಾಗೇ, ಕಮಲಿನೀನಿಪೀತ ಮಾತಪಮುನ್ಮೃಲಯಿತುಮಂಧಕಾರಪಲ್ಲವೇಷ್ವಿವ ವಿಶತ್ಸು ರಕ್ತಕಮ ಲೋದರಾಣಿ ಮಧುಕರಕುಲೇಷು, ಶನೈಃ ಶನೈಶ್ಚ ನಿಶಾವಿಲಾಸಿನೀ ಮುಖಾವತಂಸಪಲ್ಲವೇ ಗಲಿತೇ ಸಂಧ್ಯಾರಾಗೇ, ದಿಕ್ಷು ದಿಕ್ಷು ವಿಕ್ಷಿಪ್ತೇಷು ಸಂಧ್ಯಾದೇವತಾರ್ಚನಬಲಿಪಿಂಡೇಷು, ಶಿಖರದೇಶ ಲಗ್ನತಿಮಿರಾಸ್ವನಾರೂಢಮಯೂರಾಸ್ವಪಿ ಮಯೂರಾಧಿಷ್ಠಿತಾಸ್ವಿವ ಮಯೂರಯಷ್ಟಿಷು, ಗವಾಕ್ಷವಿವರನಿಲೀನೇಷು ಪ್ರಾಸಾದಲಕ್ಷ್ಮೀ ಕರ್ಣೋತ್ಪಲೇಷು ಪಾರಾವತೇಷು ...........ಪ್ರವೃತ್ತೇ ಪ್ರದೋಷ ಸಮಯೇ........

ಇದು ಪ್ರದೋಷಕಾಲದ ವರ್ಣನೆಯ ನಾಲ್ಕನೆಯ ಒಂದು ಭಾಗ ಮಾತ್ರ. 'ಭಗವಾನ್ ಗಭಸ್ತಿಮಾಲಿಯು ಪಶ್ಚಿಮ ದಿಗಂಗನೆಯ ಕರ್ಣ ಪೂರವಾದ ರಕ್ತೋತ್ಪಲದಂತೆ ಲೋಕಾಂತರವನ್ನೈದಿದನು. ಅಂಬರವೆಂಬ ಕೆರೆಯಲ್ಲಿ ಅರಳಿದ ಕಮಲಿನಿಯಂತೆ ಸಂಜೆ ಬೆಳಗಿತು. ದಿಗಂಗನೆಯರ ಮುಖ ಗಳ ಮೇಲೆ ಕೃಷ್ಣಾಗುರುಲೇಪದ ಚಿತ್ರತಿಲಕಗಳಂತೆ ಕತ್ತಲೆಯ ಗೆರೆಗಳು ಹೊಳೆದುವು. ಕೆಂದಾವರೆಗಳ ಸಂದಣಿಯನ್ನು ದುಂಬಿವಿಂಡುಗಳಿಂದೊಡ ಗೂಡಿದ ಕನ್ನೈದಿಲೆಯ ವನಗಳು ಮುಚ್ಚಿಸಿಬಿಡುವಂತೆ ತಮದೊಡ್ಡು ಗಳು ಸಂಜೆಗೆಂಪನ್ನು ಓಸರಿಸಿದುವು. ಕಮಲಿನಿಯು ಕುಡಿದು ಹೊಟ್ಟೆಯೊಳ ಗಿಟ್ಟುಕೊಂಡಿದ್ದ ಬಿಸಿಲನ್ನೂ ಹುಡುಕಿ ಸಾಯಿಸಲೋ ಎಂಬಂತೆ ಹೊಕ್ಕ

ಕತ್ತಲೆಯ ಕುಡಿಗಳಂತೆ ದುಂಬಿವಿಂಡುಗಳು ಕೆಂದಾವರೆಗಳ ಗರ್ಭವನ್ನು ಸೇರಿದುವು. ಮೆಲ್ಲಮೆಲ್ಲನೆ ನಿಶಾವಿಲಾಸಿನಿಯ ಮುಖಾವತಂಸಪಲ್ಲವದಂತೆ ಸಂಧ್ಯಾರಾಗವು ಜಾರಿತು. ದಿಕ್ಕು ದಿಕ್ಕಿನಲ್ಲಿಯೂ ಸಂಧ್ಯಾದೇವಿಯ ಆರಾಧನೆಗೆ ಅರ್ಪಿತವಾದ ಬಲಿಪಿಂಡಗಳು ಕಾಣಿಸಿದುವು. ನವಿಲು ಕುಣಿಯುವ ಕೋಲುಗಳ ತುದಿಯಲ್ಲಿ ನವಿಲುಗಳಿರದಿದ್ದರೂ ಕತ್ತಲೆ ಕವಿದುದರಿಂದ ನವಿಲುಗಳಿದ್ದಂತೆಯೇ ಭಾಸವಾಗುತ್ತಿದ್ದುವು. ಸೌಧಗಳ ಸೌಂದರ್ಯಲಕ್ಷ್ಮಿಯ ಕರ್ಣೋತ್ಪಲಗಳಂತೆ ಪಾರಿವಾಳಗಳು ಗವಾಕ್ಷರಂಧ್ರಗಳಲ್ಲಿ ಅಡಗಿದುವು.'

ಮೂಲವನ್ನೋದಿ ಭಾಷಾಂತರವನ್ನೋದಿದರೆ ಪರಿವೃತ್ತ್ಯಸಹವಾದ ಮೂಲದ ಶಬ್ದ ಸೌಂದರ್ಯದ ಕಲ್ಪನೆಯಾಗಬಹುದು. ಕ್ರಮಕ್ರಮವಾಗಿ ಕಡಿಮೆಯಾಗುವ ಬೆಳಕಿನ ಮತ್ತು ಏರುವ ಕತ್ತಲೆಯ ಚಿತ್ರವನ್ನು ಇದಕ್ಕಿಂತ ಸ್ಪಷ್ಟವಾಗಿ ಚಿತ್ರಿಸಿರುವ ಕವಿಯಿರಲಾರನು.

ಬಾಣನ ಸರಳವೂ ಪ್ರಭಾವಶಾಲಿಯೂ ಆದ ಗದ್ಯಶೈಲಿಗೆ ಒಂದು ಉದಾಹರಣೆ. ಇದು ಲಕ್ಷ್ಮಿಯ ಸ್ವಭಾವದ ಚಿತ್ರ :—

> ನ ಪರಿಚಯಂ ರಕ್ಷತಿ, ನಾಭಿಜನಮೀಕ್ಷತೇ, ನ ರೂಪಮಾಲೋಕಯತೇ, ನ ಕುಲಕ್ರಮಮನುವರ್ತತೇ, ನ ಶೀಲಂ ಪಶ್ಯತಿ, ನ ವೈದಗ್ಧ್ಯಂ ಗಣಯತಿ, ನ ಶ್ರುತಮಾಕರ್ಣಯತಿ, ನ ಧರ್ಮಮನುರುಧ್ಯತೇ, ನ ತ್ಯಾಗಮಾದ್ರಿಯತೇ, ನ ವಿಶೇಷಜ್ಞತಾಂ ವಿಚಾರಯತಿ, ನಾಚಾರಂ ಪಾಲಯತಿ, ನ ಸತ್ಯಮನುಬುಧ್ಯತೇ, ನ ಲಕ್ಷಣಂ ಪ್ರಮಾಣೀಕರೋತಿ . .

[ಪರಿಚಯವನ್ನು ಉಳಿಸಿಕೊಳ್ಳುವುದಿಲ್ಲ. ಕುಲೀನನೆಂದು ನೋಡುವುದಿಲ್ಲ. ರೂಪವನ್ನು ಲೆಕ್ಕಿಸುವುದಿಲ್ಲ ಕುಲಕ್ರಮವನ್ನು ಹಿಂಬಾಲಿಸುವುದಿಲ್ಲ. ಶೀಲವನ್ನು ಎಣಿಸುವುದಿಲ್ಲ, ಪಾಂಡಿತ್ಯವನ್ನು ಪರಿಗಣಿಸುವುದಿಲ್ಲ, ವಿದ್ಯೆಯನ್ನು ಕೇಳುವುದಿಲ್ಲ, ಧರ್ಮವನ್ನು ಅನುಸರಿಸುವುದಿಲ್ಲ. ತ್ಯಾಗವನ್ನು ಆದರಿಸುವುದಿಲ್ಲ. ಪ್ರೌಢಿಮೆಯನ್ನು ವಿಚಾರಿಸುವುದಿಲ್ಲ. ಆಚಾರವನ್ನು ಪಾಲಿಸುವದಿಲ್ಲ. ಸತ್ಯವನ್ನು ಅರಿಯುವುದಿಲ್ಲ. ಲಕ್ಷಣವನ್ನು ಪ್ರಮಾಣಿಸುವುದಿಲ್ಲ.]

ಇದಕ್ಕಿಂತ ಸರಳವಾದ ವಾಕ್ಯಗಳು ಯಾವ ಭಾಷೆಯಲ್ಲಿಯೂ ಸಾಧ್ಯವಿಲ್ಲ.

ಬಾಣನು ಕಥೆಯ ಮಾರ್ಗದಲ್ಲಿ ಬರೆಯುವ ಮಹಾಕವಿ. ಅವನ ಕಥೆ ಕಾಲ್ಪನಿಕ, ಪಾತ್ರಗಳು ಅಸಾಧಾರಣ; ಆದರೆ ರಸವೃಷ್ಟಿ ಮಾತ್ರ ಅಪ್ರತಿಮ. ಬಾಣನ ಭಾಷಾಪ್ರವಾಹವು ನಿರರ್ಗಳ, ವರ್ಣನಾ ವೈಭವ ನಿರುಪಮ. ಶ್ಲೇಷ, ವಿರೋಧ, ಪರಿಸಂಖ್ಯಾದಿ ಅಲಂಕಾರಗಳ ಅತಿರೇಕವು ಯಾವ ವಾಸ್ತವಿಕ ಕಥೆಯಲ್ಲಾದರೂ ದೋಷವೇ. ಆದರೆ ಬಾಣನ ಅದ್ಭುತಕಾವ್ಯಲೋಕದಲ್ಲಿ ಅವುಗಳ ಸ್ಥಾನ ಅತಿ ಮಹತ್ವದ್ದಾಗಿದೆ. ಅವುಗಳನ್ನು ತೆಗೆದುಬಿಟ್ಟರೆ ಉಳಿಯುವ ಕಥೆ ಬಾಲಕರಿಗೆ ಮೆಚ್ಚಾಗಬಹುದು, ಆದರೆ ಕಾಳಿದಾಸನೊಡನೆ ತುಲನೆಗೆ ನಿಲ್ಲಬಲ್ಲ ಬಾಣನ ಮಹಾಕವಿತ್ವ ಮಾಯವಾಗುವುದು. ನಿಸರ್ಗಸಿದ್ಧವಾದ ರಮಣೀಯತೆ ಒಂದು ತೆರ, ಕಾವ್ಯಕಲೆ ತೋರಿಸಬಹುದಾದ ರಮಣೀಯತೆ ಇನ್ನೊಂದು ತೆರ. ಈ ಎರಡನೆಯ ತೆರದ ರಮಣೀಯತೆಯ ಪರಮಾವಧಿಯನ್ನು ಮುಟ್ಟುವ ಮಾನವನ ಮಹಾಪ್ರಯತ್ನವನ್ನು ಬಾಣನಲ್ಲಿ ನೋಡಬಹುದು. ಸಂಸ್ಕೃತ ಲಾಕ್ಷಣಿಕರ ಸಿದ್ಧಾಂತಗಳ ಉತ್ತಮೋತ್ತಮ ಪ್ರಯೋಗವೇ ಕಾದಂಬರಿ. ಇಂದಿನ ಯಾಂತ್ರಿಕಯುಗದ ಅಭಿರುಚಿಗೆ ಶಬ್ದಜಾಲಗಳ, ಅರ್ಧಸಾರ್ಧಗಳ, ಪ್ರಯತ್ನಪೂರ್ಣ ಕೆತ್ತನೆಕೆಲಸವು ಕೇವಲ ಕೃತ್ರಿಮತೆಯ ಪರಾಕಾಷ್ಠೆಯೆನಿಸಿದರೆ ದೋಷ ಬಾಣನದೂ ಅಲ್ಲ; ಇಂದಿನವರದೂ ಅಲ್ಲ. ರುಚಿಚಕ್ರದ ಅವಾರ್ಯ ವಿಪರ್ಯಾಸದ್ದು. ಕಾಲಾಂತರದಲ್ಲಿ ಚಕ್ರದ ಪರಿವರ್ತನವು ಯಾವ ದಿಕ್ಕಿಗೆ ತಿರುಗುವುದೋ ಯಾರು ಬಲ್ಲರು? ಸಂಸ್ಕೃತ ಭಾಷಾಭಂಡಾರವನ್ನು ಎಲ್ಲ ಕವಿಗಳಿಗಿಂತಲೂ ಹೆಚ್ಚಾಗಿ ಶ್ರೀಮಂತವಾಗುವಂತೆ ಮಾಡಿದ ಮಹಾಕವಿಶಿರೋಮಣಿ ಬಾಣ. ಸಂಸ್ಕೃತ ಸಾಹಿತ್ಯದ ಸೌಂದರ್ಯೋಪಾಸಕರಿಗೆ ಅವನ ಕೃತಿಗಳು ಅಕ್ಷಯ ಕಲ್ಪವೃಕ್ಷಗಳು. ಭಾರತದ ಪ್ರಾಚೀನ ಸಂಸ್ಕೃತಿಯ ಸರ್ವಾಂಗೀಣತೆಯನ್ನು ಉಜ್ಜ್ವಲವಾಗಿ ಅಭಿವ್ಯಕ್ತ ಮಾಡಿರುವ ಕೆಲವೇ ಪ್ರತಿಭಾವಂತ ಮಹಾಕವಿಗಳಲ್ಲಿ ಬಾಣನಿಗೆ ಒಂದು ಪೂಜ್ಯಸ್ಥಾನ ಸಲ್ಲಲೇಬೇಕು.

**ದಂಡಿ :**—ಇಂದಿನ ಅಭಿರುಚಿಗೆ ಕಥಾಪ್ರಧಾನವಾದ ದಂಡಿಯ ದಶಕುಮಾರ ಚರಿತೆ ಬಾಣನ ಕೃತಿಗಳಿಗಿಂತಲೂ ಪ್ರಿಯಕರವಾಗುವುದು ಸಹಜವಾಗಿದೆ. ಇದರಲ್ಲಿ ಶಬ್ದಾರ್ಥ ಚಮತ್ಕಾರಗಳ ಹೊಳಪು ಕಣ್ಣನ್ನು ಕುಕ್ಕುವಂತಹದಲ್ಲ. ಒಂದರ ಬದಲು ಹತ್ತು ರಾಜಕುಮಾರರ ಪ್ರಣಯ ಸಾಹಸಗಳ ಮೋಹಕ ಕಥೆಗಳಿವೆ. ಎಲ್ಲಕ್ಕೂ ಬೃಹತ್ಕಥೆಯ ಮಾದರಿಯಲ್ಲಿ ಒಂದು

ಸೂತ್ರದಿಂದ ಯೋಜನೆಯೂ ಆಗಿದೆ. ದಂಡಿಯು ಕಾಲ ಕನ್ನಡ ಕವಿರಾಜ ಮಾರ್ಗಕಾರನಿಗಿಂತ ಹಿಂದೆಂಬುದು ಖಚಿತ. ಬಾಣನಿಗಿಂತ ಹಿಂದಿನವನೋ ಈಚಿನವನೋ ಹೇಳುವುದು ಕಠಿನ.[33] ಪ್ರಸಿದ್ಧ ಲಕ್ಷಣ ಗ್ರಂಥವಾದ **ಕಾವ್ಯಾದರ್ಶವನ್ನೂ** ಬರೆದ ದಂಡಿಯೂ ದಶಕುಮಾರ ಚರಿತೆಯನ್ನು ಬರೆದ ದಂಡಿಯೂ ಒಬ್ಬನೆಂಬುದೂ ಚರ್ಚಾಸ್ಪದ ವಿಷಯವೇ. ಕಾವ್ಯಾದರ್ಶದಲ್ಲಿ ಗದ್ಯದ ಜೀವಿತವೆಂದಿರುವ ಓಜೋಗುಣವೇ ದಶಕುಮಾರ ಚರಿತೆಯಲ್ಲಿ ಕಡಿಮೆ. ಭಾರವಿಯ ಅಥವಾ ದಾಮೋದರನ ಪೌತ್ರನೇ ದಂಡಿ ಎಂಬ ಐತಿಹ್ಯ 'ಅವಂತಿ ಸುಂದರೀ ಕಥಾಸಾರ'ದಲ್ಲಿ ಬರುತ್ತದೆ. ದಂಡಿಯು ಅಜ್ಜನು ಗಂಗರಾಜ ದುರ್ವಿನೀತ ಮತ್ತು ಪಲ್ಲವರಾಜ ಸಿಂಹವಿಷ್ಣುಗಳ ಆಶ್ರಿತ (ಕ್ರಿ ಶ.೬ ನೆಯ ಶತಮಾನದ ಕಡೆ) ನೆಂದಿರುವುದರಿಂದ ಮೊಮ್ಮಗ ಕ್ರಿ ಶ. ೭ ನೆಯ ಶತಮಾನದ ಕಡೆಯೆನ್ನಬೇಕಾಗುತ್ತದೆ. ಪ್ರಸಿದ್ಧ ಇತಿಹಾಸ ಸಂಶೋಧಕರಾದ ಪ್ರೊ|| ವಿ. ವಿ. ಮಿರಾಶಿಯುವರು ದಶಕುಮಾರ ಚರಿತೆಯ ಅಷ್ಟಮೋಚ್ಛ್ವಾಸದ ವಿಶ್ರುತಚರಿತೆಯಲ್ಲಿ ಪ್ರತಿಪಾದಿತವಾದ ಐತಿಹಾಸಿಕಾಂಶಗಳನ್ನೆಲ್ಲ ಪರಿಶೀಲಿಸಿ ಇದು ವಿದರ್ಭದ ವಾಕಾಟಕರ ಆಳ್ವಿಕೆಯ ಕಡೆಗಾಲಕ್ಕೆ (ಸುಮಾರು ಕ್ರಿ. ಶ. ೫೫೦) ಅನ್ವಯಿಸುವುದರಿಂದ ದಂಡಿಯು ಅನಂತರವೇ ಎಂದರೆ ಸುಮಾರು ಕ್ರಿ.ಶ. ೬೫೦ ರಲ್ಲಿ ಕಾವ್ಯರಚನೆ ಮಾಡಿರಬೇಕೆಂಬ ನಿರ್ಣಯಕ್ಕೆ ಬಂದಿದ್ದಾರೆ.[34]

---

33 ಕಾವ್ಯಾದರ್ಶದ—

'ಅರತ್ನಲೋಕಸಂಹಾರ್ಯಮವಾರ್ಯಂ ಸೂರ್ಯರಶ್ಮಿಭಿಃ |
ದೃಷ್ಟಿರೋಧಕರಂ ಯೂನಾಂ ಯೌವನಪ್ರಭವಂ ತಮಃ ॥'(II 197)

ಎಂಬುವಕ್ಕೂ ಕಾದಂಬರಿಯ—'ಕೇವಲಂ ಚ ನಿಸರ್ಗತ ಏವಾಭಾನುಭೇದ್ಯಮರತ್ನಾಲೋಕೋಚ್ಛೇದ್ಯಮಪ್ರದೀಪಪ್ರಭಾಪನೇಯಮತಿಗಹನಂ ತಮೋ ಯೌವನಪ್ರಭವಮ್' ಎಂಬುದಕ್ಕೂ ಹೋಲಿಕೆ ಸುಸ್ಪಷ್ಟವಾಗಿರುವುದರಿಂದ ಬಾಣನಿಗಿಂತ ದಂಡಿಯೇ ಈಚಿನವನೆನ್ನಲೂ ಅವಕಾಶವಿದೆ ಬಾಣನ ಕೃತಿಗಳನ್ನು ನೋಡಿದ್ದರಿಂದಲೇ ಭಾಮಹನ ಕಥಾ- ಆಖ್ಯಾಯಿಕಾ ನಿಯಮಗಳನ್ನು ದಂಡಿ ಒಪ್ಪಲಿಲ್ಲವೆಂದೂ ಹೇಳಬಹುದು. ದಂಡಿಯು ಇನ್ನೊಂದು ಕೃತಿಯೆನ್ನುವ 'ಅವಂತಿಸುಂದರೀಕಥೆ'ಯಲ್ಲಿಯೂ ಬಾಣಮಯೂರರ ಪ್ರಶಂಸೆ ಬಂದಿದೆ

34. Historical Data in Dandin's Daśakumāracarita, Annals of the Bhandarkar Oriental Research Institute, Vol. XXVI. Part I. pp 20-31.

ಕಾವ್ಯಾದರ್ಶದ ಒಂದು ಶ್ಲೋಕದಲ್ಲಿ ಗೂಢವಾಗಿ 'ಕಾಂಚೀ' ಪಟ್ಟಣದ ಪ್ರಸ್ತಾಪವಿರುವುದರಿಂದ ದಂಡಿಯು ಆ ರಾಜಧಾನಿಯಲ್ಲಿಯೇ ವಾಸಿಸುತ್ತಿದ್ದಿರಬಹುದು.[35] ಅಪೂರ್ಣವಾಗಿರುವ ಮತ್ತು ಅನೇಕ ಗ್ರಂಥಪಾಠಗಳಿರುವ 'ಅವಂತಿಸುಂದರೀ ಕಥೆ'ಯನ್ನು ದಂಡಿಯ ಕೃತಿಯೆಂದು ಕೀತ್ ಮುಂತಾದವರು ಒಪ್ಪುವುದಿಲ್ಲ.

'ದಶಕುಮಾರಚರಿತೆ' ದಂಡಿಯ ಮುಖ್ಯ ಗದ್ಯಕಾವ್ಯ. ಇದರ ಆರಂಭ, ಕಡೆ, ಎರಡೂ ಇತರರು ರಚಿಸಿದ್ದು. ಇವಕ್ಕೆ 'ಪೂರ್ವಪೀಠಿಕೆ' ಮತ್ತು ಉತ್ತರಪೀಠಿಕೆಗಳೆಂಬ ಹೆಸರಿವೆ. ಹಳೆಗನ್ನಡದಲ್ಲಿಯೇ ಇದರ ಅನುವಾದ ಬಂದಿತ್ತು ಕನ್ನಡಿಗರಿಗೆ ಕಥೆಯೇನೂ ಅಪರಿಚಿತವಲ್ಲ. ಪೂರ್ವಪೀಠಿಕೆಯ ಐದು ಅಧ್ಯಾಯಗಳಲ್ಲಿ ದಶಕುಮಾರರ ಜನನ, ಬಾಲ್ಯ, ವಿಯೋಗಗಳು ನಿರೂಪಿತವಾಗಿವೆ. ಅರಣ್ಯದಲ್ಲಿ ರಾಜವಾಹನನಿಂದ ಬೇರೆಯಾದ ಒಬ್ಬೊಬ್ಬರು ಕುಮಾರರೂ ಒಂದೊಂದು ವಿಧದಲ್ಲಿ ಸಾಹಸಮಾಡಿ ಜಯಶೀಲರಾದ ಕಥೆಗಳೇ ಕಾವ್ಯದ ವಸ್ತು. ಕಡೆಗೆಲ್ಲರೂ ಸಂಧಿಸಿದಾಗ ಒಬ್ಬೊಬ್ಬರೂ ಒಂದೊಂದು ಉಚ್ಛ್ವಾಸದಲ್ಲಿ ತಮ್ಮ ಪೂರ್ವಚರಿತೆಯನ್ನೆಲ್ಲ ಹೇಳಿಕೊಳ್ಳುತ್ತಾರೆ. ಹತ್ತು ಕುಮಾರರ ಕಥೆಗಳೂ ಬೇರೆ ಬೇರೆಯೆನ್ನುವುದಷ್ಟೇ ಅಲ್ಲ, ಒಬ್ಬೊಬ್ಬನ ಕಥೆಯಲ್ಲಿಯೂ ಉಪಕಥೆಗಳು, ಉಪಕಥೆಗಳಲ್ಲಿ ಕಥಾಂತರಗಳು-ಹೀಗೆ ಅನೇಕ ಕಥೆಗಳು ಬರುವುದುಂಟು. ಹೀಗೆ ಕಥೆಯಲ್ಲಿ ಕಥೆಯನ್ನು ಗರ್ಭೀಕರಿಸಿ ಹೇಳುವುದು ಬೃಹತ್ಕಥೆ, ಪಂಚತಂತ್ರ, ಕಾದಂಬರಿ, ಮುಂತಾದ ಭಾರತೀಯ ಕಥಾಸಾಹಿತ್ಯದ ಸಂಪ್ರದಾಯವೇ ಆಗಿದ್ದಿತು. ಪಂಚತಂತ್ರದಲ್ಲಿ ಉಪಕಥೆಗಳ ಪ್ರಾಬಲ್ಯದಿಂದ ಮೂಲಕಥೆಯೇ ಮರೆತು ಹೋಗುವುದುಂಟು. ಆದರೆ ದಶಕುಮಾರಚರಿತೆಯಲ್ಲಿ ಕಥೆಯ ಮೂಲಸೂತ್ರ ಎಲ್ಲಿಯೂ ಮರೆಯಾಗುವುದಿಲ್ಲ.

ದಶಕುಮಾರ ಚರಿತೆಯಲ್ಲಿ ಬರುವ ಕಥೆಗಳು ಪೂರ್ಣವಾಗಿ ಐತಿಹಾಸಿ

---

35 ನಾಸಿಕ್ಯಮಧ್ಯಾ ಪರಿತಶ್ಚಾತುರ್ವರ್ಣವಿಭೂಷಿತಾ ।
ಅಸ್ತಿ ಕಾಚಿತ್ಪುರೀ ಯಸ್ಯಾಮಷ್ಟವರ್ಣಾಹ್ವಯಾ ನೃಪಾಃ ॥
ಇಲ್ಲಿ ಸೂಚಿತವಾಗಿರುವ ಪಟ್ಟಣ—ಕಾಂಚೀ, ರಾಜರು—ಪಲ್ಲವರು, ಎಂದು ಟೀಕಾಕಾರನಾದ ತರುಣವಾಚಸ್ಪತಿ ಬರೆದಿದ್ದಾನೆ.

ಕವೂ ಅಲ್ಲ, ಪೌರಾಣಿಕವೂ ಅಲ್ಲ, ಕಲ್ಪಿತವೂ ಅಲ್ಲ. ಎಲ್ಲ ಅಂಶಗಳೂ ಬೇರ್ಪಡಿಸಲಾಗದ ರೀತಿಯಲ್ಲಿ ಸೇರಿಕೊಂಡಿವೆ ವರದಾನದೀ ತೀರದ ಕದಂಬರ ಬನವಾಸಿ, ಮಾಹಿಷ್ಮತಿ, ಮುಂತಾದ ದಕ್ಷಿಣದ ನಗರಗಳೂ ಕುಂತಲ, ಅಶ್ಮಕ, ಋಷೀಕ, ನಾಸಿಕ್ಯ, ಕೊಂಕಣ, ವಿದರ್ಭ ಮುಂತಾದ ದಾಕ್ಷಿಣಾತ್ಯ ಜನಪದಗಳೂ ವಿಶ್ರುತಚರಿತೆಯಲ್ಲಿ ಬರುವುದನ್ನು ಚಾರಿತ್ರಿಕ ಘಟನೆಗಳೊಡನೆ ಸಮನ್ವಯಮಾಡಲು ಪ್ರಯತ್ನಗಳು ನಡೆದಿವೆ.[36] ಆದರೆ ಇಲ್ಲಿ ಅನೇಕ ಅತಿಮಾನುಷ ಅದ್ಭುತ ಘಟನೆಗಳೂ ನಡೆಯುತ್ತವೆ. ಪಾತ್ರ ಗಳೆಲ್ಲವೂ ವ್ಯಾವಹಾರಿಕ ಸಮಾಜದ ಲೋಪದೋಷಗಳಿಂದ ತುಂಬಿದವ ರಾಗಿಯೇ ಇದ್ದಾರೆ.

ಹತ್ತು ಕಥೆಗಳೂ ಬೇರೆ ಬೇರೆಯಾದರೂ ಎಲ್ಲ ಕಥೆಗಳಿಗೂ ಸಮಾನ ವಾದ ಒಂದು ಅಂಶವೆಂದರೆ ಇದು—ಪ್ರತಿಯೊಬ್ಬ ರಾಜಕುಮಾರನೂ ನಿರ್ಗತಿಕನಾಗಿ, ನಿಸ್ಸಹಾಯನಾಗಿ, ಜೀವನರಂಗದಲ್ಲಿ ಕಾಲಿಡುತ್ತಾನೆ. ಪ್ರತಿ ಯೊಬ್ಬನಿಗೂ ಅಸಾಧಾರಣವಾದ ರೂಪ, ಪರಾಕ್ರಮ, ಮತ್ತು ಬುದ್ಧಿಗಳು ಮಾತ್ರ ದೈವದತ್ತವಾಗಿಯೇ ಬಂದಿರುತ್ತವೆ. ಈ ಬುದ್ಧಿಬಲದಿಂದಲೇ ಪ್ರತಿ ಯೊಬ್ಬ ರಾಜಕುಮಾರನೂ ಕೆಲವೇ ವರ್ಷಗಳಲ್ಲಿ ಒಂದು ರಾಜ್ಯಕ್ಕೆ ಒಡೆಯ ನಾಗುವುದಲ್ಲದೆ, ಒಬ್ಬ ರಾಜಕುಮಾರಿಯ ಪಾಣಿಗ್ರಹಣವನ್ನೂ ಮಾಡುತ್ತಾನೆ. ಇವರೆಲ್ಲರಿಗೂ ಗುರಿಯನ್ನು ಸಾಧಿಸಬೇಕೆಂಬ ಮಹೋತ್ಸಾಹವಿರುವುದೇ ಹೊರತು, ಸಾಧನಗಳ ಸಾಧುತ್ವದ ಬಗೆಗೆ ವಿವೇಚನೆಯಿಲ್ಲ. 'ಯೇನಕೇನಾ ಪ್ಯುಪಾಯೇನ' ಎಂಬುದೇ ಇವರ ಮೂಲಮಂತ್ರ. ಅಂತೆಯೇ ಇವರು ಸಮಯಾನುಸಾರ ಜಾರರಾಗುತ್ತಾರೆ, ಚೋರರೂ ಆಗುತ್ತಾರೆ, ಜೂಜಾಡು ತ್ತಾರೆ, ಮತ್ತು ಮದ್ಯಪಾಯಿಗಳಾಗುತ್ತಾರೆ. ಸುಳ್ಳಿಗೆ ಹಿಂಜರಿಯುವುದಿಲ್ಲ, ಕಗ್ಗೊಲೆಗೂ ಹೇಸುವುದಿಲ್ಲ. ಯಾವ ಅಪಾಯವನ್ನಾದರೂ ಧೈರ್ಯದಿಂದ ಎದುರಿಸುತ್ತಾರೆ, ಯಾವ ಸಾಹಸಕ್ಕಾದರೂ ಹಿಂದೆ ಮುಂದೆ ನೋಡದೆ ಮುನ್ನುಗ್ಗುತ್ತಾರೆ. ಒಟ್ಟಿನಲ್ಲಿ ಅವರ ಬುದ್ಧಿಬಲದ ಜತೆಗೆ ದೈವಬಲವೂ ಸೇರಿಕೊಳ್ಳುತ್ತದೆ, ತಮ್ಮ ಧ್ಯೇಯಗಳನ್ನು ಸಾಧಿಸಿಕೊಳ್ಳುತ್ತಾರೆ.

ಕಥಾವಸ್ತುವಿನ ಸಂಯೋಜನೆಯಲ್ಲಿ ವಾಸ್ತವಿಕ ವೃತ್ತಾಂತಗಳೊಂದಿಗೆ.

---

36. ಮೇಲೆ 34 ನೆ ಟಿಪ್ಪಣಿಯನ್ನು ನೋಡಿ

ಅತಿಮಾನುಷ ಘಟನೆಗಳೂ ಹಾಸುಹೊಕ್ಕಾಗಿ ಹೆಣೆದುಕೊಳ್ಳುತ್ತವೆ. ಸ್ವಾಭಾವಿಕತೆಯು ಅದ್ಭುತಾರ್ಥಗಳೊಂದಿಗೆ ಸಮ್ಮಿಳಿತವಾಗುತ್ತದೆ. ಯಕ್ಷಯಕ್ಷಿಣಿಯರು, ಬ್ರಹ್ಮರಾಕ್ಷಸರು, ಸಿದ್ಧರು, ವಿದ್ಯಾಧರರು–ಎಲ್ಲರೂ ಮನುಷ್ಯರ ವಿದ್ಯಮಾನಗಳಲ್ಲಿ ಗಮನಾರ್ಹವಾದ ಪಾತ್ರಗಳನ್ನು ವಹಿಸುತ್ತಾರೆ. ಬೆಳ್ಳಿಯ ಸಂಕೋಲೆ ಹೋಗಿ ಅಪ್ಸರಸ್ತ್ರೀಯಾಗಿ ಪರಿಣಮಿಸುವುದೂ, ಕಾಡಿನ ಮರದ ಕೆಳಗೆ ಮಲಗಿದ ರಾಜಕುಮಾರನು ಯಕ್ಷಿಣಿಯ ಸಹಾಯದಿಂದ ರಾಜಕನ್ಯೆಯ ಮಂಚದಲ್ಲಿರುವುದೂ, ಕೇಳಿದ್ದನ್ನು ಕೊಡುವ ಮಣಿ, ಮಂತ್ರ, ಔಷಧಿಗಳ ಪ್ರಭಾವದಿಂದ ಅತಿಮಾನುಷ ಕಾರ್ಯಗಳನ್ನೆಸಗುವುದೂ, ಜನ್ಮಾಂತರಗಳ ಸ್ಮರಣೆಯಾಗುವುದೂ, ಇಂದ್ರಜಾಲ, ಶಾಪ, ವರ, ಮುಂತಾದುವುಗಳ ಅಘಟಿತ ಘಟನಾ ಸಾಮರ್ಥ್ಯವೂ ಈ ಕಥೆಗಳಿಗೆ ಹಿನ್ನೆಲೆಯಾದ ಸಾಮಗ್ರಿಗಳು. ಈ ಹಿನ್ನೆಲೆಯಲ್ಲಿ ಸತ್ಯಾಂಶಗಳಿಗೂ ಅದ್ಭುತ ಘಟನೆಗಳಿಗೂ ಅಂತರವೇ ಅಳಿಸಿಹೋಗಿ ಒಂದು ಕೇವಲ ರಮಣೀಯವಾದ ಕಾಲ್ಪನಿಕ ಪ್ರಪಂಚವು ಸೃಷ್ಟಿಯಾಗುತ್ತದೆ. ಈ ಕಾಲ್ಪನಿಕ ಕಾವ್ಯಪ್ರಪಂಚದಲ್ಲಿ ರಮಣಿಯರೆಲ್ಲ ತ್ರಿಲೋಕ ಸುಂದರಿಯರೇ, ಜಗನ್ಮೋಹಿನಿಯರೇ, ಶೃಂಗಾರಲಹರೀ ವಿಹಾರಿಣಿಯರೇ. ಕುಮಾರರೆಲ್ಲ ಮನ್ಮಥರೇ, ಅಸಮಸಾಹಸಿಗಳೇ. ಅವರ ಅದ್ಭುತ ಸಾಹಸಕ್ಕೆ ಸುಂದರಿಯರು ಸೋಲುವುದು ಸ್ವಾಭಾವಿಕವಾಗಿಯೇ ತೋರುತ್ತದೆ, ಅವರಿಗೆ ಒದಗುವ ಅನಿರೀಕ್ಷಿತ ದೈವಸಹಾಯವೂ ಅನುಚಿತವೆನಿಸುವುದಿಲ್ಲ.

ಶೃಂಗಾರರಸದಂತೆಯೇ ನಾಯಕರ ಸಾಹಸೋದ್ಯಮಗಳಿಂದ ಹೊಮ್ಮುವ ವೀರರಸಕ್ಕೂ ಈ ಕಥೆಗಳಲ್ಲಿ ಮುಖ್ಯ ಸ್ಥಾನವಿದೆ. ಶ್ರಾವಸ್ತಿ, ಚಂಪಾ, ಕುಸುಮಪುರ, ಮೊದಲಾದ ನಗರಗಳೇ ಕುಮಾರರ ಕಾರ್ಯಕ್ಷೇತ್ರಗಳು, ರಾಜರನ್ನುರುಳಿಸುವ ಸಂಚುಗಳಿಗೆಲ್ಲ ಸೂಳೆಗೇರಿಗಳೇ ನೆಲೆಗಳು. ಕುಮಾರರ ಕಪಟತಂತ್ರದ ನಿರ್ವಹಣೆಗೆಲ್ಲ ಸ್ತ್ರೀಯರ ಸೂಕ್ಷ್ಮಬುದ್ಧಿ ಮತ್ತು ಸಹಾಯಗಳೇ ಸಾಧನಗಳು. ಕುಮಾರರು ಕುಮಾರ್ಗಕ್ಕಿಳಿದರೂ ಅವರ ವೈರಿಗಳು ಸ್ವಭಾವತಃ ಪರಮ ನೀಚರೆಂದೂ ಅಧರ್ಮಪರಾಯಣರೆಂದೂ ದೈವಹತರೆಂದೂ ವರ್ಣಿತರಾಗಿರುವುದರಿಂದ ಮತ್ತು ಕುಮಾರರ ಉದ್ದೇಶಗಳು ಶ್ಲಾಘನೀಯಗಳಾಗಿರುವುದರಿಂದ, ಅವರ ವಿಷಯದಲ್ಲಿ ನಮ್ಮ ಸಹಾನುಭೂತಿ ತಗ್ಗುವುದಿಲ್ಲ.

ದಂಡಿ ಹಾಸ್ಯರಸದ ಪ್ರತಿಪಾದನೆಯಲ್ಲಿಯೂ ಸಿದ್ಧಹಸ್ತನೆಂಬುದು ಈ ಕಥೆಗಳಿಂದ ವ್ಯಕ್ತವಾಗುತ್ತದೆ. ಸಂನ್ಯಾಸಿಗಳನ್ನು ಕೂಡ ತಮ್ಮ ಬಲೆಯಲ್ಲಿ ಬೀಳಿಸಿಕೊಳ್ಳುವ ಸೂಳೆಯರು, ರಾಜನಿಗೆ ಕಟುನಿಯಮಗಳನ್ನು ಬೋಧಿಸಿ ತಮ್ಮ ಹೊಟ್ಟೆಯನ್ನು ಬೆಳೆಸಿಕೊಳ್ಳುವ ಮಂತ್ರಿಗಳು, ಜೂಜು, ಕಳ್ಳತನ, ವ್ಯಭಿಚಾರ, ಮುಂತಾದ ಅಸಾಮಾಜಿಕ ಉದ್ಯೋಗಗಳಿಂದಲೇ ಸಭ್ಯ ಜೀವನ ನಡೆಸುವ ಪ್ರಚಂಡರು, ಇವೇ ಮೊದಲಾದವರ ವರ್ಣನೆಗಳಲ್ಲಿ ದಂಡಿಯ ಮೃದು ಹಾಸ್ಯದಂತೆ ಸಮಾಜದ ದೋಷಗಳನ್ನು ತಿದ್ದುವ ದೃಷ್ಟಿಯೂ ಕಂಗೊಳಿಸುತ್ತದೆ. ಹೀಗೆ ಸಂಸ್ಕೃತ ಸಾಹಿತ್ಯದಲ್ಲಿ ಸಮಾಜದ ನೀಚವರ್ಗದವರ ವಾಸ್ತವಿಕ ಚಿತ್ರಣ ಅನ್ಯತ್ರ ಸಿಕ್ಕುವುದಿಲ್ಲ. ಒಂದೆಡೆ ಕಥೆಯಲ್ಲಿ ವಿಲಾಸದ ವಿಕಾಸ ಕಂಡರೆ ಇನ್ನೊಂದೆಡೆ ದಂಡಿಯ ಮಂದಹಾಸವು ಮಾನಸವನ್ನು ಪರವಶಗೊಳಿಸುತ್ತದೆ

ಹೀಗೆ ದಂಡಿಯಲ್ಲಿ ಸುಬಂಧು ಬಾಣರಲ್ಲಿಲ್ಲದ ಅನೇಕ ರಸಗಳ ಸಮಾವೇಶವಿದೆ ಅದ್ಭುತಾಂಶಗಳಿದ್ದರೂ ವಾಸ್ತವಿಕತೆಗೆ ಹೆಚ್ಚಿನ ಅಭಿವ್ಯಕ್ತಿ ಸಿಕ್ಕಿದೆ. ಕಾವ್ಯಾಂಶ ಕಡಿಮೆಯಾದರೂ, ಕಥಾಸ್ವಾರಸ್ಯ ಅಧಿಕವಾಗಿದೆ. ಸುಬಂಧುವಿನ ವಿಜಯದುಂದುಭಿಯಾದ ಪ್ರತ್ಯಕ್ಷರಶ್ಲೇಷಮಯ ಪ್ರಪಂಚ ದಂಡಿಯದಲ್ಲ, ಬಾಣನ ವೈಶಿಷ್ಟ್ಯವಾದ ಕಲ್ಪನಾನುಪ್ರಾಣಿತ ಅಸಾಧಾರಣ ಶೃಂಗಾರ ಲೋಕವೂ ದಂಡಿಗೆ ದೂರ. ದಂಡಿಯಲ್ಲಿ ಶಬ್ದಪ್ರೌಢಿಮೆ ಕಡಿಮೆ, ಅರ್ಥ ವೈದಗ್ಧ್ಯ ಅಲ್ಪ, ವರ್ಣನಾವಿಸ್ತಾರ ವಿರಲ 'ಮೃಚ್ಛಕಟಿಕ' ನಾಟಕದ ಪಾತ್ರಗಳಂತೆ ಹಲವು ಹದಿನೆಂಟು ಬಗೆಯ ವಾಸ್ತವಿಕ ಸಮಾಜದ ವ್ಯಕ್ತಿಗಳ ದೈನಂದಿನ ವ್ಯಾಪಾರಗಳಿಗೇ ಇಲ್ಲಿ ಪ್ರಾಶಸ್ತ್ಯ. ಸಂಸ್ಕೃತದ ಗಾದೆಗಳ ಸಂಗ್ರಹವೂ ಇಲ್ಲಿ ವಿಶೇಷವಾಗಿ ಬರುತ್ತದೆ. ಸುಂದರವೂ, ಸುಬೋಧವೂ, ಲಲಿತವೂ ಆದ ಗದ್ಯ ಶೈಲಿಗೆ ದಂಡಿಯೇ ಪ್ರಥಮಾಚಾರ್ಯ. ದಂಡಿಯೂ ಗದ್ಯ 'ಕಾವ್ಯ' ವನ್ನೇ ಬರೆದಿರುವುದರಿಂದ, ಇವನಲ್ಲಿ ಶ್ಲೇಷಾದಿ ದುಷ್ಕರಾಲಂಕಾರಗಳು ಕಡಿಮೆಯಾದರೂ ಉಪಮಾದಿ ಸರಳ ಅಲಂಕಾರಗಳೂ ಸಮಾಸಗಳೂ ಇದ್ದೇ ಇರುತ್ತವೆ. ವರ್ಣನೆಗಳು ಸಣ್ಣವಾದರೂ, ವರ್ಣನಾಕಾಲದಲ್ಲಿ ಬಾಣಾದಿಗಳ ಮಾರ್ಗಾನುಸರಣೆಯುಂಟು. ಇದು ಸಂಜೆಯ ವರ್ಣನೆಯ ಉದಾಹರಣೆ :—

. ಅಸ್ತಗಿರಿಕೂಟಪಾತಕ್ಷುಭಿತಶೋಣಿತ ಇವ ಶೋಣೀಭವತಿ ಭಾನುಬಿಂಬೇ, ಪಶ್ಚಿಮಾಂಬುಧಿಪಯಃಪಾತನಿರ್ವಾಪಿತಪತಂಗಾಂಗಾರ ಧೂಮಸಂಭಾರ ಇವ ಭರಿತತಮಸಿ ನಭಸಿ ವಿಜೃಂಭಿತೇ, ಪರದಾರಪರಾಮರ್ಶೋನ್ಮುಖಸ್ಯ ಮಮಾಚಾರ್ಯಕಮಿವ ಕರ್ತುಮುತ್ಥಿತೇ ಗುರುಪರಿಗ್ರಹಶ್ಲಾಘಿನಿ ಗ್ರಹಾಗ್ರೇಸರೇ ಕ್ಷಪಾಕರೇ, ಕಲ್ಪಸುಂದರೀವದನಪುಂಡರೀಕೇಣೇವ ಮದ್ದರ್ಶನಾತಿರಾಗಪ್ರಥಮೋಪನತೇನ ಸ್ಮಯಮಾನೇನ ಚಂದ್ರಮಂಡಲೇನ ಸಂಧುಕ್ಷಮಾಣತೇಜಸಿ ಭುವನವಿಜಿಗೀಷೋದ್ಯತೇ ದೇವೇ ಕುಸುಮಧನ್ವನಿ ...

(ಮೂರನೆಯ ಉಚ್ಛ್ವಾಸ, ಉಪಹಾರವರ್ಮಚರಿತ)

[ಅಸ್ತಾಚಲದಿಂದ ಬಿದ್ದಾಗ ಗಾಯವಾಗಿ ಸುರಿದ ರಕ್ತದಿಂದಲೋ ಎಂಬಂತೆ ಸೂರ್ಯಬಿಂಬವು ಕೆಂಪಾಯಿತು ಪಶ್ಚಿಮಾಂಬುಧಿಯ ನೀರಿನಲ್ಲಿ ಬಿದ್ದು ನಂದಿದ ರವಿಯೆಂಬ ಕೆಂಡದ ಇದ್ದಿಲಿನಿಂದೇಳುವ ಹೊಗೆಯ ಮೊತ್ತವೋ ಎಂಬಂತೆ ಕಗ್ಗತ್ತಲೆಯು ಆಕಾಶದಲ್ಲೆಲ್ಲ ವಿಜೃಂಭಿಸಿತು. ಪರಸ್ತ್ರೀ ಸಮಾಗಮಕ್ಕೆ ಹೊರಟ ನನಗೆ ಪೌರೋಹಿತ್ಯ ಮಾಡಲೋ ಎಂಬಂತೆ ಗುರುಪತ್ನೀರಮಣನಾದ ಗ್ರಹಾಗ್ರೇಸರ ಸುಧಾಕರನು ಮೂಡಿದನು. ನನ್ನ ದರ್ಶನದಿಂದ ಹುಟ್ಟಿದ ಪ್ರಥಮಾನುರಾಗದಿಂದ ಕೆಂಪೇರಿದ ಕಲ್ಪಸುಂದರಿಯ ವದನಪುಂಡರೀಕದಿಂದ ಹಾಸ್ಯಮಾಡಲ್ಪಟ್ಟ ಚಂದ್ರಮಂಡಲದ ಮೂಲಕ ತ್ರಿಭುವನವಿಜಯಕ್ಕೆಂದು ಜಾಜ್ವಲ್ಯಮಾನನಾಗಿ ಮನ್ಮಥಚಕ್ರವರ್ತಿ ಹೊರಟನು.]

ಬಾಣಸುಬಂಧುಗಳಿಗೂ ದಂಡಿಗೂ ಶ್ಲೇಷೆಯೊಂದನ್ನು ಬಿಟ್ಟರೆ ಬೇರಾವ ಗಮನಾರ್ಹ ವ್ಯತ್ಯಾಸವೂ ಇಲ್ಲ—ಶೈಲಿಯಲ್ಲಿ. 'ಉಪಮಾ ಕಾಳಿದಾಸಸ್ಯ' ಎಂಬಂತೆ 'ದಂಡಿನಃ ಪದಲಾಲಿತ್ಯಂ' ಎನ್ನುವ ಪ್ರಾಚೀನ ಸೂಕ್ತಿಯುಂಟು. ಇದಕ್ಕೆ ಬಾಣನಲ್ಲಿಲ್ಲದ ಪದಲಾಲಿತ್ಯ ದಂಡಿಯಲ್ಲುಂಟೆಂಬ ಅಪಾರ್ಥಮಾಡುವುದಕ್ಕಿಂತ ಇದನ್ನು ಪರುಷವಾದ ಓಷ್ಠ್ಯವರ್ಣಗಳೇ ಬಾರದಂತೆ ಇಡಿಯ ಒಂದು ಉಚ್ಛ್ವಾಸವನ್ನೇ ಬರೆದ ದಂಡಿಯ ವೈಶಿಷ್ಟ್ಯದ ಪ್ರಶಂಸೆಯೆಂದು ತಿಳಿಯುವುದು ಯುಕ್ತತರವೆನಿಸುತ್ತದೆ. ಹೀಗೆ ಬರೆಯಲು ಕವಿಯು ಕಾರಣವೂ ಸ್ವಾರಸ್ಯವಾಗಿದೆ—ಆ ಕುಮಾರನಿಗೆ ಪ್ರೇಯಸಿಯು

ಪ್ರೇಮಾವೇಶದ ಚುಂಬನಕಾಲದಲ್ಲಿ ದಂತಕ್ಷತದ ಪರಿಣಾಮವಾಗಿ ತುಟಿಗಳನ್ನು ಕೂಡಿಸುವುದೇ ಕಷ್ಟವಾಗಿದ್ದಿತಂತೆ! 'ಕವಿರ್ದಂಡೀ ಕವಿರ್ದಂಡೀ ಕವಿರ್ದಂಡೀ ನ ಸಂಶಯಃ' ಎಂದು ಸರಸ್ವತಿಯ ಬಾಯಿಂದಲೇ ಮೂರು ಸಾರಿ ನುಡಿಸಿರುವ ಪೂರ್ವಿಕರ ದೃಷ್ಟಿಯಲ್ಲಿ ದಂಡಿಯ ಬಗೆಗೆ ಹೆಚ್ಚಿನ ಆದರಾತಿಶಯಗಳಿದ್ದುವೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಅಂದಿನಂತೆ ಇಂದಿನ ವಿಮರ್ಶಕರಿಂದಲೂ ದೊಡ್ಡ ಪ್ರಶಸ್ತಿಯನ್ನು ಗಳಿಸಿರುವ ಸಂಸ್ಕೃತ ಗದ್ಯಕಾರನೆಂದರೆ ದಂಡಿಯೊಬ್ಬನೇ.

ಸಂಸ್ಕೃತ ಗದ್ಯಕಾವ್ಯದ ರತ್ನತ್ರಯರು ಈ ಮೂವರೇ—ಸುಬಂಧು ಬಾಣ ಮತ್ತು ದಂಡಿ. ಇವರಾದ ಮೇಲೆ ಹುಟ್ಟಿದ ಅನುಕರಣೆಗಳಲ್ಲಿ ಧನಪಾಲನ 'ತಿಲಕಮಂಜರೀ', (ಸು. ಕ್ರಿ. ಶ. ೧೦೦೦) ಸೋಡ್ಢಲನ 'ಉದಯಸುಂದರೀಕಥೆ' (ಸು. ೧೦೫೦), ವಾದೀಭಸಿಂಹನ 'ಗದ್ಯಚಿಂತಾಮಣಿ' (ಕ್ರಿ.ಶ. ೧೨ ನೆಯ ಶತಮಾನ), ವಾಮನನ 'ವೇಮಭೂಪಾಲ ಚರಿತ' (ಕ್ರಿ. ಶ. ೧೫ ನೆಯ ಶತಮಾನ) ಗಳು ಉಕ್ತಿಯೋಗ್ಯವಾಗಿವೆ. ಇವುಗಳಲ್ಲಿ ರತ್ನತ್ರಯರಲ್ಲಿಲ್ಲದ ಸ್ವಾರಸ್ಯವನ್ನು ಕಾಣುವುದು ಶಕ್ಯವಿಲ್ಲ ಅಭಿನವ ಬಾಣಭಟ್ಟನೆಂದುಕೊಳ್ಳುವ ವಾಮನಭಟ್ಟನು ಹದಿನೈದನೆಯ ಶತಮಾನದಲ್ಲಿ ಉದಾಹರಿಸಿರುವ ವಿಮರ್ಶೆ ಪ್ರಾಯಃ ಇಂದಿಗೂ ಅನ್ವಯಿಸುವಂತೆಯೇ ಇದೆ:—ಸರಸಗದ್ಯ ಸರಣಿಯಲ್ಲಿ ಬಾಣಕವೀಂದ್ರನನ್ನು ಬಿಟ್ಟರೆ ಉಳಿದವರೆಲ್ಲರೂ ಕುರುಡರೇ :—

**'ಬಾಣಕವೀಂದ್ರಾದನ್ಯೇ ಕಾಣಾಃ ಖಲು ಸರಸಗದ್ಯಸರಣೀಷು'**



# ಅಧ್ಯಾಯ ೯

## ಚಂಪೂಕಾವ್ಯಗಳು

“ ಗದ್ಯಪದ್ಯಮಯೀ ಕಾಚಿಚ್ಚಂಪೂರಿತ್ಯಭಿಧೀಯತೇ ”
(ಕಾವ್ಯಾದರ್ಶ I. 31)

ಎಂಬ ಲಕ್ಷಣವನ್ನು ದಂಡಿಯೇ ಹೇಳಿದ್ದಾನೆ. ಗದ್ಯಕಾವ್ಯ ಮತ್ತು ಪದ್ಯಕಾವ್ಯ ಗಳೆರಡರ ಮಿಶ್ರಣವೂ ಇರುವ ಪ್ರಬಂಧವೇ ಚಂಪೂಕಾವ್ಯವೆಂದರ್ಥ. ಗದ್ಯಕಾವ್ಯವೆಂದರೆ ಸಾಲಂಕಾರವಾದ ಸಮಾಸಭೂಯಿಷ್ಠವಾದ ರಚನೆ ಯೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಪದ್ಯಕಾವ್ಯದ ವಿಭಿನ್ನ ಸರಣಿಗಳನ್ನೂ ಮೊದಲೇ ಕಾಳಿದಾಸ, ಶ್ರೀಹರ್ಷಾದಿಗಳಲ್ಲಿ ಪರಿಶೀಲಿಸಿದ್ದೇವೆ. ಈ ಗುಣಗಳು ಹರಿಷೇಣನ ಸಮುದ್ರಗುಪ್ತಪ್ರಶಸ್ತಿಯಲ್ಲಿ (ಕ್ರಿ. ಶ. ೩೫೦) ಆಗಲೇ ಕಾಣುವುವೆಂಬುದನ್ನೂ ಗಮನಿಸಿದ್ದೇವೆ. ಅದಕ್ಕೆ ಇಂದಿನ ಸಂಶೋಧಕರು ‘ಪ್ರಶಸ್ತಿಕಾವ್ಯ’ವೆಂಬ ಹೊಸ ಹೆಸರನ್ನೇ ಕೊಟ್ಟಿರುವ ರಾದರೂ, ಲಾಕ್ಷಣಿಕರ ಕಾವ್ಯವಿಭಾಗದ ರೀತ್ಯಾ ಚಂಪೂಕಾವ್ಯವೆಂಬ ನಾಮಧೇಯವೇ ಸಮಂಜಸವಾಗುತ್ತದೆ. ಹೀಗೆ ದಂಡಿ ಮತ್ತು ದಂಡಿಗೆ ಪೂರ್ವದಲ್ಲಿಯೇ ಸಂಸ್ಕೃತದಲ್ಲಿ ಚಂಪೂಪ್ರಯೋಗಗಳಿದ್ದುವೆಂದು ಹೇಳ ಬಹುದಾಗಿದೆ. ಜಾತಕ ಕಥೆಗಳು, ಪಂಚತಂತ್ರ ಮುಂತಾದುವುಗಳಲ್ಲಿ ಗದ್ಯ ಪದ್ಯಗಳ ಮಿಶ್ರಣವಿದ್ದರೂ, ಕಾವ್ಯಸೌಂದರ್ಯದ ದೃಷ್ಟಿಯ ಬದಲು ಇತರ ದೃಷ್ಟಿಗಳೇ ಅಧಿಕವಾಗಿರುವ ಕಾರಣ, ಅವು ‘ಚಂಪೂ’ ಎಂಬ ಕಾವ್ಯಜಾತಿಗೆ ಸೇರಲಾರವು. ಅವುಗಳು ಮುಂದಿನ ಚಂಪೂಕಾವ್ಯಗಳಿಗೆ ಮೂಲವೆಂದು ಭಾವಿಸುವುದೂ ಸರಿಯಲ್ಲ. ಪೂರ್ವದ ಚಂಪೂಪ್ರಬಂಧಗಳು ಕಾಲಮಹಿಮೆ ಯಿಂದ ಲುಪ್ತವಾಗಿವೆಯೆನ್ನಬೇಕು. ಈಗ ಉಪಲಬ್ಧವಿರುವ ಆದ್ಯ ಚಂಪೂ ಕಾವ್ಯಗಳು ಹತ್ತನೆಯ ಶತಮಾನದ ಕರ್ಣಾಟಕದ ಕವಿಗಳ ಕೃತಿಗಳಾಗಿರು ವುದರಿಂದಲೂ, ಮುಂದೂ ದಾಕ್ಷಿಣಾತ್ಯರಿಂದಲೇ ಈ ಬಗೆಯ ಪ್ರಬಂಧಗಳು

ಹೆಚ್ಚು ರಚಿತವಾಗಿರುವುದರಿಂದಲೂ, ಅಚ್ಚಗನ್ನಡದ ಇಂಪು, ಅಲಂಪು, ಸೊಂಪು, ಕಂಪು ಮುಂತಾದ ಶಬ್ದಗಳೊಡನೆ 'ಚಂಪು' ಎಂಬ ಶಬ್ದವು ಶ್ರುತಿ ಸಾಮ್ಯವನ್ನು ಪಡೆದಿರುವುದರಿಂದಲೂ, ಪ್ರೊ॥ ರಂ. ಶ್ರೀ. ಮುಗಳಿಯವರು 'ಚಂಪು' ವೆಂಬುದು ಕನ್ನಡ ಶಬ್ದವಾಗಿದ್ದಿರಬೇಕೆಂದೂ, ಆ ಬಗೆಯ ಕಾವ್ಯ ಕನ್ನಡದಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ಕಾರಣ ಸಂಸ್ಕೃತದವರೂ ಆ ಕಾವ್ಯಜಾತಿಯಂತೆ ಅದರ ಹೆಸರನ್ನೂ ಕನ್ನಡಿಗರಿಂದಲೇ ಎತ್ತಿಕೊಂಡಿರಬಹು ದೆಂದೂ ಊಹಿಸಿದ್ದಾರೆ.[1] ಸಂಸ್ಕೃತದಲ್ಲಿ ಈ ಶಬ್ದಕ್ಕೆ ಸಮಂಜಸವಾದ ವ್ಯುತ್ಪತ್ತಿ ಹೇಳುವುದು ಅಶಕ್ಯವೆಂದು ವಿದ್ವಾಂಸರು ಒಪ್ಪುವವರೆಗೆ ಈ ಊಹೆ ಯನ್ನು ನಿರ್ಣಯವೆನ್ನುವಂತಿಲ್ಲ. ಸಂಸ್ಕೃತದ ಧಾತುಪಾಠದಲ್ಲಿ ಗತ್ಯರ್ಥಕದ ಚಪ್ ← ಚಂಪ್ ಧಾತುವಿದೆ. ಇದರ ರೂಪವನ್ನು 'ಚಂಪತಿ', 'ಚಂಪಯತಿ' ಎಂದು ಮುಂತಾಗಿ 'ಸಿದ್ಧಾಂತಕೌಮುದಿ'ಯಲ್ಲಿ ತೋರಿಸಿದೆ. ವಚನಾರ್ಥದ √ಗದ್, √ಪದ್ ಎಂಬ ಧಾತುಗಳಿಂದ ಗದ್ಯ, ಪದ್ಯ ಎಂಬ ರೂಪಗಳ ನಿರ್ವಚನ ಸಾಧ್ಯವಿರುವಂತೆಯೇ √ಚಪ್ ಧಾತುವಿನಿಂದ 'ಚಂಪೂ' ಅಥವಾ 'ಚಂಪು' ಎಂಬ ರೂಪಗಳನ್ನು ಸಾಧಿಸಲು ಸಾಧ್ಯವಿದೆ ಗದ್ಯ, ಪದ್ಯ ಗಳೆರಡರ 'ಕೂಡಿಸುವಿಕೆ' ಯನ್ನು ಮಾತ್ರ ತೋರಿಸುವ ಮೂರನೆಯ ಶಬ್ದ ಬೇಕಾದ್ದರಿಂದ, ಸಂಸ್ಕೃತ ಪಂಡಿತರು ವಚನಾರ್ಥದ ಧಾತುವಿನ ಬದಲು ಗತ್ಯರ್ಥಕ ಧಾತುವೊಂದನ್ನು ಉದ್ದೇಶಪೂರ್ವಕವಾಗಿಯೇ ಆರಿಸಿಕೊಂಡರೆಂದೂ ಹೇಳಲವಕಾಶವಿದೆ. ಕನ್ನಡಿಗನಾದ ಚೆನ್ನವೀರ ಕವಿಯು ತನ್ನ 'ಕಾಶಕೃತ್ಸ್ನ ಶಬ್ದಕಲಾಪಧಾತುಪಾಠ'ದಲ್ಲಿ ಕೂಡ "ಚಂಪಯತಿ = ಹೊರೆದಪುದು" ಎಂದು ಬರೆದು "ಚಂಪಾ = ಏಕೋರಾಮೇಶ್ವರಕ್ಷೇತ್ರಂ, ಚಂಪಕಃ = ಮರಂ" ಎಂಬ ಎರಡು ರೂಪಗಳನ್ನೂ ತೋರಿಸಿದ್ದಾನೆ.[2] ಹೀಗೆ ಆ ಧಾತುವಿಗೆ ಉದ್ದಿಷ್ಟಾರ್ಥ ವನ್ನು ಕಲ್ಪಿಸುವುದು ಅಶಕ್ಯವೆಂದು ನಮಗೆ ತೋರುವುದಿಲ್ಲ. ದಂಡಿ, ನೈಷಧಕಾರ, ಮುಂತಾದವರು "ಚಂಪೂ" ಎಂಬ ದೀರ್ಘಾಂತ ಪದವನ್ನು ಪ್ರಯೋಗಿಸಿದರೆ, ಭಾರತಚಂಪುವನ್ನು ಬರೆದ ಅನಂತಭಟ್ಟನು "ಚಂಪು" ಎಂಬ ಹ್ರಸ್ವಾಂತ ಪ್ರಯೋಗವನ್ನು ಮಾಡಿದ್ದಾನೆ.

---

1. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ—ಸಂಪುಟ—XXVI.

2. ಡಾ॥ ಎ. ಎನ್. ನರಸಿಂಹಯ್ಯನವರ ಪರಿಷ್ಕರಣ (ಪೂನಾ. 1952).

**ದಿಗಂತರಲಸತ್ಕೀರ್ತಿರನಂತಕವಿಕುಂಜರಃ ।**
**ಪ್ರಾಣೈಸ್ತುಲ್ಯಂ ಸರಸ್ವತ್ಯಾಃ ಪ್ರಾಣೈಷೀಚ್ಚಂಪುಭಾರತಮ್॥**[3]

ಎಂಬ ಶ್ಲೋಕದಲ್ಲಿ ಪಂಚಮಾಕ್ಷರವು ಗುರುವಾಗುವಂತೆಯೇ ಇಲ್ಲ. ದ್ರೌಪದೀ ಪರಿಣಯಚಂಪುವನ್ನು ಬರೆದ ಚಕ್ರಕವಿ—"ಶಾರದಾಜಯಕಂಬು ದ್ರೌಪದೀ ಪರಿಣಯಚಂಬುಃ" ಎಂದು ಕಂಬು-ಚಂಬುಗಳಿಗೆ ಪ್ರಾಸವನ್ನು ತಂದಿದ್ದಾನೆ, ಪಕಾರವನ್ನು ಬಕಾರಮಾಡಿ.[4] ಇದನ್ನು ಪ್ರಾಸನಿರ್ಬಂಧದ ವಿಪರ್ಯಸ್ತರೂಪವೆನ್ನುವಂತೆ 'ಚಂಪು'ವೆಂಬ ಪ್ರಯೋಗವನ್ನೂ ಪರಿಗಣಿಸಬೇಕು ಅಥವಾ ಎರಡು ರೂಪಗಳೂ ಪ್ರಚಾರದಲ್ಲಿದ್ದುವೆನ್ನಬೇಕು.

ಹಿಂದಿನ ಅಧ್ಯಾಯದಲ್ಲಿ ನೋಡಿದಂತೆ ಸಂಸ್ಕೃತ ಗದ್ಯಕಾವ್ಯಕಾರರು ಪ್ರಾಯಿಕವಾಗಿ ಕಲ್ಪಿತಕಥೆಗಳನ್ನೇ ವಸ್ತುವನ್ನಾಗಿ ಆರಿಸಿಕೊಳ್ಳುತ್ತಿದ್ದರು, ಪೂರ್ವ ಪುರಾಣೇತಿಹಾಸಪ್ರಸಿದ್ಧವಾದ ವಸ್ತುಗಳನ್ನೋ ಐತಿಹಾಸಿಕ ರಾಜವೃತ್ತಾಂತಗಳನ್ನೋ ಆಶ್ರಯಿಸಿದವರು ಮಹಾಕಾವ್ಯದ ಮಾರ್ಗವನ್ನೇ ವಿಶೇಷವಾಗಿ ಅನುಸರಿಸುತ್ತಿದ್ದರು. ಈ ಪರಿಪಾಠವನ್ನು ಬದಲಾಯಿಸಿ ಪ್ರಸಿದ್ಧ ಹಾಗು ಪ್ರಶಸ್ತಿಪರ ವೃತ್ತಾಂತಗಳನ್ನು ಚಂಪೂಮಾರ್ಗದಿಂದ ಹೇಳುವ ವಿವಕ್ಷೆ ಹೊಸದಾದ ಚಂಪೂಶೈಲಿಗೆ ಪ್ರೇರಕವಾಯಿತೆಂದು ಹೇಳಬಹುದು. ಕಾಳಿದಾಸಾದಿ ಪದ್ಯಕವಿಗಳೂ, ಬಾಣಾದಿ ಗದ್ಯಕವಿಗಳೂ ಬರೆದಾದಮೇಲೆ ಮುಂದಿನವರಿಗೆ ಹೊಸಕಾವ್ಯ ವಿಷಯಗಳು ಸಿಕ್ಕುವುದು ಕಷ್ಟವಾಗಿದ್ದಂತೆ ಅದೇ ಶೈಲಿಯಲ್ಲಿ ಅವರೊಡನೆ ಸ್ಪರ್ಧಿಸುವುದೂ ದುಷ್ಕರವಾಗಿತ್ತು. ಅದರಿಂದ ಚಿರಪರಿಚಿತವಾದ ಪುರಾಣೇತಿಹಾಸ ಪ್ರಸಿದ್ಧ ಕಥೆಗಳನ್ನೇ ಹೊಸ ಶೈಲಿಯಲ್ಲಿ ಹೇಳಿ ಕೀರ್ತಿಯನ್ನು ಸಂಪಾದಿಸಲು ಕವಿಗಳು ಪ್ರಯತ್ನಿಸಿದಂತೆ ಕಾಣುತ್ತದೆ. ಚಂಪೂಶೈಲಿ ಪಂಡಿತಪ್ರಿಯವಾಗಿ ಪರಿಣಮಿಸಿದ ಮೇಲೆ ಆಸ್ಥಾನ ಕವಿಗಳೂ ರಾಜಪ್ರಶಸ್ತಿ, ಆಚಾರ್ಯದಿಗ್ವಿಜಯ, ಮುಂತಾದುವಕ್ಕೂ ಇದನ್ನು ಉಪಯೋಗಿಸಿಕೊಂಡರು.

ಈಗ ಸಿಕ್ಕುವ ಮೊದಲನೆಯ ಸಂಸ್ಕೃತ ಚಂಪೂಕಾವ್ಯ—ತ್ರಿವಿಕ್ರಮ ಭಟ್ಟನ 'ದಮಯಂತೀ ಕಥೆ' ಅಥವಾ 'ನಳ ಚಂಪೂ.' ಈತನು ರಾಷ್ಟ್ರಕೂಟ

---

3. ಉಪಾಂತ್ಯಶ್ಲೋಕ.
4. ವಾಣೀವಿಲಾಸ ಸಂಸ್ಕೃತಮಾಲೆ, ಶ್ರೀರಂಗಂ, ನಂ. 17.

ಅರಸನಾದ ಮೂರನೆಯ ಇಂದ್ರನ ಆಸ್ಥಾನ ಕವಿಯಾಗಿದ್ದವನು. (ಸು. ಕ್ರಿ.ಶ. ೯೧೫). ಪ್ರಸಿದ್ಧವಾದ ನಳಚರಿತ್ರೆಯನ್ನು ಸುಬಂಧು ಬಾಣರ ಪ್ರೌಢ ಗದ್ಯ ಶೈಲಿಯ ಅನುಕರಣೆಯಲ್ಲಿ ಬರೆದಿದ್ದಾನೆ. ಗದ್ಯದಲ್ಲಿ ಅವರ ಶ್ಲೇಷಾದ್ಯಲಂಕಾರ ಗಳ ವ್ಯಾಮೋಹವಿರುವಂತೆ ಪದ್ಯಾಂಶದಲ್ಲೂ ಬಾಣಮಯೂರರ ಸ್ತೋತ್ರ ಶತಕಗಳ ಗೌಡೀ ಶೈಲಿಯ ಪ್ರಭಾವ ಹೆಚ್ಚಾಗಿದೆ. ಇವನಲ್ಲಿ ಸುಬಂಧುವಿನ ಪಾಂಡಿತ್ಯವುಂಟೇ ಹೊರತು ಬಾಣನ ಪ್ರತಿಭೆಯಿಲ್ಲ.

ಕ್ರಿ.ಶ ೯೫೯ರಲ್ಲಿ ಚಾಲುಕ್ಯರಾಜ ಎರಡನೆ ಅರಿಕೇಸರಿಯ ಮಗನ ಆಶ್ರ ಯದಲ್ಲಿ ಸೋಮದೇವನೆಂಬ ಜೈನಕವಿಯಿಂದ ರಚಿತವಾದ 'ಯಶಸ್ತಿಲಕ ಚಂಪೂ' ಎಂಬುದು ಅನೇಕ ದೃಷ್ಟಿಗಳಿಂದ ಮಹತ್ತ್ವದ ಗ್ರಂಥ, ಕನ್ನಡಿ ಗರಿಗೆ ಜನ್ನನ ಯಶೋಧರ ಚರಿತೆಯಲ್ಲಿ ಪರಿಚಿತವಾಗಿರುವ ಕಥೆಯೇ ಇದರ ಕಾವ್ಯವಸ್ತು. 'ಹಿಂದಿನ ಸರ್ವಜ್ಞರಾದ ಕವಿಗಳು ಹೇಳದೆ ಬಿಟ್ಟಿರುವುದೇನೂ ಇಲ್ಲ. ಆದರೆ ಇಂದಿನ ಬುದ್ಧಿಶಾಲಿಗಳೂ ಅವರೊಡನೆ ಹೋಲಿಸುವ ಮಟ್ಟಿಗೆ ಬರೆಯುವುದೇ ಆಶ್ಚರ್ಯ'ವೆಂದು ತನ್ನ ಕಾಲದ ಅಭಿಪ್ರಾಯವನ್ನು ಸ್ಪಷ್ಟ ವಾಗಿ ತಿಳಿಸಿದ್ದಾನೆ —

**ಸರ್ವಜ್ಞಕಲ್ಪೈಃ ಕವಿಭಿಃ ಪುರಾತನೈರವೀಕ್ಷಿತಂ ವಸ್ತು ಕಿಮಸ್ತಿ ಸಂಪ್ರತಿ ।**
**ಐದಂಯುಗೀನಸ್ತು ಕುಶಾಗ್ರಧೀರಪಿ ಪ್ರವಕ್ತಿ ಯತ್ತತ್ಸದೃಶಂ ಸ ವಿಸ್ಮಯಃ ॥**

ಅವನೇ ಹೇಳುವಂತೆ 'ಅಸಹಾಯ'ವಾಗಿಯೂ 'ಅನಾದರ್ಶ'ವಾಗಿಯೂ ಬರೆದಿರುವ ಈ ಕೃತಿಯಲ್ಲಿ 'ಕವಿತಾಕ್ರಾಂತವಾದ ಉಕ್ತಿಗಳೂ, ಅವಸರೋಚಿತ ವಾದ ಸೂಕ್ತಿಗಳೂ, ಸರ್ವಶಾಸ್ತ್ರಗಳ ಯುಕ್ತಿಗಳೂ ಕೌತುಕಾವಹವಾಗಿ ಬಂದಿವೆ. ಕೇವಲ ಶ್ರವಣಸುಭಗವಾದ ವರ್ಣನಾಮಯವಾದ ಕಾವ್ಯಗಳೂ ಇವೆ, ಕೇವಲ ಅರ್ಥಚಮತ್ಕಾರ ಪೂರ್ಣವಾದ ಕಾವ್ಯಗಳೂ ಇವೆ. ಆದರೆ ಸಕಲ ವಿದ್ಯೆಗಳಲ್ಲಿಯೂ ವ್ಯುತ್ಪತ್ತಿಯಾಗಬೇಕಾದರೆ ಯಶಸ್ತಿಲಕವನ್ನೇ ಓದ

---

5 **ಹೋಲಿಸಿ—**

**ಪ್ರಸನ್ನಾಃ ಕಾಂತಿಹಾರಿಣ್ಯೋ ನಾನಾಶ್ಲೇಷವಿಚಕ್ಷಣಾಃ ।**
**ಭವನ್ತಿ ಕಸ್ಯಚಿತ್ಪುಣ್ಯೈರ್ಮುಖೇ ವಾಚೋ ಗೃಹೇ ಸ್ತ್ರಿಯಃ ॥**

ಬೇಕು.' ಈ ಮಾತು ಗರ್ವೋಕ್ತಿಯಲ್ಲ. ಈ ಗ್ರಂಥದ ಗಾತ್ರವೇ ಮುದ್ರಿತ ವಾದ ಸಾವಿರ ಪುಟಗಳಿಗೂ ಹೆಚ್ಚು. ಅಂದಿನ ಪ್ರತಿಯೊಂದು ಶಾಸ್ತ್ರದ ಪೂರ್ಣಪರಿಚಯವೂ ಇಲ್ಲಿ ಪರ್ಯಾಯವಾಗಿ ಬಂದಿರುವುದನ್ನು ಡಾ|| ಹಂಡೀಕಿ ಅವರು ಅಷ್ಟೇ ಪುಟಗಳ ತಮ್ಮ ಸಂಶೋಧನಾ ಗ್ರಂಥದಲ್ಲಿ ತೋರಿಸಿದ್ದಾರೆ. ಶಬ್ದ, ಅರ್ಥ, ಕವಿಸಾಮರ್ಥ್ಯ, ಈ ಮೂರರಲ್ಲಿ ಮೊದಲ ಎರಡು ಎಲ್ಲರಿಗೂ ಸಮಾನ, ಆದರೆ ಮೂರನೆಯದು ಮಾತ್ರ ಪ್ರತಿ ಕವಿ ಯಲ್ಲಿಯೂ ಬೇರೆಯೆಂದು ಅವನು ಹೇಳುವ ಮಾತು ಅರ್ಥಪೂರ್ಣ ವಾಗಿದೆ.[6] 'ಇದು ಗದ್ಯ, ಇದು ಪದ್ಯ, ಎಂಬ ಕಾರಣದಿಂದ ಗೌರವ ಬರುವು ದಿಲ್ಲ, ಗೌರವಕ್ಕೆ ಸ್ವಸಂವೇದ್ಯವಾದ ಸುಖವೊಂದೇ ನಿಮಿತ್ತ'ವೆಂದು ಅವನು ಹೇಳಿರುವಂತೆಯೇ ಆಚರಣೆಯಲ್ಲಿಯೂ ರಸಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದಾನೆ. ಅವನಲ್ಲಿ ವಕ್ರೋಕ್ತಿಯಂತೆ ಸ್ವಭಾವೋಕ್ತಿಯೂ ಪ್ರಕಾಶಿಸುತ್ತದೆ. ನಿಸ್ಸಾರ ವಾದ ವಸ್ತುವಿನಲ್ಲಿ ಆಡಂಬರ ಹೆಚ್ಚೆಂಬುದನ್ನು ಅವನು ಬಲ್ಲನು ಒಟ್ಟಿನಲ್ಲಿ ಹಿತವಾದ ಶೈಲಿಯಲ್ಲಿ ಜ್ಞಾನಭಂಡಾರವನ್ನು ಒಡೆಯುವ ಸಾಹಸ ಸೋಮ ದೇವನದೆನ್ನಬಹುದು. ಇಲ್ಲಿ ಎಲ್ಲ ಬಗೆಯ ಪದ್ಯಗದ್ಯ ಸರಣಿಗಳಿಗೂ ಉದಾಹರಣೆಗಳು ಸಿಕ್ಕುತ್ತವೆ. ಕವಿತ್ವವೇ ಆಗಲಿ, ಲೋಕವಿತ್ತ್ವವೇ, ಆಗಲಿ ಎರಡನ್ನೂ ಸೋಮದೇವನ ಸೂಕ್ತಿಗಳು ಒದಗಿಸುತ್ತವೆ.[7] 'ಸದ್ಯೋಽನವದ್ಯ ಗದ್ಯಪದ್ಯ ವಿದ್ಯಾಧರ ಚಕ್ರವರ್ತಿ'ಯೆಂಬುದು ಅವನ ಬಿರುದು.

ಸೋಮದೇವನ ಕಾವ್ಯಸ್ವಾರಸ್ಯವಿಲ್ಲದ ಮತ್ತೊಂದು ಜೈನ ಕೃತಿ ಹರಿಚಂದ್ರನ 'ಜೀವಂಧರ ಚಂಪೂ.' ಇದರ ಕಾಲ ಹತ್ತು ಅಥವಾ ಹನ್ನೊಂದ ನೆಯ ಶತಮಾನ.

ಮುಂದಿನ ಚಂಪೂಕೃತಿಗಳೆಲ್ಲ ಮುಖ್ಯವಾಗಿ ರಾಮಾಯಣ, ಮಹಾ ಭಾರತ, ಭಾಗವತ, ಪುರಾಣಕಥೆಗಳು, ಮುಂತಾದುವುಗಳ ಸಂಗ್ರಹಗಳು.

---

6. ವಾಗರ್ಥಃ ಕವಿಸಾಮರ್ಥ್ಯಂ ತ್ರಯಂ ತತ್ರ ದ್ವಯಂ ಸಮಮ್ ।
ಸರ್ವೇಷಾಮೇವ ವಕ್ತ್ರಾಣಾಂ ತೃತೀಯಂ ಭಿನ್ನಶಕ್ತಿಕಮ್ ॥
—ಆರಂಭಶ್ಲೋಕಗಳು.

7. ಲೋಕವಿತ್ತ್ವೇ ಕವಿತ್ವೇ ವಾ ಯದಿ ಚಾತುರ್ಯಚಂಚವಃ ।
ಸೋಮದೇವಕವೇಃ ಸೂಕ್ತೀಃ ಸಮಭ್ಯಸ್ಯನ್ತು ಸಾಧವಃ ॥
—ಮೂರನೆಯ ಆಶ್ವಾಸಾಂತ್ಯ.

ಇವುಗಳಲ್ಲಿ ಭೋಜರಾಜನ (ಕ್ರಿ. ಶ. ೧೦೧೮–೬೩) ಚಂಪೂರಾಮಾಯಣವು ಶೈಲಿಯ ಮಧುರ ಮೋಹಕತೆಯಿಂದ ಪಂಡಿತರ ಪ್ರಶಂಸೆಗೆ ಪಾತ್ರವಾಗಿದೆ. ಈ ಸಂಗ್ರಹ—ಚಂಪೂಸಂಪ್ರದಾಯಕ್ಕೆ ಭೋಜನೇ ಪ್ರವರ್ತಕನೆನ್ನ ಬಹುದು. ಕಿವಿಗಿಂಪಾದ ಕೋಮಲ ಪ್ರಾಸ, ಅರ್ಥಲಾಲಿತ್ಯ, ಅಲಂಕಾರಗಳ ಹೃದಯ ಸ್ಪರ್ಶಿತ್ವ, ಇವು ಭೋಜನ ಸರಸಶೈಲಿಯ ಅಸಾಧಾರಣ ಅಂಶಗಳು. ಗಾನದೊಡನೆ ವಾದ್ಯ ಸೇರಿದಂತೆ ಗದ್ಯ ಪದ್ಯಗಳ ಮಿಶ್ರಣವು ಶೋಭಿಸುವುದೆಂದು ಅವನು ಚಂಪೂ ಮಾರ್ಗವನ್ನು ಹೊಗಳುತ್ತಾನೆ.—

**ಗದ್ಯಾನುಬಂಧರಸಮಿಶ್ರಿತ ಪದ್ಯಸೂಕ್ತಿ-**
**ಹೃದ್ಯಾ ಹಿ ವಾದ್ಯಕಲಯಾ ಕಲಿತೇವ ಗೀತಿಃ ।**
**ತಸ್ಮಾದ್ದಧಾತು ಕವಿಮಾರ್ಗಜುಷಾಂ ಸುಖಾಯ**
**ಚಂಪೂ ಪ್ರಬಂಧರಚನಾಂ ರಸನಾ ಮದೀಯಾ ॥**

[ಗದ್ಯ ಬಂಧದ ರಸದೊಡನೆ ಮಿಶ್ರಿತವಾದ ಪದ್ಯಸೂಕ್ತಿಯು ವಾದ್ಯದೊಡನೆ ಬೆರೆತ ಗಾನದಂತೆಯೇ ಹೃದ್ಯವಾಗುತ್ತದೆ. ಆದುದರಿಂದ ನನ್ನ ನಾಲಗೆಯು ಚಂಪೂ ಪ್ರಬಂಧದ ರಚನೆಯಿಂದ ಕವಿಮಾರ್ಗದ ಪಯಣಿಗರಿಗೆ ಸುಖವನ್ನುಂಟುಮಾಡಲಿ.]

ಭೋಜನ ಚಂಪೂಕಾವ್ಯದಲ್ಲಿ ಯುದ್ಧಕಾಂಡವು ಲಕ್ಷ್ಮಣನೆಂಬವನು ಅನಂತರ ಬರೆದು ಸೇರಿಸಿದ್ದು. ಭೋಜನ ಶೈಲಿಗೆ ಒಂದು ಉದಾಹರಣೆ:— ಬೆಳಗಿನ ಜಾವ ದೀಪದ ಪಂಜುಗಳನ್ನು ಹಿಡಿದು ವಾರನಾರಿಯರು ದಾರಿ ತೋರಿಸುತ್ತಿರುವಾಗ ರಾವಣನು ಸೀತೆಯನ್ನು ಕಾಣಲೆಂದು ಅಶೋಕವನಕ್ಕೆ ಬರುವುದನ್ನು ಕವಿ ಹೀಗೆ ಉತ್ಪ್ರೇಕ್ಷೆ ಮಾಡುತ್ತಾನೆ:—

**ರಜನಿಚರಮಭಾಗೇ ವಾರಸೀಮಂತಿನೀನಾಂ**
**ಕರತಲ ಕಲಿತಾಭಿರ್ದೀಪಿಕಾಮಾರ್ಜನೀಭಿಃ ।**
**ದಿಶಿ ದಿಶಿ ಪರಿಮೃಷ್ಟಂ ಯಸ್ತಮಸ್ತತ್ಸಮಸ್ತಂ**
**ಹೃದಯಮವಜಗಾಹೇ ಕೇವಲಂ ರಾವಣಸ್ಯ ॥**

'ದಿಕ್ಕುದಿಕ್ಕುಗಳಲ್ಲೂ ವಾರನಾರಿಯರು ದೀಪಗಳೆಂಬ ಕಸಪರಕೆಗಳಿಂದ ಗುಡಿಸಿದ ಕತ್ತಲೆಯೆಲ್ಲವೂ ರಾವಣನ ಹೃದಯವನ್ನೇ ಹೊಕ್ಕಿತು.'

ರಾವಣನು ಪರಮಮೋಹಾವಿಷ್ಟನಾದನೆಂಬುದು ಇಲ್ಲಿ ಎಷ್ಟು ರಮ್ಯವಾಗಿ ಸೂಚಿತವಾಗಿದೆ !

ಗದ್ಯದಲ್ಲಿ ಸಮಾಸ ಪ್ರಾಸಗಳ ಸಂಗೀತ ಹೃದ್ಯವಾಗಿರುತ್ತದೆ. ಉದಾಹರಣೆ —

ಗಗನತಲಮಿದಮಪರ ಮಹೀಧರ ಕಟಕಕಾಂತಾರ ಸಮುದ್ಭವ ದಾವ ಪಾವಕ ಶಿಖಾಶ್ರೇಣಿಭಿಃ ಕಿಂ ಶೋಣಿತಮ್, ಅಥವಾ ಸಮೀಪ ಸಮುಪತತ್ ಪತಂಗರಶ್ಮಿ ದೃಢತರ ವೇಷ್ಟನ ನಿಷ್ಠ್ಯೂತಾನಲ ತಟ ತಪನೋಪಲ ಜಾಲ ಸಮುಲ್ಲಸಜ್ಜ್ವಾಲಾಪಟಲೈಃ ಕಿಮಾಪಾಟಲಿತಮ್ ...., ಇತಿ ಸಕಲಜನಸ್ಯ ಸಂದೇಹಸಂದೋಹಂ ಸಂದಧಾನೇ ಸಂಧ್ಯಾರಾಗೇ ಸಮುದಂಚಿತೇ, ಸರಸೀರುಹಶ್ರೇಣಿಷು ಪತ್ರಪುಟಕ ಪಾಟಪಿಧಾನಾಸು, ಪ್ರತಿಕುಮುದಭವನಂ ಮಕರಂದಭಿಕ್ಷಾಮಟತ್ಸು ಮಧುವ್ರತ ದ್ವಿಜೇಷು, ವಿಕಚ ಕುವಲಯಕಲಿಕಾಕರ್ಷಣಕಷಾಯೇಷು ಸಾಯಂತನವಾಯುಷು, ತತ ಇತಃ ಸಂಚರತ್ಸು ತಿಮಿರೇಷು, ಕಾಲಗರುಧೂಮ ಸ್ತೋಮಶ್ಯಾಮಲಿತೇಷು ದಿಕ್ಪಾಲಪುರ ಗೋಪುರವ್ಯೂಹೇಷು .....

[ಅಸ್ತಾಚಲದ ತಪ್ಪಲಿನ ಕಾಡುಗಳಲ್ಲಿ ಹುಟ್ಟಿದ ಕಾಳ್ಕಿಚ್ಚುಗಳ ತುದಿಗಳಿಂದೇನಾದರೂ ಆಕಾಶವು ಕೆಂಪಾಯಿತೋ ? ಇಲ್ಲವೇ ಸಮೀಪದಲ್ಲಿ ಸಂಚರಿಸುವ ರವಿಯ ರಶ್ಮಿಗಳು ಪ್ರಖರವಾಗಿ ತಾಗಲು ದಾರಿಯ ಸೂರ್ಯಕಾಂತ ಮಣಿಗಳಲ್ಲಿ ಹುಟ್ಟಿದ ಉರಿಗಳ ನೆರವಿಗಳಿಂದಲೇ ಕೆಂಪೇರಿತೋ ? ಅಥವಾ ... ಎಂದು ಸಂದೇಹಪರಂಪರೆಯನ್ನೇ ತರುತ್ತಾ ಸಂಧ್ಯಾರಾಗವು ಹಬ್ಬಿತು. ಪದ್ಮಶ್ರೇಣಿಗಳು ದಳಗಳೆಂಬ ಬಾಗಿಲನ್ನು ಮುಚ್ಚಿಕೊಂಡವು. ಆದುದರಿಂದ ಕನ್ನೈದಿಲೆಗಳ ಮನೆಮನೆಗೂ ಮಕರಂದದ ಭಿಕ್ಷೆ ಬೇಡುತ್ತಾ ಭ್ರಮರವಿಪ್ರರು ಹೊರಟರು. ಸಾಯಂತನವಾಯುಗಳು ಅರಳಿದ ಕುವಲಯಗಳ ಮೊಗ್ಗಿನ ಸ್ಪರ್ಶದಿಂದ ಸೊಗಡೇರಿದ್ದುವು. ಕತ್ತಲೆಗಳು ಅತ್ತಿಂದಿತ್ತ ಸುಳಿಯುತ್ತಿದ್ದುವು. ಚಂದನಧೂಪದ ಹೊಗೆಯಿಂದ ದಿಕ್ಪಾಲರ ಪಟ್ಟಣದ ಗೋಪುರಗಳೆಲ್ಲವೂ ಕಪ್ಪಾಗುತ್ತಿದ್ದವು. ...,]

ಈ ಸೂರ್ಯಾಸ್ತಮಯದ ವರ್ಣನೆಯಲ್ಲಿ ಬಾಣನ ಉತ್ಪ್ರೇಕ್ಷೆಗಳ

ಸೊಗಸಿರುವಂತೆ ವರ್ಣಯೋಜನೆಯಲ್ಲಿ ವಿಶೇಷವಾದ ನಾದಲೋಲತೆಯೂ ವ್ಯಕ್ತವಾಗಿದೆ. ಭೋಜನ ಅಲಂಕಾರಗಳು ಕವಿಸಮಯಸಿದ್ಧವಾದರೂ ಪಾಂಡಿತ್ಯದಗ್ಧವಾಗಿಲ್ಲ.

ಆದರೆ ಸುಮಾರು ೧೧ ಅಥವಾ ೧೨ ನೆಯ ಶತಮಾನದಲ್ಲಿ 'ಭಾರತ ಚಂಪುವನ್ನು ಬರೆದ ಅನಂತಭಟ್ಟನು ಭೋಜನ ಸರಳ ಸರಣಿಯನ್ನು ಮೆಚ್ಚದೆ ಹೆಚ್ಚಿನ ಪಾಂಡಿತ್ಯ ಪ್ರದರ್ಶನಕ್ಕೆ ಹೊರಟಿದ್ದಾನೆ. ಇವನ ಮಂಗಳ ಶ್ಲೋಕಗಳೇ ಕೃತ್ರಿಮತೆಯ ಪರಾಕಾಷ್ಠೆಯನ್ನೂ ಸಮಾಸ ಪ್ರಾಸಗಳ ಅಂಧ ವ್ಯಾಮೋಹವನ್ನೂ ಸಾರುತ್ತವೆ. ಆದರೆ ಮುಂದಿನ ಚಂಪೂಕಾರರಿಗೆ ಅನಂತ ಭಟ್ಟನ ಮಾದರಿಯೇ ಅನುಕರಣಯೋಗ್ಯವಾಗಿ ಕಂಡಿತು. ಇದು ಚಂಪು ಭಾರತದ ಮಂಗಳ ಶ್ಲೋಕ —

**ಕಲ್ಯಾಣಂ ವೋ ವಿಧತ್ತಾಂ ಕರಟಮದಧುನೀಲೋಲ ಕಲ್ಲೋಲ ಮಾಲಾ**
**ಖೇಲಲ್ಲೋಲಂಬ ಕೋಲಾಹಲ ಮುಖರಿತದಿಕ್ಚಕ್ರವಾಲಾಂ ತರಾಲಮ್ ।**
**ಪ್ರತ್ನಂ ವೇತಂಡರತ್ನಂ ಸತತಪರಿಚಲತ್ಕರ್ಣ ತಾಲಪ್ರರೋಹ-**
**ವ್ಯಾತಾಂಕೂರಾಜಿಹೀರ್ಷಾದರವಿವೃತಫಣಾಶೃಂಗ ಭೂಷಾ ಭುಜಂಗಮ್ ॥**

[ಯಾರ ಗಂಡಸ್ಥಳದಲ್ಲಿಳಿವ ಮದೋದಕದ ತೆರೆಗಳಲ್ಲಾಡುವ ದುಂಬಿಗಳ ಝೇಂಕಾರವು ದಿಕ್ಚಕ್ರಗಳ ಅಂತರಾಳವನ್ನೆಲ್ಲ ತುಂಬುವುದೋ, ಯಾರ ಕೋಡಿನ ಆಭರಣವಾದ ಹಾವು ಸಂತತವೂ ಚಲಿಸುತ್ತಿರುವ ಕಿವಿಗಳಿಂದ ಬರುವ ಗಾಳಿಯನ್ನು ಕುಡಿಯುವಾಸೆಯಿಂದ ಹೆಡೆಯನ್ನು ಅರೆ ಬಿಚ್ಚುತ್ತಿರುವುದೋ, ಆ ಪುರಾತನ ಗಜರತ್ನವು(=ಗಣಪತಿಯು)ನಮ್ಮನ್ನು ಕಾಪಾಡಲಿ.]

ಗಣಪತಿಯೆನ್ನುವ ಬದಲು 'ಪ್ರತ್ನಂ ವೇತಂಡರತ್ನಂ' ಎಂದಲ್ಲದೆ ಕವಿಗೆ ತೃಪ್ತಿಯಿಲ್ಲ. ಅಪ್ರಸಿದ್ಧ ಪದಪ್ರಯೋಗಗಳಲ್ಲೇ ಒಂದು ಆಸಕ್ತಿಯಿದೆ. ಇದು ಸಂಸ್ಕೃತಸಾಹಿತ್ಯದ ಇಳಿಗಾಲದ ಅಭಿರುಚಿ. ತನ್ನ ಕಾವ್ಯಕ್ಕೆ ವಸುಧೆಯೆಲ್ಲವೂ ಬೆಲೆಯಾಗಲಾರದೆಂಬ ಅವನ ಮಾತು (ವಾಚಾಮನಂತಸುಕವೇರ್ವಸುಧೈವ ಮೂಲ್ಯಮ್) ಇಂದು ಹಾಸ್ಯಾಸ್ಪದವಾಗಿ ಕಾಣಬಹುದು. ಗದ್ಯ

ದಲ್ಲೂ ಬಾಣಾದಿಗಳಿಗಿಂತ ಹೆಚ್ಚಿನ ಸಂಗೀತವನ್ನು ಸಮಾಸದಿಂದ ಹೊರಡಿಸಲು ಅನಂತನು ಯತ್ನಿಸಿದ್ದಾನೆ ಇದನ್ನು ಕಾವ್ಯದ ಹೆಚ್ಚಿನ ಸ್ಥಿತಿಯೆಂದು ತಿಳಿಯುವುದು ಕಷ್ಟ —

ಮದನಹುತ**ಭುಗಂಗಾರ** ಸದೃಶ ಕಮಲ **ಭೃಂಗಾರ** ಮಧುರಸ **ಸಂಗಾರ**ಚಿತಮದ **ಭೃಂಗಾರ**ವ ವಿಭವ **ತುಂಗಾರ**ಹಿತ ಮಿಥುನ **ಶೃಂಗಾರ** ರಸಾ

ಮುಂತಾದ ವಾಕ್ಯ ಭಾಗಗಳಲ್ಲಿ ಸಂಗೀತ ಹೆಚ್ಚಿದ ಪ್ರಮಾಣದಲ್ಲಿಯೇ ಅರ್ಥಕ್ಲೇಶವೂ ಹೆಚ್ಚುತ್ತದೆ.

ಸುಮಾರು ೧೨ ನೆಯ ಶತಮಾನದಲ್ಲಿ **ಭಾಗವತಚಂಪು**ವನ್ನು ಬರೆದ ಅಭಿನವ ಕಾಳಿದಾಸನು ಅನಂತಭಟ್ಟನನ್ನು ಸಂಪೂರ್ಣವಾಗಿ ಅನುಕರಣ ಮಾಡಿದ್ದಾನೆ. ದೇವಸ್ತುತಿಗೆಂದು ಹೊರಟು ಕಾಮಶಾಸ್ತ್ರದ ಪ್ರಕ್ರಿಯೆಗಳ ವರ್ಣನೆಗೆ ಮಾಘಾದಿಗಳಂತೆ ತಾನು ಮನೆ ಸೋಲುವುದಿಲ್ಲವೆಂದು ಹೊಗಳಿಕೊಂಡಿದ್ದಾನೆ —

**‘ ಉಪಕ್ರಮ್ಯ ಸ್ತೋತುಂ ಹರಿಮಿಹ ಹಿ ವಾತ್ಸ್ಯಾಯನ ಕಥಾ ಮುಧಾ ಮಾಘಾದೀನಾಮಿವ ಕೃತಿಷು ನೈವ ಪ್ರಕಟಿತಾಃ।**

[ಹರಿಯನ್ನು ಹೊಗಳಲೆಂದು ಹೊರಟು ವ್ಯರ್ಥವಾಗಿ ಕಾಮಕಥೆಗಳನ್ನು ಮಾಘಾದಿಗಳಂತೆ ಕೃತಿಯಲ್ಲಿ ವಿಸ್ತರಿಸಿಲ್ಲ.]

೧೭ ನೆಯ ಶತಮಾನದ ಪ್ರಸಿದ್ಧಕವಿಯಾದ ನೀಲಕಂಠದೀಕ್ಷಿತನು ಬರೆದ ‘ ನೀಲಕಂಠವಿಜಯ ’ವು ಸ್ವಾರಸ್ಯವಾಗಿದೆ. ಇವನು ಚಂಪೂಭಾರತದ ಅನುಕರಣೆಯ ಬಲೆಗೆ ಬೀಳದೆ, ತನ್ನದೇ ಆದ ಹಾಸ್ಯಮಯ ವೈಶಿಷ್ಟ್ಯವನ್ನು ಕಾವ್ಯದ ಕಡೆಯವರೆಗೂ ಉಳಿಸಿಕೊಂಡಿದ್ದಾನೆ. ಶೈಲಿ ಸರಸವೂ ಚಮತ್ಕಾರಪೂರ್ಣವೂ ಆಗಿದೆ ‘ ನಮಸ್ಕಾರ ಮಾಡುತ್ತೇನೆ—ಯಾರಿಗೆ ಎಂಬುದನ್ನು ಹೇಳುವುದಿಲ್ಲ—ಏಕೆಂದರೆ ದಂಪತಿ ಶಬ್ದದ ಏಕವಚನ ಇಲ್ಲಿ ಉಚಿತವೋ ದ್ವಿವಚನವೋ ನಾನು ಕಾಣೆ ’ ಎಂಬ ಮಂಗಳದಿಂದ ಕಾವ್ಯವನ್ನಾರಂಭಿಸುತ್ತಾನೆ ಅರ್ಧನಾರೀಶ್ವರನ ಮಾಹಾತ್ಮ್ಯವನ್ನು ಹೀಗೆ ಚಮತ್ಕಾರವಾಗಿ ಸೂಚಿಸುತ್ತಾನೆ.—‘ ಸಾಗರವನ್ನು ಕಡೆಯುವಾಗ ಕೌಸ್ತುಭ, ಅಪ್ಸರೆಯರು ಮುಂತಾದ ವಸ್ತುಗಳು ಜನಿಸಿದೊಡನೆ ‘ ನನಗೆ ನನಗೆ,’ ಎಂದು ಜಗಳ

ವಾಡಿದ ದೇವತೆಗಳೆಲ್ಲಾ ಭೂಮಿಗೆ ಭಾರವೇ ಸರಿ. ಏಕೆಂದರೆ ವಿಷ ಬಂದೊಡನೆ ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಓಡಿದರು. ಅವರನ್ನು 'ಹೆದರಬೇಡಿ' ಎನ್ನುತ್ತಾ ವಿಷ ನನಗಿರಲೆಂದು ಮುಂದಾದ ಶಿವನೊಬ್ಬನೇ ಸ್ತೋತ್ರಕ್ಕೆ ಯೋಗ್ಯ' ಎನ್ನುತ್ತಾನೆ.

**ದೃಷ್ಟ್ವಾ ಕೌಸ್ತುಭಮಪ್ಸರೋಗಣಮಪಿ ಪ್ರಕ್ರಾಂತವಾದಾ ಮಿಥೋ**
**ಗೀರ್ವಾಣಾಃ ಕತಿ ವಾ ನ ಸಂತಿ ಭುವನೇ ಭಾರಾ ದಿವಃ ಕೇವಲಮ್ ।**
**ನಿಷ್ಕ್ರಾಂತೇ ಗರಲೇ ದ್ರುತೇ ಸುರಗಣೇ ನಿಶ್ಚೇಷ್ಟಿತೇ ವಿಷ್ಟಪೇ**
**ಮಾ ಭೈಷ್ಟೇತಿ ಗಿರಾವಿರಾಸ ಧುರಿ ಯೋ ದೇವಸ್ತಮೇವ ಸ್ತುಮಃ ॥**

ಹೀಗೆಯೇ ಅಮರಾವತಿಯ ವರ್ಣನೆಗೆ ಹೊರಟ ಗದ್ಯದಲ್ಲೂ 'ಅಲ್ಲೇನು' ಅಮೃತವನ್ನುಂಡು ಹಸಿವಿಲ್ಲದ ಅವರಿಗೆ ಭಕ್ಷ್ಯಗಳ ರುಚಿ ಹೇಗೆ ಸಾಧ್ಯ? ಕಲ್ಪವೃಕ್ಷ ಕೇಳಿದ್ದನ್ನು ಕೊಡುವಾಗ ಅಂಗಡಿ ಬೀದಿಗಳ ಸೊಗಸೆಲ್ಲಿ ಬರಬೇಕು? ಭೂಮಿಯಲ್ಲಿ ತಪಃಕೃಶರಾದ ಪರಮರ್ಷಿಗಳೇ ಅಲ್ಲಿ ವಾರನಾರಿಯರ ಪ್ರಣಯಿಗಳು, ಅವರ ಪೂರ್ವಸಂಸ್ಕಾರಕ್ಕೂ ಕಾಮತಂತ್ರವ್ಯಾಪಾರಕ್ಕೂ ಎಂತಹ ಜೋಡಿ! ಅಲ್ಲಿಯ ಆನೆಕುದುರೆಗಳು ಕೂಡ ದೇವತೆಗಳಲ್ಲದ್ದರಿಂದ ಅಮೃತವಿಲ್ಲದೆ, ಭೂಮಿಯಿಲ್ಲದ್ದರಿಂದ ಹುಲ್ಲುನೀರೂ ಇಲ್ಲದೆ, ಗಾಳಿಯನ್ನೇ ಕುಡಿದು ಜೀವಿಸುತ್ತವೆಂದು ಕಾಣುತ್ತದೆ' ಎಂದು ಮುಂತಾಗಿ ಹಾಸ್ಯಮಯವಾಗಿ ಚಿತ್ರಿಸಿದ್ದಾನೆ. ಈ ಬರೆವಣಿಗೆ ಸಂಸ್ಕೃತಸಾಹಿತ್ಯದಲ್ಲಿ ವಿರಳ. ಜೇನು-ದ್ರಾಕ್ಷಗಳ ಸಂಯೋಗದಂತೆ ನೀಲಕಂಠದೀಕ್ಷಿತನ ಗದ್ಯಪದ್ಯಗಳ ಮಿಶ್ರಣ ರಸಿಕಜನಪ್ರಿಯವಾಗಿದೆ. 'ಸಂಗಃ ಕಸ್ಯ ಹಿ ನ ಸ್ವದೇತ ಮನಸೇ ಮಾಧ್ವೀಕ ಮೃದ್ವೀಕಯೋಃ.'

ನೀಲಕಂಠದೀಕ್ಷಿತನ ಸಮಕಾಲೀನನಾದ ವೆಂಕಟಾಧ್ವರಿಯ 'ವಿಶ್ವಗುಣಾದರ್ಶ' ವೆಂಬ ಚಂಪೂಕಾವ್ಯದಲ್ಲಿ ಈ ಹಾಸ್ಯಪ್ರವೃತ್ತಿ ಮತ್ತೂ ಹೆಚ್ಚಿ ವಿಡಂಬನವಾಗಿ ಪರಿಣತವಾಗಿರುವುದನ್ನು ನೋಡಬಹುದು. ಈ ಕೃತಿಯು ಚಂಪೂಸಾಹಿತ್ಯದಲ್ಲೇ ಒಂದು ನೂತನ ಆವಿಷ್ಕಾರ. ದೋಷೈಕದೃಷ್ಟಿಯಾದ ಕೃಶಾನು, ಗುಣೈಕಗ್ರಾಹಿಯಾದ ವಿಶ್ವಾವಸು, ಹೀಗೆ ಇಬ್ಬರು ಗಂಧರ್ವರು

ವಿಮಾನದಲ್ಲಿ ಕುಳಿತು ಭೂಲೋಕದವರ ಆಚಾರವ್ಯವಹಾರಗಳನ್ನು ನೋಡುತ್ತಾ ಬರುತ್ತಾರೆ. ಉತ್ತರದ ಬದರಿಕಾಶ್ರಮದಿಂದ ಹಿಡಿದು ದಕ್ಷಿಣದ ರಾಮಸೇತುವಿನವರೆಗೂ ಭಾರತಭೂಮಂಡಲವನ್ನೆಲ್ಲ ಅವರು ನೋಡಿ ಗುಣದೋಷಗಳನ್ನು ವ್ಯಕ್ತಪಡಿಸುವ ಚಿತ್ರವಿದ್ದರೂ ಮುಖ್ಯವಾಗಿ ದಕ್ಷಿಣ ದೇಶದ ಆಂಧ್ರ, ಕರ್ಣಾಟ, ಕಾಂಚೀ, ತುಂಡೀರ ಮಂಡಲ, ಮುಂತಾದ ಪ್ರಾಂತಗಳ ವಿವರವಾದ ವರ್ಣನೆ ಬರುತ್ತದೆ. ತಿರುಪತಿ, ಕಾಂಚಿ, ಮಧುರೆ, ತಂಜಾವೂರು, ಶ್ರೀರಂಗ, ಕುಂಭಕೋಣ, ಮುಂತಾದ ಕ್ಷೇತ್ರಗಳ ಸವಿಸ್ತಾರ ವರ್ಣನೆಯಿದೆ. ಎಲ್ಲಕ್ಕಿಂತ ಹೆಚ್ಚಾಗಿ ತ್ರಿಮತಸ್ಥ ಬ್ರಾಹ್ಮಣರ ಆಚಾರ ಸಂಪ್ರದಾಯಗಳು, ಲಿಂಗಾಯತರು ಮುಂತಾದವರ ಆಚಾರಗಳು, ಎಲ್ಲವನ್ನೂ ಒಂದು ಕಡೆ ಹರಿತವಾದ ಕತ್ತಿಯಿಂದ ಕತ್ತರಿಸಿದರೆ ಇನ್ನೊಂದು ಕಡೆ ತೇಪೆ ಹಾಕುವ ಪ್ರಯತ್ನವೂ ಇದೆ ಕವಿಗಳು, ವೈದ್ಯರು, ಜೋಯಿಸರು, ವೈದಿಕರು, ರಾಜಸೇವಕರು, ಯಾರನ್ನೂ ಕವಿ ತಪ್ಪಿಸಿಕೊಂಡುಹೋಗಲು ಬಿಡುವುದಿಲ್ಲ. ನಿಜವಾಗಿಯೂ ಹದಿನೇಳನೆಯ ಶತಮಾನದ ದಾಕ್ಷಿಣಾತ್ಯ ಜನರ ಸಾಮಾಜಿಕ ರೀತಿನೀತಿಗಳ ಒಂದು ಕಟುಹಾಸ್ಯಮಯಟೀಕೆ ಈ ಗ್ರಂಥದುದ್ದಕ್ಕೂ ಬಂದಿದೆ. ಅಂದಿನ ಡಂಭಾಚಾರಗಳ, ಪರಸ್ಪರ ದ್ವೇಷಾಸೂಯೆಗಳ, ಯಥಾರ್ಥ ಚಿತ್ರಣ ವಿದೆ. ಸಂಸ್ಕೃತದಲ್ಲೆಲ್ಲ ಹೀಗೆ ವಾಸ್ತವಿಕ ಸಾಹಿತ್ಯದ ಒಂದು ಸ್ಪಷ್ಟ ಸೌಂದರ್ಯ ಕಾಣುವುದು, ಸಮಾಜಪರಿವರ್ತನೆಯ ಪ್ರಚಾರಕಾರ್ಯ ಕಾವ್ಯದ ಮೂಲಕ ನಡೆಯುವುದು, ಇದೇ ಮೊದಲನೆಯ ಬಾರಿ. ತೆಂಕಲೆ-ವಡಗಲೆ ಮುಂತಾದ ಅಲ್ಪ ಭೇದಗಳನ್ನು ಪರ್ವತಮಾಡಿ ಕಚ್ಚಾಡುತ್ತಿದ್ದ ದೃಶ್ಯಗಳು ಬಹಳ ಮಾರ್ಮಿಕವಾಗಿ ಚಿತ್ರಿತವಾಗಿವೆ. ಯಾವ ಉತ್ತಮ ಉದಾಹರಣೆಯನ್ನು ತೆಗೆದುಕೊಂಡರೂ ಒಂದಲ್ಲ ಒಂದು ಮತದ ಅನುಯಾಯಿಗಳ ಮನಸ್ಸಿಗೆ ನೋವಾಗಬಹುದೆಂಬ ಭೀತಿಯಿಂದ ಇಲ್ಲಿ ಉದಾಹರಣೆಗಳನ್ನು ಕೊಡಲಿಲ್ಲ. ಸಂಸ್ಕೃತ ಭಾಷೆಯು ವಿಡಂಬನೆಗೆ ಎಂತಹ ಸಮರ್ಥ ಸಾಧನವಾಗಬಹು ದೆಂಬುದನ್ನು ವೆಂಕಟಾಧ್ವರಿಯಂತೆ ತೋರಿಸಿದ ಕವಿ ಇನ್ನೊಬ್ಬನಿಲ್ಲ.

ಉತ್ತರ ದೇಶದಲ್ಲಿ ಚೈತನ್ಯನ ಭಕ್ತಿ ಪಂಥದ ಪ್ರಚಾರ ಭರದಿಂದ ನಡೆ ಯುತ್ತಿರುವಾಗ ಚಂಪೂ ಕಾವ್ಯವನ್ನು ಭಕ್ತಿರಸದ ಪೋಷಣೆಗಾಗಿ ಉಪ ಯೋಗಿಸಿಕೊಂಡು ಉತ್ತಮವಾದ 'ಆನಂದವೃಂದಾವನ ಚಂಪು' ವನ್ನು ಬರೆದ ಕೀರ್ತಿ ಚೈತನ್ಯನ ಶಿಷ್ಯ ಕವಿಕರ್ಣಪೂರನದು. ಶ್ರೀಕೃಷ್ಣನ ಬಾಲ

ಲೀಲೆಗಳನ್ನೆಲ್ಲ ಬಹು ವಿಸ್ತಾರವಾಗಿಯೂ ಬಹು ರಮಣೀಯವಾಗಿಯೂ ಈ ಕೃತಿ ಚಿತ್ರಿಸುತ್ತದೆ. ಇಂದಿಗೂ ಚೈತನ್ಯಸಂಪ್ರದಾಯದವರಿಗೆ ಇದು ಪೂಜ್ಯವಾದ ಗ್ರಂಥವಾಗಿದೆ. ಸುಕವಿಯ ಕವಿತಾಪರಿಮಲವನ್ನು ಇಲ್ಲಿ ಮತ್ತೆ ಆಘ್ರಾಣಿಸಬಹುದು, ಪ್ರಣಯರಸದ ಉನ್ಮಾದಾವಸ್ಥೆಯನ್ನು ಮತ್ತೆ ಅನುಭವಿಸಬಹುದು, ವೈದಗ್ಧ್ಯದ ಪ್ರದರ್ಶನವನ್ನೂ ಅಲ್ಲಲ್ಲಿ ಕಾಣಬಹುದು. ವೈದಗ್ಧ್ಯ ಪ್ರದರ್ಶನಕ್ಕೆ ಗದ್ಯವನ್ನೂ ರಸಾಭಿವ್ಯಕ್ತಿಗೆ ಪದ್ಯವನ್ನೂ ಕವಿ ಬಳಸಿಕೊಂಡಿದ್ದಾನೆ. ಸ್ತೋತ್ರಗದ್ಯಗಳ ಶಬ್ದಚಮತ್ಕಾರಕ್ಕೆ ಉದಾಹರಣೆ.–

ಜಯಜಯ ನಂದಾತ್ಮಜ ಜಯ ವೃಂದಾವನರಸಕಂದಾತುಲಗುಣ
ವೃಂದಾ-ಧಿಕತರನಂದ ಚ್ಛಿನ್ನಕರಂದಸ್ವಪದರವಿಂದದ್ವಯ ಕುರುವಿಂದ
ಪ್ರಭ ನಖಚಂದ್ರಾವಲಿಭಿರತಂದ್ರಾಮಲರುಚಿಸಾಂದ್ರಾಕೃತಿಭಿರಲಂ
ದ್ರಾವಿತ ನಿಜಲೋಕ ವ್ಯತಿಕರಶೋಕ ಸ್ಫುರದಸ್ತೋಕ ಪ್ರಥಿತ
ಶ್ಲೋಕ ಶ್ರೀಧರಧೀರ ವ್ರಜವರವೀರ ಪ್ರಕಟಾಭೀರ ಶ್ಯಾಮಶರೀರ ...

ತಾಳಕ್ಕನುಸಾರವಾಗಿ ಇಲ್ಲಿ ಪ್ರಾಸಗಳು ಕೂಡುತ್ತವೆ. ಹೇಳಿಕೊಂಡು ನರ್ತನ ಮಾಡಬಹುದು.

ಇದು ಮಾಧವನ ಮೋಹನ ಮುರಳಿಯ ಮನೋಹರ ವರ್ಣನೆ:—

**ಅಂಭಃ ಸ್ತಂಭಯತಿ ದ್ರುತಂ ದ್ರವಯತಿ ದ್ರಾಗದ್ರಿಮದ್ರಿಂ ದ್ರವನ್**
**ಶುಷ್ಕಾನಪ್ಯವನೀರುಹಃ ಕಿಸಲಯತ್ಯಾಮೂಲಮುನ್ಮೀಲಿತಾನ್**
**ಬ್ರಹ್ಮಾನಂದಲಯಂ ಗತಾನಪಿ ಮುನೀನುಚ್ಚೈಃ ಸಮುಚ್ಚಾಟಯ-**
**ತ್ಯಾಶ್ಚರ್ಯಸ್ಯ ನಿಧಾನಮೇವ ಜಯತಿ ಶ್ರೀಕೃಷ್ಣವೇಣುಧ್ವನಿಃ॥**

'ಹರಿಯುವ ನೀರು ನಿಲ್ಲುತ್ತದೆ; ಬೆಟ್ಟ ಕರಗುತ್ತದೆ, ಒಣಗಿದ ಮರ ಬೇರಿಂದ ಚಿಗುರಿ ಮೊಗ್ಗಾಗುತ್ತದೆ. ಬ್ರಹ್ಮಾನಂದ ಸಮಾಧಿಯಲ್ಲಿ ಲೀನರಾದ ಮುನಿಗಳೂ ಪರವಶರಾಗಿ ಏಳುತ್ತಾರೆ.—ಇವೆಲ್ಲಾ ಆಶ್ಚರ್ಯನಿಧಿಯಾದ ಶ್ರೀಕೃಷ್ಣವೇಣುಧ್ವನಿಯ ಪ್ರಭಾವ!'

ಮೊನ್ನೆಮೊನ್ನೆಯವರೆಗೂ ಲೆಕ್ಕವಿಲ್ಲದಷ್ಟು ಅನುಕರಣ ಚಂಪೂಗ್ರಂಥಗಳು ಹುಟ್ಟಿವೆ. ಆದರೆ ನಿರ್ದೇಶಯೋಗ್ಯವಾದ ಮಹತ್ವ ಯಾವುದಕ್ಕೂ ಇಲ್ಲ.

# ಅಧ್ಯಾಯ ೧೦



## ಉಪಸಂಹಾರ

**ಸಂಸ್ಕೃತ ಕಾವ್ಯದ ವೈಲಕ್ಷಣ್ಯಗಳು:—**

೧. ಸಂಸ್ಕೃತ ಕಾವ್ಯವು ಆದಿಕಾಲದಲ್ಲಿಟ್ಟುಕೊಂಡಿದ್ದ ಗುರಿಯೆಂದರೆ ಆದರ್ಶ ಜೀವನದ ಪ್ರದರ್ಶನದ ಮೂಲಕ ಜನತೆಯ ಜೀವನವನ್ನು ಉನ್ನತಗೊಳಿಸುವ ಗುರಿ. ವರ್ಣಾಶ್ರಮಗಳ ವಿಶಿಷ್ಟ ಧರ್ಮಗಳಂತೆ ಸತ್ಯ, ಅಹಿಂಸೆ, ಮುಂತಾದ ಸಾರ್ವತ್ರಿಕ ಧರ್ಮಗಳನ್ನೂ ಅವು ಸರ್ವಜನರಿಗೂ ಸುಲಭವೇದ್ಯವಾದ ಭಾಷೆಯಲ್ಲಿ ಅರುಹುತ್ತಿದ್ದುವು. ರಾಮಾಯಣ, ಮಹಾಭಾರತಗಳೆಂಬ ಆರ್ಷಕಾವ್ಯಗಳು ಹುಟ್ಟಿದುದು ಈ ಪ್ರಥಮಯುಗದಲ್ಲಿ. ವೇದಾಧಿಕಾರವಿಲ್ಲದ ಜನತೆಗೂ ಆರ್ಯಸಂಸ್ಕೃತಿ ಸಂಪೂರ್ಣವಾಗಿ ಪ್ರವಹಿಸುವಂತೆ ಮಾಡಿದ ಯಶಸ್ಸು ಈ ಆರ್ಷಕಾವ್ಯಗಳದು. ಇಂದು ನಾವು ಭಾರತೀಯ ಸಂಸ್ಕೃತಿಯ ವೈಲಕ್ಷಣ್ಯವೆನ್ನುವ ಪಾಪ ಭೀತಿ, ಪುಣ್ಯಶ್ರದ್ಧೆ, ಕರ್ಮ—ಪುನರ್ಜನ್ಮಗಳಲ್ಲಿ ವಿಶ್ವಾಸ, ಆಸ್ತಿಕತೆ, ಇತ್ಯಾದಿಗಳೆಲ್ಲವೂ ಈ ಆರ್ಷಕಾವ್ಯಗಳ ಪರಿಣಾಮವೇ ಎನ್ನಬಹುದಾಗಿದೆ. ಆರ್ಯರ ಸನಾತಧರ್ಮವು ಜನತೆಯ ಮೇಲೆ ತನ್ನ ಪ್ರಭಾವವನ್ನುಳಿಸಿಕೊಂಡುದೇ ಈ ಕಾವ್ಯಗಳ ಮೂಲಕ. ಅಂತೆಯೇ ಇವೆರಡನ್ನೂ ಭಾರತದ ರಾಷ್ಟ್ರೀಯ ಕಾವ್ಯಗಳೆನ್ನಬೇಕು. ರಾಮಾಯಣದಲ್ಲಿ ಗುಣೈಕಲೋಲನಾದ, ಧರ್ಮನಿರತನಾದ, ಧೀರೋದಾತ್ತ ನಾಯಕನೊಬ್ಬನ ಸಮಗ್ರ ಚಿತ್ರವಿದ್ದರೆ, ಮಹಾಭಾರತದಲ್ಲಿ ಸಾಂಸಾರಿಕ ಜೀವನದ ಪರಿಧಿಗಿಂತ ಹೊರಗೆ ನಿಲ್ಲುವ ಅನೇಕಾನೇಕ ಸಾಮಾಜಿಕ, ರಾಜಕೀಯ, ನೈತಿಕ, ಧಾರ್ಮಿಕ ವಿಷಯಗಳೂ ಸಮ್ಮಿಳಿತವಾಗುವಂತೆ ನೂರಾರು ಉಪಾಖ್ಯಾನಗಳೂ ಹಲವಾರು ನಾಯಕರೂ ಬರುತ್ತಾರೆ. ಮಹಾಭಾರತದ ಕ್ಷಾತ್ರತೇಜವೂ, ನೈತಿಕ ಸಂಪತ್ತೂ ಭಾರತವರ್ಷದಷ್ಟೇ ಬೃಹತ್ಪ್ರಮಾಣದವು. ಹೀಗೆ ಎರಡೂ ಆರ್ಷಕಾವ್ಯಗಳು ಕೂಡಿ ಮಾನವನ ಜೀವನಸ್ತರಗಳೆಲ್ಲವನ್ನೂ ವ್ಯಾಪಿಸುವುದರಿಂದ ಅವು ಭಾರತಜನತೆಯ ಮನೋ

ಮಂದಿರದಲ್ಲಿ ಚಿರಸ್ಥಾಯಿಯಾಗಿ ನಿಂತಿವೆ. ಅಖಂಡ ಭಾರತೀಯ ಆದರ್ಶ ಗಳನ್ನು ಅರಿಯುವವರಿಗೆ ಈ ಆರ್ಷಕಾವ್ಯಗಳ ಅನುಶೀಲನೆ ಅಗತ್ಯ. ಇವುಗಳ ಭಾಷೆ ಸಹಜ ಮತ್ತು ಸರಳ, ವರ್ಣನೆಗಿಂತ ಕಥಾ ನಿರೂಪಣೆಯ ಗುರಿ ಹೆಚ್ಚು, ಛಂದಸ್ಸೂ ಶ್ಲೋಕಮಯವಾದುದು.

೨. ಸನಾತನ ಧರ್ಮವು ಆರ್ಷಕಾವ್ಯಗಳ ಮೂಲಕ ಜನತೆಯನ್ನು ಮುಟ್ಟಿದುದನ್ನು ಕಂಡ ಬೌದ್ಧರೂ ಜೈನರೂ ಈ ಮಾರ್ಗವನ್ನೇ ತಮ್ಮತಮ್ಮ ಮತಗಳ ಪ್ರಚಾರಕ್ಕಾಗಿ ಉಪಯೋಗಿಸಿಕೊಂಡರು. ಬೇರೆ ಬೇರೆ ಧರ್ಮ ಪ್ರವರ್ತಕರ ಕಥೆಗಳನ್ನೂ ಕಥಾನಕಗಳನ್ನೂ ಆರ್ಷಕವಿಗಳಂತೆಯೇ ನಿರೂಪಿ ಸಿದರು. ಹೀಗೆಮಾಡಿದ ಬೌದ್ಧರಲ್ಲಿ ಅಶ್ವಘೋಷನೂ ಜೈನರಲ್ಲಿ ಜಿನಸೇನನೂ ಅಗ್ರಗಣ್ಯರಾಗಿದ್ದಾರೆ. ' ಧಾರ್ಮಿಕರಲ್ಲದವರ ಕಥೆ ವಾಙ್ಮಯವಲ್ಲ, ವಾಙ್ಮಲ' ಎಂಬ ಜಿನಸೇನನ ಮಾತು ಪೂರ್ವದ ಎಲ್ಲ ಕವಿಗಳಿಗೂ ಅನ್ವಯಿಸುತ್ತದೆ. ಆದಿಕಾಲದಿಂದಾರಂಭವಾಗುವ ಧಾರ್ಮಿಕಕಾವ್ಯದ ಸ್ರೋತವು-ಅವಿಚ್ಛಿನ್ನ ವಾಗಿ ಇಂದಿನವರೆಗೂ ಸಂಸ್ಕೃತದಲ್ಲಿ ಹರಿದು ಬಂದಿದೆ.

೩. ಧಾರ್ಮಿಕಭಾವನೆಯನ್ನು ಗೌಣವಾಗಿ ಮಾಡಿ, ಕಥಾವಿಸ್ತಾರವನ್ನು ಕುಗ್ಗಿಸಿ, ಪುರಾತನ ರಾಜರೇ ಮುಂತಾದ ಮಹಾವ್ಯಕ್ತಿಗಳ ಸರಸವರ್ಣನೆ ಯನ್ನು ಪ್ರಧಾನವಾಗಿಸುವ ಸಂಪ್ರದಾಯ ಮೂರನೆಯದು. ವರ್ಣನೆಗೆ ಅಂಗ ವಾಗಿ ಷಡೃತುಗಳು. ಸೂರ್ಯಚಂದ್ರರ ಉದಯಾಸ್ತಗಳು, ವನವಿಹಾರ ಜಲ ಕ್ರೀಡೆಗಳು, ಪರ್ವತಸರಿತ್ಸಾಗರಗಳು, ಫಲಪುಷ್ಪವಿಶೇಷಗಳು, ಹಂಸಸಾರ ಸಾದಿಖಗಮೃಗಗಳು —ಇತ್ಯಾದಿ ಎಲ್ಲ ಬಗೆಯ ಪ್ರಕೃತಿ ಪ್ರಕಾರಗಳಿಗೂ ಕಥಾಪಾತ್ರಗಳಿಗೆ ಕಡಿಮೆಯಿಲ್ಲದ ಪ್ರಾಶಸ್ತ್ಯವನ್ನು ಕೊಟ್ಟು ಬರೆಯುವ ಮಹಾಕಾವ್ಯ–ಸಂಪ್ರದಾಯಕ್ಕೆ ಕಾಳಿದಾಸನೇ ಶಿಖರಪ್ರಾಯ. ಅಯತ್ನ ಸಾಧ್ಯವಾದ ಎಂದರೆ ಸಹಜಪ್ರತಿಭಾನುಪ್ರಾಣಿತವಾದ ಉಪಮಾರೂಪಕಾದಿ ಅಲಂಕಾರಗಳಿಗೆ ಈ ಮೂರನೆಯ ಜಾತಿಯ ಕಾವ್ಯಗಳಲ್ಲಿ ವಿಶೇಷ ಸ್ವಾಗತ ವುಂಟು. ಕವಿಯೆಂದರೆ ಕತೆಗಾರನಲ್ಲ, ವರ್ಣನಾ ನಿಪುಣನೆಂಬ ಅಭಿಪ್ರಾಯ ತಲೆದೋರಿದ ಕಾಲವಿದು. ಇತಿಹಾಸಕ್ಕಿಂತಲೂ, ಧರ್ಮಕ್ಕಿಂತಲೂ, ಹೆಚ್ಚಿನ ಪ್ರಾಶಸ್ತ್ಯ ಕವಿಕರ್ಮಕ್ಕೆ ಒದಗಿದ ಈ ಕಾಲದಲ್ಲಿ ಶುದ್ಧ ಕಾವ್ಯಗಳ ಉದಯ ಸಾಧ್ಯವಾಯಿತೆನ್ನಬಹುದು.

೪. ಕಾವ್ಯಕ್ಷೇತ್ರದಲ್ಲಿ ಕೃಷಿ ಹೆಚ್ಚಾದಂತೆ ಕವಿಗಳಲ್ಲಿ ಸ್ಪರ್ಧೆ ಪ್ರತಿಸ್ಪರ್ಧೆಗಳೂ ಹೆಚ್ಚಾಗುತ್ತ ನಡೆದು ಯಮಕಾದಿ ದುಷ್ಕರಾಲಂಕಾರಗಳು, ಅತಿಜಟಿಲ ವ್ಯಾಕರಣ ಪ್ರಯೋಗಗಳು, ಖಡ್ಗಾದಿ ಚಿತ್ರರಚನೆಗಳು, ಒಗಟು, ಏಕಾಕ್ಷರೀ, ಮುಂತಾದ ಬೌದ್ಧಿಕ ವಿನೋದಗಳೆಲ್ಲಕ್ಕೂ ಕಾವ್ಯದಲ್ಲಿ ಸ್ಥಾನವುಂಟಾಗಿ ಕವಿಶಕ್ತಿಯ ತಾರತಮ್ಯ ಪರೀಕ್ಷೆಗೆ ಇವೇ ಒರೆಗಲ್ಲಾದ ಕಾಲ ನಾಲ್ಕನೆಯದು. ಸ್ವಭಾವವಾಗಿ ಒಳ್ಳೆಯ ಕವಿಯಾದರೂ ಭಾರವಿ ಶಕ್ತಿಪ್ರದರ್ಶನವನ್ನು ಮರೆಯುವಂತಿರಲಿಲ್ಲ.

೫. ಸಹಜಪ್ರತಿಭೆಗೆ ಮಾತ್ರ ಸಲ್ಲುತ್ತಿದ್ದ ಪುರಸ್ಕಾರ ನಾಲ್ಕನೆಯ ಕಾಲದಲ್ಲಿ ದುಷ್ಕರ ಬುದ್ಧಿಕೌಶಲಕ್ಕೂ ಸ್ವಲ್ಪ ಸಲ್ಲುವಂತಾಗಿದ್ದರೆ, ಮುಂದೆ ದುಷ್ಕರ ಬುದ್ಧಿಕೌಶಲವೇ ಪ್ರತಿಭೆಯೆನ್ನುವಂತಾದುದು ಐದನೆಯ ಕಾಲ. ಶ್ರೀಹರ್ಷನು ಈ ಅಭಿರುಚಿಯ ಪ್ರತಿನಿಧಿ ; ಕೃತ್ರಿಮತೆಯ ಪರಮಾವಧಿ.

೬. ಕಾವ್ಯದ ಮುಖ್ಯಪ್ರಕಾರವಾದ 'ಮಹಾಕಾವ್ಯ' ದಲ್ಲಿ ಮೇಲೆ ನೋಡಿದ ಗುಣಾವಗುಣಗಳೇ ಭಾವಗೀತೆಯೇ ಮುಂತಾದ ಇತರ ಕಾವ್ಯ ಪ್ರಕಾರಗಳಲ್ಲಿ ಬೇರೊಂದು ರೀತಿಯಿಂದ ಗೋಚರವಾಗುತ್ತದೆ. ಪರಿಶುದ್ಧ ಪ್ರೇಮದ, ವಿಶೇಷತಃ ವಿಪ್ರಲಂಭಶೃಂಗಾರದ, ಸುಂದರ ಗೀತಕಾವ್ಯಗಳು ಆದಿಯಲ್ಲಿ ಬಂದರೆ, ಕ್ರಮಕ್ರಮೇಣ ಅವು ಕಾಮೋದ್ದೀಪಕಗಳಾಗುತ್ತ ಹೋಗಿ, ಕಡೆಕಡೆಗೆ ಕಾಮಶಾಸ್ತ್ರದ ವಿವರಣೆಗಳಲ್ಲಿ ಪರ್ಯವಸಾನವಾಗುತ್ತವೆ.

೭. ಸಂಸ್ಕೃತದಲ್ಲಿ ಗದ್ಯಕಥಾನಿರೂಪಣೆ ಆರಂಭವಾದ ಕಾಲ ನಾವು ಮೇಲೆ ನೋಡಿದ ನಾಲ್ಕನೆಯ ಅಭಿರುಚಿ ಪ್ರಬಲವಾಗಿದ್ದ ಕಾಲ. ಆರ್ಷ ಕಾಲದಲ್ಲೇ ಲೌಕಿಕ ಕಥೆಗಳನ್ನು ಪ್ರೌಢರಿಗಾಗಿ ಬರೆಯುವ ಪ್ರವೃತ್ತಿ ಬಂದಿದ್ದರೆ ಶಾಸ್ತ್ರಗದ್ಯದಂತೆ, ಕಾವ್ಯಗದ್ಯವೂ ಬೆಳೆಯಬಹುದಾಗಿದ್ದಿತು. ಆದರೆ ಸುಲಭವಾದ ಶ್ಲೋಕರಚನೆಯು ಈ ಪ್ರವೃತ್ತಿಯನ್ನು ಬೆಳೆಯಗೊಡಲಿಲ್ಲ. ಮಹಾಕಾವ್ಯಕ್ಕೆ ಕಡಿಮೆಯಲ್ಲದ, ಆದಷ್ಟು ಅದಕ್ಕೂ ಹೆಚ್ಚಿನ ಹೊಳಪು ಇರುವ, ಗದ್ಯವೇ ಕಾವ್ಯಗದ್ಯವೆಂಬ ಕಲ್ಪನೆಯಿಂದ ಕವಿಗಳು ಬರೆದುದರ ಪರಿಣಾಮವಾಗಿ, ಕಥಾಸಾಹಿತ್ಯ ಸಂಸ್ಕೃತ ಗದ್ಯದಲ್ಲಿ ಅಷ್ಟಾಗಿ ಬೆಳೆಯಲಾಗಲಿಲ್ಲ.

೮. ವಿಡಂಬನೆ, ನೀತಿ, ವೈರಾಗ್ಯ ಮುಂತಾದುವು ಪ್ರಧಾನವಾದ ಲಘು ಕಾವ್ಯಗಳೂ ಸಂಸ್ಕೃತದಲ್ಲಿ ಉಂಟು. ಈ ಜಾತಿಯ ಸ್ವತಂತ್ರ ಗ್ರಂಥಗಳ ಸಂಖ್ಯೆ ಸಣ್ಣದೆನಿಸಿದರೂ, ಉಪಲಬ್ಧವಿರುವ ಹಲವು ಸುಭಾಷಿತ ಸಂಗ್ರಹ ಗಳಲ್ಲಿ ಹಂಚಿಹೋಗಿರುವ ಇವನ್ನೆಲ್ಲ ವರ್ಗೀಕರಿಸಿದರೆ ಅವುಗಳ ಸಂಖ್ಯೆ ಅನೇಕ ಸಾವಿರವಾಗುವುದರಲ್ಲಿ ಸಂಶಯವಿಲ್ಲ, ಈ ಕೆಲಸವಿನ್ನೂ ನಡೆಯ ಬೇಕಾಗಿದೆ.

೯. ಸಂಸ್ಕೃತದಲ್ಲಿ ಹತ್ತಾರು ಐತಿಹಾಸಿಕ ಕಾವ್ಯಗಳಿದ್ದರೂ, ಅವುಗಳಲ್ಲೆಲ್ಲ ಐತಿಹಾಸಿಕಾಂಶಗಳ ಜತೆಗೆ ಕಾಲ್ಪನಿಕ ಅಂಶಗಳೂ ಸೇರಿ ಕೊಂಡೇ ಇರುತ್ತವೆ.

೧೦. ಸಂಸ್ಕೃತದಲ್ಲಿರುವ ಸ್ತೋತ್ರಸಾಹಿತ್ಯ ಅತಿ ವಿಪುಲವಾದುದು. ಸ್ತೋತ್ರಗಳಲ್ಲಿ ಕೇವಲ ನಾಮಾವಳಿಗಳಿರುವಂತೆಯೇ ಅತಿ ದೀರ್ಘಸಮಾಸ ಗಳಿಂದಲೂ ಶ್ಲಿಷ್ಟಾಲಂಕಾರಗಳಿಂದಲೂ ತುಂಬಿದ ಪ್ರೌಢ ಸ್ತೋತ್ರಕಾವ್ಯಗಳೂ ಉಂಟು. ಭಕ್ತಿಪ್ರಚೋದಕವಾದ ಸ್ತೋತ್ರಗಳಿಗೆ ಲೆಕ್ಕವೇ ಇಲ್ಲ.

ಸಾಮಾನ್ಯ ಜನತೆಯ ನಿತ್ಯಜೀವನವನ್ನೇ ಆಧಾರವಾಗಿಟ್ಟುಕೊಂಡು ಮಹಾಕಾವ್ಯಗಳನ್ನಾಗಲಿ, ದೀರ್ಘಪರಿಮಿತಿಯ ಲಘುಕಾವ್ಯಗಳನ್ನಾಗಲಿ ಪೂರ್ವಿಕರು ಸಂಸ್ಕೃತದಲ್ಲಿ ಬರೆದಂತೆ ಕಾಣುವುದಿಲ್ಲ. ಈ ಕೊರತೆಯನ್ನು ಇಪ್ಪತ್ತನೆಯ ಶತಮಾನದ ಸಂಸ್ಕೃತ ಕವಿಗಳು ತಪ್ಪಿಸುತ್ತಿದ್ದಾರೆ.*

೧೧. ಮೊದಲಿನಿಂದ ಕಡೆಯವರೆಗೆ, ಆರ್ಷಕಾವ್ಯದಂತೆ ಎಲ್ಲ ಕಾವ್ಯ ಪ್ರಕಾರಗಳಲ್ಲೂ ಅನುಸ್ಯೂತವಾಗಿ ಬರುವ ಭಾರತೀಯ ಮನೋಧರ್ಮ ವೆಂದರೆ ಪ್ರಕೃತಿಯನ್ನು ಕುರಿತ ಸಜೀವತೆ ಮತ್ತು ಆತ್ಮೀಯತೆ. ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ, ಭರ್ತೃಹರಿ, ಜಗನ್ನಾಥ ಮುಂತಾದ ಭಿನ್ನ ಕಾಲದೇಶದ ಕವಿಗಳೆಲ್ಲರಿಗೂ ಬಾಹ್ಯಪ್ರಕೃತಿಯಲ್ಲಿ ಜಡಾಂಶದ ಬದಲು ಚೈತನ್ಯಾಂಶವೇ ಹೆಚ್ಚಾಗಿ ಗೋಚರವಾಗುತ್ತದೆ. ಅಗ್ನಿ, ಸೂರ್ಯ, ವಾಯು, ಚಂದ್ರ, ಗ್ರಹ, ನಕ್ಷತ್ರಗಳು ಸಜೀವ ದೇವತೆಗಳಾಗಿ ಕಾಣುವಂತೆಯೇ ಗಿಡಬಳ್ಳಿ ಹೂಹಣ್ಣುಗಳೂ, ಪಶುಪಕ್ಷಿಗಿರಿಗಹ್ವರಗಳೂ ಸಚೇತನವಾಗಿ

* V. Raghavan : Report of Sahitya Akademi. Delhi.

ಕವಿಗಳ ಕಲ್ಪನೆಯಲ್ಲಿ ರೂಪುಗೊಳ್ಳುತ್ತವೆ. ಉಪನಿಷತ್ತುಗಳಲ್ಲೂ, ಗೀತೆಯಲ್ಲೂ ಯಾವ ಆಧ್ಯಾತ್ಮಿಕ ದೃಷ್ಟಿ ವರ್ಣಿತವಾಗಿದೆಯೋ, ಯಾವ ಪಾರಮಾರ್ಥಿಕ ದೃಷ್ಟಿಗೆ ಮಾತ್ರ ಈ ಸರ್ವಸಾಮರಸ್ಯ ಪ್ರತೀತಿಯೋಗ್ಯವೋ, ಆ ಅಖಂಡದೃಷ್ಟಿ ಸಂಸ್ಕೃತಕಾವ್ಯದ ವೈಲಕ್ಷಣ್ಯವಷ್ಟೇ ಅಲ್ಲ, ಅದ್ವಿತೀಯ ಸಿದ್ಧಿಯೂ ಹೌದು.

೧೨. ಸಂಸ್ಕೃತ ಕಾವ್ಯಗಳ ಛಂದೋವೈವಿಧ್ಯ ಮತ್ತು ಗದ್ಯಬಂಧ ಪ್ರೌಢಿ, ವ್ಯಾಕರಣಶುದ್ಧಿ ಮತ್ತು ಅಲಂಕಾರಸಮೃದ್ಧಿ, ಶಬ್ದರಾಶಿ ಮತ್ತು ಅರ್ಥಗೌರವ, ಭಕ್ತಿವಿಕಾಸ ಮತ್ತು ಶೃಂಗಾರವಿಲಾಸ, ಇತರ ಭಾಷಾಕಾವ್ಯ ಗಳಲ್ಲಿ ಇದೇ ಪ್ರಮಾಣದಲ್ಲಿ ಸಿಕ್ಕಲಾರದು.

೧೩. ಸಂಸ್ಕೃತಕಾವ್ಯ ಬೆಳೆದ ಪ್ರಮಾಣದಲ್ಲಿ ಸಂಸ್ಕೃತ ಕಾವ್ಯ ವಿಮರ್ಶೆ ಒಂದು ಸ್ವತಂತ್ರಸಾಹಿತ್ಯಪ್ರಕಾರವಾಗಿ ಬೆಳೆಯಲಿಲ್ಲ, ಒಂದು ಸ್ವತಂತ್ರ ಶಾಸ್ತ್ರವಾಗಿ ಅಲಂಕಾರಶಾಸ್ತ್ರ ಮಾತ್ರ ಬೆಳೆಯಿತು. ಶಾಸ್ತ್ರೀಯತೆ ಹೆಚ್ಚಾದಂತೆ, ರಸವಿವಕ್ಷೆ ಕಡಿಮೆಯಾದುದನ್ನು ಆನಂದವರ್ಧನಾದಿ ಲಾಕ್ಷಣಿಕರೂ ಮಂಖನೇ ಮೊದಲಾದ ಕವಿಗಳೂ ಬೆಟ್ಟುಮಾಡಿ ತೋರಿಸು ವಂತಾಯಿತು.

೧೪. ಸಂಸ್ಕೃತ ಕಾವ್ಯವು ವ್ಯಾಕರಣ, ಛಂದಸ್ಸು, ಅರ್ಥ ಮುಂತಾದುವು ಗಳಲ್ಲಿ ಎಳ್ಳಷ್ಟು ದೋಷಕ್ಕೂ ಎಡೆಯೀಯುತ್ತಿರಲಿಲ್ಲ ಒಂದು ಸಣ್ಣ ತಪ್ಪು ಸಿಕ್ಕಿದರೂ ಕವಿ ವಿದ್ವಾಂಸರ ಹಾಸ್ಯಕ್ಕೆ ಗುರಿಯಾಗುತ್ತಿದ್ದನು. ದೋಷವನ್ನು ತೆಗೆಯಬಲ್ಲವನೇ .ವಿದ್ವಾಂಸನೆಂಬ ಕಲ್ಪನೆ ಕೂಡ ಭಾರತದುದ್ದಕ್ಕೂ ಬೇರೂರಿದ್ದಿತು. ಕಾವ್ಯವಿಮರ್ಶೆಗೆ ದೋಷವಿವೇಕದಂತೆ ಗುಣಗ್ರಹಣೆಯ ಅಗತ್ಯವೂ ಗೊತ್ತಿಲ್ಲದೆ ಇರಲಿಲ್ಲ. ಗುಣದೋಷಪರಿಜ್ಞಾನವಿಲ್ಲದವನ ಶ್ಲಾಘನೆಗೆ ಯಾವ ಬೆಲೆಯೂ ಇರುತ್ತಿರಲಿಲ್ಲ. 'ಮರಗಳು ಗಾಳಿಗೆ ತೂಗಾಡುವಂತೆ ಗುಣಾಗುಣ ವಿವೇಚನೆಯಿಲ್ಲದ ಅಜ್ಞರು ರಸವತ್ಕವಿತೆಯನ್ನು ಕುರಿತು ತಲೆದೂಗಿದರೇನಾಯಿತು ? ವ್ಯಂಗ್ಯಚಮತ್ಕೃತಿಗಳನ್ನೂ, ರಸದ ಗತಿಗಳನ್ನೂ, ಅರ್ಥದ ಔಚಿತ್ಯವನ್ನೂ ಪರಿಭಾವಿಸಿ ಸಹೃದಯನು ಅಂತರಂಗ ದಲ್ಲಿ ಪಡೆಯುವ ಆನಂದವೇ ಕವಿಯ ಜೀವನಾಡಿ', ಎಂಬ ಸುಭಾಷಿತವು ಸಂಸ್ಕೃತ ಕಾವ್ಯಾಭಿರುಚಿಯನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ :—

**ಅಂಧೀಭೂಯ ಗುಣಾಗುಣೇಷು ತರವೋ ವಾತಾವಧೂತಾ ಇವ**
**ಶ್ಲಾಘಂತೇ ಯದಿ ಸಾಹಿತೀಂ ರಸವತೀಮಜ್ಞಾಃ ತತಃ ಕಿಂ ಫಲಂ**
**ಜಾನನ್ ವ್ಯಂಗ್ಯಚಮತ್ಕೃತೀಃ ರಸಗತೀರರ್ಥೌಚಿತೀ**
**ರಾದರಾತ್**
**ಅಂತಶ್ಚರ್ವಯದಶ್ನುತೇ ಸಹೃದಯಃ ಸಾ ಜೀವನಾಡೀ**
**ಕವೇಃ ||**

ಸಂಸ್ಕೃತ ಕವಿಗಳೆಲ್ಲರೂ ಪಾಮರರಂಜನೆಗಿಂತ ಪಂಡಿತ ಪ್ರಶಂಸೆಗೆ ಹೆಚ್ಚಿನ ಸ್ಥಾನವನ್ನೀಯುತ್ತಿದ್ದರು.

**೧೫. " ಬುಭುಕ್ಷಿತೈರ್ವ್ಯಾಕರಣಂ ನ ಭುಜ್ಯತೇ**
**ನ ಪೀಯತೇ ಕಾವ್ಯರಸಃ ಪಿಪಾಸಿತೈಃ ।**
**ನ ವಿದ್ಯಯಾ ಕೇನಚಿದುದ್ಧೃತಂ ಕುಲಂ**
**ಹಿರಣ್ಯಮೇವಾರ್ಜಯ ನಿಷ್ಫಲಾಃ ಕಲಾಃ " ||**

" ಹಸಿದವರಿಗೆ ವ್ಯಾಕರಣದಿಂದ ಹೊಟ್ಟೆ ತುಂಬುವುದಿಲ್ಲ ; ಬಾಯಾರಿದವರಿಗೆ ಕಾವ್ಯರಸದಿಂದ ನೀರಡಿಕೆ ಶಾಂತವಾಗುವುದಿಲ್ಲ. ವಿದ್ಯೆಯಿಂದ ಯಾರೂ ಮನೆಯನ್ನು ದೊಡ್ಡದು ಮಾಡಿಲ್ಲ. ದುಡ್ಡನ್ನೇ ಸಂಪಾದಿಸಬೇಕು. ಕಲೆಗಳೆಲ್ಲವೂ ನಿಷ್ಫಲ."—ಈ ಮಾತುಗಳು ಕಿವಿ ಕಿವುಡಾಗುವವರೆಗೂ ನಮಗಿಂದು ಕೇಳಿಸುತ್ತಿವೆ. ಆದರೆ ಇದೇ ಮಾತುಗಳನ್ನು ಸಾವಿರದಿನ್ನೂರು ವರ್ಷಗಳ ಹಿಂದೆ ಮಾಘನೇ ಹೇಳಿದ್ದಾನೆ. ಇಷ್ಟು ಗೊತ್ತಿಲ್ಲದೆ ನಮ್ಮ ಪೂರ್ವಜರೆಲ್ಲರೂ ತಮ್ಮ ಆಯುಷ್ಯದ ಉತ್ತಮಭಾಗವನ್ನೆಲ್ಲ ನಿಷ್ಫಲವಾದ ಕಾವ್ಯಲೋಕದಲ್ಲಿ ಕಳೆದರೆಂದು ಯಾರೂ ಹಾಸ್ಯಮಾಡಬೇಕಾದ ಪ್ರಮೇಯವಿಲ್ಲ. ಇದು ಗೊತ್ತಿದ್ದ ಭಾರತೀಯರಿಗೆ ಇದಕ್ಕಿಂತ ಕಾವ್ಯವ್ಯಾಪಾರವು ಹೆಚ್ಚಿನದೆಂಬ ವಿಷಯದಲ್ಲಿಯೂ ಸಂದೇಹವಿರಲಿಲ್ಲ. ದ್ರವ್ಯಾರ್ಜನೆಯ ದುರಾಸೆ ಕಾವ್ಯಪ್ರಪಂಚದಲ್ಲಿಯೂ ಇಳಿದಾಗಲೇ ಅದರ ಅಂತಸ್ಸತ್ತ್ವ ಉಡುಗಿ, ಹೃದಯಹಾರಿತ್ವ ಅಡಗಿ, ಕೃತ್ರಿಮತೆಯ ಕೈವಾಡ ಹರಡಿ, ಸಂಸ್ಕೃತವಾಹಿನಿ ನಿಂತ ನೀರಾದುದನ್ನು ನೋಡಿದ್ದೇವೆ. ಕವಿ ಅಂತಃ

ಸ್ಫೂರ್ತಿಯಿಂದಲೇ ಎಲ್ಲಿಯುವರೆಗೆ ಬರೆದನೋ ಅಲ್ಲಿಯುವರೆಗೆ ಸಂಸ್ಕೃತ ಕಾವ್ಯದ ವೃದ್ಧಿ ಅವ್ಯಾಹತವಾಗಿ ಸಾಗಿತ್ತು. ಈ ಅಂತಃಸ್ಫೂರ್ತಿ ಒಮ್ಮೆ ಧರ್ಮದಿಂದ ಬಂದರೆ ಮತ್ತೊಮ್ಮೆ ಸೌಂದರ್ಯಾರಾಧನೆಯಿಂದ ಬರುತ್ತಿತ್ತು. ಒಮ್ಮೆ ಭಕ್ತಿಯಿಂದ ಉಕ್ಕಿದರೆ ಇನ್ನೊಮ್ಮೆ ಪ್ರೇಮದಿಂದ ಪ್ರವಹಿಸುತ್ತಿತ್ತು. ಆರ್ಷವಾಣಿಯ ಅಜರಸ್ರೋತವು ಕಾಳಿದಾಸನಲ್ಲಿ ಕಲಾವಿಲಾಸದ ಪಾರಮ್ಯ ವನ್ನು ಮುಟ್ಟಿ, ಬರಬರುತ್ತ ಪಾಂಡಿತ್ಯಮುದ್ರಾಂಕಿತವಾದರೂ ಕಾವ್ಯಗುಣ ವನ್ನು ಕಳೆದುಕೊಳ್ಳದೆ ಹೊಸ ಹೊಸ ಉಪನದಿಗಳನ್ನು ಪೋಷಿಸುತ್ತಿತ್ತು. ಶಕ್ತಿಹೀನರ ಉಕ್ತಿವೈಯರ್ಥ್ಯವನ್ನು ಮನಗಂಡ ಮಹನೀಯರು ಪ್ರಾಚೀನ ಕಾಲದಲ್ಲಿಯೇ ಇಲ್ಲದಿರಲಿಲ್ಲ. ಅವರ ಧ್ವನಿ ಧನಪಿಶಾಚಗ್ರಸ್ತರ ಕಿವಿಗಳ ಮೇಲೆ ಬೀಳುತ್ತಿರಲಿಲ್ಲ, ಉದಾತ್ತ ಸಾಹಿತ್ಯದ ಉನ್ನತೋನ್ನತ ಶಿಖರ ಗಳಲ್ಲಿ ರಾರಾಜಿಸಿದ ಸಂಸ್ಕೃತ ಕಾವ್ಯವೇ, ಶಬ್ದಾರ್ಥಗಳ ಸಕಲ ಸೌಂದರ್ಯ ಪ್ರಕಾರಗಳ ಸಾಕಾರ ಸಿದ್ಧಿಯನ್ನು ಪ್ರಯೋಗದಿಂದ ತೋರಿ ಸಿದ ಸಂಸ್ಕೃತ ಕಾವ್ಯವೇ, ಕ್ಷುದ್ರ ಲೌಕಿಕ ಲೋಪಗಳನ್ನು ನಿರ್ದಾ ಕ್ಷಿಣ್ಯವಾಗಿ, ಹಾಸ್ಯಮಯವಾಗಿ, ಪ್ರತಿಪಾದಿಸುವ ಪ್ರಯತ್ನಗಳಿಗೂ ಪುರಸ್ಕಾರವನ್ನು ಕೊಟ್ಟಿತ್ತು. ಆದರ್ಶ ಸಣ್ಣನಾಗಿ, ಆಚಾರ ಅಲ್ಪವಾಗಿ, ಸಂಪ್ರದಾಯ ಗಂಟಲ ಗಾಣವಾಗುವ ಪ್ರಸಂಗ ಬಂದಿತೇ ಹೊರತು, ಸಂಪ್ರದಾಯದಲ್ಲಿಯೇ ಮೂಲತಃ ದೋಷವೇನೂ ಇರಲಿಲ್ಲ. ಪಂಡಿತರಿಗೆಲ್ಲ ಮಹಾಕವಿಗಳ ಪಟ್ಟವನ್ನು ಕಟ್ಟಿದ ರಾಜಾಸ್ಥಾನಗಳೂ ಅಭಿರುಚಿ ಕೆಡಲು ಕಾರಣವಾದುದು ನಿಜ. ಆದರೆ ಸಂಸ್ಕೃತ ಮಹಾಕವಿಗಳ ಉಗಮವೇ ಹನ್ನೆರಡನೆಯ ಶತಮಾನದಿಂದಾಚೆಗೆ ವಿರಳವಾಗುತ್ತ ಬಂದು ಹತ್ತೊಂಭತ್ತ ನೆಯ ಶತಮಾನದ ಹೊತ್ತಿಗೆ ನಿಶ್ಶೇಷವಾಗಲು ರಾಜಕೀಯ ಇತಿಹಾಸವಲ್ಲದೆ ಬೇರಾವ ಕಾರಣವೂ ಇಲ್ಲ. ಪ್ರಾಚೀನ ಭಾರತದ ಭವ್ಯ ಆದರ್ಶಗಳ ಬುಡಕ್ಕೇ ಪಾಶ್ಚಾತ್ಯ ವಿದ್ಯಾಪ್ರಚಾರದಿಂದ ಕೊಡಲಿಪೆಟ್ಟು ಬಿದ್ದಿತು. ವಿದ್ಯಮಾನ ಅಂಧಾಚಾರಗಳೇ ಭಾರತದ ಪೂರ್ವಪರಂಪರೆಯೆಂಬ ಭ್ರಾಂತಿ 'ವಿದ್ಯಾವಂತ'ರಲ್ಲಿ ಬೆಳೆಯಿತು. ಸಂಸ್ಕೃತ ಪ್ರೇಮಿಗಳು ಕಂದಾಚಾರದ ಗೊಡ್ಡುಗಳೆಂಬ ಅಪಪ್ರಥೆ ದೇಶದಲ್ಲೆಲ್ಲ ಹಬ್ಬಿತು. ಈ ಹೊಸ ಆಧುನಿಕ ವಾತಾವರಣದಲ್ಲಿ, ಧನಸಂಗ್ರಹದ ಅಪರಿಮಿತ ಪ್ರಣಾಲಿಗಳ ಸ್ಪರ್ಧೆಯಲ್ಲಿ

ಸಂಸ್ಕೃತದ ಅಧ್ಯಯನ ಹಿಂದೆ ಬಿದ್ದಿತು; ಸಂಸ್ಕೃತ ವಿದ್ವಾಂಸರಿಗೆ ಗೌರವಕ್ಕಿಂತ ಅಗೌರವದ ಪ್ರಸಂಗಗಳೇ ಹೆಚ್ಚಾದುವು. ರಾಜರ ಆಸ್ಥಾನ ಕವಿಗಳನ್ನು ಬಿಟ್ಟರೆ ಉಳಿದ ಮೇಧಾವಿಗಳು ಸಂಸ್ಕೃತ ಕಾವ್ಯರಚನೆಯನ್ನು ಕನಸಿನಲ್ಲಿಯೂ ನೆನೆಯದ ದುಃಸ್ಥಿತಿಯೊದಗಿತು.

ಈಗ ಭಾರತ ಸ್ವತಂತ್ರವಾಗಿದೆ. ಭಾರತಸಂವಿಧಾನದಲ್ಲಿ ಉಕ್ತವಾದ ಭಾಷೆಗಳಲ್ಲಿ ಸಂಸ್ಕೃತಕ್ಕೂ ಒಂದು ಸ್ಥಾನವಿದೆ. ಅದರ ಉಜ್ಜ್ವಲ ಪರಂಪರೆಗೆ ಅನುಗುಣವಾದ ಒಂದು ಉಜ್ಜ್ವಲ ಭವಿತವ್ಯತೆಯನ್ನು ದೊರಕಿಸುವುದು ಇಂದಿನ ಭಾರತೀಯರ ಕೈಯಲ್ಲಿದೆ. ಕೇವಲ ಆಸ್ಥಾನಕವಿಗಳ ಅಥವಾ ಧರ್ಮಪ್ರಚಾರಕರ, ಶಾಸ್ತ್ರವಿಚಾರಿಗಳ ಅಥವಾ ಶಾಲಾಧ್ಯಾಪಕರ, ಸೊತ್ತಾಗಿ ಸಂಸ್ಕೃತ ಬೆಳೆಯಲಾರದು. ಸಂಸ್ಕೃತಕಾವ್ಯದ ಉಚ್ಛ್ರಾಯಕಾಲದಲ್ಲೆಂದೂ ಈ ಸಂಕುಚಿತಭಾವನೆಯಿರಲಿಲ್ಲ. ಸಂಸ್ಕೃತವು ಸಕಲ ಭಾರತೀಯರ ಹೃದಯಗಳಲ್ಲಿ ಸ್ಪಂದಿಸುವ ಸಜೀವಭಾಷೆಯಾಗಿ ಹಿಂದೆ ಇತ್ತು; ಈಗಲೂ ಇರಬಲ್ಲುದು. ಅದಕ್ಕಿರುವ ಸುದೀರ್ಘ ಹಾಗು ಸಂಪದ್ಯುಕ್ತ ಇತಿಹಾಸ ಭಾರತದ ಮತ್ತಾವ ಭಾಷೆಗೂ ಇಲ್ಲ. ಈ ಒಂದೇ ಕಾರಣದಿಂದಾದರೂ ಹೆಚ್ಚಿನ ವಿಸ್ತಾರವನ್ನೂ ಹೆಚ್ಚಿನ ಸಾರ್ವಜನೀನತೆಯನ್ನೂ ಪಡೆಯುವ ಸಾಮರ್ಥ್ಯ ಅದಲ್ಲದೆ ಬೇರಾವ ಭಾಷೆಗೂ ಇರಲಾರದು. ರಾಷ್ಟ್ರದ ಪುನರ್ನಿರ್ಮಾಣದಲ್ಲಿ ಮಗ್ನವಾಗಿರುವ ಭಾರತೀಯ ಜನತೆ ರಾಷ್ಟ್ರದ ಅಮೂಲ್ಯ ಆಸ್ತಿಯಾದ ಸಂಸ್ಕೃತದ ಪುನರುತ್ಥಾನವನ್ನೂ ಪಂಚವಾರ್ಷಿಕಾದಿಯೋಜನೆಗಳಿಂದ ರೂಪಿಸಿದರೆ ವಿಶ್ವದಲ್ಲೇ ಅಭೂತಪೂರ್ವವಾದ ಮಹಾಸಾಹಿತ್ಯವೊಂದು ಮತ್ತೆ ವಿಶ್ವವಂದ್ಯವಾಗಿ ಪರಿಣಮಿಸೀತು. ಆಧುನಿಕ ಭಾರತೀಯ ಭಾಷೆಗಳಿಗೆಲ್ಲ ಹಿಂದಿನಂತೆ ಇಂದೂ ಹೊಸ ಚೈತನ್ಯವನ್ನೀಯುವ ಸಾಮರ್ಥ್ಯ ಸಂಸ್ಕೃತಕ್ಕೆ ಮತ್ತೆ ಬಂದೀತು—ಹೊಸ ಸಂಪ್ರದಾಯಗಳನ್ನು ಸ್ಥಾಪಿಸಬಲ್ಲ ಸರಸ್ವತೀಪುತ್ರರಾದ ಮಹಾಕವಿಗಳು ಮನಸ್ಸುಮಾಡಿದರೆ! ಈ ದಿಕ್ಕಿನಲ್ಲಾಗಲೇ ಮಾರ್ಗದರ್ಶನ ಮಾಡಿರುವ ಡಾ॥ ಪಂಡಿತಾ ಕ್ಷಮಾಬಾಯಿಯಂತಹವರು ದೇಶದಲ್ಲೆಲ್ಲ ಹೆಚ್ಚಲಿ. ಅಮರವಾಣಿ ಅಮರವಾಗಲಿ. ಸಂಸ್ಕೃತದ ಅತುಲ ಅಂತಸ್ಸತ್ತ್ವವನ್ನು ಅರುಹುವ ಕಾರ್ಯದಲ್ಲಿ ಈ ಗ್ರಂಥದ ಅಳಿಲ ಸೇವೆ ಕನ್ನಡ ಜನತೆಗೆ ಸಲ್ಲಲಿ.

" ಪ್ರಾಚೇತಸೇ ಯಾ ಜಗತಿ ಪ್ರರೂಢಾ
ಯಾ ಪುಷ್ಪಿತಾ ಸತ್ಯವತೀಕುಮಾರೇ ।
ಯಾ ಕಾಲಿದಾಸೇ ಫಲಿತಾ ಕವೀನಾ-
ಮೇಕೋಪಮಾನೇ ಕವಿತಾಲತಾಭೂತ್ ॥

ಅನ್ಯೇಽಪಿ ಸನ್ತಿ ಭವಭೂತಿಮುರಾರಿಮಾಘ-
ಶ್ರೀಹರ್ಷಭಾರವಿಮುಖಾಃ ಪ್ರಥಿತಾಃ ಕವೀಂದ್ರಾಃ ।
ತೇಷಾಂ ಪ್ರಶಂಸನವಿಧೌ ಪಟುತಾ ಕುತಃ ಸ್ಯಾ-
ತ್ತತ್ತಾ ನ ಮೇ ಯದುತ ಯನ್ನ ಚ ತಾದೃಶತ್ವಮ್ ॥"
(ಚಕ್ರಕವಿ)

[' ಸಂಸ್ಕೃತ ಕವಿತೆಯ ಲತೆಯು ವಾಲ್ಮೀಕಿಯಲ್ಲಿ ಹುಟ್ಟಿ ಬೆಳೆದು, ವ್ಯಾಸನಲ್ಲಿ ಹೂಬಿಟ್ಟು, ಕಾಳಿದಾಸನಲ್ಲಿ ಹಣ್ಣುಕೊಟ್ಟಿತಷ್ಟೇ ಅಲ್ಲ; ಎಲ್ಲ ಕವಿಗಳಿಗೂ ಒಂದೇ ನಿರುಪಮ ಆದರ್ಶವನ್ನೊದಗಿಸಿತು. ಎಂದಮೇಲೆ ಭವಭೂತಿ, ಮುರಾರಿ, ಮಾಘ, ಶ್ರೀಹರ್ಷ, ಭಾರವಿ ಮುಂತಾದ ಮುಂದಿನ ಕವೀಂದ್ರರನ್ನೆಲ್ಲ ಸರಿಯಾಗಿ ಪ್ರಶಂಸೆಮಾಡುವ ಯೋಗ್ಯತೆ ಬರುವುದೆಂತು? ಆ ಒಬ್ಬೊಬ್ಬರಲ್ಲೂ ಇದ್ದ ಯೋಗ್ಯತೆಯೇ ನನ್ನಲ್ಲಿ ಬಂದುದಾದರೆ ಅಥವಾ ಅವರಿಗೆ ಸಮಾನವಾದ ಯೋಗ್ಯತೆಯಾದರೂ ಬಂದುದಾದರೆ ಮಾತ್ರ ಒಂದು ವೇಳೆ ಸಾಧ್ಯವಾದೀತು!']

ಸಮಾಪ್ತ.



# ಕವಿ-ಕಾವ್ಯ-ವಿಮರ್ಶಕಾದಿಗಳ
# ಅಕಾರಾದಿ ಸೂಚಿ

[ಅಂಕಿಗಳು ಪುಟಸಂಖ್ಯೆಯನ್ನು ತೋರಿಸುತ್ತವೆ]

(ಟಿ=ಟಿಪ್ಪಣಿ. f=ಮುಂದಿನ ಪುಟಗಳು)


ಅಥರ್ವವೇದ ೬೦ ಟಿ

ಅಧ್ಯಾತ್ಮರಾಮಾಯಣ ೫೧, ೯೩

ಅನಂತಭಟ್ಟ ೪೧೯, ೪೨೫-೨೬

ಅನ್ಯೋಕ್ತಿಮುಕ್ತಾಲತಾ ೩೫೧

ಅಪ್ಪಯ್ಯದೀಕ್ಷಿತ ೮೭

ಅಪ್ಪಾಶಾಸ್ತ್ರಿ ರಾಶಿವಡೇಕರ್ [೧೭೬ ಟಿ

ಅಭಿನಂದ ೩೮೯

ಅಭಿನವ ಕಾಳಿದಾಸ ೪೨೬

ಅಭಿನವಗುಪ್ತ ೧೨ ಟಿ, ೧೩೪ ಟಿ

ಅಮರಚಂದ್ರ ೩೧೭

ಅಮರುಶತಕ ೩೩೬ f, ೩೪೧

ಅಮರುಕ ೩೩೧

ಅಮಿತಗತಿ ೩೫೧

ಅರೊಬಿಂದೊ ೨೯, ೧೨೧ f.

ಅರ್ಥಶಾಸ್ತ್ರ ೫, ೬

ಅಲಂಕಾರಸರ್ವಸ್ವ ೩೦೯

ಅವಂತಿಸುಂದರೀಕಥೆ ೨೭೧, ೩೫೧,

ಅವಂತಿಸುಂದರೀಕಥಾಸಾರ ೪೧೧

ಅವದಾನಶತಕ ೩೭೧

ಅಶ್ವಘೋಷ ೩೭, ೫೨, ೯೨, ೧೬೭ ff. ೨೨೦, ೨೨೧, ೨೫೫, ೨೮೯, ೩೬೪, ೪೩೧

ಅಷ್ಟಾಧ್ಯಾಯೀ ಸೂತ್ರ ೫

ಆದಿಪುರಾಣ ೨೪, ೨೯೮ f.

ಆನಂದವರ್ಧನ ೧೫ ಟಿ, ೩೧ ಟಿ, ೩೨ ಟಿ, ೩೩, ೪೦, ೮೭, ೧೨೩, ೧೩೧, ೧೩೨, ೧೬೨, ೧೬೩, ೨೧೯, ೨೫೯, ೨೮೯, ೨೯೩, ೩೩೭, ೩೬೫, ೪೦೭, ೪೩೪

ಆನಂದರಾಮಾಯಣ ೫೨, ೯೩

ಆನಂದವೃಂದಾವನಚಂಪು ೪೨೮

ಆನ್ವೀಕ್ಷಿಕೀ ೫

ಆರ್ಯಶೂರ ೨೧೫ f.

ಆರ್ಯಾಸಪ್ತಶತೀ ೩೪೨

ಆರ್ನಾಲ್ಡ್, ಮ್ಯಾಥ್ಯೂ ೩೦

ಆಶ್ವಲಾಯನ ಗೃಹ್ಯಸೂತ್ರ ೧೦೦, ೧೧೬

ಉತ್ತರಾಧ್ಯಯನಸೂತ್ರ ೧೧೭

ಉತ್ಪ್ರೇಕ್ಷಾವಲ್ಲಭ ೩೧೭

ಉದಯಸುಂದರೀಕಥೆ ೩೮೯, ೪೧೭

ಉಪನಿಷತ್ತು ೨

ಉಪಮಿತಿಭವಪ್ರಪಂಚಕಥಾ ೩೭೧

ಉಪಾಧ್ಯಾಯ, ಬಿ. ಎಸ್. ೨೨೧

ಉಭಯಾಭಿಸಾರಿಕಾಭಾಣ ೫

ಋಗ್ವೇದ ೧, ೬೦ಟಿ, ೧೦೦, ೧೧೧

ಋತುಸಂಹಾರ ೨೨೩, ೨೨೪ ff., ೩೨೮, ೩೩೬
ಋಷಿಗಳು ೨

ಎಜರ್ಟನ್ ೧೧೪, ೧೧೫, ೩೭೨
ಎಲಿಯಟ್, ಟಿ. ಎಸ್. ೩೨

ಕಥಾಕೋಶ ೩೭೧
ಕಥಾಸರಿತ್ಸಾಗರ ೩೭೦, ೪೦೧
ಕಪಾಲಿಶಾಸ್ತ್ರಿ ೨೬೬ ಟಿ
ಕಪ್ಫಿಣಾಭ್ಯುದಯ ೨೯೬ f.
ಕರ್ಮಕಾಂಡ ೨
ಕಲಾವಿಲಾಸ ೩೫೫
ಕಲಿವಿಡಂಬನ ೩೫೬
ಕಲ್ಪನಾಮಂಡಿತಿಕಾ ೧೭೫ ಟಿ
ಕಲ್ಹಣ ೩೨೧ f
ಕವಿಕರ್ಣಪೂರ ೪೨೮
ಕವಿಪರಮೇಶ್ವರ ೨೯೮
ಕವಿರಾಜ ೩೦೭ f, ೩೮೦,
ಕವಿರಾಜಮಾರ್ಗ ೨೪, ೨೮೯, ೪೧೧
ಕವಿಸಮಯ ೧೭, ೧೮, ೧೯
ಕವೀಂದ್ರವಚನಸಮುಚ್ಚಯ, ೩೫೧

ಕ್ಷಮಾ ರಾವ್ ೩೧೭, ೪೩೭
ಕ್ಷೇಮೇಂದ್ರ ೧೪, ೧೩೪, ೩೨೧, ೩೫೪f, ೩೭೦
ಕಾಣೆ, ಪಿ. ವಿ., ೪೭ ಟಿ
ಕಾದಂಬರಿ ೩೯೦, ೩೯೮f., ೪೧೨,
ಕಾವ್ಯಪ್ರಕಾಶ ೧೬೫, ೩೧೬, ೩೩೮ ಟಿ ff., ೩೮೩ ಟಿ
ಕಾವ್ಯಮೀಮಾಂಸೆ ೭, ೮
ಕಾವ್ಯಾದರ್ಶ ೪೧೧, ೪೧೨, ೪೧೮
ಕಾಳಿದಾಸ ೯, ೧೨, ೨೯, ೩೫, ೩೭, ೫೦, ೮೯, ೯೨, ೧೭೩, ೧೭೪, ೧೭೬, ೨೦೯, ೨೧೦, ೨೧೮ ff., ೨೬೨, ೨೬೩, ೨೬೪, ೨೬೯, ೨೭೯-೮೦, ೨೮೧, ೨೮೬-೭, ೨೮೯, ೨೯೧, ೨೯೯, ೩೦೧, ೩೧೬, ೩೧೯, ೩೨೫, ೩೨೮, ೩೩೧, ೩೩೨-೩, ೩೬೪, ೩೭೦, ೩೮೮, ೩೮೯, ೪೦೪, ೪೧೦, ೪೧೬, ೪೩೧.

ಕಿಬೆ, ಎಂ. ವಿ ೫೮ ಟಿ
ಕಿರಾತಾರ್ಜುನೀಯ ೨೭೧, ೨೭೭ff
ಕೀತ್, ಎ.ಬಿ. ೨೪, ೫೦, ೧೭೪ ಟಿ, ೧೭೬ ಟಿ, ೨೮೯ ಟಿ, ೩೦೫, ೩೨೮ ಟಿ, ೪೧೨

ಕುಂತಕ ೧೨ ಟಿ
ಕುಟ್ಟನೀಮತ ೩೫೨f.
ಕುಟ್ಟಿಕವಿ ೩೫೭
ಕುಮಾರದಾಸ ೨೮೬f
ಕುಮಾರಪಾಲಚರಿತ ೩೨೪
ಕುಮಾರಲಾತ ೧೭೫ ಟಿ
ಕುಮಾರಸಂಭವ ೨೦೯, ೨೩೭ff.
ಕುಲಶೇಖರ ೩೬೮ ಟಿ
ಕುವಿಂದ ೧೧
ಕುವೆಂಪು ೯೫ ಟಿ
ಕೃಷ್ಣಕವಿ ೨೫೯, ೨೭೫
ಕೃಷ್ಣಕರ್ಣಾಮೃತ ೩೬೮ ಟಿ

ಕೃಷ್ಣಮೂರ್ತಿ, ಕೆ ೨೫೪, ೨೫೮, ೨೮೯, ೨೭೧, ೨೮೩ ಇತ್ಯಾದಿ.
ಕೃಷ್ಣಲೀಲಾತರಂಗಿಣಿ ೩೪೩
ಕೃಷ್ಣಶಾಸ್ತ್ರೀ, ಎ. ಆರ್. ೧೦೮, ೧೩೪ ಟಿ, ೩೭೧ ಟಿ
ಕೃಷ್ಣಾನಂದ ೩೧೭
ಕೆರ್ನ್, ಎಚ್. ೨೧೫
ಕೊವೆಲ್, ೧೭೨ ಟಿ
ಕೋಲೆರಿಜ್, ಎಸ್. ಟಿ. ೨೬ ಟಿ
ಕೋಸಂಬಿ, ಡಿ.ಡಿ. ೩೩೦ ಟಿ, ೩೩೩
ಕೌಟಿಲ್ಯ ೬

ಗದ್ಯಚಿಂತಾಮಣಿ ೪೧೭
ಗಯ್ಟೆ ೨೮
ಗಾಥಾಸಪ್ತಶತೀ ೩೨೮f. ೩೩೬
ಗೀತಗೋವಿಂದ ೩೪೩ ff.
ಗೀತಗೌರೀಪತಿ ೩೪೮
ಗೀತಗಂಗಾಧರ ೩೪೮
ಗೀತರಾಘವ ೩೪೯
ಗುಣಭದ್ರ ೩೦೪
ಗುಣಾಢ್ಯ ೩೬೯ f.
ಗಂಗಾದೇವಿ ೩೨೪, ೩೮೯
ಗಂಗಾಲಹರಿ ೩೬೮
ಗಂಗಾವತರಣ ೨೬೯, ೩೧೭
ಗಾಂಧೀಗೀತಾ ೩೧೭
ಗೋವರ್ಧನ ೩೪೨, ೩೮೯
ಗೋವಿಂದರಾಜ ೪೦

ಘಟಕರ್ಪರ ೩೩೨, ೩೬೧

ಘಾಟಗೆ, ಎ.ಎಮ್. ೧೧೭

ಚಕ್ರಕವಿ ೪೨೦, ೪೩೮
ಚಕ್ರವರ್ತಿ, ಸಿ. ೨೩೫ ಟಿ
ಚಟ್ಟೋಪಾಧ್ಯಾಯ, ಕೆ. ೧೭೬ ಟಿ
ಚರ್ಪಟಪಂಜರಿಕಾ ೩೬೩
ಚಾಣಕ್ಯನೀತಿ ೩೬೦
ಚೆನ್ನವೀರ ಕವಿ ೪೧೯
ಚೋರಪಂಚಾಶಿಕಾ ೩೪೧ f.
ಚಂಡೀಶತಕ ೩೬೫
ಚಂದ್ರದೇವ ೩೮೮
ಚಂಪೂಕಾವ್ಯಗಳು ೪೧೮ ff.
ಚಂಪುಭಾರತ ೪೧೯, ೪೨೫-೨೬
ಚಂಪೂರಾಮಾಯಣ ೪೨೩-೫

ಛಂದಶ್ಶಾಸ್ತ್ರ ೬

ಜಗನ್ನಾಥಪಂಡಿತ ೩೪೯ f., ೩೫೭, ೩೫೮, ೩೬೪, ೩೬೮ ಟಿ
ಜನ್ನ ೩೦೫
ಜಯದೇವ ೯೪, ೩೪೨, ೩೪೩ f., ೩೮೮
ಜಯವಲ್ಲಭ ೩೩೦ ಟಿ
ಜಲ್ಹಣ ೨೮೭, ೩೨೪
ಜಾತಕಮಾಲಾ ೨೧೫ f., ೩೭೧
ಜಾನಕೀಹರಣ ೪೬, ೨೮೬ f
ಜಾನ್‌ಸ್ಟನ್ ೧೭೨ ಟಿ, ೧೭೬ ಟಿ, ೨೦೩, ೨೦೪
ಜಾಂಬವತೀವಿಜಯ ೫

ಜಿನಸೇನ I ೨೪, ೨೩೫, ೨೯೨ f, ೪೩೧
ಜಿನಸೇನ II ೧೧೭
ಜಿನೇಂದ್ರಬುದ್ಧಿ ೨೮೯
ಜೀವಂಧರಚಂಪೂ ೪೨೨
ಜೈನಕವಿಗಳು ೧೦
ಜೋನರಾಜ ೩೨೪
ಜ್ಞಾನಕಾಂಡ ೨

ಟಾಗೋರ, ರವೀಂದ್ರನಾಥ ೨೯, ೨೨೦ ಟಿ
ಟಿಳಕ, ಬಾಲಗಂಗಾಧರ ೧೫೯

ಡಾಲ್ಮಾನ್ ೧೦೩
ಡಿಂಡಿಮ ೩೧೭
ಡೇ, ಎಸ್. ಕೆ. ೧೧೪, ೧೭೪ ಟಿ

ತರಂಗವತೀ ೩೭೦
ತಂತ್ರಾಖ್ಯಾಯಿಕಾ ೩೭೨
ತಿಲಕಮಂಜರೀ ೪೧೭
ತ್ರಿವಿಕ್ರಮಭಟ್ಟ ೪೨೦

ದಮಯಂತೀಕಥೆ (ಅಥವಾ ನಳ ಚಂಪೂ) ೪೨೦
ದರ್ಪದಲನ ೩೫೫ f.
ದಶಕುಮಾರಚರಿತೆ ೩೭೧, ೪೧೨f.
ದಶರಥಜಾತಕ ೫೩, ೫೪ ಟಿ
ದಂಡಿ ೨೦, ೨೧, ೨೨, ೨೫೪, ೩೦೪, ೩೨೫, ೩೭೦, ೩೭೬, ೩೭೭, ೩೭೮, ೩೮೮, ೪೧೦f., ೪೧೭, ೪೧೮
ದಾಮೋದರಗುಪ್ತ ೩೫೨f.
ದಾಸಗುಪ್ತ, ಎಸ್. ಎನ್. ೧೭೬ ಟಿ
ದಿವ್ಯಾವದಾನ ೩೭೧
ದುರ್ಗಸಿಂಹ ೩೭೪
ದಾಂಡೇಕರ, ಆರ್.ಎನ್. ೧೧೮
ದೇವಪ್ರಭಸೂರಿ ೩೧೭
ದೇವೀಶತಕ ೩೬೫
ದೇಶೋಪದೇಶ ೩೫೪f.
ದ್ರೌಪದೀಪರಿಣಯ ಚಂಪು ೪೨೦

ಧನಪಾಲ ೪೧೭
ಧಮ್ಮಪದ ೩೬೦
ಧರ್ಮದಾಸ ೩೮೯
ಧರ್ಮಶರ್ಮಾಭ್ಯುದಯ ೩೦೭

ನಟಸೂತ್ರ ೫
ನರಸಿಂಹಯ್ಯ, ಎ. ಎನ್. ೪೧೯ ಟಿ
ನರಸಿಂಹಾಚಾರ್, ಡಿ.ಎಲ್. ೩೦೬
ನರಸಿಂಹಾಚಾರ್, ಆರ್, ೩೦೫
ನರ್ಮಮಾಲಾ ೩೫೪f.
ನವಸಾಹಸಾಂಕಚರಿತ ೩೧೯
ನಾಗವರ್ಮ ೩೦೬, ೩೯೯
ನಾಟ್ಯಶಾಸ್ತ್ರ ೫, ೬
ನಿರುಕ್ತ ೨ ಟಿ
ನೀತಿಪ್ರದೀಪ ೩೬೧
ನೀತಿರತ್ನ ೩೬೧
ನೀತಿಶತಕ ೩೬೧f.

ನೀತಿಸಾರ ೩೬೧
ನೀಲಕಂಠ ಚತುರ್ಧರ ೧೨೯-೩೧
ನೀಲಕಂಠದೀಕ್ಷಿತ ೨೬೯, ೩೧೭, ೩೫೬, ೩೫೭, ೪೨೬
ನೀಲಕಂಠವಿಜಯ ಚಂಪು ೪೨೬-೮
ನೀಲಮತಪುರಾಣ ೩೨೨
ನೈಷಧೀಯಚರಿತ ೩೧೦f

ಪತಂಜಲಿ ೬, ೩೭೦, ೩೭೯ ಟಿ
ಪತಂಜಲಿಚರಿತ ೩೧೭
ಪದ್ಮಗುಪ್ತ ೩೧೮
ಪರಕಾಲಸ್ವಾಮಿಗಳು ೩೧೭
ಪರಮೇಶ್ವರಭಟ್ಟ, ಎಸ್. ವಿ. ೨೨೦ ಟಿ, ೨೫೫ ಟಿ, ೨೫೭ ಟಿ, ೩೩೦ ಟಿ
ಪರಿಶಿಷ್ಟಪರ್ವ ೩೭೧
ಪಾಣಿನಿ ೪, ೫, ೬, ೫೦, ೨೦೯, ೨೨೨ ಟಿ
ಪಾಂಡವಚರಿತ ೩೧೭
ಪಾರ್ಶ್ವಾಭ್ಯುದಯ ೨೩೫
ಪ್ರಾಜ್ಯಭಟ್ಟ ೩೨೪
ಪಿಸಾನಿ, ವಿ. ೧೧೫
ಪೀಟರ್‌ಸನ್, ಪಿ. ೩೭೯ ಟಿ
ಪಿಂಗಲ ೬
ಪುರಾಣ ೮, ೧೧, ೧೬, ೯೩, ೧೬೨f. ೩೬೪
ಪುಷ್ಪದಂತ ೩೬೮ ಟಿ
ಪುಸಾಳಕರ, ಎ.ಡಿ. ೧೦೮ ಟಿ
ಪೃಥ್ವೀರಾಜವಿಜಯ ೩೨೪
ಪೆರುಂಗತ್ತೈ ೩೭೦
ಪೊನ್ನ ೨೪೯-೫೦
ಪಂಚತಂತ್ರ ೩೭೦, ೩೭೨ ff., ೩೭೭, ೪೧೨
ಪಂಚಶತಿ ೩೬೮ ಟಿ
ಪಂಡಿತ, ಆರ್. ಎಸ್. ೨೩೫ ಟಿ
ಪಂಪ ೨೯
ಪ್ರಬಂಧಕೋಶ ೨೬೫ ಟಿ
ಪ್ರಭುದೇವಿ ೩೫೧
ಪ್ರಾಕೃತ ೩, ೪, ೭

ಫ್ಲೀಟ್ ೧೭೪ ಟಿ

ಬಸವಪ್ಪಶಾಸ್ತ್ರಿ ೨೧೮, ೨೨೦ ಟಿ
ಬಂಕಿಂಚಂದ್ರ ೨೯
ಬ್ಯೂಲೆರ್, ಜಿ. ೧೦೩, ೧೭೪ ಟಿ
ಬ್ರಾಹ್ಮಣ ೨
ಬಾಣ ೯೨, ೧೨೩, ೩೦೮, ೩೧೮, ೩೨೫, ೩೨೮, ೩೩೨, ೩೬೫, ೩೭೦, ೩೭೬, ೩೭೭, ೩೭೮, ೩೭೯, ೩೮೦, ೩೮೮ ff., ೪೧೧ ಟಿ., ೪೧೫, ೪೧೬, ೪೧೭
ಬಾರ್ತ್, ೧೦೪
ಬಾಲಭಾರತ ೩೧೭
ಬಿಲ್ಹಣ ೩೧೯ f, ೩೪೧ f, ೩೫೧
ಬುದ್ಧಚರಿತೆ ೫೨, ೧೭೨, ೧೭೪, ೧೭೭ ff.,
ಬುಧಸ್ವಾಮಿ ೩೭೦
ಬುಲ್ಕೇ, ಕಾಮಿಲ್ ೪೦ ಟಿ, ೪೨ ಟಿ
ಬೃಹತ್ಕಥಾಮಂಜರೀ ೩೭೦

ಬೃಹತ್ಕಥಾಶ್ಲೋಕಸಂಗ್ರಹ ೩೭೦
ಬೃಹತ್ಕಥೆ ೩೬೯ f., ೩೮೨, ೪೦೧, ೪೧೦, ೪೧೨
ಬೆಳವಳಕರ, ಎಸ್. ಕೆ. ೧೧೪
ಬೇಂದ್ರೆ ದ. ರಾ. ೨೨೦ ಟಿ, ೨೫೬ ಟಿ, ೨೫೭ ಟಿ
ಬೌದ್ಧರು ೧೦

ಭಕ್ತಿರಸಾಯನ ೧೩೫
ಭಗವದ್ಗೀತೆ ೯೮, ೧೧೮, ೧೨೭ ಇತ್ಯಾದಿ
ಭಟ್ಟನಾಯಕ ೧೬ ಟಿ
ಭಟ್ಟಾರ ಹರಿಚಂದ್ರ ೩೭೦
ಭಟ್ಟಿ ೨೮೩ ff.
ಭಟ್ಟಿಕಾವ್ಯ ೪೬, ೨೮೩ f.
ಭರ್ತೃಹರಿ ೧೨ ಟಿ, ೧೬, ೩೨೩ ಟಿ, ೩೩೧, ೩೩೩ f, ೩೬೧ f,
ಭದ್ರಬಾಹು ೧೧೭
ಭಲ್ಲಟಶತಕ ೩೫೭, ೩೫೮-೯
ಭವಭೂತಿ ೩೫, ೩೭, ೪೪, ೯೨, ೩೨೫, ೩೮೦
ಭಾಗವತ ೧೬೯ f
ಭಾಗವತ ಚಂಪು ೪೨೬
ಭಾನುದತ್ತ ೩೭೯
ಭಾಮಹ ೨೦, ೨೦ ಟಿ, ೨೧, ೨೨, ೨೬, ೨೮೪, ೩೭೬, ೪೧೧ ಟಿ
ಭಾಮಿನೀವಿಲಾಸ ೩೪೯ f., ೩೫೮ ಟಿ, ೩೬೪
ಭಾರತಭಾವದೀಪ ೧೨೫-೧೩೧
ಭಾರತಮಂಜರಿ ೧೩೪
ಭಾರವಿ ೨೬೩, ೨೬೯, ೨೭೦ ff., ೨೮೯, ೨೯೦, ೨೯೧, ೨೯೯, ೩೦೧, ೩೦೭, ೩೧೩, ೩೧೬, ೩೨೫, ೩೬೪, ೪೧೧, ೪೩೨
ಭಾಸ ೩೭೦
ಭಿಕ್ಷಾಟನಕಾವ್ಯ ೩೧೭
ಭಿಕ್ಷುಸೂತ್ರ ೫
ಭೂಷಣ (ಅಥವಾ ಪುಲಿಂದ) ೪೦೦, ೪೦೧, ೪೦೨
ಭೈಮರಥೀ ೩೭೦
ಭೋಜ ೧೬೦, ೩೧೯, ೪೨೩

ಮದನ ೨೬೪
ಮಧುರಾವಿಜಯ ೩೨೪ f
ಮಧುಸೂದನಸರಸ್ವತಿ ೧೩೫
ಮನುಸ್ಮೃತಿ ೬
ಮಮ್ಮಟ ೧೨ ಟಿ, ೧೬೫, ೨೮೪, ೩೧೬, ೩೧೯
ಮಯೂರ ೩೩೨, ೩೬೫
ಮಯೂರಾಷ್ಟಕ ೩೩೨
ಮಲ್ಲಿನಾಥ ೨೩೩, ೨೬೦
ಮಲ್ಲಿಷೇಣಪ್ರಶಸ್ತಿ ೩೦೫
ಮಹಾಭಾರತ ೧, ೫, ೫೦, ೫೨, ೫೩, ೫೫, ೯೬-೧೭೦, ೧೭೨, ೨೦೭, ೨೪೫, ೨೪೬, ೨೬೨, ೨೭೨, ೩೦೮, ೩೧೧, ೩೧೩, ೩೬೦, ೩೬೪, ೩೭೯, ೪೨೨, ೪೩೦
ಮಹಾಭಾಷ್ಯ ೬
ಮಹಿಮಭಟ್ಟ ೨೬
ಮಹಿಮ್ನಸ್ತೋತ್ರ ೩೬೮
ಮಹಿಷಶತಕ ೩೫೭

ಮೃಚ್ಛಕಟಿಕ ೪೧೫
ಮಂಖ ೨೬೫, ೨೬೮ f., ೩೦೯ f
ಮಾಘ ೨೬೩, ೨೭೬, ೨೮೯ f, ೨೯೬, ೨೯೭, ೩೦೭, ೩೧೦, ೩೧೨, ೩೧೩, ೩೧೪, ೩೧೬, ೩೬೪, ೪೨೬, ೪೩೫
ಮಾತಂಗ ೧೧
ಮಾಲತೀಮಾಧವ ೩೮೦
ಮಿರಾಶಿ, ವಿ. ವಿ ೨೬೦ ಟಿ, ೪೧೧
ಮುಕುಂದಮಾಲಾ ೩೬೮ ಟಿ
ಮುಗಳಿ, ರಂ. ಶ್ರೀ. ೪೧೯
ಮುರಾರಿ ೩೫
ಮ್ಯುಲರ್, ಮ್ಯಾಕ್ಸ್ ೧೦೨, ೧೧೧, ೧೭೩
ಮೂಕಕವಿ ೩೬೮ ಟಿ
ಮೆಕ್ಡಾನೆಲ್ ೫೦, ೧೦೭, ೧೦೮ ಟಿ
ಮೇಘದೂತ ೨೨೩, ೨೨೭ ff., ೩೨೮, ೩೪೧
ಮೋರಿಕಾ ೩೫೧
ಮೋಹಮುದ್ಗರ ೩೬೩

ಯಶಸ್ತಿಲಕಚಂಪು ೪೨೧, ೪೨೨
ಯಶೋಧರಕಾವ್ಯ ೩೦೫
ಯಾಕೊಬಿ, ಎಚ್. ೪೨ ಟಿ, ೪೭ ಟಿ, ೫೦, ೬೦ ಟಿ ೩೨೮ ಟಿ,
ಯಾದವಾಭ್ಯುದಯ ೩೧೭
ಯಾಸ್ಕ ೨ ಟಿ
ಯುಧಿಷ್ಠಿರವಿಜಯ ೩೧೭

ರಘುನಾಥಾಭ್ಯುದಯ ೩೨೪
ರಘುವಂಶ ೧೭೪ ಟಿ, ೨೪೨ ff, ೨೮೭
ರಘುವೀರ, ಡಾ|| ೧೧೩
ರತ್ನಾಕರ ೨೬೮ ಟಿ, ೨೯೬ f., ೩೬೪
ರಂಗರಾಜವಿಲಾಸ ೩೦೭
ರಾಘವನ್, ವಿ ೧೬೦, ೪೩೩ ಟಿ
ರಾಘವಪಾಂಡವೀಯ ೨೬೭ ಟಿ, ೩೮೦
ರಾಜತರಂಗಿಣೀ ೨೯೬ ಟಿ, ೩೨೧ f,
ರಾಜನೀತಿಸಮುಚ್ಚಯ ೩೬೦
ರಾಜಶೇಖರ ೭, ೧೯, ೩೭, ೯೨
ರಾಜೇಂದ್ರಕರ್ಣಪೂರ ೩೨೪
ರಾಮಚರಿತ ೩೮೯ ಟಿ
ರಾಮಪಾಲಚರಿತ ೩೨೪
ರಾಮಭದ್ರದೀಕ್ಷಿತ ೩೧೭
ರಾಮಭದ್ರಾಂಬೆ ೩೨೪
ರಾಮಸ್ವಾಮಿಶಾಸ್ತ್ರಿ, ಕೆ. ಎಸ್. ೯೫ ಟಿ
ರಾಮಾನುಜಾಚಾರ್ಯ ೧೧೭
ರಾಮಾಯಣ ೧, ೪, ೩೫-೯೫, ೧೦೬, ೧೧೦, ೧೧೮ ff, ೧೩೩, ೧೬೭, ೧೭೨, ೨೦೭, ೨೦೯, ೨೪೪, ೨೪೫, ೨೪೬, ೨೬೨, ೨೮೩, ೨೮೭, ೨೯೮, ೨೯೯, ೩೦೮, ೩೬೯, ೪೨೨, ೪೩೦
ರಾಮಾಯಣದರ್ಶನ ೯೪
ರಾಮಿಲ ೩೬೯
ರಾಷ್ಟ್ರೌಢವಂಶ ೩೨೪

ರುದ್ರಕವಿ ೩೨೪
ರುದ್ರಟ ೨೨, ೨೩
ರುದ್ರದಾಮನ ಶಿಲಾಲೇಖ ೩೭೭
ರುಯ್ಯಕ ೩೦೯
ರೈಡರ್ ೨೮, ೨೩೩, ೨೩೪ ಟಿ

ಲಕೋಟಿ ೩೭೯ ಟಿ
ಲಕ್ಷ್ಮಣ ೪೨೩
ಲಕ್ಷ್ಮೀನರಸಿಂಹಯ್ಯ, ಎಂ. ೧೭೫ ಟಿ
ಲಕ್ಷ್ಮೀಸಹಸ್ರ ೩೬೮ ಟಿ
ಲಾ, ಬಿ ಸಿ ೧೭೫
ಲಾಯ್ಡ್ ಸ್ಟ್, ಎಚ್. ೫೩, ೧೭೨ ಟಿ, ೧೭೫ ಟಿ, ೧೭೬, ೩೨೮ ಟಿ
ಲಾಸೆನ್, ಸಿ. ೯೯
ಲಿಲಿ ೩೭೯
ಲೀಲಾಶುಕ ೩೬೫, ೩೬೮ ಟಿ,
ಲುಡ್ವಿಗ್, ಎ. ೧೦೦, ೧೦೪
ಲೆಸ್ನಿ, ವಿ. ೪೬ ಟಿ
ಲೆವಿ. ಸಿಲ್ವಾನ್ ೪೩, ೧೦೪, ೧೧೫, ೧೧೬, ೩೭೯ ಟಿ
ವಜ್ಜಾಲಗ್ಗ ೩೩೦ ಟಿ
ವರರುಚಿ ೫, ೬, ೩೬೧
ವಲ್ಲಭದೇವ ೨೧೪, ೩೫೧
ವ್ಯಕ್ತಿವಿವೇಕ ೧೪
ವಾಕ್ಪತಿರಾಜ ೩೧೮, ೩೮೯
ವಾಕ್ಯಪದೀಯ ೧೬, ೩೩೩
ವಾತ್ಸ್ಯಾಯನ ೧೧
ವಾದಿರಾಜ ೩೦೫
ವಾದೀಭಸಿಂಹ ೪೧೭
ವಾಮನ ೨೮೯, ೩೦೯ ಟಿ, ೩೭೮ ಟಿ, ೩೭೯
ವಾಮನಭಟ್ಟಬಾಣ ೪೧೭
ವಾರರುಚಕಾವ್ಯ ೫
ವಾಲ್ಮೀಕಿ ೮, ೩೧, ೩೫f, ೨೨೦, [೨೫೩
ವಾಸವದತ್ತಾ ೩೭೯ f
ವಾಸುದೇವ ೩೧೭
ವ್ಯಾಸ ೮, ೩೨೫ ಇತ್ಯಾದಿ.
(ನೋಡಿ—'ಮಹಾಭಾರತ')
ವಿಕಟನಿತಂಬಾ ೩೫೧
ವಿಕ್ರಮಾದಿತ್ಯ ೩೮೦
(ನೋಡಿ—'ಸಾಹಸಾಂಕ')
ವಿಕ್ರಮಾಂಕದೇವಚರಿತ, ೩೧೯
ವಿಜ್ಜಿಕಾ ೩೫೧
ವಿದ್ಯಾಧರ ೧೨ ಟಿ
ವಿಲಿಯಮ್ಸ್, ಮಾನಿಯರ್, ೯೫ ಟಿ, ೧೦೬
ವಿಲ್ಸನ್ ೨೮
ವಿಶ್ವಗುಣಾದರ್ಶ ಚಂಪೂ ೪೨೭ f
ವಿಶ್ವನಾಥ ೧೨ ಟಿ
ವಿಷ್ಣುಶರ್ಮ ೩೭೨
ವಿಂಟರ್‌ನಿಟ್ಸ್ ೫೦, ೫೪, ೫೫ ಟಿ, ೧೦೪, ೧೧೫, ೧೧೬, ೧೭೬ ಟಿ
ವ್ಹೀಲರ್ ೬೦ ಟಿ
ವೃದ್ಧಚಾಣಕ್ಯ ೩೬೦
ವೆಬರ್, ಎ. ೫೩, ೬೦ ಟಿ, ೧೦೦, ೪೦೫ ಟಿ
ವೆಂಕಟರಾಮಯ್ಯ, ಸಿ. ಕೆ. ೨೨೦ ಟಿ.

ವೆಂಕಟರಾಮಶಾಸ್ತ್ರಿ, ಟಿ. ಆರ್. ೭೩, ೯೫ ಟಿ
ವೆಂಕಟಸುಬ್ಬಯ್ಯ, ಎ. ೧೧ ಟಿ
ವೆಂಕಟಾಧ್ವರಿ ೪೨೭ f
ವೆಂಕಟೇಶ ಅಯ್ಯಂಗಾರ್, ಮಾಸ್ತಿ ೭೩, ೯೨, ೯೫ ಟಿ, ೧೬೭, ೨೨೦ ಟಿ
ವೆಂಕಣ್ಣಯ್ಯ, ಟಿ. ಎಸ್. ೪೦೩
ವೇತಾಲಭಟ್ಟ ೩೬೧
ವೇತಾಲ ಪಂಚವಿಂಶತಿ ೩೭೦, ೩೭೧
ವೇದಗಳು ೧, ೨, ೩, ೧೧, ೩೬, ೩೯
ವೇದಾಂಗಗಳು ೫
ವೇದಾಂತದೇಶಿಕ ೩೧೭, ೩೬೫, ೩೬೮ ಟಿ
ವೇಮಭೂಪಾಲಚರಿತ ೪೧೭
ವೈದ್ಯ, ಸಿ. ವಿ. ೫೦ ಟಿ, ೫೨ ಟಿ, ೧೦೭, ೧೦೮ ಟಿ
ವೈರಾಗ್ಯಶತಕ ೩೬೨ f
ಶತಶ್ಲೋಕೀ ೩೬೩
ಶಂಕರಾಚಾರ್ಯ ೩೬, ೧೧೭, ೩೩೭, ೩೬೩, ೩೬೫, ೩೬೭, ೩೬೮ ಟಿ
ಶಂಭುಕವಿ ೩೨೪
ಶಂಭುನೃಪ ೩೫೧
ಶ್ರೀಕಂಠಚರಿತ ೨೬೫ ಟಿ, ೨೬೮ ಟಿ, ೩೦೯ f
ಶ್ರೀಕಂಠಯ್ಯ, ತೀ. ನಂ. ೧೬೩, ೨೧೪, ೩೩೦ ಟಿ
ಶ್ರೀಧರದಾಸ ೩೫೧
ಶ್ರೀನಿವಾಸಶಾಸ್ತ್ರೀ, ವಿ. ಎಸ್. ೯೪ ಟಿ
ಶ್ರೀಪಾಲಿತ ೩೭೦
ಶ್ರೀವರ ೩೨೪
ಶ್ರೀಹರ್ಷ ೨೬೩, ೨೬೫, ೩೧೦ f., ೩೮೮
ಶಾರ್ಙ್ಗಧರ ೩೫೧
ಶಾರ್ಙ್ಗಧರಪದ್ಧತಿ ೩೫೧
ಶಾಸ್ತ್ರಿ, ಪಿ. ಪಿ. ಎಸ್. ೧೧೪
ಶಿಕ್ಷಾ ೫
ಶಿಲ್ಹಣ ೩೬೩
ಶಿವಲೀಲಾರ್ಣವ ೨೬೯, ೩೧೭
ಶಿವಸ್ವಾಮಿ ೨೯೬
ಶೀಲಾಭಟ್ಟಾರಿಕಾ ೩೫೧
ಶುಕಸಪ್ತತಿ ೩೭೧, ೩೭೭, ೩೭೮
ಶೂದ್ರಕಕಥೆ ೩೭೦
ಶೃಂಗಾರತಿಲಕ ೩೩೧
ಶೃಂಗಾರಪ್ರಕಾಶ ೧೬೦
ಶೃಂಗಾರಶತಕ ೩೩೩ f
ಶಂಭವಣೇಕರ್, ಕೆ. ಎಂ. ೧೭೬ ಟಿ
ಶಾಂತಿಪುರಾಣ ೨೪೯
ಶಾಂತಿಶತಕ ೩೬೩

ಷೆಂಡೆ, ಎನ್. ಜೆ. ೧೦೯
ಷೇಕ್ಸ್ಪಿಯರ್ ೩೭೪
ಷ್ರೋಡೆರ್ ೧೦೨

ಸಂಸ್ಕೃತಭಾಷೆ ೧, ೩, ೪, ೫, ೬, ೭, ೮
ಸಂಸ್ಕೃತ–ಸಾಹಿತ್ಯ ೮, ೧೧
ಸದುಕ್ತಿಕರ್ಣಾಮೃತ ೩೫೧
ಸಹೃದಯಾನಂದ ೩೧೭

ಸಂಧ್ಯಾಕರನಂದಿ ೩೨೪
ಸಮಯಮಾತೃಕಾ ೩೫೫
ಸಮುದ್ರಗುಪ್ತಪ್ರಶಸ್ತಿ ೩೧೮, ೩೭೭
ಸಾಂಬಮೂರ್ತಿ, ಪಿ. ೩೪೪ ಟಿ
ಸಾಹಸಾಂಕ ೭-೮
ಸಾಳ್ವಾಭ್ಯುದಯ ೩೧೭
ಸೀತಾರಾಮಯ್ಯ, ವಿ. ೧೫೨
ಸಿಂಹಾಸನದ್ವಾತ್ರಿಂಶಿಕಾ ೩೭೧
ಸ್ಪಿಂಗಾರ್ನ್, ಜೆ. ಇ. ೨೩
ಸುಕಠಣಕರ, ವಿ. ಎಸ್. ೫೫ ಟಿ, ೧೦೮ f, ೧೧೧ f, ೧೬೭
ಸುಂದರಾಚಾರಿ, ಟಿ. ೯೫ ಟಿ
ಸುಬಂಧು ೧೨೩, ೩೦೮, ೩೭೦, ೩೭೮, ೩೭೯ f., ೪೦೧, ೪೧೫, ೪೧೬, ೪೧೭
ಸುಭಾಷಿತರತ್ನಸಂದೋಹ ೩೫೧
ಸುಭಾಷಿತಾವಲಿ ೩೫೧
ಸುಮನೋತ್ತರಾ ೩೭೦
ಸುರಥೋತ್ಸವ ೩೨೪
ಸೂಕ್ತಿಮುಕ್ತಾವಲೀ ೨೮೭, ೩೫೧
ಸೂರ್ಯಶತಕ ೩೩೩, ೩೬೫
ಸೇತುಬಂಧ ೪೬
ಸೋಡ್ಢಲ ೩೮೯, ೩೯೦, ೪೧೭
ಸೋಮದೇವ ೩೭೦, ೪೨೧
ಸೋಮಪಾಲವಿಲಾಸ ೩೨೪
ಸೋಮಿಲ ೩೭೦
ಸೋಮೇಶ್ವರದತ್ತ ೩೨೪
ಸೋರೆನ್‌ಸೆನ್ ೧೦೨
ಸೌಂದರ್ಯಲಹರೀ ೩೬೮ ಟಿ
ಸೌಂದರನಂದ ೧೭೨, ೧೭೬ ಟಿ, ೨೦೪ ff
ಹಂಡೀಕಿ, ಡಾ|| ೪೨೨
ಹರವಿಜಯ ೨೬೮ ಟಿ, ೨೯೬ f, ೨೯೭ ಟಿ
ಹರಿಚಂದ್ರ ೩೦೭, ೪೨೨
ಹರಿವಂಶ ೧೧೦
ಹರಿವಂಶ (ಜೈನ) ೧೧೭
ಹರಿಷೇಣ ೩೧೮, ೩೭೭, ೪೧೮
ಹರಿಹರ ೨೬೪
ಹರ್ಷ ೩೭೦
ಹರ್ಷಚರಿತೆ ೨೮೯ ಟಿ, ೩೧೮, ೩೨೮ ಟಿ, ೩೭೯, ೩೭೯ ಟಿ, ೩೯೦ f., ೪೦೧
ಹಸ್ತಿಪಕ ೧೧
ಹಾಪ್‌ಕಿನ್ಸ್ ೪೭ ಟಿ, ೧೦೭
ಹಾಲ ೩೨೮ f
ಹಿಲೆಬ್ರಾಂಟ್ ೨೬೦ ಟಿ
ಹೇಮಚಂದ್ರ ೩೨೪, ೩೭೧
ಹೋಲ್ಟ್ಸ್‌ಮಾನ್ ೧೦೧

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೧೮ | ನಾಟಗ | ನಾಟಕ |
| ೧೪ | ೨೦ | ಆರಿಕೆ | ಆಯ್ಕೆ |
| ೧೬ | ೧೮ | ಹೇಗೆ | ಹೀಗೆ |
| ೧೮ | ೮ | ಶಾಶ್ತ್ರ | ಶಾಸ್ತ್ರ |
| ೧೯ | ೨ | ಯಲ್ಲಾ | ಯೆಲ್ಲಾ |
| ೧೯ | ೧೮ | ಸಾರ್ಥಕ್ಯೆ | ಸಾರ್ಥಕ್ಯ |
| ೨೦ | ಟಿಪ್ಪಣಿ–೧ | ನಾಕವಿಶ್ವ | ನಾಕವಿತ್ವ |
| ೨೧ | ೨೧ | ಲಕ್ಷಣವನ್ನೂ | ಲಕ್ಷಣವನ್ನು |
| ೨೧ | ೨೨ | ಸಾದ್ಯ | ಸಾಧ್ಯ |
| ೨೧ | ೨೫ | ರಧೋತ್ಸವ | ರಥೋತ್ಸವ |
| ೨೨ | ೧೨ | ವಿತತೇಷಭಿ | ವಿತತೇಷ್ವಭಿ |
| ೨೪ | ೨೫ | ಕತಿಚಿಚ್ಛೋಕಾನ್ | ಕತಿಚಿಚ್ಛ್ಲೋಕಾನ್ |
| ೨೫ | ೧ | ಸ್ಫುಟಾ | ಸ್ಫುಟಾ |
| ೨೬ | ೬ | ಪೂರಾಣ | ಪುರಾಣ |
| ೨೬ | ೯ | ಭಾವೇಂದುಃ | ಭಾತೀಂದುಃ |
| ೨೮ | ೧೫ | ದೃಷ್ಟನ್ಯ | ದೃಷ್ಟಸ್ಯ |
| ೩೧ | ೧೮ | ಕೇೂಟಿ | ಕೋಟಿ |
| ೩೧ | ೨೦–೧ | ಬಳಸುತ್ತಾರೆ | ಬಳಸುತ್ತಾರೆ. |
| ೩೨ | ೧೨ | ಸುಖವಿ | ಸುಕವಿ |
| ೩೫ | ೨೧ | ಕೋಟ್ಯಾಂತರ | ಕೋಟಿಗಟ್ಟಲೆ |
| ೩೬ | ೨೦ | ಅಪಕೃತ | ಅಪ್ರಕೃತ |
| ೩೬ | ೨೨ | ವಿದ್ವದೃಷ್ಟಿ | ವಿದ್ವದ್ದೃಷ್ಟಿ |
| ೩೭ | ೫ | ಆನಂದವರ್ದನ | ಆನಂದವರ್ಧನ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೭ | ೧೭ | ಕ್ರೌಚ | ಕ್ರೌಂಚ |
| ೩೭ | ೨೪ | ತ್ವವಾಗಮಃ | ತ್ವಮಗಮಃ |
| ೩೮ | ೧ | ಪೆರ್ಮಯು | ಪೆರ್ಮೆಯು |
| ೩೮ | ೨೪ | ಏವಾಸ್ತಯಂ | ಏವಾಸ್ತ್ವಯಂ |
| ೩೯ | ೭ | ಸರಿತಸ್ಯ ಮಹೀತಲೆ | ಸರಿತಶ್ಚ ಮಹೀತಲೇ |
| ೪೦ | ೩ | ಆನಂದವರ್ದನಾದಿ | ಆನಂದವರ್ಧನಾದಿ |
| ೪೧ | ೧೧ | ನಿರ್ದೇಸಿಸಿ | ನಿರ್ದೇಶಿಸಿ |
| ೪೮ | ೨ | ವಸುಂಧರಾ | ವಸುಂಧರಾಂ |
| ೫೧ | ೩ | ದೃಸ್ಟಿಕೋನ | ದೃಷ್ಟಿಕೋನ |
| ೫೫ | ೨೨ | ಮಂಧರೆ | ಮಂಥರೆ |
| ೫೯ | ೯ | ಮನದಣಿಯೇ | ಮನದಣಿಯೆ |
| ೬೪ | ೨ | ಸ್ತೋತ್ರರಾ | ಸ್ತೋತ್ರರಂ |
| ೬೫ | ೧೯ | ತಡಿಯೋಣ | ತಡೆಯೋಣ |
| ೭೯ | ೨೧ | ಪಾದಾಪಿವಂದನಾತ್ | ಪಾದಾಭಿವಂದನಾತ್ |
| ೮೦ | ೧೨ | ಸಿಕ್ಕಿದಷ್ಟು | ಸಿಕ್ಕದಷ್ಟು |
| ೮೩ | ೨೨ | ನಿರೂಪಣೆಯಲ್ಲ | ನಿರೂಪಣೆಯಲ್ಲಿ |
| ೮೫ | ೧೯ | ನಿರಾಲಂಕಾರಶೋಭಿನಿ | ನಿರಲಂಕಾರಶೋಭಿನಿ |
| ೯೧ | ೧೫ | ಚಂದಾನನ | ಚಂದ್ರಾನನ |
| ೯೨ | ೨೫ | ಯುಕ್ತಕರ | ಯುಕ್ತತರ |
| ೯೬ | ೧೪ | ತನಿಗರ್ಜ | ತನಿಗರ್ಬ |
| ೯೬ | ಟಿಪ್ಪಣಿ–೩ | ಭರತರ್ಷಾಭ | ಭರತರ್ಷಭ |
| ೯೮ | ೧೯ | ಬಿಟ್ಟುದರಿಂದ | ಬಿಟ್ಟುದರಿಂದ. |
| ೧೦೧ | ೨೦ | ಧರ್ಮಬೀರು | ಧರ್ಮಭೀರು |
| ೧೦೩ | ೧೪ | Geuesis | Genesis |
| ೧೦೩ | ೨೦ | ಏಕಸೂಚ್ರತೆ | ಏಕಸೂತ್ರತೆ |
| ೧೦೩ | ೨೪ | ಅರ್ಧಮಗಳಿಗೆ | ಅಧರ್ಮಗಳಿಗೆ |
| ೧೦೫ | ೮ | ಪೂರೋಹಿತ | ಪುರೋಹಿತ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೦೫ | ೨೦ | ಸನ್ಯಾಸಿಗಳು | ಸಂನ್ಯಾಸಿಗಳು |
| ೧೦೬ | ೧೫ | ಲೋಕಪ್ರೀಯ | ಲೋಕಪ್ರಿಯ |
| ೧೦೭ | ೧೭ | Maha Bharatha criticsm | Mahābhārata Criticism |
| ೧೦೮ | ೭ | ವೈಶಂಪಾಯಿನ | ವೈಶಂಪಾಯನ |
| ೧೦೯ | ೬ | ಉಹಿಸಿದ್ದಾರೆ | ಊಹಿಸಿದ್ದಾರೆ |
| ೧೦೯ | ೨೦ | ಯಾರು | ಯಾರೂ |
| ೧೧೦ | ೮ | Encyclopadia | Encyclopaedia |
| ೧೧೧ | ೧೩ | ಪರಿಣಿತರಾದ | ಪರಿಣತರಾದ |
| ೧೧೨ | ೨೪ | ಹೇಳತಾದ | ಹೇಳಲಾದ |
| ೧೧೫ | ೧೯ | ಸರಂತು | ಪರಂತು |
| ೧೧೯ | ಟಿಪ್ಪಣಿ-೨ | ಆಖ್ಯಾಸ್ಯವಿ. | ಆಖ್ಯಾಸ್ಯನ್ತಿ |
| ೧೨೦ | ೧೮ | ಮತ್ತು | ಮತ್ತೂ |
| ೧೨೧ | ೧೪ | ದ್ವೈವೈಪಾಯನ | ದ್ವೈಪಾಯನ |
| ೧೨೪ | ೧೪ | ಲೋಕೊದ್ಧಾರ | ಲೋಕೋದ್ಧಾರ |
| ೧೨೪ | ೧೩ | ಅಭಿನಯ | ಅಭಿನಯ. |
| ೧೨೫ | ೧೨ | ಮಾತು | ಮಾತೂ |
| ೧೨೬ | ೨೩ | ಯಾಜಿಕ | ಯಾಜ್ಞಿಕ |
| ೧೨೮ | ೮ | ಶಿರಸಾಮಾನ್ಯಮಾಡಿ | ಶಿರಸಾ ಮಾನ್ಯಮಾಡಿ |
| ೧೩೭ | ೨ | ಯುಧಿಷ್ಟಿರ | ಯುಧಿಷ್ಠಿರ |
| ೧೪೦ | ೬ | ಗ್ರಹಗಳ | [ಗ್ರಹಗಳ |
| ೧೪೦ | ೯ | ಚೈತನ್ಯಮಯವಾಗಿದೆ | ಚೈತನ್ಯಮಯವಾಗಿದೆ] |
| ೧೪೧ | ೧೭ | ವ್ಯಕ್ತವಾಗುತ್ತದೆ. | ವ್ಯಕ್ತವಾಗುತ್ತದೆ— |
| ೧೫೧ | ೨೩ | ಭೀಷ್ಮದ್ರೋಣತಟಾ | ಭೀಷ್ಮದ್ರೋಣತಟಾ |
| ೧೫೬ | ೧೮ | ಪೂರೋಗಾಮಿಯೇ | ಪುರೋಗಾಮಿಯೇ |
| ೧೫೭ | ೨ | ದೇತೆಗಳು | ದೇವತೆಗಳು |
| ೧೬೦ | ೧೩ | ಪ್ರವೋಷಕವಾದ | ಪ್ರಪೋಷಕವಾದ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೬೬ | ೨೭ | ಪ್ರಸ್ತುತವಾದೂ | ಪ್ರಸ್ತುತವಾದರೂ |
| | | ಗ್ರಂಸ್ತರಭೀತಿಯಿಂದವಿಥರ | ಗ್ರಂಥವಿಸ್ತರಭೀತಿಯಿಂದ |
| ೧೬೭ | ೨೧ | ಅಚ್ಛಾನ | ಅಚ್ಛಾದ |
| ೧೬೮ | ೧೪ | ಷ್ರಾಚೀನ | ಪ್ರಾಚೀನ |
| ೧೬೮ | ೨೨ | ಕ್ಯೂ-ಸಾನಿ | ಕೂ–ಸ್ಕಾನಿ |
| ೧೭೨ | ೧೦ | ವಾಡಿರುವ | ಮಾಡಿರುವ |
| ೧೮೧ | ೧೩ | ಹೊಳಿಯುತ್ತಿದ್ದ | ಹೊಳೆಯುತ್ತಿದ್ದ |
| ೧೮೧ | ೨೨ | ಉಪ್ಷರಿಗೆಯ | ಉಪ್ಪರಿಗೆಯ |
| ೧೮೫ | ೨೬ | ವಾದ | ಮೋಹ |
| ೧೮೬ | ೪ | ಸನ್ಯಾಸಿ | ಸಂನ್ಯಾಸಿ |
| ೧೮೮ | ೨೦ | ಸದ್ಧರ | ಸದ್ಧರ್ಮ |
| ೧೯೧ | ೨೦ | ಪಡೆವೆ! | ಪಡೆವೆ!' |
| ೧೯೧ | ೨೨ | ಅಂತಃಪುರವಿಲಾಸ | ಅಂತಃಪುರವಿಲಾಪ |
| ೧೯೩ | ೨ | ರಾಜಶಾಸನ | ರಾಜಶಾಸನವನ್ನು |
| ೨೦೬ | ೧೯ | ಕವಿಪ್ರಭೆಯು | ಕವಿಪ್ರತಿಭೆಯು |
| ೨೧೦ | ೧೪ | ಆಕರ್ಷಶೈಲಿಯು | ಆರ್ಷಶೈಲಿಯು |
| ೨೧೧ | ೨೪ | ವಿನಿಸ್ಸೇ | ವಿನಿಸ್ಯೇ |
| ೨೨೪ | ೨೩ | ಜೇತನವನ್ನಿತ್ತು | ಚೇತನವನ್ನಿತ್ತು |
| ೨೩೩ | ೨೪ | Eusope | Europe |
| ೨೩೯ | ೧೨ | ಯಜ್ಞಧಗ್ಧಳಾದ | ಯಜ್ಞದಗ್ಧಳಾದ |
| ೨೪೦ | ೨ | ಹರಿದಃಂಬಿಸಿ | ಹ.ರಿದುಂಬಿಸಿ |
| ೨೪೦ | ೪ | ಕಾಮೋವ್ರಿತ್ತ | ಕಾಮೋದ್ರಿಕ್ತ |
| ೨೪೦ | ೧೩ | ತಪಶ್ಚರ್ಯಗೆ | ತಪಶ್ಚರ್ಯೆಗೆ |
| ೨೪೦ | ೨೫ | ತಾಯ್ತುದೆ | ತಾಯ್ತುಂದೆ |
| ೨೪೩ | ೧೯ | ಆರಿಕೆ | ಆಯ್ಕೆ |
| ೨೪೫ | ೬ | ಒಂದಾಗಿದ್ದುದರಿಂದ | ಬಂದಾಗಿದ್ದುದರಿಂದ |
| ೨೪೭ | ೩ | ಯಾಥೋಚಿತವಾದ | ಯಥೋಚಿತವಾದ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೫೩ | ೨೩ | ಅಥಾಂತರನ್ಯಾಸ | ಅರ್ಥಾಂತರನ್ಯಾಸ |
| ೨೫೭ | ೧೮ | ಆತನಾಣೆ | ಆತನಾಣತಿ |
| ೨೬೧ | ೨೦ | ಪಂಡಿಡರ | ಪಂಡಿತರ |
| ೨೬೭ | ೧ | ಹಿಡಂಬೆ | ಹಿಡಿಂಬೆ |
| ೨೭೭ | ೯ | ನಿಕಾಮಾ | ನಿಕಾಮಂ |
| ೨೮೧ | ೨೧ | ಬೆರತ | ಬೆರೆತ |
| ೨೮೩ | ೨೩ | ಪ್ರಬಂಧೋಽಯಂ | ಪ್ರಬಂಧೋಽಯಂ |
| ೨೮೯ | ೧೧ | ರಾಜನಾಳುತ್ತಿದ್ದುದು | ರಾಜನಾಳುತ್ತಿದ್ದುದು |
| ೨೯೩ | ೫ | ಕ್ಲಿಷ್ಟರೂಪಕಾಲಂಕಾರ | ಶ್ಲಿಷ್ಟರೂಪಕಾಲಂಕಾರ |
| ೨೯೩ | ೧೭ | ಯರೆಲ್ಲಂ | ಯರೆಲ್ಲರ್ |
| ೨೯೫ | ೨೦ | ಪದ್ಯಪದ್ತವಾಗಿ | ಪದ್ಯಪದ್ಯವಾಗಿ |
| ೨೯೯ | ೧೪ | ಕಾವ | ಕಾವ್ಯ |
| ೩೧೨ | ಟಿಪ್ಪಣಿ | ಧನೈಷ | ನೈಷಧ |
| ೩೧೯ | ೨ | ಪಜ್ರಾಂಕುಶ | ವಜ್ರಾಂಕುಶ |
| ೩೧೯ | ೬ | ಲಾಕ್ಷಿಣಿಕರು | ಲಾಕ್ಷಣಿಕರು |
| ೩೨೦ | ೬ | ಪ್ರಭಂಧ | ಪ್ರಬಂಧ |
| ೩೨೬ | ೧೨ | ಪಂಪೆ | ಹಂಪೆ |
| ೩೩೪ | ೪ | ಪ್ರಮಾಣಿಕ | ಪ್ರಮಾಣಿತ |
| ೩೩೫ | ೧೫ | ದೃಷ್ಟಾ | ದೃಷ್ಟಾವ |
| ೩೩೮ | ೧೬ | ನಿತ್ಚಿತ | ನಿಶ್ಚಿತ |
| ೩೭೧ | ೨೧ | ವಿವ್ಯಾವದಾನ | ದಿವ್ಯಾವದಾನ |
| ೩೭೨ | ಟಿಪ್ಪಣಿ–೨ | ವ್ಯಾಖಾಕಾರ | ವ್ಯಾಖ್ಯಾಕಾರ |
| ೩೯೧ | ೨ | ಆಭೂತಪೂರ್ವ | ಅಭೂತಪೂರ್ವ |
| ೪೦೫ | ೫ | ಲಕ್ಷಿಯ | ಲಕ್ಷ್ಮಿಯ |
| ೪೧೨ | ಟಿಪ್ಪಣಿ–೨ | ಆಸ್ತಿ | ಅಸ್ತಿ |